ವ್ಯಾಸಮಹರ್ಷಿಪ್ರಣೀತ

# ಶ್ರೀಮಹಾಭಾರತವು

(ಕರ್ನಾಟಕ ವಚನವು)

## ಆಶ್ವಮೇಧಿಕಪರ್ವವು.



ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯರ್ ವಿರಚಿತವು.



ಪ್ರಕಾಶಕರು:

ಕರ್ನಾಟಕ ಡೆಪೋ,

1/59, ಸನ್ನಿಧಿ ಬೀದಿ, ತಿರುವಲ್ಲಿಕ್ಕೇಣಿ, ಮದರಾಸು.

1934

[ಬೆಲೆ ೧-೧೨-೦.

---



---

# ವಿಷಯಾನುಕ್ರಮಣಿಕೆ.



## ಅನುಗೀತಾ ಪರ್ವವು.

## ವೈ ಷ್ಣ ವ ಧ ರ್ಮ ಪ ರ್ವ ವು.

# ಚಿತ್ರಪಟಗಳ ಪಟ್ಟಿ.

---



# ಶ್ರೀಮಹಾಭಾರತವು

## ಆಶ್ವಮೇಧಿಕಪರ್ವವು.

### ಅಶ್ವಮೇಧಪರ್ವವು

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯ ಮುದೀರಯೇತ್**

ಗಂಗೆಯಲ್ಲಿ ಭೀಷ್ಮನಿಗೆ ಜಲತರ್ಪಣವನ್ನು ಬಿಟ್ಟು ಬಂದು ವ್ಯಸನದಿಂದ ದುಃಖಿಸುತ್ತಿರುವ ಧರ್ಮರಾಜನನ್ನು ಧೃತರಾಷ್ಟ್ರನು ಸಮಾಧಾನಪಡಿಸುತ್ತ, ವಿದುರನ ಮಾತನ್ನು ತಾನು ಕೇಳದೆಹೋದುದರಿಂದಲೇ ಇಷ್ಟೊಂದು ಅನರ್ಥಕ್ಕೂ ಕಾರಣವಾಯಿತೆಂದು ತಿಳಿಸಿದುದು.

ವೈಶಂಪಾಯನನು ಜನಮೇಜಯನನ್ನು ಕುರಿತು "ಜನಮೇಜಯ ರಾಜಾ! ಧರ್ಮರಾಜನು ಬಂಧುಗಳೆಲ್ಲರಿಗೂ ಗಂಗೆಯಲ್ಲಿ ತರ್ಪಣವನ್ನು ಬಿಟ್ಟಮೇಲೆ, ಧೃತರಾಷ್ಟ್ರನನ್ನು ಮುಂದಿಟ್ಟುಕೊಂಡು ಮಹಾವ್ಯಸನದಿಂದ ಕಲಗಿದ ಇಂದ್ರಿಯಗಳುಳ್ಳವನಾಗಿ, ನೀರಿನಿಂದ ಮೇಲೆದ್ದು ಬಂದನು. ವ್ಯಸನದಿಂದ ಅವನ ಕಣ್ಣುಗಳಲ್ಲಿ ನೀರು ತುಳುಕುತಿದ್ದಿತು. ಮೇಲೆದ್ದು ಬಂದು ಗಂಗೆಯ ತೀರವನ್ನು ಸೇರಿದೊಡನೆ, ಮಿತಿಮಿಾರಿದ ದುಃಖದಿಂದ ಪ್ರಜ್ಞೆತಪ್ಪಿ, ಬೇಡನ ಬಾಣದಿಂದ ಹೊಡೆಯಲ್ಪಟ್ಟ ಮಹಾಗಜದಂತೆ ಆ ತೀರಪ್ರದೇಶದಲ್ಲಿ ಬಿದ್ದುಬಿಟ್ಟನು. ಇದನ್ನು ನೋಡುತ್ತಿದ್ದ ಕೃಷ್ಣನ ಪ್ರೇರಣೆಯಿಂದ, ಭೀಮನು ಥಟ್ಟನೆ ಬಂದು, ಅವನನ್ನು ಕೈಯಿಂದೆತ್ತಿ ಹಿಡಿ

ದನು. ಕೃಷ್ಣನೂ ಅವನ ಸಮೀಪಕ್ಕೆ ಬಂದು, 'ಮಹಾರಾಜಾ! ಹೀಗೆ ದುಃಖಿಸಬಾರದು' ಎಂದು ಸಮಾಧಾನವನ್ನು ಹೇಳಿದನು. ಪ್ರಜ್ಞೆತಪ್ಪಿ ನೆಲದಮೇಲೆ ಬಿದ್ದು ದುಃಖದಿಂದ ಬಾರಿಬಾರಿಗೂ ನಿಟ್ಟುಸಿರುಬಿಡುತ್ತಿದ್ದ ಧರ್ಮಪುತ್ರನ ದುಸ್ಥಿತಿಯನ್ನು ನೋಡಿ, ಅಲ್ಲಿದ್ದ ರಾಜರೆಲ್ಲರೂ ಕನಿಕರಗೊಂಡರು. ಮೂರ್ಛಿತನಾಗಿ ಬಿದ್ದ ಆ ಬ್ರಹ್ಮಪುತ್ರನನ್ನು ನೋಡಿ ಅವನ ಸಹೋದರರೆಲ್ಲರೂ ವ್ಯಸನಾಕ್ರಾಂತರಾಗಿ ಅವನ ಸುತ್ತಲೂ ಕುಳಿತಿದ್ದರು. ಆಗ ಅವನಂತೆಯೇ ಮಹಾದುಃಖದಿಂದ ತಪಿಸುತ್ತಿದ್ದ ಧೃತರಾಷ್ಟ್ರನೂ ಅವನ ಬಳಿಗೆ ಬಂದನು. ಮಹಾಧೀಮಂತನೂ, ಪ್ರಜ್ಞೆಯೇ ಕಣ್ಣಾಗಿ ಉಳ್ಳವನೂ ಆದ ಧೃತರಾಷ್ಟ್ರನು, ಯುಧಿಷ್ಠಿರನ ಸಮೀಪಕ್ಕೆ ಬಂದು, "ಓ ಕುರುಶಾರ್ದೂಲಾ! ಏಳು! ಏಳು! ಮುಂದೆ ನಡೆಸಬೇಕಾದ ಕಾರ್ಯವನ್ನು ನಡೆಸು. ಈಗ ನೀನು ನ್ಯಾಯವಾಗಿ ಕ್ಷತ್ರಿಯಧರ್ಮದಿಂದಲೇ ಈ ಭೂಮಿಯನ್ನು ಸಾಧಿಸಿರುವೆ. ನಿನಗೆ ವಶವಾದ ಭೂಮಿಯನ್ನು ನಿನ್ನ ಮಿತ್ರರೊಡನೆಯೂ, ಸಹೋದರರೊಡನೆಯೂ ಅನುಭವಿಸು. ನೀನು ಧರ್ಮಜ್ಞರಲ್ಲಿ ಮೇಲೆನಿಸಿದವನು! ಈಗ ನೀನು ದುಃಖಿಸಬೇಕಾದ ಕಾರಣವೇನೂ ನನಗೆ ತೋರಲಿಲ್ಲ. ಮುಖ್ಯವಾಗಿ ನಾನೂ, ಗಾಂಧಾರಿಯೂ ದುಃಖಪಡಬೇಕಾದುದು ಸಹಜವು. ಕನಸಿನಲ್ಲಿ ಕೈಗೆ ಸಿಕ್ಕಿದ ಗಂಟಿನಂತೆ, ನಮ್ಮ ನೂರುಮಂದಿ ಮಕ್ಕಳೂ ನಮಗೆ ಕೈತಪ್ಪಿಹೋದರು. ಹಿಂದೆ ಮಹಾತ್ಮನಾದ ವಿದುರನು ನಮ್ಮ ಹಿತವನ್ನು ಕೋರಿ ಹೇಳಿದ ಅಮೂಲ್ಯವಾಕ್ಯಗಳನ್ನು ಕೇಳದೆ ಬುದ್ಧಿಗೆಟ್ಟ ನಾನು, ಈಗ ಸಂಕಟಪಡಬೇಕಾಗಿ ಬಂದಿತು. ದಿವ್ಯದೃಷ್ಟಿಯುಳ್ಳ ಧರ್ಮಾತ್ಮನಾದ ಆ ವಿದುರನು ಆಗ ನನ್ನನ್ನು ಕುರಿತು "ನಿನ್ನ ಮಗನಾದ ದುರ್ಯೋಧನನ ದುರ್ಮಾರ್ಗದಿಂದ ನಿನ್ನ ಕುಲವೇ ನಾಶವಾಗುವುದು! ನೀನು ಕುರುಕುಲಕ್ಕೆ ಕ್ಷೇಮವನ್ನು ಬಯಸುವವನಾದರೆ ನನ್ನ ಮಾತಿನಂತೆ ನಡೆಸು! ದುಷ್ಟಾತ್ಮನೂ, ಮೂಢನೂ ಆದ ಆ ದುರ್ಯೋಧನನನ್ನು ಈಗಲೇ ನೀನು ಕೊಂದುಬಿಡು! ಅವನು ಕರ್ಣ ಶಕುನಿಗಳ ಕಣ್ಣಿಗೆ ಬೀಳದಂತೆಯಾದರೂ ಮಾಡು. ಅವರು ಏರ್ಪಡಿಸಿರುವ ಜೂಜಾಟದ ಪ್ರಯತ್ನವನ್ನು ಈಗಲೇ ನೀನು ನಿಲ್ಲಿಸು. ಧರ್ಮಾತ್ಮನಾದ ಯುಧಿಷ್ಠಿರನನ್ನೇ ಕೌರವರಾಜ್ಯಕ್ಕೆ ರಾಜ

ನನ್ನಾಗಿ ಮಾಡಿ ಅಭಿಷೇಕವನ್ನು ನಡೆಸು. ಜಿತೇಂದ್ರಿಯನಾದ ಆತನು ಧರ್ಮದಿಂದ ಭೂಮಿಯನ್ನು ಪಾಲಿಸುವನು. ಯುಧಿಷ್ಠಿರನನ್ನು ಒಂದು ವೇಳೆ ರಾಜನನ್ನಾಗಿ ಮಾಡುವುದು ನಿನಗೆ ಇಷ್ಟವಿಲ್ಲದಿದ್ದರೆ, ನೀನೇ ಸ್ಥಿರಮನಸ್ಸಿನಿಂದ ಮಧ್ಯಸ್ಥನಾಗಿದ್ದು ರಾಜ್ಯವನ್ನು ನಿನ್ನ ಕೈವಶದಲ್ಲಿಟ್ಟು ಕೊಂಡಿರು. ಸಮಸ್ತ ಭೂತಗಳಲ್ಲಿಯೂ ಸಮವಾಗಿ ವರ್ತಿಸುತ್ತಿರುವ ನಿನ್ನ ಜ್ಞಾತಿಗಳಾದ ಪಾಂಡವರು ನಿನ್ನ ಅನುಜೀವಿಗಳಾಗಿ ಸುಖದಿಂದ ಬದುಕುತ್ತಿರಲಿ. ಇದರಿಂದ ನಿನ್ನ ಮಕ್ಕಳಿಗೂ, ಪಾಂಡವರಿಗೂ ಕ್ಷೇಮ ವುಂಟು. ಹಾಗಿಲ್ಲದಪಕ್ಷದಲ್ಲಿ ನಿನ್ನ ಮಕ್ಕಳು ಸಾಯುವುದೇ ನಿಜವು. ಇದ ರಲ್ಲಿ ಸಂದೇಹವೇ ಇಲ್ಲ" ಎಂದು ನನಗೆ ಸಾರಿಸಾರಿ ಬುದ್ಧಿವಾದಗಳನ್ನು ಹೇಳಿದನು. ದೂರದೃಷ್ಟಿಯುಳ್ಳ ವಿದುರನು ಹೀಗೆ ಹೇಳುತ್ತಿದ್ದರೂ, ನಾನು ಬುದ್ಧಿಸ್ವಾಧೀನವಿಲ್ಲದೆ, ಪಾಪಿಯಾದ ಆ ದುರ್ಯೋಧನನ ಮಾರ್ಗವನ್ನೇ ಅನುವರ್ತಿಸುತ್ತಿದ್ದೆನು. ಆ ವಿದುರನ ಹಿತವಾಕ್ಯಗಳನ್ನು ಕೇಳದುದಕ್ಕೆ ಫಲವಾಗಿ, ಈಗ ನಾನು ದುಃಖಸಮುದ್ರದಲ್ಲಿ ಮುಳುಗಿಹೋದೆನು. ರಾಜಾ! ವೃದ್ಧರಾದ ಮತ್ತು ನಿನಗೆ ತಂದೆತಾಯಿಗಳಾದ ನಮ್ಮ ಸ್ಥಿತಿ ಯನ್ನು ನೋಡಿ ನೀನು ಸಮಾಧಾನವನ್ನು ತಂದುಕೊಳ್ಳಬೇಕು. ನೀನು ಹೀಗೆ ಶೋಕಿಸುವುದಕ್ಕೆ ಕಾರಣವೇನೂ ನನಗೆ ಕಾಣಲಿಲ್ಲ" ಎಂದನು.

ಇದು ಮೊದಲನೆಯ ಅಧ್ಯಾಯವು.

---

{ ಕೃಷ್ಣನು ಧರ್ಮರಾಜನನ್ನು ಸಮಾಧಾನಗೊಳಿಸಿದುದು. ಆದರೂ ಭೀಷ್ಮದ್ರೋಣಕರ್ಣಾದಿಗಳ ಮರಣಕ್ಕೆ ತಾನು ಕಾರಣನಾದುದನ್ನು ನೆನೆಸಿಕೊಂಡು, ದುಃಖದಿಂದ ಕಾಡಿಗೆ ಹೊರಡಬೇಕೆಂದಿದ್ದ ಧರ್ಮಪುತ್ರನಿಗೆ ತಿರುಗಿ ವ್ಯಾಸನು ಸಮಾಧಾನ ಹೇಳಿದುದು. }

ಓ ಜನಮೇಜಯರಾಜಾ ಕೇಳು. ಧೃತರಾಷ್ಟ್ರನ ಸಮಾಧಾನ ವಾಕ್ಯಗಳನ್ನು ಕೇಳಿಯೂ ಧರ್ಮರಾಜನು ತನ್ನಲ್ಲಿ ತಾನೇ ಕೊರಗುತ್ತ ಮೌನದಿಂದಿರುವುದನ್ನು ನೋಡಿ ಶ್ರೀ ಕೃಷ್ಣನು, "ಧರ್ಮಪುತ್ರಾ! ಹೀಗೆ ನೀನು

ದುಃಖಿಸಬಾರದು. ಮನಸ್ಸಿನಲ್ಲಿ ಬಹಳವಾಗಿ ದುಃಖದಿಂದ ಪರಿತಪಿಸಿದರೆ ಆ ಮನಸ್ಸಂತಾಪವು ಲೋಕಾಂತರವನ್ನೈದಿದ ನಿನ್ನ ಪಿತಾಮಹರನ್ನೇ ಸಂತಾಪಗೊಳಿಸುವುದು. ಎಂದರೆ (ಆಳುವವರ ಸಂಕಟವು ಸತ್ತವರನ್ನು ಕೊರಗಿಸುವುದು). ಆದುದರಿಂದ ಈ ದುಃಖವನ್ನು ಬಿಟ್ಟು, ಇಷ್ಟದಕ್ಷಿಣೆಗಳುಳ್ಳ ವಿವಿಧ ಯಜ್ಞಗಳನ್ನು ಮಾಡಿ, ಹೋಮದಿಂದ ದೇವತೆಗಳನ್ನೂ, ಸ್ವಧೆಯಿಂದ ಪಿತೃಗಳನ್ನೂ ಸಂತೋಷಗೊಳಿಸು. ಅನ್ನಪಾನಾದಿಗಳಿಂದ ಅತಿಥಿಗಳನ್ನೂ, ಅವರವರ ಕೋರಿಕೆಗಳನ್ನೀಡೇರಿಸುವುದರಿಂದ ಅರ್ಥಿಗಳನ್ನೂ ತೃಪ್ತಿಗೊಳಿಸು. ಮಹಾಧೀಮಂತನಾದ ನಿನ್ನಂತವನಿಗೆ ಈ ಸಮಯದಲ್ಲಿ ಹೀಗೆ ಕೊರಗುತ್ತಿರುವುದು ಉಚಿತವಲ್ಲ. ತಿಳಿಯಬೇಕಾದುದನ್ನೆಲ್ಲಾ ನೀನು ತಿಳಿದಿರುವೆ. ಸ್ವಧರ್ಮವನ್ನನುಸರಿಸಿ ಮಾಡಬೇಕಾದುದನ್ನೆಲ್ಲಾ ಮಾಡಿರುವೆ. ಗಂಗಾಪುತ್ರನಾದ ಭೀಷ್ಮನಿಂದಲೂ, ವ್ಯಾಸಮುನಿಯಿಂದಲೂ, ನಾರದನಿಂದಲೂ, ವಿದುರನಿಂದಲೂ, ರಾಜಧರ್ಮಗಳನ್ನೆಲ್ಲಾ ಕೇಳಿ ತಿಳಿದಿರುವೆ. ಇಂತಹ ನೀನು ಕೇವಲ ಅಜ್ಞಜನರು ಅನುವರ್ತಿಸತಕ್ಕ ಈ ದಾರಿಯನ್ನು ಹಿಡಿಯಬಾರದು. ನಿನ್ನ ಪೂರ್ವಿಕರಾದ ಪಿತೃಪಿತಾಮಹರ ಮಾರ್ಗವನ್ನನುಸರಿಸಿ ರಾಜ್ಯಭಾರವನ್ನು ವಹಿಸು. ಕ್ಷತ್ರಿಯರು ಯುದ್ಧಮಾಡಿ, ಯಶಸ್ಸನ್ನು ಗಳಿಸಿ, ಸತ್ತು ಸ್ವರ್ಗವನ್ನು ಹೊಂದುವರು. ಇದರಲ್ಲಿ ಸಂದೇಹವಿಲ್ಲ. ಈಗಿನ ಯುದ್ಧದಲ್ಲಿ ಕೈಕಲೆತಿದ್ದ ಶೂರರಲ್ಲಿ ಒಬ್ಬನಾದರೂ ಶತ್ರುಗಳಿಗೆ ಬೆನ್ನುಕೊಟ್ಟು ಭಯದಿಂದೋಡಿ ಸತ್ತವನಿಲ್ಲ. ಆದುದರಿಂದ ಅವಲ್ಲರೆರೂ ಕೀರ್ತಿವಂತರಾಗಿ ಸದ್ಗತಿಯನ್ನೇ ಹೊಂದಿರುವರು. ಈ ದುಃಖವನ್ನು ಬಿಟ್ಟುಬಿಡು. ಇದು ಹೀಗೆಯೇ ನಡೆಯಬೇಕಾಗಿದ್ದಿತು. ಅದರಂತಯೇ ನಡೆದುಹೋಯಿತು. ಹೇಗಿದ್ದರೂ ಈ ಯುದ್ಧದಲ್ಲಿ ಸತ್ತವರನ್ನು ನೀನು ಬೇರೆ ನೋಡಲಾರೆ, ಮನಸ್ಸನ್ನು ಸ್ಥಿರಗೊಳಿಸು'' ಎಂದನು. ಇಷ್ಟುಮಾತನ್ನು ಹೇಳಿ ಕೃಷ್ಣನು ಸುಮ್ಮನಾದನು. ಆಗ ಧರ್ಮರಾಜನು ವಾಸುದೇವನನ್ನು ಕುರಿತು, "ಗೋವಿಂದಾ! ನಿನಗೆ ನನ್ನಲ್ಲಿ ಎಂತಹ ಅಸಾಧಾರಣ ಪ್ರೀತಿಯುಂಟೆಂಬುದನ್ನು ನಾನು ಬಲ್ಲೆನು. ಮಿತ್ರಭಾವದಿಂದಲೂ, ಪ್ರೀತಿಯಿಂದಲೂ ನನ್ನಲ್ಲಿ ನೀನು ಯಾವಾಗಲೂ ಕನಿಕರವನ್ನೇ ತೋರಿಸುತ್ತಿರುವೆ. ಆ ಪ್ರೀತಿಗೆ ತಕ್ಕಂತೆ ಈಗ ನೀನು ನನಗೆ ಒಂದು

ಕಾರ್ಯವನ್ನು ನೆರವೇರಿಸಿ ಕೊಡುವುದಾದರೆ, ಅದರಿಂದ ನೀನು ಎಷ್ಟೋ ಮಹೋಪಕಾರವನ್ನು ಮಾಡಿದಂತಾಗುವುದು. ನಾನೂ ಅದರಿಂದ ವಿಶೇಷ ಪ್ರೀತನಾಗುವೆನು. ನೀನು ಈಗ ನನಗೆ ತಪೋವನಕ್ಕೆ ಹೋಗಲು ಅನುಮತಿಯನ್ನು ಕೊಟ್ಟರೆ ಸಾಕು. ಅದೇ ನನಗೆ ಮಹೋಪಕಾರವು. ಅದರಿಂದಲೇ ಈಗ ನಾನು, ಕೃತಕೃತ್ಯನಾಗಬೇಕೆಂದು ನನ್ನ ಮನಸ್ಸಿಗೆ ನಿಶ್ಚಯ್ಯವಾಗಿ ತೋರಿದೆ. ನನ್ನ ಮನಸ್ಸಿಗೆ ಬೇರೆ ವಿಧದಲ್ಲಿ ಶಾಂತಿಯು ದುರ್ಲಭವು. ಅಯ್ಯೋ! ಘಾತುಕನಾದ ನಾನು ತಾತನೂ ಗುರುವೂ ಆಗಿದ್ದ ಪುರುಷಶ್ರೇಷ್ಠನಾದ ಆ ಭೀಷ್ಮನನ್ನು ಕೊಲ್ಲಿಸಿದೆನು. ಆಚಾರ್ಯನನ್ನೂ ಕೊಲ್ಲಿಸಿದೆನು! ಯಾವಯುದ್ಧದಲ್ಲಿಯೂ ಹಿಂತಿರುಗದ ಪುರುಷಶ್ರೇಷ್ಠನಾದ ಕರ್ಣನನ್ನೂ ಕೊಲ್ಲಿಸಿದೆನು. ಓ ಶತ್ರುಸೂದನಾ! ಇಂತಹ ಕ್ರೂರಪಾಪದಿಂದ ಬಿಡುಗಡೆ ಹೊಂದಿ ನನ್ನ ಮನಸ್ಸು ಹೇಗೆ ಶುದ್ಧವಾಗುವುದೋ, ಅಂತಹ ಪ್ರಾಯಶ್ಚಿತ್ತ ಕರ್ಮವೊಂದನ್ನು ನನಗೆ ತಿಳಿಸಬೇಕು'' ಎಂದನು.

ಹೀಗೆ ಹೇಳಿದ ಧರ್ಮರಾಜನನ್ನು ನೋಡಿ ಧರ್ಮಜ್ಞನಾದ ವ್ಯಾಸನು ಸಮಾಧಾನಗೊಳಿಸುತ್ತ ಹೀಗೆಂದು ಹೇಳುವನು. ''ಅಪ್ಪಾ ಧರ್ಮಪುತ್ರಾ! ಅನೇಕ ಶಾಸ್ತ್ರಗಳನ್ನು ಕೇಳಿ ನಿನ್ನ ಬುದ್ಧಿಯು ಪರಿಪಾಕ ಹೊಂದಿರುವುದು. ಹಾಗಿದ್ದರೂ ಈಗ ನೀನು ಅಜ್ಞನಾದ ಬಾಲಕನಂತೆ ದುಃಖಿಸುವೆಯಲ್ಲ! ನಾವು ನಿನಗೆ ಈಗ ಹೇಳಿದ ಬುದ್ಧಿವಾದಗಳೆಲ್ಲವೂ ಶೂನ್ಯಪ್ರದೇಶವಾದ ಆಕಾಶದಲ್ಲಿ ಕೂಗಿದಂತಾಯಿತೇ? ಕ್ಷತ್ರಧರ್ಮಗಳೆಲ್ಲವೂ ನಿನಗೆ ತಿಳಿದಿವೆ. ಕ್ಷತ್ರಿಯರಿಗೆ ಯುದ್ಧದಿಂದಲೇ ಜೀವಿಕೆ! ಅಂತಹ ಸ್ವಕರ್ಮದಲ್ಲಿ ಪ್ರವರ್ತಿಸಿದ ನೀನು ಅದಕ್ಕಾಗಿ ಹೀಗೆದುಃಖಿಸುವುದು ಯೋಗ್ಯವಲ್ಲ. ಇದಲ್ಲದೆ ಕಾಮಾದಿಗಳಿಂದುಂಟಾಗಬಹುದಾದ ಈ ಸಂದೇಹಗಳೆಲ್ಲ ನೀಗುವಂತೆ, ಮೋಕ್ಷಧರ್ಮಗಳೆಲ್ಲವನ್ನೂ ಯಥಾವತ್ತಾಗಿ ಕೇಳಿ ತಿಳಿದಿರುವೆ! ನಾನೇ ಅನೇಕಾವರ್ತಿ ನಿನಗೆ ಆ ಸಂದೇಹಗಳನ್ನೆಲ್ಲ ಪರಿಹರಿಸಿರುವೆನು. ಹಾಗಿದ್ದರೂ ಅದೊಂದನ್ನೂ ನಂಬದಂತೆ, ಎಲ್ಲವನ್ನೂ ಮರೆತು ಬುದ್ಧಿಹೀನನಾಗಿ ಹೀಗೆ ಶೋಕಿಸುತ್ತಿರುವೆಯಲ್ಲಾ. ನೀನು ಹೀಗಿರಬಾರದು. ನಿನ್ನಂಥವನಿಗೆ ಈ ವಿಧವಾದ ಅಜ್ಞಾನವು ಯೋಗ್ಯವಲ್ಲ. ಎಲ್ಲಾ ಪ್ರಾಯಶ್ಚಿತ್ತವಿಧಿಗಳನ್ನೂ ನೀನು

ತಿಳಿದವನು. ಎಲ್ಲಾ ರಾಜಧರ್ಮಗಳನ್ನೂ, ದಾನಧರ್ಮಗಳ ಕ್ರಮವನ್ನೂ ನೀನು ಕೇಳಿರುವೆ. ಹೀಗೆ ಸಮಸ್ತ ಧರ್ಮಗಳನ್ನೂ ಬಲ್ಲವನಾಗಿ, ಎಲ್ಲಾ ಶಾಸ್ತ್ರಗಳಲ್ಲಿಯೂ ನಿಪುಣನೆನಿಸಿಕೊಂಡ ನೀನು, ಅಜ್ಞಾನದಿಂದ ಬುದ್ಧಿಗೆಟ್ಟವರಂತೆ ಹೀಗೆ ಕಳವಳಿಸುವುದೆ? " ಎಂದನು.

ಇದು ಎರಡನೆಯ ಅಧ್ಯಾಯವು.

ಮನುಷ್ಯನ ಕರ್ಮಗಳೆಲ್ಲವೂ ಈಶ್ವರಪ್ರೇರಣೆಯಿಂದಲೇ ನಡೆಯತಕ್ಕವುಗಳಾದುದರಿಂದ ಅದು ದೋಷಾಸ್ಪದವಲ್ಲವೆಂದೂ, ಒಂದುವೇಳೆ ಆ ಸಂದೇಹವಿದ್ದರೂ, ಆ ಪಾಪ ನಿವಾರಣಾರ್ಥವಾಗಿ ಅಶ್ವಮೇಧವನ್ನು ಮಾಡಬಹುದೆಂದೂ, ವ್ಯಾಸನು ಧರ್ಮರಾಜನಿಗೆ ತಿಳಿಸಿದುದು. ಆಗ ಯುಧಿಷ್ಠಿರನು ತನಗೆ ಅಷ್ಟೊಂದು ದ್ರವ್ಯಬಲವಿಲ್ಲವೆಂದು ತಿಳಿಸಲು, ವ್ಯಾಸನು ಹಿಮಾಲಯದಲ್ಲಿ ಮರುತ್ತರಾಜನ ಯಾಗಸಾಮಗ್ರಿಗಳು ದೊರೆಯುವುವೆಂದೂ, ಅದರಿಂದ ಯಾಗವನ್ನು ನಡೆಸಬಹುದೆಂದೂ ತಿಳಿಸಿದುದು.

ವ್ಯಾಸನು ಧರ್ಮರಾಜನನ್ನು ಕುರಿತು, " ಯುಧಿಷ್ಠಿರಾ! ನಿನ್ನ ಬುದ್ಧಿಯು ಸರಿಯಲ್ಲವೆಂದೇ ನನಗೆ ತೋರುವುದು. ಮನುಷ್ಯನು ಯಾವನೂ ತನಗೆ ತಾನೇ ಕಾರ್ಯವನ್ನು ನಡೆಸಲಾರನು. ಒಳ್ಳೆಯದನ್ನಾಗಲಿ, ಕೆಟ್ಟದನ್ನಾಗಲಿ ಅವನು ಮಾಡುವುದು ಈಶ್ವರನ ಪ್ರೇರಣೆಯಿಂದಲೇ ಹೊರತು, ಯಾವ ಕಾರ್ಯಕ್ಕೂ ತಾನು ಸ್ವತಂತ್ರನಲ್ಲ. ಮನುಷ್ಯನು ಎಷ್ಟೋ ಅಸಾಧ್ಯಕಾರ್ಯಗಳನ್ನೆಲ್ಲಾ ಆ ಈಶ್ವರನ ಪ್ರೇರಣೆಯಿಂದಲೇ ನಡೆಸುವನು. ಹೀಗಿರುವಾಗ ನೀನು ಚಿಂತಿಸಬೇಕಾದ ಕಾರಣವೇನಿದೆ? ಹಾಗಿದ್ದರೂ ಆ ಪಾಪನಿವೃತ್ತಿಗಾಗಿ ನಿನಗೆ ಮಾರ್ಗವನ್ನು ತಿಳಿಸುವೆನು. ಪಾಪಕಾರ್ಯವನ್ನು ನಡೆಸಿದವರು ಯಜ್ಞದಾನ ತಪಸ್ಸುಗಳಿಂದ ತಮ್ಮ ಪಾಪಗಳನ್ನು ನಿವೃತ್ತಿಗೊಳಿಸಿಕೊಳ್ಳಬಹುದು. ಯಜ್ಞದಿಂದಲೂ, ತಪಸ್ಸಿನಿಂದಲೂ, ತಮ್ಮ ಪಾಪಗಳನ್ನು

ನೀಗಿ ಶುದ್ಧರಾಗುವರು. ಮಹಾಮಹಿಮೆಯುಳ್ಳ ದೇವದಾನವರೂಕೂಡ ಪುಣ್ಯಕ್ಕಾಗಿ ಯಜ್ಞಕಾರ್ಯವನ್ನು ನಡೆಸುವರು. ಆದುದರಿಂದ ಯಜ್ಞವೇ ಇದಕ್ಕೆ ಉತ್ತಮವಾದ ಮಾರ್ಗವು. ರಾಜಸೂಯವೆಂದೂ, ಅಶ್ವಮೇಧವೆಂದೂ, ಸರ್ವಮೇಧವೆಂದೂ, ಅನೇಕ ವಿಧಯಜ್ಞಗಳುಂಟು. ನೀನು ಆ ಯಜ್ಞಗಳನ್ನು ನಡೆಸುವುದಕ್ಕೆ ಯತ್ನಿಸು, ಮುಖ್ಯವಾಗಿ ಶಾಸ್ತ್ರೋಕ್ತವಾದ ದಕ್ಷಿಣೆಗಳುಳ್ಳ ಅಶ್ವಮೇಧಯಾಗವನ್ನು ನೀನು ಆರಂಭಿಸು. ಹಿಂದೆ ದಶರಥಪುತ್ರನಾದ ಶ್ರೀರಾಮನು ಹೇಗೋ ಹಾಗೆ, ನೀನೂ ಈಗ ಸಮೃದ್ಧವಾದ ಅನ್ನ ದಾನಗಳಿಂದಲೂ, ಇಷ್ಟದಾನಗಳಿಂದಲೂ ಕೂಡಿದ ಅಶ್ವಮೇಧವನ್ನು ನಡೆಸು. ಹಿಂದೆ ದುಷ್ಯಂತನಿಗೆ ಶಕುಂತಳೆಯಲ್ಲಿಹುಟ್ಟಿದ ನಿನ್ನ ಪೂರ್ವಪಿತಾಮಹನಾದ ಭರತ ಚಕ್ರವರ್ತಿಯು ಹೇಗೋ ಹಾಗೆ ನೀನೂ ಮಹಾವೈಭವದಿಂದ ಆ ಯಾಗವನ್ನು ನೆರವೇರಿಸು" ಎಂದನು. ಅದಕ್ಕಾ ಯುಧಿಷ್ಠಿರನು "ಮುನೀಂದ್ರಾ! ನೀನು ಹೇಳಿದಂತೆ ಅಶ್ವಮೇಧಯಾಗವು ಸಮಸ್ತ ಭೂಮಿಯನ್ನೇ ಪಾಪದಿಂದುದ್ಧರಿಸುವುದೆಂಬುದರಲ್ಲಿ ಸಂದೇಹವಿಲ್ಲ. ಆದರೆ, ಇದರಲ್ಲಿ ನನಗೆ ದೊಡ್ಡ ಸಂದೇಹವುಂಟಾಗಿರುವುದು. ಅದನ್ನು ಹೇಳುವೆನು. ಈಗಲಾದರೋ ನಾನು ಅನೇಕ ಜ್ಞಾತಿಗಳನ್ನು ಕೊಲ್ಲಿಸಿ, ಪ್ರಬಲ ಪಾತಕವನ್ನುಮಾಡಿರುವೆನು. ಕೇವಲ ದುಃಖದಿಂದ ಯಾವ ಕಾರ್ಯಕ್ಕೂ ಉತ್ಸಾಹಶೂನ್ಯನಾಗಿರುವೆನು. ನನ್ನಲ್ಲಿ ಅದಕ್ಕೆ ತಕ್ಕಷ್ಟು ದ್ರವ್ಯವೂ ಇಲ್ಲ. ಅತ್ಯಲ್ಪದಾನವನ್ನುಮಾಡುವುದಕ್ಕೂ ನನಗೆ ಶಕ್ತಿಯಿಲ್ಲ. ಈ ಸ್ಥಿತಿಯಲ್ಲಿ ನಾನುಹೇಗೆತಾನೇ ಆ ಯಜ್ಞದಿಂದ ದೇವತೆಗಳನ್ನಾರಾಧಿಸಬಲ್ಲೆನು ಬಾಲಕರೂ ದುಃಖಿತರೂ ಆದ ಈ ನನ್ನ ತಮ್ಮಂದಿರನ್ನು "ಈಗನನಗೆ ಹಣವನ್ನು ತಂದುಕೊಡಿರೆಂದು' ಕೇಳಲು ನನಗೆ ಬಾಯೆಲ್ಲಿಯದು! ಮತ್ತು ತಮ್ಮ ಧನವನ್ನೆಲ್ಲಾ ಕಳೆದುಕೊಂಡು ಕಷ್ಟದಲ್ಲಿ ಸಿಕ್ಕಿರುವ ಇತರ ರಾಜಕುಮಾರರನ್ನಾದರೂ ನಾನು ಹೇಗೆ ಹಣವನ್ನು ಯಾಚಿಸಲಿ? ಯುದ್ಧದ ನೆವದಿಂದ ನಾನು ಈ ಸಮಸ್ತಭೂಮಿಯನ್ನೂ ಹಾಳುಮಾಡಿ ಈಗ ಯಜ್ಞದ, ನೆವದಿಂದ ಜನಗಳಲ್ಲಿ ಹಣವನ್ನು ಸಂಗ್ರಹಿಸುವುದು ಹೇಗೆ? ಓ ಮುನೀಂದ್ರಾ! ಆ ದುರ್ಯೋಧನನ ದುರಾಚರಣೆಯಿಂದ ಭೂಮಿಯಲ್ಲಿದ್ದ ರಾಜರೆಲ್ಲರೂ ಯುದ್ಧದಲ್ಲಿ ಸತ್ತರು. ಅವನು ನಮ್ಮನ್ನೂ ಅಪಕೀರ್ತಿಗೆ ಗುರಿಮಾಡಿದನು.

ಯುದ್ಧದಲ್ಲಿ ಜಯಿಸಬೇಕೆಂಬ ಆತುರದಿಂದ ಭೂಮಿಯನ್ನೆಲ್ಲಾ ಹಾಳು ಮಾಡಿದನು. ಅವನ ಭಂಡಾರವೆಲ್ಲ ಬರಿದಾಯಿತು. ಅಶ್ವಮೇಧವೆಂಬ ಮಹಾಯಜ್ಞದಲ್ಲಿಯಾದರೋ, ಸಮಸ್ತ ಭೂಮಿಯೇ ದಕ್ಷಿಣಾದ್ರವ್ಯವೆಂದು ವಿದ್ವಾಂಸರಿಂದ ವಿಧಿಸಲ್ಪಟ್ಟಿದೆ. ಈಗಲಾದರೋ ದೈವಗತಿಯು ನಮ್ಮನ್ನು ಈ ಸ್ಥಿತಿಗೆ ತಂದುಬಿಟ್ಟಿದೆ. ಆ ಧನಕ್ಕಾಗಿ ಏನು ಮಾಡಬೇಕೆಂದು ನನಗೆ ತೋರಲಿಲ್ಲ. ಅದಕ್ಕೆ ಬೇಕಾದ ದ್ರವ್ಯಕ್ಕೆ ಪ್ರತಿನಿಧಿ ಯಾವುದೂ ನನಗೆ ದೊರೆಯುವ ಹಾಗಿಲ್ಲ. ಇದಕ್ಕಾಗಿ ಮುಂದೆ ಮಾಡಬೇಕಾದ ಉಪಾಯ ವೇನೆಂದು ನೀನೇ ತಿಳಿಸಬೇಕು'' ಎಂದನು. ಆಗ ಶ್ರೀಕೃಷ್ಣದ್ವೈಪಾಯನನು (ವ್ಯಾಸನು) ತನ್ನೊಳಗೆ ತಾನೇ ಸ್ವಲ್ಪಹೊತ್ತು ಯೋಚಿಸಿ, ಧರ್ಮರಾಜ ನನ್ನು ಕುರಿತು, ''ವತ್ಸಾ ಧರ್ಮಪುತ್ರಾ ! ಇದಕ್ಕಾಗಿ ನೀನು ಚಿಂತಿಸಬೇಡ. ಈಗ ಶೂನ್ಯಪ್ರಾಯವಾದ ನಿನ್ನ ಭಂಡಾರವನ್ನು ತುಂಬುವುದಕ್ಕೆ ಮಾರ್ಗ ವೊಂದುಂಟು. ಹಿಮಾಲಯದಲ್ಲಿ ಈಗ ಅಪರಿಮಿತವಾದ ದ್ರವ್ಯವಿರುವುದು. ಹಿಂದೆ ಮರುತ್ತನೆಂಬ ರಾಜನ ಯಜ್ಞದಲ್ಲಿ ಬ್ರಾಹ್ಮಣರು ಬಿಟ್ಟು ಹೋದ ದ್ರವ್ಯವು ಅಲ್ಲಿ ಅಪಾರವಾಗಿರುವುದು. ಅದನ್ನು ಸಾಗಿಸಿ ತರುವ ಪ್ರಯ ತ್ನವನ್ನು ಮಾಡು. ಅದು ನಿನ್ನ ಯಜ್ಞಕ್ಕೆ ಸಾಕಾಗುವುದು''. ಎಂದನು. ಆಗ ಯುಧಿಷ್ಠಿರನು ''ಓ ಮುನೀಂದ್ರಾ ! ಆ ವೃತ್ತಾಂತವೇನು ? ಮರುತ್ತ ನೆಂಬ ರಾಜನಾರು? ಅವನಿದ್ದ ಕಾಲವಾವುದು ? ಅವನು ಯಜ್ಞಕ್ಕಾಗಿ ಅಷ್ಟೊಂದು ದ್ರವ್ಯವನ್ನು ಹೇಗೆ ಸೇರಿಸಿಟ್ಟನು ? '' ಎಂದನು. ಅದಕ್ಕಾ ವ್ಯಾ ಸನು ''ವತ್ಸಾ ! ನಿನಗೆ ಆ ವೃತ್ತಾಂತವನ್ನು ಕೇಳಬೇಕೆಂಬ ಆಸೆಯಿದ್ದರೆ, ಮಹಾವೀರ್ಯವುಳ್ಳವನೂ, ವಿಶೇಷ ಸಂಪತ್ತುಳ್ಳವನೂ ಆಗಿದ್ದ ಕರಂಧಮ ಪುತ್ರನಾದ ಆ ಮರುತ್ತನು ಯಾವ ಕಾಲದಲ್ಲಿ ಹೇಗೆ ಯಜ್ಞವನ್ನು ಮಾಡಿ ದನೋ, ಅದನ್ನೆಲ್ಲ ತಿಳಿಸುವೆನು. ಸಾವಧಾನವಾಗಿ ಕೇಳು '' ಎಂದನು.

ಇದು ಮೂರನೆಯ ಅಧ್ಯಾಯವು.



ವ್ಯಾಸಮಹರ್ಷಿಯು ಯುಧಿಷ್ಠಿರನಿಗೆ ಸಂವರ್ತಮರುತ್ತೀಯ ವೆಂಬ ಉಪಾಖ್ಯಾನವನ್ನು ಹೇಳಲಾರಂಭಿಸಿದುದು. ಮರುತ್ತನು ಹಿಮಾಲಯದ ಉತ್ತರಪಾರ್ಶ್ವದಲ್ಲಿ ಯಜ್ಞಕ್ಕೆ ಬೇಕಾದ ಕುಂಡಭಾಂಡಾದಿಪಾತ್ರೆಗಳನ್ನೆಲ್ಲಾ ಭಂಗಾರದಿಂದಲೇ ಮಾಡಿಸಿ ಯಜ್ಞವನ್ನು ತೊಡಗಿದುದು.

ಆಗ ಯುಧಿಷ್ಠಿರನು ವ್ಯಾಸಮಹರ್ಷಿಯನ್ನು ಕುರಿತು "ಓ ಧರ್ಮಜ್ಞಾ ಮರುತ್ತನೆಂಬ ರಾಜರ್ಷಿಯ ವಿಚಾರವನ್ನೆಲ್ಲ ಕೇಳಬೇಕೆಂದು ನನಗೆ ಕುತೂಹಲವುಂಟು. ಆ ಕಥೆಯನ್ನು ವಿವರಿಸಬೇಕು" ಎಂದನು. ಅದಕ್ಕಾ ವ್ಯಾಸನು! "ಧರ್ಮಪುತ್ರಾ ಕೇಳು. ಪೂರ್ವದಲ್ಲಿ ನ್ಯಾಯಶೀಲನಾದ ಮನು ವೆಂಬ ರಾಜನಿದ್ದನು. ಅವನಿಗೆ ಮಹಾಧನುರ್ಧರನಾದ ಪ್ರಜಾತಿ ಎಂಬ ಪುತ್ರನಾದನು. ಅವನಿಗೆ ಕ್ಷಾತನೆಂಬಮಗನಾದನು. ಇಕ್ಷ್ವಾಕುವೆಂಬ ಪ್ರಸಿದ್ಧ ರಾಜನುಅವನ ಮಗನು. ಅವನಿಗೆ ನೂರುಮಂದಿ ಪುತ್ರರು ಹುಟ್ಟಿದರು. ಇಕ್ಷ್ವಾಕುವು ಆ ನೂರುಮಂದಿ ಪುತ್ರರಿಗೂ ಬೇರೆಬೇರೆ ರಾಜ್ಯ ಭಾಗಗಳನ್ನು ಕೊಟ್ಟು, ಎಲ್ಲರನ್ನೂ ರಾಜರನ್ನಾಗಿ ಮಾಡಿದನು. ಅವರಲ್ಲಿ ಜ್ಯೇಷ್ಠನಿಗೆ ವಿಂಶನೆಂದು ಹೆಸರು. ಧನುರ್ಧಾರಿಗಳಿಗೆ ಆದರ್ಶಭೂತನಾಗಿದ್ದ ವಿಂಶನ ಮಗನು ವಿವಿಂಶನೆಂಬುವನು. ಈ ವಿವಿಂಶನಿಗೆಹದಿನೈದು ಮಂದಿ ಮಕ್ಕಳಾದರು. ಅವರೆಲ್ಲರೂ ಧನುರ್ವಿದ್ಯೆಯಲ್ಲಿ ಬಹಳ ನಿಪುಣರಾಗಿಯೂ, ಬ್ರಾಹ್ಮಣಪ್ರಿಯರಾಗಿಯೂ, ಸತ್ಯವಾದಿಗಳಾಗಿಯೂ, ದಾನಧರ್ಮನಿರತ ರಾಗಿಯೂ, ಶಾಂತಸ್ವಭಾವವುಳ್ಳವರಾಗಿಯೂ, ಯಾವಾಗಲೂ ಎಲ್ಲರಿಗೂ ಪ್ರಿಯವನ್ನೇ ನುಡಿಯತಕ್ಕವರಾಗಿಯೂ ಇದ್ದರು. ಅವರಲ್ಲಿ ಜ್ಯೇಷ್ಠ ನಿಗೆ ಖನೀನೇತ್ರನೆಂದು ಹೆಸರು. ಅವನು ಮಹಾಪರಾಕ್ರಮಿ. ಅವನು ಇತರ ಸಹೋದರರನ್ನೆಲ್ಲಾ ಪೀಡಿಸುತ್ತಿದ್ದನು. ರಾಜ್ಯವನ್ನೆಲ್ಲಾ ಜಯಿಸಿ ಶತ್ರುಭಾದೆ ಯಿಲ್ಲದಂತೆ ಮಾಡಿದನು. ಆದರೆ ಅವನು ರಾಜ್ಯವನ್ನು ರಕ್ಷಿ ಸಲು ಸಮರ್ಥನಾಗಿರಲಿಲ್ಲ. ಪ್ರಜೆಗಳಲ್ಲಿ ಯಾರಿಗೂ ಅವನಲ್ಲಿ ಪ್ರೀತಿ ಯಿರಲಿಲ್ಲ ಆಮೇಲೆ ಪ್ರಜೆಗಳು ಅವನನ್ನು ರಾಜ್ಯಾಧಿಕಾರದಿಂದ ತಪ್ಪಿಸಿ, ಸುವರ್ಚಸನೆಂಬ ಅವನ ಮಗನಿಗೆ ಪಟ್ಟಾಭಿಷೇಕವನ್ನು ನಡೆಸಿದರು.

ಅವನ ಪರಿಪಾಲನದಲ್ಲಿ ಪ್ರಜೆಗಳೆಲ್ಲರಿಗೂ ತೃಪ್ತಿಯಾಯಿತು. ಇವನು ತನ್ನ ತಂದೆಯ ಅನೀತಿಯನ್ನೂ, ಅವನಿಗೆ ಪ್ರಜೆಗಳಿಂದುಂಟಾದ ರಾಜ್ಯಭ್ರಂಶವನ್ನೂ ನೋಡಿ, ಪ್ರಜೆಗಳಿಗೆ ಕ್ಷೇಮವನ್ನುಂಟುಮಾಡುವುದರಲ್ಲಿಯೇ ಎಚ್ಚರಿಕೆಯುಳ್ಳವನಾಗಿ ರಾಜ್ಯಪರಿಪಾಲನವನ್ನು ನಡೆಸುತ್ತಿದ್ದನು. ಅವನು ಬ್ರಾಹ್ಮಣಪ್ರಿಯನಾಗಿಯೂ, ಸತ್ಯವಾದಿಯಾಗಿಯೂ, ಶುದ್ಧನಾಗಿಯೂ, ಶಮದಮಾದಿಗುಣಗಳಿಂದ ಕೂಡಿದವನಾಗಿಯೂ ಇದ್ದನು. ಅವನು ಯಾವಾಗಲೂ ಧರ್ಮಕಾರ್ಯಗಳನ್ನು ನಡೆಸುತ್ತಾ, ಬಹಳ ಉದಾರಸ್ವಭಾವವುಳ್ಳವನಾಗಿದ್ದನು. ಇದರಿಂದ ಪ್ರಜೆಗಳಿಗೂ ಅವನಲ್ಲಿ ಬಹಳ ವಿಶ್ವಾಸವಿದ್ದಿತು. ಆದರೆ, ಧರ್ಮಕಾರ್ಯಕ್ಕಾಗಿಯೇ ವಿಶೇಷ ದ್ರವ್ಯವನ್ನು ವೆಚ್ಚಮಾಡುತ್ತಿದ್ದ ಅವನಿಗೆ ಭಂಡಾರವೆಲ್ಲವೂ ಬರಿದಾಗುತ್ತ ಬಂದಿತು. ಹೀಗೆ ಅವನ ಭಂಡಾರವು ಬರಿದಾದ ಸಮಯವನ್ನು ನೋಡಿ ಸುತ್ತುಮುತ್ತಿನ ರಾಜರೆಲ್ಲರೂ, ಅವನಿಗೆ ನಾನಾಕಡೆಗಳಿಂದ ತೊಂದರೆಗಳನ್ನು ಕೊಡಲು ಆರಂಭಿಸಿದರು. ಹೀಗೆ ನಾನಾಕಡೆಗಳಿಂದ ತನಗೆ ಬಂದ ಉಪದ್ರವಗಳನ್ನೂ, ತನ್ನ ವಸ್ತುವಾಹನಗಳೂ, ಭಂಡಾರವೂ ಬರಿದಾಗಿರುವುದನ್ನೂ ನೋಡಿ, ಅವನಿಗೆ ಮಹತ್ತಾದ, ವ್ಯಸನವುಂಟಾಯಿತು. ಅವನ ಭೃತ್ಯರೂ, ಪುರಜನರೂ ಅವನಕಷ್ಟದಲ್ಲಿ ತಾವೂ ಸಮಭಾಗಿಗಳಾಗಿ ಶೋಕಿಸುತ್ತಿದ್ದರು. ಇವನು ಒಳ್ಳೇ ಸಚ್ಚರಿತವುಳ್ಳವನಾಗಿಯೂ, ಧರ್ಮನಿರತನಾಗಿಯೂ ಇದ್ದುದರಿಂದ, ಅವನಿಗೆ ಸೇನಾಬಲವಿಲ್ಲದಿದ್ದರೂ, ಶತ್ರುಗಳಾರೂ ಅವನನ್ನು ಕೊಲ್ಲುವುದಕ್ಕೆ ಸಮರ್ಥರಾಗಿರಲಿಲ್ಲ. ತನ್ನ ಸಮಸ್ತ ಪುರಜನರೊಡನೆ ಕಷ್ಟಕ್ಕೊಳಗಾಗಿ ಚಿಂತಿಸುತ್ತಿದ್ದ ಆ ರಾಜನು, ತನ್ನ ಕೈಗಳನ್ನು (ಶಂಖದಹಾಗೆ) ಜೋಡಿಸಿ, ಒಂದಾವರ್ತಿ ಅದನ್ನೂದಿದನು. ಈ ಧ್ವನಿಯು ಹೊರಟೊಡನೆ ದೊಡ್ಡಸೈನ್ಯವೊಂದು ಉತ್ಪನ್ನವಾಯಿತು. ಆ ಸೇನಾಬಲದಿಂದ ತನ್ನ ಸುತ್ತುಮುತ್ತಿನ ಸಾಮಂತರಾಜರನ್ನೆಲ್ಲಾ ಜಯಿಸಿದನು. ವತ್ಸ ಯುಧಿಷ್ಠಿರಾ! ಇದರಿಂದ ಅವನಿಗೆ ಕರಂಧಮನೆಂಬ ಹೆಸರು ಪ್ರಸಿದ್ಧವಾಯಿತು. ತ್ರೇತಾಯುಗದ ಆದಿಯಲ್ಲಿ ಅವನಿಗೆ ಅವಿಕ್ಷತ್ತೆಂಬಮಗನಾದನು. ಇವನು ಐಶ್ವರ್ಯದಲ್ಲಿ ದೇವೇಂದ್ರನಿಗೆ ಸಮಾನನಾಗಿ ದೇವತೆಗಳಿಗೂ ದುರ್ಜಯನೆನಿಸಿದ್ದನು. ಅವನಿಗೆ ಎಲ್ಲಾ ರಾಜರೂ ಅಧೀನ

ರಾಗಿದ್ದರು. ಒಳ್ಳೆಯ ನಡತೆಯಲ್ಲಿಯೂ, ಪರಾಕ್ರಮದಲ್ಲಿಯೂ ಎಲ್ಲಾ ರಾಜರಿಗೂ ಅವನು ಮೇಲೆನಿಸಿಕೊಂಡು, ದೊಡ್ಡ ಚಕ್ರವರ್ತಿ ಯೆಂಬಹೆಸರನ್ನು ಪಡೆದನು. ಅವನುಪರಾಕ್ರಮದಲ್ಲಿ ಇಂದ್ರನಿಗೆ ಸಾಟಿಯೆನಿಸಿಕೊಂಡು ಯಜ್ಞಶೀಲನೂ, ಧರ್ಮರತನೂ, ಧೈರ್ಯಶಾಲಿಯೂ ಜಿತೇಂದ್ರಿಯನೂ ಆಗಿದ್ದನು. ಮತ್ತು ತೇಜಸ್ಸಿನಲ್ಲಿ ಸೂರ್ಯನಿಗೂ, ಕ್ಷಮೆಯಲ್ಲಿ ಭೂಮಿಗೂ, ಬುದ್ಧಿಯಲ್ಲಿ ಬೃಹಸ್ಪತಿಗೂ, ಸ್ಥೈರ್ಯದಲ್ಲಿ ಹಿಮವಂತನಿಗೂ, ಸಾಟಿಯಾಗಿದ್ದನು. ಅವನು ತನ್ನ ತ್ರಿಕರಣ ಶುದ್ಧಿಯಿಂದಲೂ, ಶಮದಮಾದಿ ಗುಣಗಳಿಂದಲೂ, ಪ್ರಜೆಗಳ ಮನಸ್ಸನ್ನು ತೃಪ್ತಿಗೊಳಿಸುತ್ತಿದ್ದನು. ಅವನು ನೂರು ಅಶ್ವಮೇಧಯಾಗಗಳನ್ನು ಶಾಸ್ತ್ರೋಕ್ತವಾಗಿ ಮುಗಿಸಿದನು. ಮಹಾ ವಿದ್ವಾಂಸನೆನಿಸಿದ ಆಂಗೀರಸ್ಸೆಂಬ ಮಹರ್ಷಿಯೇ ಪುರೋಹಿತನಾಗಿ ಅವನಿಂದ ಯಾಗಗಳನ್ನು ಮಾಡಿಸಿದನು. ಈ ಅವಿಕ್ಷಿತ್ತಿಗೆ ಮರುತ್ತನೆಂಬ ಮಗನಾದನು. ಇವನು ಗುಣಗಳಲ್ಲಿ ತಂದೆಯನ್ನು ಮೀರಿಸಿ, ಧರ್ಮಜ್ಞನಾಗಿ, ಚಕ್ರವರ್ತಿಯೆನಿಸಿಕೊಂಡು ಮಹಾಯಶಸ್ಸಿಗೆ ಭಾಗಿಯಾದನು. ಇವನು ಹತ್ತು ಸಾವಿರ ಆನೆಗಳ ಬಲವುಳ್ಳವನಾಗಿ, ಸಾಕ್ಷಾದ್ವಿಷ್ಣುದೇವನೋ ಎಂಬಂತೆ ಇದ್ದನು. ಇವನು ದೊಡ್ಡಯಾಗವೊಂದನ್ನು ಮಾಡಬೇಕೆಂಬ ಉದ್ದೇಶದಿಂದ, ಆ ಯಜ್ಞಕ್ಕಾಗಿ ಸುವರ್ಣದಿಂದ ಸಾವಿರಾರು ಪಾತ್ರೆಗಳನ್ನು ಮಾಡಿಸಿದನು. ಅವನು ಹಿಮಾಲಯದ ಉತ್ತರಪಾರ್ಶ್ವದಲ್ಲಿರುವ ಮೇರುಪರ್ವತಕ್ಕೆ ಹೋಗಿ, ಕಾಂಚನವೆಂಬ ಅದರ ಒಂದು ದೊಡ್ಡ ಪರ್ವತಪಾದದಲ್ಲಿ ಈ ಯಜ್ಞಕಾರ್ಯವನ್ನು ಆರಂಭಿಸಿದನು. ಈ ಯಜ್ಞಕ್ಕಾಗಿ ಸುವರ್ಣದಿಂದಲೇ ಗಡಿಗೆ, ಕುಡಿಕೆ ಮುಂತಾದ ಪಾತ್ರೆಗಳನ್ನು, ಕುಕ್ಕೆಗಳನ್ನೂ, ಅಸನಗಳನ್ನೂ ಮಾಡುತ್ತಿದ್ದ ಸ್ವರ್ಣಕಾರರ (ಅಕ್ಕಸಾಲಿಗರ) ಸಂಖ್ಯೆಗೆ ಮಿತಿಯೇ ಇರಲಿಲ್ಲ. ಆ ಕಾಂಚನವೆಂಬ ಗುಡ್ಡದ ಸಮೀಪದಲ್ಲಿಯೇ ಆ ರಾಜನು ಯಜ್ಞವಾಟವನ್ನು ಕಲ್ಪಿಸಿ, ತನ್ನ ಕಡೆಯ ಅನೇಕ ರಾಜರೊಡನೆ ಶಾಸ್ತ್ರೋಕ್ತವಾಗಿ ಯಾಗವನ್ನು ಆರಂಭಿಸಿದನು.

ಇದು ನಾಲ್ಕನೆಯ ಅಧ್ಯಾಯವು.



ಅಂಗೀರಸನ ಮಗನಾದ ಸಂವರ್ತನು ತನ್ನಲ್ಲಿ ಅಕಾರಣದ್ವೇಷದಿಂದ ತನಗೆ ಉಪದ್ರವ ಕೊಡುತ್ತಿದ್ದ ತನ್ನಣ್ಣನಾದ ಬೃಹಸ್ಪತಿಯ ಹಿಂಸೆಯನ್ನು ಸಹಿಸಲಾರದೆ, ತನ್ನ ಸರ್ವಸ್ವವನ್ನೂ ಬಿಟ್ಟು ಅರಣ್ಯಕ್ಕೆ ಹೋದುದು. ಇಂದ್ರನು ಮರುತ್ತನ ಯಾಗವೈಭವವನ್ನು ನೋಡಿ ಅಸೂಯೆಯಿಂದ ಅವನಿಗೆ ಪುರೋಹಿತನಾಗಿದ್ದ ಬೃಹಸ್ಪತಿಯನ್ನು ತಾನು ತನ್ನ ಕಡೆಗೆ ಸೆಳೆದುಕೊಂಡು ಆ ಯಾಗವನ್ನು ತಪ್ಪಿಸಿದುದು.

ಆಗ ಧರ್ಮರಾಜನು ವ್ಯಾಸನನ್ನು ಕುರಿತು “ಮಹೋದಾರ ಸ್ವಭಾವವುಳ್ಳ ಆ ಮರುತ್ತರಾಜನು ಅಷ್ಟು ಐಶ್ವರ್ಯವಂತನಾದುದುಹೇಗೆ? ಅವನಿಗೆ ಅಂತಹ ವೀರ್ಯವೆಲ್ಲಿಯದು ? ಅವನಿಗೆ ಅಷ್ಟು ಸುವರ್ಣಸಮೃದ್ಧಿಯು ಹೇಗೆ ಬಂದಿತು ? ಅವನ ದ್ರವ್ಯವೆಲ್ಲವೂ ಈಗ ಎಲ್ಲಿರುವುವು ? ಅದನ್ನು ನಾವು ಪಡೆಯುವ ಬಗೆ ಹೇಗೆ ?” ಎಂದನು. ಅದಕ್ಕಾಗಿ ವ್ಯಾಸನು “ಧರ್ಮಪುತ್ರಾ! ಕೇಳು ! ದಕ್ಷಪ್ರಜಾಪತಿಗೆ ದೇವದಾನವರಿಬ್ಬರು ಮಕ್ಕಳಾದರು ಅವರ ಸಂಖ್ಯೆಯು ಅಪರಿಮಿತವಾಗಿದ್ದಿತು. ಆ ಉಭಯಪಕ್ಷದವರಿಗೂ ಅನ್ಯೋನ್ಯವಾಗಿ ಕಲಹವು ಹುಟ್ಟಿತು. ಒಬ್ಬರಿಗೊಬ್ಬರು ಹೋರಾಡುತ್ತಿದ್ದರು. ಅವರಂತೆಯೇ ಅಂಗೀರಸ್ಸೆಂಬ ಮಹರ್ಷಿಗೆ ಬೃಹಸ್ಪತಿಯೆಂದೂ, ಸಂವರ್ತರೆಂದೂ ಇಬ್ಬರು ಮಕ್ಕಳಿದ್ದರು. ಇಬ್ಬರೂ ತಂದೆಗೆ ಸಮಾನರಾಗಿದ್ದರು. ಅವರಲ್ಲಿ ಬೃಹಸ್ಪತಿಯು ಮಹಾತೇಜಸ್ವಿಯೆನಿಸಿಕೊಂಡಿದ್ದನು. ಸಂವರ್ತನು ಮಹಾತಪಸ್ವಿಯೆನಿಸಿದ್ದನು. ಈ ಅಣ್ಣತಮ್ಮಂದಿರಿಬ್ಬರೂ ಯಾವಾಗಲೂ ಒಬ್ಬರನ್ನೊಬ್ಬರು ಸ್ಪರ್ಧಿಸುತ್ತಾ ಬೇರೆಬೇರೆಯಾಗಿರುತ್ತಿದ್ದರು. ಬೃಹಸ್ಪತಿಯು ತನ್ನ ತಮ್ಮನಾದ ಸಂವರ್ತನನ್ನು ಬಾರಿಬಾರಿಗೂ ಉಪದ್ರವಗೊಳಿಸುತ್ತಿದ್ದನು. ಅಣ್ಣನ ಹಿಂಸೆಯನ್ನು ತಡೆಯಲಾರದೆ ಸಂವರ್ತನು ತನ್ನ ಸರ್ವಸ್ವವನ್ನೂ ತೊರೆದು, ಮೈಮೇಲೆ ಬಟ್ಟೆಯೂ ಇಲ್ಲದವನಾಗಿ ಅರಣ್ಯಕ್ಕೆ ಹೋಗಿ ಅಲ್ಲಿ ವಾಸಮಾಡಲು ಅಪೇಕ್ಷಿಸಿದನು. ಇತ್ತಲಾಗಿ ದೇವೇಂದ್ರನೂ ಕೂಡ ದೈತ್ಯರನ್ನೆಲ್ಲಾ ಯುದ್ಧದಲ್ಲಿ ಜಯಿಸಿ, ದೇವೇಂದ್ರಪದವಿಯನ್ನು

ಹೊಂದಿದಮೇಲೆ, ಅಂಗಿರಸ್ಸಿನ ಜ್ಯೇಷ್ಠಪುತ್ರನೂ, ಬ್ರಾಹ್ಮಣೋತ್ತಮನೂ ಆದ ಬೃಹಸ್ಪತಿಯನ್ನೇ ತನಗೆ ಪುರೋಹಿತನನ್ನಾಗಿ ಇಟ್ಟುಕೊಂಡನು. ಓ ಧರ್ಮಪುತ್ರಾ! ಪೂರ್ವದಲ್ಲಿ ಈ ಬೃಹಸ್ಪತಿಯ ತಂದೆಯಾದ ಆಂಗೀರಸ್ಸು ಕರಂಧಮನೆಂಬ ರಾಜನಿಗೆ ಪುರೋಹಿತನಾಗಿ ಯಾಗಗಳನ್ನು ಮಾಡಿಸುತ್ತಿದ್ದನು. ಆ ಕರಂಧಮನು ವೀರ್ಯದಲ್ಲಿಯೂ, ಬಲದಲ್ಲಿಯೂ, ಎಣೆಯಿಲ್ಲದ ಧರ್ಮಾತ್ಮನು! ಧೃಢವ್ರತವುಳ್ಳನನು! ಇಂದ್ರನಂತೆ ಮಹಾತೇಜಸ್ವಿಯು! ಅವನಲ್ಲಿ ವಾಹನಗಳೂ, ಮಿತ್ರರೂ, ಯೋಧರೂ, ಅಪರಿಮಿತವಾಗಿದ್ದುವು. ಅವನ ಶಯನಾಸನಗಳೇ ಮೊದಲಾದ ಸಾಮಗ್ರಿಗಳೆಲ್ಲವೂ ಅಮೂಲ್ಯವಾದವುಗಳು. ಓ ರಾಜಾ! ಅವನು ಮನಸ್ಸಿನಲ್ಲಿ ನೆನೆಸಿಕೊಂಡು ಬಾಯಿಂದ ಒಂದಾವರ್ತಿ ಊದಿದ ಮಾತ್ರಕ್ಕೆ, ಅವನು ಕೋರಿದ ವಸ್ತುಗಳೆಲ್ಲವೂ ಒಂದಗಿ ಬರುತ್ತಿದ್ದುವು. ಅವನು ತನ್ನ ಗುಣಗಳಿಂದಲೇ ಎಲ್ಲಾರಾಜರನ್ನೂ ವಶೀಕರಿಸಿಕೊಂಡನು. ಅವನು ತನಗೆ ಇಷ್ಟಬಂದ ಕಾಲದವರೆಗೆ ಈ ಲೋಕದಲ್ಲಿ ಜೀವಿಸಿದ್ದು, ಆಮೇಲೆ ಈ ಶರೀರದೊಡನೆಯೇ ಸ್ವರ್ಗವನ್ನು ಸೇರಿದನು. ಅವನಿಗೆ ಯಯಾತಿಯಂತೆ ಧರ್ಮಜ್ಞನಾದ ಅವಿಕ್ಷಿತ್ತೆಂಬ ಮಗನಾದನು. ಅವನು ಶತ್ರುಗಳನ್ನೆಲ್ಲಾ ಜಯಿಸಿ ಸಮಸ್ತ ಭೂಮಿಯನ್ನೂ ತನ್ನ ವಶಪಡಿಸಿಕೊಂಡನು. ಅವನು ಪರಾಕ್ರಮದಿಂದಲೂ, ಗುಣದಿಂದಲೂ ತನ್ನ ತಂದೆಗೆ ಸಾಟಿಯೆನಿಸಿಕೊಂಡಿದ್ದನು. ಅವನಿಗೆ ಇಂದ್ರನಿಗೆಣೆಯೆನಿಸಿದ ಮರುತ್ತನೆಂಬ ಮಗನಾದನು. ಇವನು ಬಹಳ ವೀರ್ಯವಂತನು. ಸಮುದ್ರಾವೃತವಾದ ಸಮಸ್ತಭೂಮಿಯೂ ಇವನಲ್ಲಿ ಅನುರಕ್ತವಾಗಿದ್ದಿತು. ಇವನು ಸರ್ವವಿಧದಲ್ಲಿಯೂ, ದೇವೇಂದ್ರನಿಗಿಂತಲೂ ತಾನು ಮೇಲೆನಿಸಿರಬೇಕೆಂದು ಯಾವಾಗಲೂ ಇಂದ್ರನೊಡನೆ ಸ್ಪರ್ಧಿಸುತ್ತಿದ್ದನು. ಇಂದ್ರನೂ ಇವನು ತಲೆಯೆತ್ತದಹಾಗೆ ಮಾಡಬೇಕೆಂದು ಇವನೊಡನೆ ಸ್ಪರ್ಧಿಸುತ್ತಿದ್ದನು. ಆ ಮರುತ್ತರಾಜನು ಬಹಳ ಶುದ್ಧಾತ್ಮನೂ, ಗುಣವಂತನೂ ಆಗಿದ್ದುದರಿಂದ, ದೇವೇಂದ್ರನು ಅವನಿಗಿಂತಲೂ ತಾನು ಮೇಲೆನಿಸಬೇಕೆಂದು ನಾನಾವಿಧದಿಂದ ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಹೀಗೆ ಪ್ರಯತ್ನಪಟ್ಟರೂ ತನ್ನಲ್ಲಿ ವಿಶೇಷವನ್ನೇನೂ ತೋರಿಸಲಾರದೆ, ದೇವೇಂದ್ರನು ತನ್ನ ಪುರೋಹಿತನಾದ ಬೃಹಸ್ಪತಿಯನ್ನೂ

ಎಲ್ಲಾ ದೇವತೆಗಳನ್ನು ಕರೆಯಿಸಿಕೊಂಡು, ಬೃಹಸ್ಪತಿಯೊಡನೆ ಹೀಗೆಂದು ಹೇಳುವನು. " ಆಚಾರ್ಯಾ ! ನೀನು ಆ ಮರುತ್ತನಿಗೆ ಪುರೋಹಿತನಾಗಿ ದೇವಪಿತೃಕರ್ಮಗಳಲ್ಲಿ ಯಾವುದನ್ನೂ ಅವನಿಂದ ಮಾಡಿಸಬಾರದು, ನನಗೆ ನೀನು ಪ್ರಿಯವನ್ನುಂಟುಮಾಡುವನಾಗಿದ್ದರೆ, ನೀನು ಅವನಿಗೆ ಪೌರೋಹಿತ್ಯವನ್ನು ಮಾಡಿಸಲೇಬಾರದು. ನಾನಾದರೋ ಮೂರುಲೋಕಗಳಿಗೂ ಪ್ರಭುವೆನಿಸಿಕೊಂಡು, ಇಂದ್ರಪದವಿಯನ್ನು ಹೊಂದಿರುವೆನು. ಇಂತಹ ಪದವಿಯು ನನಗೊಬ್ಬನಿಗೆ ಹೊರತು ಬೇರೊಬ್ಬರಿಗೆ ಲಭಿಸದು. ಆ ಮರುತ್ತನಾದರೋ ಸಾಮಾನ್ಯವಾದ ಒಂದು ಭೂಮಿಗೆ ಒಡೆಯನು. ಓ ಬೃಹಸ್ಪತೀ ! ದೇವತೆಗಳಿಗೆಲ್ಲಾ ಪ್ರಭುವೆನಿಸಿಕೊಂಡು, ಜರಾಮರಣಗಳಿಲ್ಲವನಾದ ನನಗೆ ನೀನು ಪುರೋಹಿತನಾಗಿದ್ದುಕೊಂಡು, ಮರಣಶೀಲನಾದ ಆ ಮರುತ್ತನಿಗೂ ನಾಚಿಕೆಯಿಲ್ಲದೆ ಪೌರೋಹಿತ್ಯವನ್ನು ಮಾಡಿಸುವೆಯಾ? ಒಂದುವೇಳೆ ನಿನಗೆ ಅವನನ್ನು ಬಿಡುವ ಮನಸ್ಸಿಲ್ಲದಿದ್ದರೆ, ನನ್ನನ್ನು ಬಿಟ್ಟು ಅವನಲ್ಲಿಯೇ ಇರು. ಹಾಗಿಲ್ಲವೇ ಅವನನ್ನು ಬಿಟ್ಟು ನನ್ನಲ್ಲಿಯಾದರೂ ಇರು. ನಿನಗೆ ಮಂಗಳವಾಗಲಿ ! ನಮ್ಮಿಬ್ಬರನ್ನೂ ಸಮಾನವಾಗಿ ಭಾವಿಸಿ, ಇಬ್ಬರಿಗೂ ನೀನು ಪುರೋಹಿತನಾಗಿರುವುದಕ್ಕೆ ನಾನೊಪ್ಪಲಾರೆನು ".

ಇಂದ್ರನ ಈ ಮಾತುಗಳನ್ನು ಕೇಳಿ ಬೃಹಸ್ಪತಿಯು ಸ್ವಲ್ಪಹೊತ್ತು ತನ್ನಲ್ಲಿ ತಾನು ಆಲೋಚಿಸುತ್ತಿದ್ದು, " ಓ ದೇವೇಂದ್ರಾ ! ನೀನೇನೋ ಸಮಸ್ತಭೂತಗಳಿಗೆ ಅಧಿಪತಿ ! ಸಮಸ್ತಲೋಕಗಳೂ ನಿನ್ನ ಕೈಯಲ್ಲಿ ಅಡಗಿರುವುವು. ವಿಶ್ವರೂಪನಾದ ನಮುಚಿಯನ್ನೂ, ಬಲಾಸುರನನ್ನೂ ಕೊಂದ ಮಹಾಪರಾಕ್ರಮಿ. ನೀನೊಬ್ಬನೇ ವೀರಲಕ್ಷ್ಮಿಯನ್ನು ಪಡೆದಿರತಕ್ಕವನು. ಭೂಮಿಯನ್ನೂ, ಸ್ವರ್ಗವನ್ನೂ ಯಾವಾಗಲೂ ಭರಿಸತಕ್ಕವನು ದೇವರಾಜನಾದ ನಿನಗೆ ಪೌರೋಹಿತ್ಯವನ್ನು ಮಾಡಿಸುವ ನಾನು ಕೇವಲ ಮನುಷ್ಯನಾದ ಆ ಮರುತ್ತನಿಗೆ ಪೌರೋಹಿತ್ಯವನ್ನು ಮಾಡಲು ಹೇಗೆ ತಾನೇ ಒಪ್ಪುವೆನು ? ಮಹೇಂದ್ರಾ ! ನೀನು ಚಿಂತಿಸಬೇಡ ! ಇನ್ನುಮೇಲೆ ನಾನು ಮರಣಶೀಲನಾದ ಆತನ ಯಜ್ಞದಲ್ಲಿ ಸೌಟನ್ನು ಮುಟ್ಟುವವನಲ್ಲ. ನನ್ನ ಮಾತನ್ನು ನಂಬು ! ಇದು ನನ್ನ ಧೃಡವಾದ ಪ್ರತಿಜ್ಞೆ.

ಒಂದುವೇಳೆ ಬೆಂಕಿಯಾದರೂ ಶೀತಲವಾಗಬಹುದು. ಭೂಮಿಯಾದರೂ ಹೊರಳಬಹುದು. ಸೂರ್ಯನಿಗೆ ಪ್ರಕಾಶವೇ ಇಲ್ಲದಿರಬಹುದು. ನನ್ನಲ್ಲಿ ಮಾತ್ರ ಸತ್ಯವು ಎಂದಿಗೂ ತಪ್ಪಿಹೋಗದು " ಎಂದನು. ಓ ಧರ್ಮ ರಾಜಾ ! ಬೃಹಸ್ಪತಿಯು ಈ ಮಾತನ್ನು ಕೇಳಿ ಇಂದ್ರನ ಮನಸ್ಸಿಗೆ ಶಾಂತಿ ಯುಂಟಾಯಿತು. ಬೃಹಸ್ಪತಿಯನ್ನು ಕೊಂಡಾಡುತ್ತ ತನ್ನ ಮನೆಗೆ ಹೋಗಿ ಸೇರಿದನು.

ಇದು ಐದನೆಯ ಅಧ್ಯಾಯವು.

ಮರುತ್ತನು ಯಜ್ಞಕ್ಕಾಗಿ ಬೃಹಸ್ಪತಿಯಬಳಿಗೆ ಬಂದು ಕೇಳಿ ದಾಗ, ಬೃಹಸ್ಪತಿಯು, ತಾನು ಇಂದ್ರನಿಗೆ ಕೊಟ್ಟ ಮಾತಿ ನಂತೆ ಆ ರಾಜನ ಪೌರೋಹಿತ್ಯಕ್ಕೆ ಒಪ್ಪದುದು. ಮರು ತ್ತನು ದಾರಿಯಲ್ಲಿ ನಾರದನನ್ನು ಕಂಡು ಆ ನಾರದನ ಪ್ರೇ ರಣೆಯ ಮೇಲೆ ವಾರಾಣಸಿಯ ದ್ವಾರದಲ್ಲಿ ಒಂದುಶವವ ನ್ನಿಟ್ಟು, ಅದನ್ನು ಕಂಡು ಓಡುತ್ತಿರುವ ಸಂವರ್ತನನ್ನು ಹಿಂ ಬಾಲಿಸಿ ಓಡಿದುದು. ಸಂವರ್ತನುಮಣ್ಣನ್ನೂ, ಕೆಸರನ್ನೂ ಎರ ಚಿದರೂ ಮರುತ್ತನು ಅವನನ್ನು ಬಿಡದೆ ಹಿಂಬಾಲಿಸಿದುದು. ಸಂವರ್ತನು ಒಂದು ಆಲದ ಮರದ ಕೆಳಗೆ ಕುಳಿತುದು.

ಆಮೇಲೆ ವ್ಯಾಸನು ಧರ್ಮರಾಜನನ್ನು ಕುರಿತು " ಓ ರಾಜೇಂದ್ರಾ ! ಇದೇವಿಷಯದಲ್ಲಿ ಮರುತ್ತನಿಗೂ, ಬೃಹಸ್ಪತಿಗೂ ಸಂವಾದರೂಪವಾದ ಇತಿಹಾಸವನ್ನು ಹೇಳುವರು ! ಅದನ್ನು ತಿಳಿಸುವೆನು ಕೇಳು. ಬೃಹ ಸ್ಪತಿಯು ಇಂದ್ರನಿಗೆ ಮಾಡಿಕೊಟ್ಟ ಪ್ರತಿಜ್ಞೆಯು ಮರುತ್ತರಾಜನ ಕಿವಿಗೆ ಬಿದ್ದಿತು. ಅವನಿಗೆ ಮಹತ್ತಾದ ಸಂಕಟವುಂಟಾಯಿತು. ಕರಂಧಮನ ಮೊಮ್ಮಗನಾದ ಆ ಮರುತ್ತನು, ಹೇಗಾದರೂ ಯಜ್ಞಮಾಡಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿ ಬೃಹಸ್ಪತಿಯ ಬಳಿಗೆ ಬಂದು ಹೀಗೆಂದು ಹೇಳುವನು. ಎಲೈ ! ಪೂಜ್ಯನೆ ! ನಾನು ಮೊದಲೇ ನಿನ್ನನ್ನು ಒಪ್ಪಿಸಿದ್ದೆನು. ನಿನ್ನ ಮಾತಿನ ಮೇರೆಗೆ ಸಮಸ್ತಸಾಮಗ್ರಿಗಳೂ ಸಿದ್ಧವಾಗಿವೆ. ಈಗ ನಾನು ಯಜ್ಞವನ್ನು ನಡೆಸಬೇಕೆಂದಿರುವೆನು. ನೀನು ನನ್ನಿಂದ ಯಾಗ

ಮಾಡಿಸಬೇಕು. ನೀನೇ ಬಂದು ಅದನ್ನು ನಡಿಸಿಕೊಡು '' ಎಂದನು. ಅದಕ್ಕಾ ಬೃಹಸ್ಪತಿಯು '' ಓ ರಾಜಾ! ನಿನ್ನಿಂದ ಯಜ್ಞವನ್ನು ಮಾಡಿಸುವುದು ನನಗೆ ಸಮ್ಮತವಿಲ್ಲ. ಇಂದ್ರನು ನನ್ನನ್ನು ಪೌರೋಹಿತ್ಯಕ್ಕಾಗಿ ವರಿಸಿರುವನು. ನಾನೂ ಅವನಿಗೆ ಪ್ರತಿಜ್ಞೆಯನ್ನು ಮಾಡಿಕೊಟ್ಟಿನು. ಆದುದರಿಂದ, ನಿನ್ನಲ್ಲಿಗೆ ಬರಲು ಸಾಧ್ಯವಿಲ್ಲ'' ಎಂದನು. ಆಗ ಮರುತ್ತನು '' ಗುರುವರ್ಯಾ! ನೀನು ನಮಗೆ ಪಿತೃಪರಂಪರೆಯಾಗಿ ಪೌರೋಹಿತ್ಯದಲ್ಲಿರತಕ್ಕವನು. ನಿನ್ನಲ್ಲಿ ನನಗೆ ವಿಶೇಷಗೌರವವುಂಟು. ನಿನ್ನಿಂದಲೇ ನಾನು ಯಜ್ಞವನ್ನು ನಡೆಸಬೇಕು. ಮರೆಹೊಕ್ಕವನನ್ನು ಆದರಿಸು '' ಎಂದನು. ಆಗ ಬೃಹಸ್ಪತಿಯು '' ಮರುತ್ತಾ! ನಾನು ಎಂದೆಂದಿಗೂ ಮರಣವಿಲ್ಲದ ಆ ದೇವರಾಜನಿಗೆ ಪುರೋಹಿತನಾಗಿದ್ದು, ಕೇವಲ ಮನುಷ್ಯಮಾತ್ರನಾದ ನಿನ್ನಿಂದ ಹೇಗೆತಾನೇ ಯಜ್ಞವನ್ನು ನಡೆಸಲಿ,! ನೀನು ಇದ್ದರೆ ಇರು! ಹೋದರೆ ಹೋಗು! ನಿನ್ನಿಂದ ಯಜ್ಞಮಾಡಿಸುವ ಕಾರ್ಯಕ್ಕೆ ನಾನು ಒಪ್ಪಲಾರೆನು. ನಿನ್ನ ಕುಲಪುರೋಹಿತ ವೃತ್ತಿಯಿಂದ ನಾನು ನಿವೃತ್ತನಾಗಿರುವೆನು. ನಿನಗೆ ಯಜ್ಞಮಾಡುವ ಅಪೇಕ್ಷೆಯಿದ್ದರೆ ಬೇರೆ ಯಾವನನ್ನಾದರೂ ಉಪಾಧ್ಯಾಯನನ್ನು ವರಿಸು '' ಎಂದನು. ಈ ಮಾತನ್ನು ಕೇಳಿ ಮರುತ್ತನಿಗೆ ಬಹಳ ಅವಮಾನವಾದಂತಾಯಿತು. ವ್ಯಸನದಿಂದ ಹಿಂತಿರುಗಿ ಬರುತ್ತಿದ್ದಾಗ, ದೇವಋಷಿಯಾದ ನಾರದನು ದಾರಿಯಲ್ಲಿ ಅವನಿಗೆ ಕಾಣಿಸಿದನು. ಆ ನಾರದನಿಗೆ ವಿಧ್ಯುಕ್ತವಾಗಿ ನಮಸ್ಕರಿಸಿ ಕೈಮುಗಿದು, ಸುಮ್ಮನೆ ನಿಂತಿದ್ದಾಗ ನಾರದನು ಅವನನ್ನು ನೋಡಿ '' ಓ ರಾಜಋಷೀ! ಇದೇನು? ನಿನ್ನನ್ನು ನೋಡಿದರೆ ಏನೋ ಹರ್ಷವಿಲ್ಲದವನಂತೆ ಕಾಣುತ್ತಿರುವೆ? ಎಲ್ಲರಿಗೂ ಕ್ಷೇಮವಷ್ಟೆ? ಎಲ್ಲಿಗೆ ಹೋಗುತ್ತಿರುವೆ? ನಿನ್ನ ಅಸಂತೋಷಕ್ಕೆ ಕಾರಣವೇನು? ನಾನು ಕೇಳಬಹುದಾದರೆ ನಿಜಾಂಶವನ್ನು ತಿಳಿಸು. ನನ್ನಿಂದಾದಷ್ಟು ಪ್ರಯತ್ನವನ್ನು ಮಾಡಿ ನಿನ್ನ ವ್ಯಸನವನ್ನು ನೀಗಿಸುವೆನು '' ಎಂದನು. ಆಗ ಮರುತ್ತನು ನಾರದಮುನೀಂದ್ರಾ! ಆಂಗೀರಸ್ಸನ ಪುತ್ರನೂ, ದೇವತೆಗಳಿಗೆ ಆಚಾರ್ಯನೂ ಆದ ಬೃಹಸ್ಪತಿಯಬಳಿಗೆ ಹೋಗಿ, ನನ್ನ ಯಜ್ಞದಲ್ಲಿ ಋತ್ವಿಕ್ಕಾಗಿದ್ದು ಅದನ್ನು ನಡೆಸಿಕೊಡಬೇಕೆಂದು ಕೇಳಿದೆನು. ಅವನು ಒಪ್ಪದೆ ಹೋದನು. ಅವನಿಂದ

ಉಂಟಾದ ಅವಮಾನಕ್ಕಾಗಿ ಬಹಳ ಕೊರಗುವೆನು. ನಮ್ಮ ಕುಲಗುರುವು ನನ್ನನ್ನು ಕೈಬಿಟ್ಟುದಲ್ಲದೆ, ಅವನ ದೂಷಣವಾಕ್ಯಗಳನ್ನೂ ಕೇಳಿ ಬಂದೆನು. ಇನ್ನು ನನಗೆ ನನ್ನ ಜೀವದಮೇಲಿನ ಆಸೆಯೇ ಬಿಟ್ಟುಹೋಯಿತು. ನಾನು ಭೂಮಿಯಮೇಲೆ ಬದುಕಿರಲಾರೆನು" ಎಂದನು. ಇದನ್ನು ಕೇಳಿ ನಾರದನು ಅವಿಕ್ಷಿತ್ತಿನ ಪುತ್ರನಾದ ಆ ಮರುತ್ತನನ್ನು ನೋಡಿ ಮಾತಿನಿಂದಲೇ ಅವನನ್ನು ಬದುಕಿಸುವಂತೆ ಸಮಾಧಾನಗೊಳಿಸುತ್ತ, "ಮರುತ್ತರಾಜಾ! ಆಂಗೀರಸನಿಗೆ ಸಂವರ್ತನೆಂಬ ಮತ್ತೊಬ್ಬ ಮಗನಿರುವನು. ಅವನು ಬಹಳ ಧರ್ಮಶೀಲನು. ಪ್ರಜೆಗಳೆಲ್ಲರೂ ಆಶ್ಚರ್ಯಪಡುವಂತೆ ಅವನು ದಿಗಂಬರನಾಗಿ, ಎಲ್ಲಾ ದಿಕ್ಕುಗಳಲ್ಲಿಯೂ ಸುತ್ತುತ್ತಿರುವನು. ಬೃಹಸ್ಪತಿಯು ನಿನ್ನಿಂದ ಯಾಗಮಾಡಿಸಲು ಇಷ್ಟಪಡದಿದ್ದರೆ, ನೀನು ಆ ಸಂವರ್ತನ ಬಳಿಗೆ ಹೋಗು. ಅವನು ಬಹಳ ಸುಮುಖನು! ಮಹಾ ತೇಜಸ್ವಿ! ಅವನನ್ನು ಕಂಡುಹಿಡಿದರೆ ಅವನು ಖಂಡಿತವಾಗಿಯೂ ನಿನ್ನಿಂದ ಯಾಗ ಮಾಡಿಸುವನು" ಎಂದನು. ಇದನ್ನು ಕೇಳಿ ಮರುತ್ತನು ಮಹಾಸಂತೋಷದಿಂದ "ಓ ಮಹಾತ್ಮಾ! ಈಗ ನಿನ್ನ ಮಾತಿನಿಂದ ಸತ್ತು ಬದುಕಿದಂತಾಯಿತು. ಆದರೆ ಆ ಸಂವರ್ತನನ್ನು ಎಲ್ಲಿ ಕಾಣುವುದು? ಅದನ್ನೂ ನೀನೇ ನನಗೆ ತಿಳಿಸಬೇಕು. ಅವನಲ್ಲಿ ನಾನು ಹೇಗೆ ನಡೆದುಕೊಂಡರೆ, ಅವನು ನನ್ನನ್ನು ಕೈಬಿಡದೆ ನನ್ನ ಕೋರಿಕೆಯನ್ನು ಈಡೇರಿಸುವನು? ಅವನೂ ನನ್ನನ್ನು ನಿರಾಕರಿಸಿಬಿಟ್ಟರೆ ಖಂಡಿತವಾಗಿಯೂ ನಾನು ಈ ಭೂಮಿಯಲ್ಲಿ ಜೀವಿಸಲಾರೆನು" ಎಂದನು. ಅದಕ್ಕಾ ನಾರದನು "ರಾಜೇಂದ್ರಾ! ಆ ಸಂವರ್ತನು ಹುಚ್ಚನಂತೆ ವೇಷವನ್ನು ಧರಿಸಿ, ನಿಶ್ಚಿಂತನಾಗಿ, ಅಲ್ಲಲ್ಲಿ ಸಂಚರಿಸುತ್ತಿರುವನು. ಆದರೆ ಅವನು ಆಗಾಗ ವಾರಾಣಸೀ ಕ್ಷೇತ್ರಕ್ಕೆ ಬಂದು ಹೋಗುವುದುಂಟು. ಅವನು ಆ ಕ್ಷೇತ್ರದಲ್ಲಿರುವಾಗ ಅಲ್ಲಿಂದ ತಪ್ಪಿಸಿಕೊಂಡು ಹೋಗಲು ಅವಕಾಶವಿಲ್ಲದಂತೆ ಮಾಡುವುದಕ್ಕಾಗಿ ನೀನೊಂದು ಉಪಾಯವನ್ನು ನಡೆಸು. ನೀನು ಆ ವಾರಾಣಸಿಯ ಬಾಗಿಲಲ್ಲಿ ಒಂದು ಹೆಣವನ್ನು ತಂದಿಡು! ಆ ಹೆಣವನ್ನು ನೋಡಿ ಯಾವನು ಹಿಂತಿರುಗಿ ಓಡುವನೋ, ಅವನೇ ಸಂವರ್ತನು. ಅವನು ಹೆಣವನ್ನು ಕಂಡು ಓಡುವಾಗಲೂ ನೀನು ಅವನನ್ನು ಬೆಂಬಿಡದೆ ಹಿಂಬಾಲಿಸಿ ಓಡಿಹೋಗು. ಎಲ್ಲಿಯಾದರೂ ನಿರ್ಜ

ನವಾದ ಸ್ಥಳಕ್ಕೆ ಅವನು ಹೋದಾಗ, ನೀನು ಅವನ ಕಾಲಿಗೆ ಬಿದ್ದು ಮರೆ ಹೊಕ್ಕು ಪ್ರಾರ್ಥಿಸು. ಒಂದುವೇಳೆ ತನ್ನ ಸಂಗತಿಯನ್ನು ಹೇಳಿದವರಾರೆಂದು ನಿನ್ನನ್ನು ಕೇಳಬಹುದು. ಆಗ ನೀನು ನಾರದನಿಂದ ತಿಳಿಯಿತೆಂದು ಹೇಳು ! ತಿರುಗಿ ಅವನು ಈಗ ನಾರದನೆಲ್ಲಿರುವನೆಂದು ಪ್ರಶ್ನೆ ಮಾಡಿದರೆ, "ನಾರದನು ಅಗ್ನಿ ಪ್ರವೇಶವನ್ನು ಮಾಡಿದ"ನೆಂದು ಹೇಳಿಬಿಡು. ನೀನು ನಿಶ್ಶಂಕೆಯಿಂದ ಹೀಗೆಯೇ ಅವನೊಡನೆ ಹೇಳಬೇಕು" ಎಂದನು. ಆಗ ಮರುತ್ತನು ಹಾಗೆಯೇ ಆಗಲೆಂದು ಹೇಳಿ, ಆ ನಾರದನನ್ನು ಪೂಜಿಸಿ, ಅವನ ಅನುಮತಿಯನ್ನು ಪಡೆದು, ವಾರಾಣಸೀ ನಗರಕ್ಕೆ ಬಂದನು. ನಾರದನು ಹೇಳಿದ್ದಂತೆಯೇ ಪಟ್ಟಣದ ದ್ವಾರದಲ್ಲಿ ಒಂದು ಕಡೆಯಲ್ಲಿ ಒಂದು ಹೆಣವನ್ನು ತಂದಿಟ್ಟನು. ಈ ಸಮಯಕ್ಕೆ ಸರಿಯಾಗಿ ಆ ಬ್ರಾಹ್ಮಣನೂ ಪಟ್ಟಣದ ಬಾಗಿಲಿಗೆ ಬಂದನು. ಬಾಗಿಲಲ್ಲಿದ್ದ ಹೆಣವನ್ನು ಕಂಡೊಡನೆ ಆ ಸಂವರ್ತನು ವೇಗದಿಂದ ಹಿಂತಿರುಗಿ ಓಡಲಾರಂಭಿಸಿದನು. ಇದನ್ನು ಕಂಡು ಮರುತ್ತರಾಜನೂಕೂಡ ಅವನನ್ನು ತನ್ನ ಕಡೆಗೆ ಬರಮಾಡಿಕೊಳ್ಳುವುದಕ್ಕಾಗಿ, ಅವನ ಹಿಂದೆಯೇ ಹೊರಟನು. ಒಂದು ನಿರ್ಜನವಾದ ಪ್ರದೇಶಕ್ಕೆ ಬಂದಾಗ, ಸಂವರ್ತನು ತನ್ನನ್ನು ಹಿಂಬಾಲಿಸಿ ಬರುವ ರಾಜನಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಮಣ್ಣನ್ನೂ, ಕೆಸರನ್ನೂ ಅವನಮೇಲೆ ಎರಚುತ್ತಿದ್ದನು. ಅವನಮೇಲೆ ಕೇಕರಿಸಿ ಕಫವನ್ನೂ ಉಗುಳಿದನು. ಇಷ್ಟು ಉಪದ್ರವಗಳನ್ನು ಕೊಟ್ಟರೂ ಬಿಡದೆ, ಮರುತ್ತನು ಆ ಸಂವರ್ತನ ಹಿಂದೆಯೇ ಕೈಮುಗಿದುಕೊಂಡು, ಅವನನ್ನು ಹಿಂಬಾಲಿಸುತ್ತ, ಅವನನ್ನು ಪ್ರಸನ್ನನಾಗಬೇಕೆಂದು ಪ್ರಾರ್ಥಿಸುತ್ತ ಹೋದನು. ಕೊನೆಕೊನೆಗೆ ಸಂವರ್ತನಿಗೆ ಬಹಳ ಬಳಲಿಕೆಯುಂಟಾಯಿತು. ಅನೇಕ ಶಾಖೆಗಳಿಂದ ಕೂಡಿ ತಂಪಾದ ನೆರಳುಳ್ಳ ಒಂದಾನೊಂದು ಆಲದಮರದ ಕೆಳಗೆ ಕುಳಿತುಬಿಟ್ಟನು.

ಇದು ಆರನೆಯ ಅಧ್ಯಾಯವು.



( ಸಂವರ್ತ ಮರುತ್ತರ ಸಂವಾದವು. ಸಂವರ್ತನು ಕೆಲವು ಒಪ್ಪಂದಗಳಮೇಲೆ ಮರುತ್ತನಿಂದ ಯಾಗವನ್ನು ಮಾಡಿಸುವುದಾಗಿ ಮಾತನ್ನು ಕೊಟ್ಟದ್ದು. )

ಆಗ ಸಂವರ್ತನು ತನ್ನನ್ನು ಬೆಂಬಿಡದೆ ಬಂದು ಪ್ರಾರ್ಥಿಸುತ್ತಿರುವ ಮರುತ್ತನನ್ನು ನೋಡಿ, "ನಾನು ಇಲ್ಲಿರುವ ಸಂಗತಿಯು ನಿನಗೆ ಹೇಗೆ ತಿಳಿಯಿತು ? ಯಾರು ಈ ಅಂಶವನ್ನು ನಿನಗೆ ತಿಳಿಸಿದರು ? ಅದನ್ನು ಮೊದಲು ನನಗೆ ತಿಳಿಸಬೇಕು. ನನಗೆ ಪ್ರಿಯವನ್ನುಂಟುಮಾಡುವವನಾದರೆ ಸತ್ಯವಾಗಿ ಹೇಳಬೇಕು. ನಿಜವನ್ನು ನುಡಿದರೆ ಮಾತ್ರವೇ ನಿನ್ನ ಎಲ್ಲಾ ಕೋರಿಕೆಗಳೂ ಕೈಗೂಡುವುವು. ಹಾಗಿಲ್ಲದೆ ನಿಜವನ್ನು ಮರೆಸಿ ಸುಳ್ಳಾಡಿದರೆ, ನಿನ್ನ ತಲೆಯು ನೂರುಸೀಳಾಗಿ ಹೋಗುವುದು" ಎಂದನು. ಆಗ ಮರುತ್ತನು, "ಓ ಮಹಾತ್ಮಾ! ನಾನು ಬರುತ್ತಿರುವಾಗ ಮಾರ್ಗಮಧ್ಯದಲ್ಲಿ ನಾರದನು ನನಗೆ ಕಾಣಿಸಿದನು. ನೀನು ನನ್ನ ಗುರುಪುತ್ರನೆಂಬುದನ್ನೂ ಅವನಿಂದಲೇ ನಾನು ತಿಳಿದೆನು. ಆದರಮೇಲೆ ನನಗೆ ನಿನ್ನಲ್ಲಿ ಈ ಅಸಾಧಾರಣ ವಿಶ್ವಾಸವುಂಟಾಯಿತು" ಎಂದನು. ಆಗ ಸಂವರ್ತನು "ರಾಜಾ ! ನೀನು ಹೇಳಿದುದು ಸತ್ಯವು. ನಾನು ವೇಷಧಾರಿಯಾಗಿ ಮೈಮರೆಸಿಕೊಂಡಿರುವುದನ್ನು ಆ ನಾರದನು ಬಲ್ಲನು. ಆದರೆ ಈಗ ಆ ನಾರದನು ಎಲ್ಲಿರುವನು ? ಅದನ್ನು ನನಗೆ ಹೇಳು" ಎಂದನು. ಆಗ ಮರುತ್ತನು ದೇವಋಷಿಯಾದ ನಾರದನು ನನಗೆ ನಿನ್ನ ವೃತ್ತಾಂತವನ್ನು ತಿಳಿಸಿದೊಡನೆ ಅಗ್ನಿಪ್ರವೇಶವನ್ನು ಮಾಡಿಬಿಟ್ಟನು" ಎಂದನು. ಈ ಮಾತನ್ನು ಕೇಳಿ ಸಂವರ್ತನಿಗೆ ಅತ್ಯಂತ ಸಂತೋಷವಾಯಿತು. "ನಾನೂ ಹೀಗೆಯೇ ಮಾಡಬಲ್ಲೆನು" ಎಂದು ಹೇಳಿ ತಿರುಗಿ ಆ ಮರುತ್ತನನ್ನು ಕುರಿತು, ಹುಚ್ಚನು ಮಾತಿನಿಂದ ಮನುಷ್ಯರನ್ನು ಬೆದರಿಸುವಂತೆ, ಕಠಿನ ವಾಕ್ಯದಿಂದ ಹೀಗೆಂದು ಹೇಳುವನು. ಎಲೈ ರಾಜನೆ! 'ಗಾಳಿಯನ್ನೇ ಮುಖ್ಯಾಹಾರವಾಗಿ ಮಾಡಿಕೊಂಡು, ಮನಸ್ಸಿಗೆ ತೋರಿದಂತೆ ನಡೆಯುತ್ತ ಈ ವಿಕಾರ ರೂಪದಿಂದ ಇರುವ ನನ್ನಿಂದ ಹೇಗೆ ತಾನೇ ನೀನು ಯಾಗ ಮಾಡಿಸಿಕೊಳ್ಳಲು ಅಪೇಕ್ಷಿಸುವೆ ? ನನ್ನ ಒಡಹುಟ್ಟಿದವನೊಬ್ಬನಿರುವನು. ಅವನು ಬಹಳಸಮರ್ಥನು. ಇಂದ್ರ

ನೊಡನೆಯೇ ಯಾವಾಗಲೂ ಇರತಕ್ಕವನು. ಅವನು ಪುರೋಹಿತನಾಗಿದ್ದು ಯಾಗ ಮಾಡಿಸುವುದರಲ್ಲಿಯೂ ನಿಪುಣನು. ಅವನಿಂದ ನಿನ್ನ ಯಜ್ಞ ಕಾರ್ಯವನ್ನು ಮಾಡಿಸು. ನನ್ನ ಮನೆಮಠಗಳನ್ನೆಲ್ಲಾ ಅವನೇ ತೆಗೆದುಕೊಂಡು ಈ ಶರೀರಮಾತ್ರದೊಡನೆ ನನ್ನನ್ನು ಬಿಟ್ಟಿರುವನು. ಅವನ ಅನುಮತಿಯಿಲ್ಲದೆ ಹೇಗೂ ನಾನು ನಿನ್ನಿಂದ ಯಾಗವನ್ನು ಮಾಡಿಸಲಾರೆನು. ನನಗೆ ಅವನು ಸರ್ವವಿಧದಲ್ಲಿಯೂ ಪೂಜ್ಯನು. ಆದುದರಿಂದ ಈಗ ನೀನು ನಮ್ಮಣ್ಣನಾದ ಬೃಹಸ್ಪತಿಯ ಬಳಿಗೆ ಹೋಗು. ಅವನನ್ನೊಪ್ಪಿಸಿ ಅವನ ಅನುಮತಿಯನ್ನು ಪಡೆದು ಬಾ? ಆಮೇಲೆ ಬೇಕಾದರೆ ನಾನು ನಿನಗೆ ಯಜ್ಞವನ್ನು ಮಾಡಿಸುವೆನು'' ಎಂದನು. ಆಗ ರಾಜನು ಅಯ್ಯಾ ! ನಾನಾಗಲೇ ಬೃಹಸ್ಪತಿಯ ಬಳಿಗೆ ಹೋಗಿ ಬಂದೆನು. ಇಂದ್ರನ ನಿರ್ಬಂಧಕ್ಕಾಗಿ ಅವನು ನನ್ನಿಂದ ಯಾಗಮಾಡಿಸಲು ಇಷ್ಟಪಡಲಿಲ್ಲ. ಮರಣವಿಲ್ಲದ ದೇವೇಂದ್ರನಿಗೆ ತಾನು ಪುರೋಹಿತನಾಗಿದ್ದುಕೊಂಡು, ಮನುಷ್ಯನಿಗೆ ಪೌರೋಹಿತ್ಯವನ್ನು ಮಾಡಿಸಲಾರೆನೆಂದೂ, ಅದರಲ್ಲಿಯೂ ಮರುತ್ತನಿಗೆ ಯಾಗ ಮಾಡಿಸಲೇಕೂಡದೆಂದು ದೇವೇಂದ್ರನೇ ತನ್ನನ್ನು ತಡೆದಿರುವುದಾಗಿಯೂ ಹೇಳಿಬಿಟ್ಟನು. ಇಂದ್ರನಿಗೂ ನನಗೂ ಅನ್ಯೋನ್ಯಸ್ಪರ್ಧೆಯಿರುವುದರಿಂದ, ಇಂದ್ರನು ಬೃಹಸ್ಪತಿಯನ್ನು ನಿರ್ಬಂಧಿಸಿ, ಅವನೀದ ಹಾಗೆಯೇ ಆಗಲಿ ಎಂದು ವಾಗ್ದಾನವನ್ನು ತೆಗೆದಿರುವನು. ಈ ಕಾರಣಕ್ಕಾಗಿ ನಾನು ಎಷ್ಟೋ ಪ್ರೀತಿಯಿಂದ ಹೋಗಿ ಯಾಚಿಸಿದರೂ, ಇಂದ್ರನ ಆಶ್ರಯದಲ್ಲಿರುವ ನಿನ್ನಣ್ಣನು ನನ್ನನ್ನು ಆದರಿಸಲಿಲ್ಲ. ಆದುದರಿಂದ ನನ್ನ ಸರ್ವಸ್ವದಿಂದಲಾದರೂ ನಿನ್ನ ಕೈಯಿಂದ ಯಾಗಮಾಡಿಸಬೇಕೆಂಬ ಆಸೆಯು ನನಗೆ ಬಹಳವಾಗಿದೆ. ನಿನ್ನ ಕೈಗುಣಗಳಿಂದ ಆ ದೇವೇಂದ್ರನನ್ನೂ ಮೀರಿದವನಾಗಬೇಕೆಂಬುದು ನನ್ನ ಬಯಕೆ. ನನ್ನಲ್ಲಿ ತಪ್ಪೇನೂ ಇಲ್ಲದಿದ್ದಾಗಲೂ ಬೃಹಸ್ಪತಿಯು ನನ್ನನ್ನು ನಿರಾಕರಿಸಿದುದರಿಂದ, ತಿರುಗಿ ಅವನಲ್ಲಿಗೆ ಹೋಗಲು ಸರ್ವಾತ್ಮನಾ ನನಗೆ ಸಮ್ಮತವಿಲ್ಲ'' ಎಂದನು. ಇದನ್ನು ಕೇಳಿ ಆ ಸಂವರ್ತನು “ ಓ ರಾಜೇಂದ್ರಾ ! ಇನ್ನು ನಿನ್ನ ಇಷ್ಟದಂತೆಯೇ ನಡೆಸು. ನೀನು ಹೇಳಿದುದೆಲ್ಲವೂ ವಾಸ್ತವವೆ? ಆದರೆ ನಿನ್ನಿಂದ ನಾನು ಯಾಗವನ್ನು ಮಾಡಿಸಬೇಕಾದರೆ, ನಾನು

ಹೇಳುವ ಅಭಿಪ್ರಾಯಗಳಿಗೆಲ್ಲಾ ನೀನು ನಡೆಸಬೇಕು. ನಿನ್ನಿಂದ ನಾನು ಯಾಗವನ್ನು ಮಾಡಿಸತೊಡಗಿದರೆ, ಆ ಇಂದ್ರ ಬೃಹಸ್ಪತಿಗಳಿಬ್ಬರಿಗೂ ಕೋಪವುಂಟಾಗಿ, ನಮ್ಮನ್ನು ಬಹಳವಾಗಿ ದ್ವೇಷಿಸುವರು. ಆದಕ್ಕೆ ತಕ್ಕ ಪರಿಹಾರವನ್ನು ನಾವು ಈಗಲೇ ಯೋಚಿಸಬೇಕು. ಎಂತಹ ವಿಘ್ನಗಳು ಬಂದರೂ ನನ್ನ ಪೌರೋಹಿತ್ಯ ಪದವಿಗೆ ಲೋಪವು ಬಾರದಂತೆ ನೀನು ಸ್ಥಿರ ಬುದ್ಧಿಯಿಂದಿರಬೇಕು. ನನಗೇನಾದರೂ ಕೋಪವುಂಟಾಗುವಂತೆ ಮಾಡಿದರೆ, ಈಗಲೇ ನಿನ್ನ ಸಮಸ್ತ ಬಾಂಧವರನ್ನೂ ನನ್ನ ಶಾಪಾಗ್ನಿಯಲ್ಲಿ ಸುಟ್ಟು ಭಸ್ಮಮಾಡಿಬಿಡುವೆನು" ಎಂದನು. ಆಗ ಮರುತ್ತನು ಓ ಮುನೀಂದ್ರಾ! "ಸೂರ್ಯನು ಎಷ್ಟುಕಾಲದವರೆಗೆ ಆಕಾಶದಲ್ಲಿ ತಪಿಸುತ್ತಿರುವನೋ, ಎಷ್ಟರವರೆಗೆ ಪರ್ವತಗಳು ನಿಶ್ಚಲವಾಗಿ ನಿಂತಿರುವುವೋ ಅಷ್ಟರವರೆಗೂ ನನ್ನ ಪಾಲಿಗೆ ಯಾವ ಲೋಕಗಳೂ ಇಲ್ಲದೇ ಹೋಗಲಿ! ನಾನು ನಿನ್ನ ಸಂಬಂಧವನ್ನು ಬಿಡುವುದಾದರೆ, ನನಗೆ ಎಲ್ಲಿಯೂ, ಯಾವಾಗಲೂ ಶುಭಕರವಾದ ಬುದ್ಧಿಯಿಲ್ಲದೆ ದುರ್ವಿಷಯಗಳಲ್ಲಿಯೇ ನನ್ನ ಮನಸ್ಸು ಸೇರಲಿ" ಎಂದನು. ಆದಕ್ಕಾ ಸಂವರ್ತನು "ಎಲೈ! ನಿನಗೆ ಕರ್ಮಗಳಲ್ಲಿ ಯಾವಾಗಲೂ ಇಂತಹ ಮಂಗಳಕರವಾದ ಬುದ್ಧಿಯೇ ಇರುತ್ತಿರಲಿ. ನಿನ್ನಿಂದ ಯಾಗ ಮಾಡಿಸಬೇಕೆಂದು ನನಗೂ ಮನಸ್ಸಿನಲ್ಲಿ ಆಸೆ ಯಿರುವುದು. ನಿನಗೆ ಅಕ್ಷಯವಾದ ದ್ರವ್ಯವು ಲಭಿಸುವ ರೀತಿಯನ್ನು ಹೇಳಿಕೊಡುವೆನು ಆದರಿಂದ ನೀನು ದೇವತೆಗಳನ್ನೂ, ಗಂಧರ್ವರನ್ನೂ ಕೊನೆಗೆ ದೇವೇಂದ್ರನನ್ನೂ ಮೀರಿದವನಾಗಬಹುದು. ರಾಜಾ! ನನಗೆ ಧನದಲ್ಲಿಯಾಗಲಿ, ಯಾಜ್ಯವಸ್ತುಗಳಲ್ಲಿಯಾಗಲಿ ಆಸೆಯಿಲ್ಲ. ನನ್ನ ಅಣ್ಣನಿಗೂ, ಇಂದ್ರನಿಗೂ, ಇಬ್ಬರಿಗೂ ಏನಾದರೂ ಒಂದು ಅಹಿತವನ್ನು ಮಾಡಬೇಕೆಂಬುದೇ ನನ್ನ ಕೋರಿಕೆ. ನಿನ್ನನ್ನು ಇಂದ್ರನೊಡನೆ ಸಮಾನಸ್ಥಿತಿಗೆ ಏರಿಸುವೆನು. ಅದರಲ್ಲಿ ಸಂದೇಹವಿಲ್ಲ. ನಿನಗೆ ಪ್ರಿಯವನ್ನುಂಟುಮಾಡುವೆನು. ಇದನ್ನು ಸತ್ಯವಾಗಿ ಹೇಳುವೆನೆಂದು ತಿಳಿ" ಎಂದನು.

ಇದು ಏಳನೆಯ ಅಧ್ಯಾಯವು.



ಸಂವರ್ತನು ಮರುತ್ತನಿಗೆ ಮುಂಜವಂತವೆಂಬ ಬೆಟ್ಟಕ್ಕೆ ಹೋಗಿ, ಅಲ್ಲಿರುವ ಮಹಾದೇವನನ್ನು ತಾನು ಹೇಳಿದ ಸ್ತೋತ್ರಗಳಿಂದ ಸ್ತುತಿಸಿ, ಅವನ ಅನುಗ್ರಹದಿಂದ ಯಾಗಕ್ಕೆ ಬೇಕಾದ ಸುವರ್ಣವನ್ನು ತರುವಂತೆ ಹೇಳಿದುದು. ಇದನ್ನು ಕೇಳಿ ಇಂದ್ರನು ಮಾತ್ಸ ರ್ಯದಿಂದ ಬೃಹಸ್ಪತಿಯ ಬಳಿಗೆ ಬಂದುದು.

ಆಗ ಸಂವರ್ತನು ಮರುತ್ತನನ್ನು ಕುರಿತು "ರಾಜೇಂದ್ರಾ! ಹಿಮಾಲಯದ ಹಿಂದೆ ಮುಂಜವಂತವೆಂಬ ಬೆಟ್ಟವೊಂದುಂಟು. ಅಲ್ಲಿ ಪಾರ್ವತೀಪತಿಯಾದ ರುದ್ರನು ಸದಾ ತಪಸ್ಸು ಮಾಡುತ್ತಿರುವನು. ಅಲ್ಲಿ ಮಹಾತೇಜಸ್ವಿಯಾದ ಪರಮಶಿವನು ಸಮಸ್ತ ಭೂತಗಣಗಳಿಂದ ಪರಿವೃತನಾಗಿ, ಪಾರ್ವತಿಯೊಡಗೂಡಿ, ಅಲ್ಲಲ್ಲಿ ಮರದಡಿಗಳಲ್ಲಿಯೂ, ಶಿಖರಗಳಲ್ಲಿಯೂ ಸ್ವೇಚ್ಛೆಯಿಂದ ಸಂಚರಿಸುತ್ತ ಸುಖವಾಗಿರುವನು. ಅಲ್ಲಿ ರುದ್ರನೂ, ಸಾಧ್ಯರೂ, ವಿಶ್ವದೇವತೆಗಳೂ, ಅಷ್ಟವಸುಗಳೂ, ಯಮನೂ, ವರುಣನೂ, ಪರಿವಾರಗಳೊಡನೆ ಕುಬೇರನೂ, ಭೂತಪಿಶಾಚಗಳೂ, ಅಶ್ವಿನೀದೇವತೆಗಳೂ, ಗಂಧರ್ವರೂ, ಅಪ್ಸರಸ್ಸುಗಳೂ, ಯಕ್ಷ ರಾಕ್ಷಸರೂ, ದ್ವಾದಶಾದಿತ್ಯರೂ, ದೇವಋಷಿಗಳೂ, ಸಪ್ತಮರುತ್ತುಗಳೂ ಸೇರಿ, ಮಹಾತ್ಮನೂ, ಬಹುರೂಪನೂ ಆದ ಪಾರ್ವತೀ ಪತಿಯುನ್ನು ಉಪಾಸಿಸುತ್ತಿರುವರು. ಅಲ್ಲಿ ರುದ್ರನು, ವಿಕೃತ ವೇಷವುಳ್ಳ ಕುಬೇರನ ಅನುಚರರೊಡನೆ ವಿಹರಿಸುತ್ತ, ಬಾಲಸೂರ್ಯನಂತೆ ತೇಜಸ್ಸಿನಿಂದ ಜ್ವಲಿಸುತ್ತಿರುವನು. ಬರೀ ತೇಜಸ್ಸನ್ನು ಮಾತ್ರ ಅಲ್ಲಿ ಕಾಣಬಹುದೇ ಹೊರತು, ಅವನ ರೂಪವನ್ನಾಗಲಿ, ಅವನ ನೆಲೆಯನ್ನಾಗಲಿ ಮಾಂಸಚಕ್ಷಸ್ಸುಗಳುಳ್ಳ ಪ್ರಾಣಿಗಳಿಂದ ಹೀಗೆಂದು ನಿರ್ದೇಶಿಸಲು ಸಾಧ್ಯವಿಲ್ಲ. ಮಹಾರಾಜಾ! ಅಲ್ಲಿ ಉಷ್ಣವೂ ಇಲ್ಲ! ಶೀತವೂ ಇಲ್ಲ. ಗಾಳಿಯೂ ಇಲ್ಲ! ಸೂರ್ಯನೂ ಇಲ್ಲ. ಈ ವ್ಯತ್ಯಾಸಗಳಿಲ್ಲದೆ ಅದು ಸದಾ ಸುಖಾಸ್ಪದವಾಗಿರುವುದು. ಅಲ್ಲಿದ್ದವರಿಗೆ ಮುಪ್ಪು, ಹಸಿವು, ಬಾಯಾರಿಕೆ, ಮರಣ, ಭೀತಿ, ಇದೊಂದೂ ಇರುವುದಿಲ್ಲ. ಆ ಬೆಟ್ಟದ ಎಲ್ಲಾ ಪಾರ್ಶ್ವಗಳಲ್ಲಿಯೂ ಗನಿಗಳಲ್ಲಿರುವ ಚಿನ್ನದ ಕಾಂತಿಯು ಸೂರ್ಯನ ಕಿರಣಗಳಂತೆ ಹರಡಿರುವುದು. ಅಲ್ಲಿನ ಸುವರ್ಣ

ಧಾತುಗಳನ್ನೆಲ್ಲ ಕುಬೇರನ ಅನುಚರರು ಕುಬೇರನ ಪ್ರೀತಿಗಾಗಿ ಯಾವಾಗಲೂ ಆಯುಧಪಾಣಿಗಳಾಗಿದ್ದು ಬಹಳ ಎಚ್ಚರದಿಂದ ಕಾಯುತ್ತಿರುವರು. ಓ ರಾಜೇಂದ್ರಾ ! ನೀನು ಭಕ್ತಿಯಿಂದ ಹೋಗಿ ಅಲ್ಲಿ ಸಾನ್ನಿಧ್ಯವನ್ನು ಮಾಡುತ್ತಿರುವ ರುದ್ರನಿಗೆ ನಮಸ್ಕರಿಸಿ ಮುಂದೆ ಹೇಳಿರುವ ಶತನಾಮಗಳಿಂದ ಸ್ತುತಿಸು.

"ರುದ್ರಸ್ತುತಿ"

"ರುದ್ರನೂ, ನೀಲಕಂಠನೂ, ಸುರೂಪನೂ, ಸುವರ್ಚಸನೂ, ಕಪರ್ದಿಯೂ, ಕರಾಲನೂ, ಹರ್ಯಕ್ಷನೂ, ವರದನೂ ಆದ ನಿನಗೆ ನಮಸ್ಕಾರವು. ಮೂರು ಕಣ್ಣುಳ್ಳವನೂ, ಪೂಷನ ಹಲ್ಲುಗಳನ್ನು ಮುರಿದವನೂ, ವಾಮನನೂ, ಶಿವನೂ ಆದ ನಿನಗೆ ನಮಸ್ಕಾರವು. ಸಮಸ್ತವನ್ನೂ ಅಡಗಿಸಬಲ್ಲವನೂ, ಅವ್ಯಕ್ತ ಸ್ವರೂಪನೂ, ಸಚ್ಚರಿತ್ರನೂ, ಶಂಕರನೂ, ಕ್ಷೇಮಕರನೂ, ಸುವರ್ಣ ಕೇಶನೂ, ಸ್ಥಾಣುವೂ, ಉತ್ತಮ ಪುರುಷನೂ ಆದ ನಿನಗೆ ನಮಸ್ಕಾರವು. ಪಿಂಗಳಾಕ್ಷನೂ, ಮುಂಡನಾಮಕನೂ, ಕ್ರೋಧಶೀಲನೂ, ಸಂಸಾರತಾರಕನೂ, ತೇಜೋವಿಶಿಷ್ಟನೂ, ದೇವದೇವನೂ, ವೇಗಶಾಲಿಯೂ ಆದ ನಿನಗೆ ನಮಸ್ಕಾರವು. ಉಷ್ಣೀಷಧಾರಿಯೂ, ಅಂದವಾದ ಮುಖವುಳ್ಳವನೂ, ಸಹಸ್ರಾಕ್ಷನೂ, ಎಲ್ಲರನ್ನೂ ಸೃಷ್ಟಿಸತಕ್ಕವನೂ, ಪರ್ವತಶಾಯಿಯೂ, ಶಾಂತನೂ, ಯತಿಯೂ, ಚೀರವಸ್ತ್ರಧಾರಿಯೂ ಆದ ನಿನಗೆ ನಮಸ್ಕಾರವು. ಬಿಲ್ವವೃಕ್ಷದಂಡವನ್ನು ಧರಿಸಿದವನೂ, ಸಿದ್ಧನೂ, ಸರ್ವಶಿಕ್ಷಕನೂ, ಯಾಗರೂಪ ಮೃಗವನ್ನು ಬೇಟೆಯಾಡಿದವನೂ, ಎಲ್ಲಕ್ಕೂ ಮೇಲೆನಿಸಿದವನೂ, ಮಹಾಧನುಸ್ಸುಳ್ಳವನೂ, ಉತ್ಪತ್ತಿಕಾರಣನೂ, ಉತ್ತಮೋತ್ತಮನೂ, ಚಂದ್ರನಂತೆ ಮುಖವುಳ್ಳವನೂ, ಸಿದ್ಧರಿಗೆ ಮಂತ್ರರೂಪನೂ, ಆದ ನಿನಗೆ ನಮಸ್ಕಾರವು. ಲೋಕಕ್ಕೆಲ್ಲ ಕಣ್ಣಾಗಿರುವವನೂ ಸುವರ್ಣದ ತೋಳುಗಳುಳ್ಳವನೂ, ಉಗ್ರನೂ, ದಿಕ್ಪಾಲಕನೂ, ನಾಲಗೆಯಿಂದ ಕಡೆಬಾಯಿಗಳನ್ನು ಅಡಿಗಡಿಗೆ ಸವರುತ್ತಿರುವವನೂ, ಜೀವಕ್ಕೆಲ್ಲ ವಾಸಸ್ಥಾನನೂ, ಮಂತ್ರಸಿದ್ಧಿಯುಳ್ಳವನೂ, ವೃಷ್ಣಿನಾಮಕನೂ, ಪಶುಪತಿಯೂ, ಭೂತ

ಪತಿಯೂ ಆದ ನಿನಗೆ ನಮಸ್ಕಾರವು. ವೃಷನಾಮಕನೂ, ಮಾತೃ ಭಕ್ತಿಯುಳ್ಳವನೂ, ದೇವಸೇನಾನಿಯಾಮಕನೂ, ಸರ್ವಸಮನೂ, ಭಕ್ತರಿಗೆ ಇದಿರಾದ ಮುಖವುಳ್ಳವನೂ, ಪ್ರಭುವೂ, ಸರ್ವದೇವಸ್ವರೂಪನೂ, ಆದ ನಿನಗೆ ನಮಸ್ಕಾರವು. ಸ್ರುವವನ್ನು ಕೈಯಲ್ಲಿ ಹಿಡಿದವನೂ, ಸರ್ವನಿಯಾಮಕನೂ, ಪಿನಾಕಧರನೂ, ಭಾರ್ಗವನೂ, ಜನ್ಮರಹಿತನೂ, ಕರಿಯ ಕಣ್ಣುಳ್ಳವನೂ, ವಿಷಮವಾದ ನೇತ್ರಗಳುಳ್ಳವನೂ ಆದ ನಿನಗೆ ನಮಸ್ಕಾರವು. ಹರಿತವಾದ ಕೋರೆಹಲ್ಲುಗಳುಳ್ಳವನೂ, ತೀಕ್ಷ್ಣನೂ, ಅಗ್ನಿಮುಖನೂ, ಮಹಾತ್ಮನೂ, ಅಂಗರಹಿತನೂ, ಸರ್ವ ಸ್ವರೂಪನೂ, ಪ್ರಜಾಧಿಪತಿಯೂ ಆದ ನಿನಗೆ ನಮಸ್ಕಾರವು. ರುದ್ರನಾಮಕನೂ, ಪೃಥುನಾಮಕನೂ, ಸರ್ವಭೂತಪತಿಯೂ, ಚರ್ಮವಸ್ತ್ರನೂ, ರಕ್ತವರ್ಣವುಳ್ಳವನೂ, ಕಾಂತಿಯಿಂದ ಜ್ವಲಿಸುವವನೂ, ತೇಜೋಮಯವಾದ ಕಣ್ಣುಗಳುಳ್ಳವನೂ, ಮಹೋಜಸ್ಕನೂ, ಅಗ್ನಿಶರೀರನೂ, ಉಬ್ಬಿದ ಮೈಯುಳ್ಳವನೂ ಆದ ನಿನಗೆ ನಮಸ್ಕಾರವು. ಕಪಾಲಮಾಲೆಯನ್ನು ಧರಿಸಿದವನೂ, ಸುವರ್ಣ ಕಿರೀಟಧಾರಿಯೂ, ಮಹಾದೇವನೂ, ಕೃಷ್ಣನೂ, ತ್ರಿನೇತ್ರನೂ, ನಿರ್ದುಷ್ಟನೂ ಆದ ನಿನಗೆ ನಮಸ್ಕಾರವು. ಕ್ರೋಧಶೀಲನೂ, ದಯಾರ್ದ್ರನೂ, ಮೃದುಸ್ವಭಾವವುಳ್ಳವನೂ, ಉತ್ತಮಬಾಹುಗಳುಳ್ಳವನೂ, ದಂಡಧಾರಿಯೂ, ತಪಸ್ವಿಯೂ, ಅಕ್ರೂರ ಕರ್ಮನೂ, ಆದ ನಿನಗೆ ನಮಸ್ಕಾರವು. ಸಹಸ್ರ ಶಿರಸ್ಸುಳ್ಳವನೂ, ಸಹಸ್ರ ಪಾದನೂ, ಸ್ವಧಾಸ್ವರೂಪನೂ, ಕೋರೆಹಲ್ಲುಗಳುಳ್ಳವನೂ ಆದ ನಿನಗೆ ನಮಸ್ಕಾರವು. ದೇವಾ! ಪಿನಾಕವೆಂಬ ಧನುಸ್ಸನ್ನು ಧರಿಸಿದವನೂ, ಮಹಾದೇವನೂ, ಮಹಾ ಭೋಗವುಳ್ಳವನೂ, ಅವ್ಯಯನೂ, ತ್ರಿಶೂಲವನ್ನು ಕೈಯಲ್ಲಿ ಹಿಡಿದವನೂ, ವರದನೂ, ತ್ರ್ಯಂಬಕನೂ, ಭುವನೇಶ್ವರನೂ, ಆದ ನಿನ್ನನ್ನು ನಮಸ್ಕರಿಸುವೆನು. ತ್ರಿಪುರಹರನೂ, ತ್ರಿನೇತ್ರನೂ, ತ್ರಿಲೋಕೇಶ್ವರನೂ, ಮಹಾತೇಜಸ್ವಿಯೂ, ಸಮಸ್ತ ಭೂತಗಳಿಗೆ ಉತ್ಪತ್ತಿ ಸ್ಥಾನವೂ, ಎಲ್ಲವನ್ನೂ ಕೊಡತಕ್ಕವನೂ, ಭೂಮಿಯನ್ನು ಧರಿಸತಕ್ಕವನೂ ಆದ ನಿನ್ನನ್ನು ನಮಸ್ಕರಿಸುವೆನು. ಈಶ್ವರನೆಂದೂ, ಶಂಕರನೆಂದೂ, ಸರ್ವಾತ್ಮಕನೆಂದೂ, ವಿಶ್ವೇಶ್ವರನೆಂದೂ, ಭವನೆಂದೂ,

ಕೀರ್ತಿಸಲ್ಪಡುವ ನಿನ್ನನ್ನು ನಮಸ್ಕರಿಸುವೆನು. ಉಮಾಪತಿಯೂ, ಪಶುಪತಿಯೂ, ವಿಶ್ವರೂಪಿಯೂ, ಮಹೇಶ್ವರನೂ ಆದ ನಿನ್ನನ್ನು ನಮಸ್ಕರಿಸುವೆನು. ವಿರೂಪಾಕ್ಷನೂ, ಹತ್ತು ಭುಜಗಳುಳ್ಳವನೂ, ಕರುಣಾರಸವನ್ನು ಸುರಿಸತಕ್ಕವನೂ, ವೃಷಧ್ವಜನೂ, ಉಗ್ರನೂ, ಸ್ಥಾಣುವೂ, ಶಿವನೂ, ರೌದ್ರನೂ, ಶರ್ವನೂ, ಗೌರೀಶನೂ, ಈಶ್ವರನೂ ಆದ ನಿನ್ನನ್ನು ನಮಸ್ಕರಿಸುವೆನು. ನೀಲಕಂಠನೂ, ಅಜನೂ, ಶುಕ್ರನೂ, ಪೃಥುವೂ, ಅತಿಮಹತ್ತಾದುದನ್ನೂ ಅಡಗಿಸಬಲ್ಲವನೂ, ಉತ್ತಮನೂ, ವಿಶ್ವರೂಪನೂ, ವಿರೂಪಾಕ್ಷನೂ, ಬಹುರೂಪನೂ ಆದ ನಿನ್ನನ್ನು ನಮಸ್ಕರಿಸುವೆನು.''

ಓ ರಾಜಾ ! ಹೀಗೆಂದು ನೀನು ದೇವದೇವನೂ, ಕಾಮಹರನೂ, ಲೋಕಶರಣ್ಯನೂ, ಪಾಪವನ್ನು ನೀಗಿಸತಕ್ಕವನೂ, ಮಹಾದೇವನೂ, ಚತುರ್ಮುಖನೂ, ಆದ ಶಿವನನ್ನು ಮರೆಹೊಕ್ಕು ಪ್ರಾರ್ಥಿಸು. ಉತ್ತಮತೇಜೋವಿಶಿಷ್ಟವಾದ ಮೈಯಿಂದ ಕೂಡಿದವನೂ, ದಿವ್ಯಾಭರಣಗಳಿಂದ ಶೋಭಿಸುವವನೂ, ಆದ್ಯಂತಗಳಿಲ್ಲದವನೂ, ಜನ್ಮರಹಿತನೂ, ತ್ರೈಗುಣ್ಯರಹಿತನೂ, ಶಂಭುವೂ, ಸರ್ವವ್ಯಾಪಿಯೂ, ಈಶ್ವರನೂ, ನಿಶ್ಚಿಂತನೂ, ನಿರ್ಮಲನೂ, ತೇಜೋನಿಧಿಯೂ ಆದ ಆ ಶಿವನನ್ನು ಬದ್ಧಾಂಜಲಿಯಾಗಿ ನಮಸ್ಕರಿಸಿ' ಅವನಲ್ಲಿ ಶರಣು ಹೊಂದು. ಸಂಮಾನ್ಯನೂ, ಸ್ಥಿರನೂ, ನಿತ್ಯನೂ, ದುಷ್ಟರಲ್ಲಿ ಕರುಣೆಯಿಲ್ಲದವನೂ, ಪುಣ್ಯಪಾಪಗಳ ಸಂಬಂಧವಿಲ್ಲದವನೂ, ಉಪನಿಷತ್ಸ್ವರೂಪನೂ ಆದ ಆ ಶಂಕರನನ್ನು ನೀನು ಬಾರಿಬಾರಿಗೂ ಮರೆಹೊಕ್ಕು '' ಅಧ್ಯಾತ್ಮಜ್ಞಾನವುಳ್ಳವರು ಯಾವನ ಶಾಶ್ವತ, ಸ್ಥಾನವನ್ನೇ ಮೋಕ್ಷವೆಂದು ತಿಳಿಯುವರೋ, ತತ್ವಮಾರ್ಗದಲ್ಲಿ ನೆಲೆಗೊಂಡವರು ಯಾವನನ್ನು ಯೋಗೀಶ್ವರನೆಂದೂ, ಮೋಕ್ಷಸ್ಥಾನವೆಂದೂ, ನಾಶವಿಲ್ಲದ ನೆಲೆಯೆಂದೂ ತಿಳಿಯುವರೋ, ಮುಕ್ತರು ಯಾವನನ್ನು ತಮ್ಮಲ್ಲಿ ವಿಶೇಷ ಪ್ರೇಮಬಂಧನವುಳ್ಳವನನ್ನಾಗಿಯೂ, ಸಮದರ್ಶಿಗಳು ಎಲ್ಲರಲ್ಲಿಯೂ ಸಮವಾಗಿ ವರ್ತಿಸತಕ್ಕವನನ್ನಾಗಿಯೂ ತಿಳಿಯುವರೋ, ಲೋಕಕ್ಕೆಲ್ಲ ಉತ್ಪತ್ತಿಕಾರಣನಾಗಿ

ತನಗೆ ಉತ್ಪತ್ತಿಕಾರಣವಿಲ್ಲದಿರುವನೂ, ನಿರ್ಗುಣ ಸ್ವರೂಪವುಳ್ಳವನೂ ಆದ ಆ ಪರಮಶಿವನನ್ನು ಮರೆಹೊಗುವೆನು. ಯಾವನು ಎಲ್ಲ ಭೂತಗಳನ್ನೂ ಸಪ್ತಲೋಕಗಳನ್ನೂ ಸೃಷ್ಟಿಸಿದನೋ, ಯಾವನು ಸತ್ಯಲೋಕಕ್ಕೆ ಮೇಲೆ ಸ್ಥಿರವಾಗಿರತಕ್ಕವನೋ, ಅಂತಹ ಅನಾದಿ ದೇವನನ್ನು ಮರೆಹೊಗುವೆನು. ಭಕ್ತರಿಗೆ ಸುಲಭನೂ, ಭಕ್ತಿ ಹೀನರಿಗೆ ದುರ್ಲಭನೂ, ಎಲ್ಲರಿಗೂ ಸಮೀಪದಲ್ಲಿಯೇ ಇರತಕ್ಕವನೂ, ಪ್ರಕೃತಿಗಿಂತಲೂ ಆಚೆಗೆ ನೆಲಸಿತಕ್ಕವನೂ, ಸಮಸ್ತ ಲೋಕಗಳನ್ನು ವ್ಯಾಪಿಸಿದವನೂ, ಆದ ಮಹಾದೇವನನ್ನು ಮರೆಹೊಗುವೆನು" ಎಂಬೀ ಮೊದಲಾದ ಸ್ತೋತ್ರಗಳಿಂದ ಮಹಾದೇವನನ್ನು ಸ್ತುತಿಸಿ, ಮರೆಹೊಕ್ಕರೆ, ನೀನು ಆ ಸುವರ್ಣವನ್ನು ಪಡೆಯಬಹುದು. ಅವನಲ್ಲಿಯೇ ನಟ್ಟ ಮನಸ್ಸುಳ್ಳ ಮನುಷ್ಯರು ಗಣಾಧಿಪತಿಸ್ಥಾನವನ್ನೇ ಪಡೆಯುವರು. ಇನ್ನು ಅವನ ಅನುಗ್ರಹದಿಂದ ಸುವರ್ಣ ಭಾಂಡಗಳನ್ನು ಪಡೆಯುವುದರಲ್ಲಿ ಸಂದೇಹವೇನಿದೆ? ಆದುದರಿಂದ ನೀನು ವಿಳಂಬಮಾಡದೆ ಶೀಘ್ರದಲ್ಲಿ ಹೊರಡು! ನಿನಗೆ ಇಷ್ಟಲಾಭವಾಗುವುದು. ಅಲ್ಲಿ ದೊರೆಯತಕ್ಕ ಧನವಾದರೋ ಅಪರಿಮಿತವಾದುದು. ಆ ಹಣವನ್ನು ಸಾಗಿಸುವುದಕ್ಕಾಗಿ ನಿನ್ನ ಕಡೆಯ ಆಳುಗಳೆಲ್ಲ ಆನೆ, ಕುದುರೆ, ಒಂಟೆ, ಮೊದಲಾದ ವಾಹನಗಳನ್ನು ಸಿದ್ಧಪಡಿಸಿಕೊಂಡೇ ಹೋಗಲಿ" ಎಂದನು.

ಈ ಮಾತನ್ನು ಕೇಳಿ ಕರಂಧಮಪುತ್ರನಾದ ಮರುತ್ತರಾಜನು, ಅವನು ಹೇಳಿದಂತೆಯೇ ಗಂಗಾಧರನಾದ ಶಿವನನ್ನು ಪ್ರಾರ್ಥಿಸಿ, ಆ ಪರಮಶಿವನ ಅನುಗ್ರಹದಿಂದ ವಿಶೇಷಧನವನ್ನು ಪಡೆದು ಕುಬೇರನಿಗೆ ಸಾಟಿಯಾದನು. ಅದರಿಂದಾಚೆಗೆ ಅವನು ಮನುಷ್ಯರಿಂದ ಮಾಡಲಸಾಧ್ಯವಾದ ಆ ಯಾಗಕ್ಕಾಗಿ ಸಕಲಸನ್ನಾಹಗಳನ್ನೂ ಮಾಡಿದನು. ಆ ಯಾಗಕ್ಕಾಗಿ ಶಿಲ್ಪಿಗಳು ಸುವರ್ಣ ಪಾತ್ರೆಗಳನ್ನೂ, ಯಾಗಶಾಲೆಗಳನ್ನೂ, ಇನ್ನೂ ಬೇರೆ ಎಲ್ಲಾ ಸಾಮಗ್ರಿಗಳನ್ನೂ ಸಂವರ್ತನು ಹೇಳಿದ ಕ್ರಮದಲ್ಲಿ ಸಿದ್ಧಪಡಿಸಿದರು. ಈ ಸಂಗತಿಯು ಬೃಹಸ್ಪತಿಗೆ ತಿಳಿಯಿತು. ದೇವತೆಗಳಿಗಿಂತಲೂ ಮೇಲಾದ ಮರುತ್ತರಾಜನ ಐಶ್ವರ್ಯವನ್ನೂ, ಅವನ

ಯಾಗ ವೈಭವವನ್ನೂ ಕೇಳಿ ಬೃಹಸ್ಪತಿಗೆ ಮನಸ್ಸಿನಲ್ಲಿ ಬಹಳ ಸಂಕಟ ವುಂಟಾಯಿತು. ತನ್ನ ಜ್ಞಾತಿಯೂ, ವೈರಿಯೂ ಆದ ಸಂವರ್ತನು ಈ ಯಾಗದಿಂದ ದೊಡ್ಡ ಶ್ರೀಮಂತನಾಗುವನಲ್ಲಾ ಎಂಬ ಮಾತ್ಸರ್ಯದಿಂದ ಅವನು ದಿನದಿನಕ್ಕೆ ಕೃಶನಾದನು. ಅವನ ಮುಖವು ಬಣ್ಣಗೆಟ್ಟಿತು. ಬೃಹಸ್ಪತಿಯು ಹೀಗೆ ಬಹಳವಾಗಿ ಕೊರಗುವುದನ್ನು ಕೇಳಿ ದೇವೇಂದ್ರನು ಎಲ್ಲಾ ದೇವತೆಗಳೊಡನೆ ಆ ಬೃಹಸ್ಪತಿಯ ಬಳಿಗೆ ಬಂದು, ಮುಂದೆ ಹೇಳುವ ಮಾತುಗಳನ್ನಾಡುವನು.

ಇದು ಎಂಟನೆಯ ಅಧ್ಯಾಯವು.

ಬೃಹಸ್ಪತಿಯು ಇಂದ್ರನಿಗೆ ಮರುತ್ತನ ಯಾಗವನ್ನು ಕೆಡಿಸುವಂತೆ ಹೇಳಿದುದು. ಅಗ್ನಿಯು ಇಂದ್ರಾಜ್ಞೆಯಿಂದ ಮರುತ್ತನಲ್ಲಿಗೆ ಹೋಗಿ ಬೃಹಸ್ಪತಿಯನ್ನೇ ಪೌರೋಹಿತ್ಯಕ್ಕೆ ಇಟ್ಟುಕೊಳ್ಳುವಂತೆ ತಿಳಿಸಿದುದು. ಮರುತ್ತನು ಅದಕ್ಕೆ ಸಮ್ಮತಿಸದೆ ಹೋದುದನ್ನು ಇಂದ್ರನಿಗೆ ತಿಳಿಸಲು, ಇಂದ್ರನು ಮಹತ್ತಾಂದು ಸಂದೇಶದಿಂದ ಅಗ್ನಿಯನ್ನು ಮರುತ್ತನ ಬಳಿಗೆ ಕಳುಹಲು ಯತ್ನಿಸಿದುದು. ಅಗ್ನಿಯು ಸಂವರ್ತನ ಶಾಪಭಯದಿಂದ ಅದಕ್ಕೆ ಸಮ್ಮತಿಸದೆ ಹೋದುದು.

ಇಂದ್ರನು ಬೃಹಸ್ಪತಿಯನ್ನು ಕುರಿತು "ಆಚಾರ್ಯ! ನೀನು ಸುಖವಾಗಿ ನಿದ್ರೆ ಮಾಡುವೆಯಾ? ನಿನ್ನ ಪರಿಚಾರಕರೆಲ್ಲರೂ ನಿನ್ನ ಮನಸ್ಸನ್ನು ತಿಳಿದು ಉಪಚರಿಸುವರೆ? ದೇವತೆಗಳೆಲ್ಲರ ಕ್ಷೇಮಚಿಂತೆಯು ನಿನ್ನ ಮನಸ್ಸಿನಲ್ಲಿರುವುದಷ್ಟೆ? ದೇವತೆಗಳೂ ನಿನ್ನನ್ನು ಸರಿಯಾಗಿ ಕಾಪಾಡುತ್ತಿರುವರಷ್ಟೆ?" ಎಂದನು. ಅದಕ್ಕಾ ಬೃಹಸ್ಪತಿಯು "ಓ ದೇವರಾಜಾ! ಅದೊಂದರಲ್ಲಿಯೂ ನನಗೆ ಕೊರತೆಯಿಲ್ಲ. ಸುಖವಾದ ಹಾಸಿಗೆಯಲ್ಲಿಯೇ ಮಲಗುವೆನು. ನನ್ನ ಮನಸ್ಸನ್ನು ತಿಳಿದೇ ಸೇವಕರು ನನ್ನನ್ನು

ಪಚರಿಸುವರು. ದೇವತೆಗಳ ಕ್ಷೇಮವನ್ನೇ ಯಾವಾಗಲೂ ನಾನು ಚಿಂತಿಸುತ್ತಿರುವೆನು. ದೇವತೆಗಳು ನನ್ನನ್ನು ಚೆನ್ನಾಗಿ ಕಾಪಾಡುತ್ತಿರುವರು" ಎಂದನು. ಆಗ ಇಂದ್ರನು "ಗುರುವರ್ಯಾ! ನಿನ್ನ ದೇಹವು ಬಣ್ಣಗೆಟ್ಟು ಬಿಳುಪೇರಿರುವುದೇಕೆ? ನಿನಗೆ ಮನೋರೋಗವೋ, ದೇಹವ್ಯಾಧಿಯೋ ಇದ್ದು, ಅದರಿಂದ ನೀನು ಕೊರಗುವಂತಿದೆ! ನಿನ್ನ ದುಃಖಕಾರಣವೇನೆಂಬುದನ್ನು ತಿಳಿಸು. ನಿನ್ನ ಈ ವ್ಯಸನಕ್ಕೆ ಕಾರಣಭೂತರು ಯಾರಾಗಿದ್ದರೂ, ಅವರನ್ನೆಲ್ಲ ಧ್ವಂಸಮಾಡುವೆನು" ಎಂದನು. ಅದಕ್ಕೆ ಬೃಹಸ್ಪತಿಯು "ಮಹೇಂದ್ರಾ! ಈಗ ಮರುತ್ತರಾಜನು ಉತ್ತಮದಕ್ಷಿಣೆಯುಳ್ಳ ದೊಡ್ಡ ಯಜ್ಞವೊಂದನ್ನು ಮಾಡುವುದಾಗಿ ಹೇಳುವರು. ನನ್ನ ತಮ್ಮನಾದ ಸಂವರ್ತನೇ ಅವನಿಂದ ಯಾಗಮಾಡಿಸುವುದಾಗಿಯೂ ನನಗೆ ತಿಳಿಯಿತು. ಆ ಸಂವರ್ತನು ಯಾಗವನ್ನು ನಡೆಸದಹಾಗೆ ಮಾಡಬೇಕು. ಇದೇ ನನ್ನ ಉದ್ದೇಶವು" ಎಂದನು. ಆದಕ್ಕಾ ಇಂದ್ರನು "ಓ ಬ್ರಾಹ್ಮಣಾ! ನಿನಗೆ ಆ ಚಿಂತೆಯೇಕೆ? ನೀನು ನನ್ನಲ್ಲಿದ್ದುಕೊಂಡು ಬೇಕಾದ ಕೋರಿಕೆಗಳನ್ನೆಲ್ಲ ಪಡೆಯುತ್ತಿರುವೆ. ದೇವತೆಗಳಾದ ನಮಗೆ ನೀನು ಪುರೋಹಿತನಾಗಿದ್ದುಕೊಂಡು ಆಲೋಚನೆಗಳನ್ನೆಲ್ಲ ಕೊಡುತ್ತಿರುವೆ! ನೀನು ಜರಾಮರಣಗಳೆರಡನ್ನೂ ತಪ್ಪಿಸಿಕೊಂಡು ದೇವತೆಗಳ ವರ್ಗದಲ್ಲಿ ಸೇರಿರುವೆ. ನಿನ್ನ ಸಹೋದರನಾದ ಸಂವರ್ತನು, ಈಗ ಒಬ್ಬ ಮನುಷ್ಯನಿಗೆ ಪುರೋಹಿತನಾದಮಾತ್ರಕ್ಕೆ ನಿನ್ನನ್ನೇನು ಮಾಡಬಲ್ಲನು?" ಎಂದನು. ಅದಕ್ಕಾ ಬೃಹಸ್ಪತಿಯು "ದೇವೇಂದ್ರಾ! ಅದು ಹಾಗಲ್ಲ! ನಿನ್ನ ಸ್ಥಿತಿಯನ್ನೇ ಯೋಚಿಸಿ ನೋಡು. ದಾಯಾದ ದ್ವೇಷವು ಸುಮ್ಮನಿರಗೊಡುವುದಿಲ್ಲ. ನೀನು ದೇವತೆಗಳನ್ನೆಲ್ಲಾ ಕಟ್ಟಿಕೊಂಡು, ನಿನ್ನ ಜ್ಞಾತಿಗಳಾದ ದೈತ್ಯರನ್ನೋಡಿಸಿ, ಈಗಲೂ ಅವರಲ್ಲಿ ಐಶ್ವರ್ಯವಂತರೆಂದು ಕಂಡುಬಂದವರನ್ನೆಲ್ಲ ಸಮಸ್ತ ಪರಿವಾರಗಳೊಡನೆ ಕೊಂದು ನಿರ್ಮೂಲಮಾಡುವುದಕ್ಕೂ ಆತುರಡುತ್ತಿರುವೆಯಲ್ಲವೆ? ಶತ್ರುಗಳ ಐಶ್ವರ್ಯವನ್ನು ನೋಡುವುದು ಯಾರಿಗಾದರೂ ದುಃಖಕಾರಣವಲ್ಲವೆ? ಆದುದರಿಂದ ನನ್ನ ವೈರಿಯುವೃದ್ಧಿ ಹೊಂದುತ್ತಿರುವುದನ್ನು ನೋಡಿ ನಾನು ಹೇಗೆ ಸಹಿಸಲಿ? ಆ ಚಿಂತೆಯಿಂದಲೇ ನಾನು ಕಂದಿ ಕೃಶನಾಗಿ ಬಣ್ಣಗೆಟ್ಟಿರುವೆನು.

ಆದುದರಿಂದ ದೇವೇಂದ್ರಾ! ಈಗ ನೀನು ನಿನ್ನ ಸರ್ವಪ್ರಯತ್ನಗಳಿಂದ ಆ ಸಂವರ್ತನನ್ನಾಗಲಿ, ಮರುತ್ತ ರಾಜನನ್ನಾಗಲಿ ನಿಗ್ರಹಿಸಬೇಕು" ಎಂದನು.

ಈ ಮಾತನ್ನು ಕೇಳಿದೊಡನೆ ಇಂದ್ರನು ಅಗ್ನಿಯನ್ನು ಕರೆದು "ಓ ವೀತಿಹೋತ್ರಾ! ಈಗಲೇ ನೀನು ಮರುತ್ತನ ಬಳಿಗೆ ಹೋಗು ಸಂವರ್ತನನ್ನು ಬಿಟ್ಟು ಬೃಹಸ್ಪತಿಯನ್ನು ವರಿಸುವಂತೆ ನಾನು ಹೇಳಿದುದಾಗಿ ತಿಳಿಸು. ಮತ್ತು ಅವನಿಗೆ ನೀನು "ಈ ಬೃಹಸ್ಪತಿಯನ್ನು ವರಿಸಿದರೆ ಇವನೇ ನಿನ್ನಿಂದ ಯಾಗವನ್ನು ಮಾಡಿಸಿ, ನಿನ್ನನ್ನೂ ಅಮರನನ್ನಾಗಿ ಮಾಡುವ"ನೆಂದೂ ಹೇಳು ಎಂದನು. ಅದಕ್ಕಾ ಅಗ್ನಿಯು "ಮಹೇಂದ್ರಾ! ಈಗಲೇ ನಾನು ನಿನ್ನ ದೂತನಾಗಿ ಹೋಗಿ ಮರುತ್ತನಿಗೆ ಈ ಸಂದೇಶವನ್ನು ತಿಳಿಸುವೆನು. ಇದರಿಂದ ನೀನು ಕೊಟ್ಟ ವಾಗ್ದಾನವೂ ಸತ್ಯವಾಗಿ, ಬೃಹಸ್ಪತಿಯ ಮನಸ್ಸಿಗೂ ತೃಪ್ತಿಯಾಗಲಿ! ಇದೋ ಹೊರಡುವೆನು" ಎಂದನು. ಒಡನೆಯೇ ಅಗ್ನಿಯು ದಾರಿಯಲ್ಲಿರುವ ಗಿಡಮರಗಳನ್ನು ದಹಿಸಿಕೊಂಡು, ಹೇಮಂತಋತುವು ಮುಗಿದಮೇಲೆ ಸ್ವೇಚ್ಛೆಯಿಂದ ಇಷ್ಟಬಂದಂತೆ ದಿಕ್ಕುಗಳನ್ನೆಲ್ಲ ಆವರಿಸಿ ಎಲ್ಲೆಲ್ಲಿಯೂ ಸಂಚರಿಸುವ ವಾಯುವಿನಂತೆ ಗರ್ಜಿಸುತ್ತ, ಮರುತ್ತರಾಜನಿದ್ದಲ್ಲಿಗೆ ಬಂದನು. ಇದನ್ನು ಕಂಡು ಮರುತ್ತನು ಸಮೀಪದಲ್ಲಿದ್ದ ಸಂವರ್ತನನ್ನು ನೋಡಿ "ಆಹಾ! ಆಶ್ಚರ್ಯವು! ಈಗ ಅಗ್ನಿಯು ನಮ್ಮಲ್ಲಿಗೆ ಪ್ರತ್ಯಕ್ಷಶರೀರದೊಡನೆ ಬಂದಿರುವನು. ಈ ಅಗ್ನಿದೇವನಿಗೆ ಒಡನೆಯೇ ಅರ್ಘ್ಯಪಾದ್ಯಗಳನ್ನೂ, ಗೋವನ್ನೂ ತಂದೊಪ್ಪಿಸು" ಎಂದನು. ಆಗ ಅಗ್ನಿಯು ಮಹಾರಾಜಾ! ನಿನ್ನ ಅರ್ಘ್ಯಪಾದ್ಯಾಸನಗಳೇ ಮೊದಲಾದ ಸತ್ಕಾರ್ಯಗಳಿಗಾಗಿ ನಾನು ಸಂತೋಷಿಸುವೆನು. ಈಗ ನಾನು ಇಂದ್ರನ ಕಡೆಯಿಂದ ಸಂದೇಶವನ್ನು ತಂದಿರುವ ದೂತನೆಂದು ತಿಳಿ" ಎಂದನು. ಅದಕ್ಕಾ ಮರುತ್ತನು, "ಓ ಅಗ್ನಿದೇವಾ! ದೇವರಾಜನು ಸುಖದಿಂದಿರುವನೆ? ಅವನಿಗೆ ನಮ್ಮಲ್ಲಿ ಪ್ರೀತಿಯುಂಟೆ? ದೇವತೆಗಳು ಎಂದಿನಂತೆ ವಿಧೇಯರಾಗಿರುವರ್ಷೆ? ಈ ಅಂಶಗಳನ್ನೆಲ್ಲಾ ನನಗೆ ವಿವರವಾಗಿ ತಿಳಿಸು"

ಎಂದನು. ಅದಕ್ಕೆ ಅಗ್ನಿಯು “ರಾಜಾ! ಇಂದ್ರನು ಸುಖವಾಗಿರುವನು. ನಿನ್ನೊಡನೆ ಅವನು ನಿತ್ಯಪ್ರೇಮವನ್ನು ಬಯಸುವನು. ದೇವತೆಗಳೆಲ್ಲರೂ ಅವನಿಗೆ ವಿಧೇಯರಾಗಿರುವರು. ನಿನಗೆ ಅವನ ಸಂದೇಶವನ್ನು ತಿಳಿಸುವೆನು ಕೇಳು. ಅವನು ನಿನ್ನಲ್ಲಿ ಈ ಮಾತನ್ನು ಹೇಳುವುದಕ್ಕಾಗಿ ನನ್ನನ್ನು ಕಳುಹಿಸಿದನು. ಅವನಿಗೆ ಬೃಹಸ್ಪತಿಯನ್ನು ನಿನ್ನೊಡನೆ ಸೇರಿಸಬೇಕೆಂದು ಬಯಕೆ. ಆದುದರಿಂದ, ದೇವಗುರುವೇ ನಿನ್ನಿಂದ ಯಜ್ಞವನ್ನು ಮಾಡಿಸಲಿ! ಅವನು ಮರಣಶೀಲನಾದ ನಿನ್ನನ್ನು ಮರಣವಿಲ್ಲದ ದೇವತೆಯನ್ನಾಗಿ ಮಾಡಬಲ್ಲನು” ಎಂದನು. ಅದಕ್ಕಾ ಮರುತ್ತನು ಅಗ್ನಿದೇವಾ! ಈ ಸಂವರ್ತನೇ ನನ್ನಿಂದ ಯಾಗವನ್ನು ಮಾಡಿಸುವನು. ಬೃಹಸ್ಪತಿಗೆ ನನ್ನ ನಮಸ್ಕಾರವಿರಲಿ. ಅವನು ಸಾಕ್ಷಾನ್ಮಹೇಂದ್ರನಿಗೆ ಪುರೋಹಿತನಾಗಿದ್ದು ಅವನಿಂದ ಯಾಗಮಾಡಿಸತಕ್ಕವನು. ಮನುಷ್ಯನಾದ ನನಗೆಪುರೋಹಿತನಾಗಿರುವುದು ಅವನಿಗೆ ಕೊರತೆಯಲ್ಲವೆ?” ಎಂದನು. ಆದಕ್ಕಾ ಆಗ್ನಿಯು “ಓ ರಾಜಾ! ಅದು ಹಾಗಲ್ಲ. ಆ ಬೃಹಸ್ಪತಿಯು ನಿನ್ನಿಂದ ಯಾಗವನ್ನು ಮಾಡಿಸುವುದಾದರೆ, ಆ ಇಂದ್ರಾನುಗ್ರಹದಿಂದ ನಿನಗೆ ದೇವಲೋಕಕ್ಕೆ ಸೇರಿದಂತಿರುವ ಯಾವಯಾವ ಉತ್ತಮಲೋಕಗಳುಂಟೋ ಅವೆಲ್ಲ ಲಭಿಸುಸುವುವು. ಅದರಿಂದ ನಿನಗೆ ಇಹದಲ್ಲಿ ಕೀರ್ತಿಯುಂಟು! ಪರದಲ್ಲಿ ಸ್ವರ್ಗವನ್ನೂ ಸಾಧಿಸುವೆ. ಮತ್ತು ಹಾಗೆ ಮಾಡುವುದರಿಂದ ನಿನಗೆ ಎಲ್ಲಾ ಮನುಷ್ಯಲೋಕಗಳೂ, ಉತ್ತಮವಾದ ಬ್ರಹ್ಮಲೋಕಗಳೂ, ಎಲ್ಲಾ ದೇವರಾಜ್ಯವೂ, ಲಭಿಸುವುವು” ಎಂದನು. ಆಗ ಸಂವರ್ತನು ಅಗ್ನಿಯನ್ನು ನೋಡಿ “ಎಲೈ! ಸಾಕು ನಿಲ್ಲಿಸು! ಇನ್ನುಮೇಲೆ ಬೃಹಸ್ಪತಿಯು ಮರುತ್ತನೊಡನೆ ಸೇರಿಸತಕ್ಕ ಪ್ರಯತ್ನಕ್ಕೆ ಯಾರೂ ಕೈಯಿಕ್ಕಬಾರದು. ತಿರುಗಿ ನೀನು ಈ ಕಾರ್ಯಕ್ಕಾಗಿ ಇಲ್ಲಿಗೆ ಬರುವುದಾದರೆ, ಕ್ರೂರವಾದ ನನ್ನ ಕೋಪದೃಷ್ಟಿಯಿಂದಲೇ ನಿನ್ನನ್ನು ದಹಿಸಿ ಬಿಡುವೆನು.! ಎಚ್ಚರಿಕೆ! ಈ ವಿಚಾರವು ನಿನ್ನ ಮನಸ್ಸಿನಲ್ಲಿರಲಿ” ಎಂದನು. ಓ ಧರ್ಮರಾಜಾ! ಒಡನೆಯೇ ಅಗ್ನಿಯು ಆ ಬ್ರಾಹ್ಮಣನ ಕೋಪಕ್ಕೆ ಭಯಪಟ್ಟು, ಅವನು ತನನ್ನು ದಹಿಸಿಬಿಡುವನೆಂಬ ಭಯದಿಂದ ಗಾಳಿಗಿದಿರಾದ ಅರಳಿಯೆಲೆಯಂತೆ ನಡುಗುತ್ತ, ಅಲ್ಲಿಂದ ಹಿಂತಿರುಗಿ ಇಂದ್ರನ ಬಳಿಗೆ

ಹೋದನು. ಆಗ ದೇವೇಂದ್ರನು, ಹಿಂತಿರುಗಿ ಬಂದ ಅಗ್ನಿಯನ್ನು ನೋಡಿ, ಬೃಹಸ್ಪತಿಗಿದಿರಾಗಿಯೇ ಅವನನ್ನು ಕುರಿತು, "ಅಗ್ನೀ! ಈ ನಮ್ಮ ಗುರುವನ್ನು ಮರುತ್ತನೊಡನೆ ಸೇರಿಸುವುದಕ್ಕಾಗಿ ಹೋಗಿದ್ದೆ ಯಷ್ಟೆ? ಆದಕ್ಕೆ ಆ ರಾಜನು ಏನು ಹೇಳಿದನು? ನನ್ನ ಸಂದೇಶ ವನ್ನು ಅವನು ಅಂಗೀಕರಿಸಿದನೆ?" ಎಂದು ಕೇಳಲು, ಅಗ್ನಿಯು "ಇಲ್ಲ, ಮರುತ್ತನು ನಿನ್ನ ಮಾತಿಗೆ ಸಮ್ಮತಿಸಲಿಲ್ಲ. ಬೃಹಸ್ಪತಿಗೆ ನನ್ನ ನಮಸ್ಕಾರವಿರಲಿ" ಎಂದು ಕೈಮುಗಿದು ಕಳುಹಿಸಿಬಿಟ್ಟನು. ನಾನು ಬಾರಿ ಬಾರಿಗೂ ಅವನನ್ನು ಎಷ್ಟೋವಿಧದಲ್ಲಿ ಬೇಡಿಕೊಂಡರೂ ಕೇಳದೆ, ಸಂವರ್ತನೇ ತನಗೆ ಯಾಗ ಮಾಡಿಸುವನೆಂದು ಹೇಳಿ ಕಳುಹಿಸಿಬಿಟ್ಟನು. ಉತ್ತಮವಾದ ಮನುಷ್ಯಲೋಕಗಳಾಗಲಿ, ಬ್ರಹ್ಮಲೋಕಗಳೇ ಆಗಲಿ ತನಗೆ ಲಭಿಸುವುದಾದರೂ, ಆ ಸಂವರ್ತನಿಗೆ ತಾನು ಪ್ರತಿಜ್ಞೆಯನ್ನು ಮಾಡಿಕೊಟ್ಟಮೇಲೆ ಅದಕ್ಕೆ ತಪ್ಪಿ ನಡೆಯಲಾರೆನು. ನನಗೆ ಆ ಲೋಕ ಗಳೊಂದೂ ಬೇಡವೆಂದೂ ನಿರಾಕರಿಸಿದನು" ಎಂದನು. ಆಗ ಇಂದ್ರನು "ಓ ವಿತೀಹೋತ್ರಾ! ನೀನು ಮತ್ತೊಮ್ಮೆ ಆ ಮರುತ್ತನ ಬಳಿಗೆ ಹೋಗಿ ಸಮಾಧಾನದಿಂದ ನನ್ನ ಮಾತನ್ನು ತಿಳಿಸು. ಆಗಲೂ ಅವನೇನಾ ದರೂ ವ್ಯತರಿಕ್ತವಾದ ಮಾತನ್ನು ಆಡಿದರೆ, ನನ್ನ ವಜ್ರಾಯುಧವನ್ನೇ ಅವನಮೇಲೆ ಪ್ರಯೋಗಿಸುವೆನು" ಎಂದನು. ಅದಕ್ಕಾ ಅಗ್ನಿಯು "ದೇವೇಂದ್ರಾ! ತಿರುಗಿ ಅಲ್ಲಿಗೆ ಹೋಗಲು ನನಗೆ ಭಯವಾಗುವುದು. ಬೇಕಾದರೆ ಈಗ ನೀನು ಈ ಗಂಧರ್ವರಾಜನನ್ನು ದೂತನನ್ನಾಗಿ ಕಳು ಹಿಸು. ಬ್ರಹ್ಮಚರ್ಯವನ್ನನುಷ್ಠಿಸಿ ಮಹಾತಪಸ್ವಿಯೆನಿಸಿದ ಅವನು ಆಗಲೇ ಅತ್ಯಂತಕೋಪದಿಂದ ನನ್ನನ್ನು ನೋಡಿ, "ಬೃಹಸ್ಪತಿಯನ್ನು ಮರುತ್ತನೊಡನೆ ಸೇರಿಸುವ ಪ್ರಯತ್ನಕ್ಕಾಗಿ ನೀನು ತಿರುಗಿ ಇಲ್ಲಿಗೆ ಬರುವೆಯಾದರೆ ನನ್ನ ಕ್ರೋಧ ದೃಷ್ಟಿಯಿಂದಲೇ ನಿನ್ನನ್ನು ದಹಿಸಿಬಿ ಡುವೆನು" ಎಂದು ಹೇಳಿಬಿಟ್ಟನು. ಆದುದರಿಂದ ತಿರುಗಿ ನಾನು ಅಲ್ಲಿಗೆ ಹೋಗಲಾರೆನು" ಎಂದನು. ಅದಕ್ಕಾ ಇಂದ್ರನು! "ಓ ಅಗ್ನೀ ಇದೇ ನು ಹೀಗೆ ಹೇಳುವೆ? ಎಲ್ಲರನ್ನೂ ಸುಡಬಲ್ಲವನು ನೀನು! ನಿನ್ನನ್ನು ಬೇರೆ ಯಾವನುತಾನೇ ಸುಟ್ಟು ಭಸ್ಮಮಾಡತಕ್ಕ ಶಕ್ತಿಯುಳ್ಳವನು? ಸಮಸ್ತ

ಲೋಕವೂ ನಿನ್ನನ್ನು ಮುಟ್ಟುವುದಕ್ಕೇ ಭಯಪಡುವುದು. ಹೀಗಿರುವಾಗ ಮತ್ತೊಬ್ಬನು ನಿನ್ನನ್ನು ಸುಡುವುದೆಂದರೇನು? ನಿನ್ನ ಮಾತನ್ನೇ ನಂಬುವ ಹಾಗಿಲ್ಲ" ಎಂದನು. ಆಗ ಅಗ್ನಿಯು "ಮಹೇಂದ್ರಾ! ನೀನು ಸ್ವಶಕ್ತಿಯಿಂದ ಸಮಸ್ತಭೂಮಿಯನ್ನೂ ಸ್ವರ್ಗವನ್ನೂ ಆವರಿಸಿಕೊಂಡವನು. ನೀನು ಇಷ್ಟು ಬಲಾಢ್ಯನೆನಿಸಿರುವಾಗ ಹಿಂದೆ ವೃತ್ರನು ನಿನ್ನ ರಾಜ್ಯವನ್ನು ಕಿತ್ತುಕೊಂಡನಲ್ಲವೆ. ಅದು ಹೇಗೆಂಬುದನ್ನು ಯೋಚಿಸು. ಎಂದನು. ಆಗ ಇಂದ್ರನು "ಓ ಅಗ್ನಿ! ನಾನು ದೊಡ್ಡ ಬೆಟ್ಟವನ್ನು ಅಣುವಾಗಿ ಮಾಡಬಲ್ಲೆನು. ಹಾಗಿದ್ದರೂ ವೃತ್ರನು ನನ್ನನ್ನೇಕೆ ಆರಾಧಿಸಲಿಲ್ಲವೆಂದು ಕೇಳುವೆಯಾ! ನಾನು ಶತ್ರುಗಳು ಕೊಟ್ಟ ಸೋಮರಸವನ್ನು ಪಾನ ಮಾಡತಕ್ಕವನಲ್ಲ! ಅಲ್ಲದೆ ನಾನು ಬಲಹೀನನಾದವನಲ್ಲ ವಜ್ರಾಯುಧವನ್ನು ಪ್ರಯೋಗಿಸುವವನಲ್ಲ. ಹೀಗಿರುವಾಗ ಯಾವ ಮನುಷ್ಯನು ತಾನೇ ನನಗೆ ದುಃಖವನ್ನುಂಟುಮಾಡುವಂತೆ ಪ್ರಹರಿಸಬಲ್ಲನು. ತನ್ನ ಕ್ಷೇಮವನ್ನು ಬಯಸುವ ಯಾವನು ತಾನೇ ನನ್ನನ್ನು ವಿರೋಧಿಸಬಲ್ಲನು? ಇದಲ್ಲದೆ ನಾನು ಕಾಲಕೇಯರೆಂಬ ರಾಕ್ಷಸರನ್ನು ಭೂಮಿಯಿಂದ ಓಡಿಸಿದನು. ಆಕಾಶದಿಂದ ದೈತ್ಯರನ್ನು ಅಟ್ಟಿದೆನು. ಸ್ವರ್ಗದಿಂದ ಪ್ರಹ್ಲಾದನನ್ನು ಅಗಲಿಸಿದೆನು. ಹೀಗಿರುವಾಗ ನನ್ನನ್ನು ನೋಯಿಸಬಲ್ಲನಾವನು? " ಎಂದನು. ಅದಕ್ಕಾ ಅಗ್ನಿಯು "ಮಹೇಂದ್ರಾ! ಹಿಂದೆ ಚ್ಯವನನು ಶರ್ಯಾತಿರಾಜನಿಂದ ಯಾಗವನ್ನು ಮಾಡಿಸಿ, ನಿನ್ನನ್ನು ಲಕ್ಷ್ಯಮಾಡದೆ ಅಶ್ವಿನೀದೇವತೆಗಳೊಡನೆ ಸೇರಿ ತಾನೊಬ್ಬನೇ ಸೋಮರಸವನ್ನು ಗ್ರಹಿಸಿದನು. ಅವನಮೇಲೆ ನೀನು ಕೋಪಿಸಿಕೊಂಡು, ಅಗ ಅವನನ್ನು ನೀನು ಮಾಡಿದುದೇನು? ಅದು ನಿನ್ನ ಜ್ಞಾಪಕದಲ್ಲಿರುವುದೆ? ಓ ಪುರುಂದರಾ! ಅಗ ನೀನು ಭಯಂಕರವಾದ ನಿನ್ನ ವಜ್ರಾಯುಧವನ್ನು ಕೈಗೆತ್ತಿಕೊಂಡು ಆ ಚ್ಯವನನನ್ನು ಹೊಡೆಯುವುದಕ್ಕೆ ಹೋಗಲು ಆ ಮಹರ್ಷಿಯು ತನ್ನ ತಪೋಬಲದಿಂದ ವಜ್ರಸಹಿತವಾದ ನಿನ್ನ ತೋಳನ್ನು ಅಲ್ಲಾಡಿಸಲು ಸಾಧ್ಯವಿಲ್ಲದಂತೆ ಸ್ತಂಭಿಸಿಬಿಟ್ಟನಲ್ಲವೆ? ಅದನ್ನು ಮರೆತುಬಿಟ್ಟೆಯಾ? ಇದಲ್ಲದೆ ಆಗ ಆ ಋಷಿಯು ಕೋಪಗೊಂಡು ಘೋರರೂಪವುಳ್ಳ ವಿಶ್ವರೂಪನಾಮಕನೆಂಬ ರಾಕ್ಷಸನನ್ನು ನಿನಗೆ ಶತ್ರು

ವಾಗಿ ಸೃಷ್ಟಿಸಿದನಲ್ಲವೆ. ಆ ಭಯಂಕರರೂಪವನ್ನು ನೋಡಿದೊಡನೆ ನೀನು ಹೆದರಿ ಕಣ್ಣುಗಳನ್ನು ಮುಚ್ಚಿಕೋಡೆಯಲ್ಲವೆ? ಆ ರಾಕ್ಷಸನು ಬಾಯನ್ನು ತೆರೆದಾಗ ಅವನ ಕೆಳಗಿನ ಗಡ್ಡವು ಭೂಮಿಗೂ, ಮೇಲಿನ ಭಾಗವು ಸ್ವರ್ಗಕ್ಕೂ ವ್ಯಾಪಿಸುವಂತಿದ್ದಿತು. ಅವನಿಗೆ ನೂರು ಯೋಜನಗಳ ಉದ್ದವುಳ್ಳ ಮತ್ತು ಹರಿತವಾದ ಸಾವಿರದಂತಗಳು! ಬೆಳ್ಳಿಯ ಕಂಭ ದಂತೆ ದುಂಡಗೆ ದಪ್ಪನಾಗಿ ಇನ್ನೂರು ಯೋಜನಗಳುದ್ದಕ್ಕೆ ನೀಡಿದ ನಾಲ್ಕು ಕೋರೆಹಲ್ಲುಗಳು! ಅಂತಹ ಘೋರರೂಪವುಳ್ಳ ರಾಕ್ಷಸನು ನಿನ್ನನ್ನು ಕೊಲ್ಲುವುದಕ್ಕಾಗಿ ಭಯಂಕರವಾದ ಶೂಲವನ್ನೆತ್ತಿಕೊಂಡು, ಹಲ್ಲುಗಳನ್ನು ಕಡಿಯುತ್ತ ಮುಂದೆ ಬಂದನು. ಅವನ ಭಯಂಕರ ರೂಪವನ್ನು ನೋಡಲಾರದೆ ನೀನು ಕಣ್ಣುಗಳನ್ನು ಮುಚ್ಚಿಕೊಂಡಾಗ, ಆಹಾ! ನಿನ್ನ ಸುಂದರರೂಪವನ್ನು ಎಲ್ಲರೂ ನೋಡಿ ನಕ್ಕರಲ್ಲವೆ? ನೀನು ಅವನಿಗೆ ಹೆದರಿ, ಆಗಲೇ ಚ್ಯವನಋಷಿಯ ಕಾಲಿಗೆ ಬಿದ್ದು ಅವನ ಮರೆಹುಗಲಿಲ್ಲವೆ? ದೇವೇಂದ್ರಾ! ಬ್ರಹ್ಮತೇಜಸ್ಸಿನ ಮುಂದೆ ಕ್ಷತ್ರಿಯ ಬಲವು ಏನನ್ನು ತಾನೇ ಮಾಡಬಲ್ಲುದು? ಬ್ರಹ್ಮಬಲವೇ ಪ್ರಬಲವಾದುದು! ಅದರ ಮುಂದೆ ಯಾವುದೂ ನಿಲ್ಲಲಾರದು. ಆ ಬ್ರಹ್ಮತೇಜಸ್ಸಿನ ಶಕ್ತಿ ಯನ್ನು ನಾನು ಚೆನ್ನಾಗಿ ಬಲ್ಲೆನು. ಅದನ್ನು ತಿಳಿದುತಿಳಿದೂ ಆ ಸಂವರ್ತನ ಬಳಿಗೆ ಹೇಗೆ ಹೋಗಲಿ? ನಾನು ಹೋಗಲಾರೆನು" ಎಂದನು.

ಇದು ಒಂಭತ್ತನೆಯ ಅಧ್ಯಾಯವು.

ಇಂದ್ರನು ಗಂಧರ್ವನನ್ನು, ಕಳುಹಿಸಿದರೂ ಮರುತ್ತನು ಒಪ್ಪ ದಿರಲು ಇಂದ್ರನು ಕೋಪದಿಂದ ಯಜ್ಞವನ್ನು ಕೆಡಿಸುವು ದಕ್ಕಾಗಿ ಬಂದುದು. ಸಂವರ್ತನು ಇಂದ್ರಾದಿದೇವತೆ ಗಳನ್ನು ಸ್ತಂಭನ ಮಾಡಿದುದು. ಇಂದನು ಶರ ಣಾಗತನಾದುದು.

ಆಗ ಇಂದ್ರನು, "ಅಗ್ನೀ? ಓಹೋ! ಹಾಗೆಯೋ? ಬ್ರಾಹ್ಮಣ ಬಲವೇ ಬಲವಾದುದೋ? ಬಾಹ್ಮಣ ಬಲಕ್ಕಿಂತ ಬೇರೆ ಯಾವುದೂ

ಮೇಲಲ್ಲವೆಂದು ಹೇಳುವೆಯಷ್ಟೆ? ಹಾಗೂ ಇರಲಿ! ಮರುತ್ತನ ಈ ಹೆಮ್ಮೆಯನ್ನುಮಾತ್ರ ನಾನು ಸಹಿಸಲಾರೆನು. ಭಯಂಕರವಾದ ನನ್ನ ವಜ್ರಾಯುಧವನ್ನು ಅವನಮೇಲೆ ಪ್ರಯೋಗಿಸುವೆನು" ಎಂದು ಹೇಳಿ, ಸಮೀಪದಲ್ಲಿದ್ದ ಗಂಧರ್ವನನ್ನು ಕರೆದು, 'ಧೃತರಾಷ್ಟ್ರ! ಈಗಲೇ ನೀನು ಮರುತ್ತನ ಯಾಗಶಾಲೆಗೆ ಹೋಗಿ, ಅವನು ಸಂವರ್ತನೊಡನೆ ಇರುವಾಗಲೇ ನನ್ನ ಮಾತಿನಿಂದ ಹೀಗೆಂದು ತಿಳಿಸಬೇಕು. "ಓ ರಾಜಾ! ಯಜ್ಞಕ್ಕಾಗಿ ನೀನು ಬೃಹಸ್ಪತಿಯನ್ನು ವರಿಸುವೆಯಾ? ಇಲ್ಲವೇ ಭಯಂಕರವಾದ ವಜ್ರಾಯುಧದಿಂದ ನಾನು ನಿನ್ನನ್ನು ಸಂಹರಿಸಲೆ?" ಎಂದು, ಕೇಳಿಬಾ' ಎಂದನು. ಓ ಧರ್ಮರಾಜಾ! ಇಂದ್ರಾಜ್ಞೆಯಂತೆ ಧೃತರಾಷ್ಟ್ರನು ಮರುತ್ತನಬಳಿಗೆ ಬಂದು "ಓ ರಾಜೇಂದ್ರಾ! ನಾನು ಇಂದ್ರನ ಕಡೆಯಿಂದ ಬಂದ ಧೃತರಾಷ್ಟ್ರನೆಂಬ ಗಂಧರ್ವನು. ಮಹಾತ್ಮನೂ, ಲೋಕೇಶ್ವರನೂ ಆದ ಆ ದೇವೇಂದ್ರನ ಸಂದೇಶವನ್ನು ಕೇಳು. "ಬೃಹಸ್ಪತಿಯನ್ನು ನೀನು ಪುರೋಹಿತನನ್ನಾಗಿ ವರಿಸಲೇಬೇಕು ನನ್ನ ಮಾತಿನಂತೆ ನಡೆಸದಿದ್ದರೆ, ವಜ್ರಾಯುಧದಿಂದ ನಿನ್ನನ್ನು ಹೊಡೆಯುವೆನು' ಎಂದು ಹೇಳಿಕಳುಹಿಸಿರುವನು" ಎಂದನು. ಅದಕ್ಕಾ ಮರುತ್ತನು "ಓ ಗಂಧರ್ವರಾಜಾ! ನೀನು ಧರ್ಮವನ್ನು ಬಲ್ಲವನು. ವಿಶ್ವೇದೇವತೆಗಳೂ, ಅಷ್ಟವಸುಗಳೂ, ಅಶ್ವಿನೀದೇವತೆಗಳೂ ಅದನ್ನು ಚೆನ್ನಾಗಿ ತಿಳಿದಿರುವರು. ಮಿತ್ರದ್ರೋಹವೆಂಬುದು ಬ್ರಹ್ಮಹತ್ಯೆಗೆ ಸಮಾನವಾದ ಮಹಾಪಾತಕವೆಂಬುದನ್ನೂ, ಅದಕ್ಕೆ ಪರಿಹಾರಮಾರ್ಗವೇ ಇಲ್ಲವೆಂಬುದನ್ನೂ ನೀವೆಲ್ಲರೂ ಬಲ್ಲಿರಷ್ಟೆ? ಬೃಹಸ್ಪತಿಯು ದೇವಶ್ರೇಷ್ಠನಾದ ಆ ಮಹೇಂದ್ರನಿಗೇ ಪುರೋಹಿತನಾಗಿರಲಿ! ಈಗ ಈ ಸಂವರ್ತನೇ ನನ್ನಿಂದ ಯಾಗವನ್ನು ಮಾಡಿಸುವನು. ಈ ವಿಷಯದಲ್ಲಿ ನೀನಾಗಲಿ, ಇಂದ್ರನಾಗಲಿ ಹೇಳಿದಂತೆ ನಾನು ನಡೆಯಲಾರೆನು" ಎಂದನು. ಆಗ ಆ ಗಂಧರ್ವರಾಜನು "ರಾಜಾ! ಬೇಡ! ಬೇಡ! ಈ ಹಟವನ್ನು ಬಿಟ್ಟುಬಿಡು. ಈಗಾಗಲೇ ಕೋಪದಿಂದ ಗರ್ಜಿಸುತ್ತಿರುವ ದೇವೇಂದ್ರನ ಆರ್ಭಟವು ಆಕಾಶದಲ್ಲಿ ಕೇಳುತ್ತಿರುವುದನ್ನು ಗಮನಿಸಲಿಲ್ಲವೇನು? ದೇವೇಂದ್ರನು ನಿನ್ನಮೇಲೆ ವಜ್ರವನ್ನು ಬೀಸಿಬಿಡುವನು. ನಿನ್ನ

ಕ್ಷೇಮಕ್ಕೆ ದಾರಿಯನ್ನು ನೋಡು. ಕಾಲವು ಮೀರಿಹೋದರೆ ಕೆಲಸವು ಕೆಡುವುದು'' ಎಂದನು. ಆಗ ಮರುತ್ತನು ಅಂತರಿಕ್ಷದಲ್ಲಿ ಕೋಪದಿಂದ ಗರ್ಜಿಸುತ್ತಿರುವ ಇಂದ್ರನ ಕೂಗಾಟವನ್ನು ಕೇಳುತ್ತ, ತಪೋನಿಧಿಯೂ, ಧರ್ಮಜ್ಞನೂ ಆದ ಸಂವರ್ತನ ಬಳಿಗೆ ಬಂದು ''ಓ ಮುನೀಂದ್ರಾ! ಸಂಕಟದಲ್ಲಿ ಮುಳುಗುತ್ತಿರುವ ನನ್ನ ಸ್ಥಿತಿಯನ್ನು ನೋಡು. ಇಂದ್ರನು ನನ್ನಮೇಲೆ ಕೋಪಾವಿಷ್ಟನಾಗಿರುವನು. ಬಹುದೂರಮಾರ್ಗದಲ್ಲಿರುವುದರಿಂದ ಈಗ ನಮ್ಮ ಕಣ್ಣಿಗೆ ಕಾಣುವುದಿಲ್ಲ. ಈಗ ನೀನೇ ನನ್ನ ಕ್ಷೇಮಕ್ಕೆ ಮಾರ್ಗವನ್ನು ಚಿಂತಿಸಬೇಕು. ನಿನ್ನನ್ನು ಮರೆಹೊಕ್ಕಿರುವೆನು. ನನಗೆ ಅಭಯವನ್ನು ಕೊಡು. ಅದೋ! ಇಂದ್ರನು ವಜ್ರಧಾರಿಯಾಗಿ ಅಮಾನುಷವಾದ ಘೋರಶಬ್ದದೊಡನೆ ದಿಕ್ಕುಗಳನ್ನು ಮೊಳಗಿಸುತ್ತ ನಮ್ಮಕಡೆಗೆ ಬರುತ್ತಿರುವನು ನೋಡು. ಅವನು ನಮ್ಮನ್ನು ಹೆದರಿಸುವನು'' ಎಂದನು. ಆಗ ಸಂವರ್ತನು ''ರಾಜೇಂದ್ರಾ! ಹೆದರಬೇಡ! ನಿನಗೆ ಇಂದ್ರನಿಂದಾದ ಭಯವನ್ನು ನಾನು ನೀಗಿಸುವೆನು. ಈಗಲೇ ಶತ್ರುಗಳನ್ನು ಸ್ತಂಭನಮಾಡತಕ್ಕ ನನ್ನ ವಿದ್ಯಾಬಲದಿಂದ ಆ ದೇವೇಂದ್ರನನ್ನು ಅಲ್ಲಾಡದಂತೆ ಮಾಡಿ, ಅವನಿಂದ ನಿನಗೆ ಏನೂ ಅಪಾಯವಿಲ್ಲದಂತೆ ರಕ್ಷಿಸುವೆನು. ಹೆದರಬೇಡ! ಅವನು ನಿನ್ನನ್ನು ಹೊಡೆಯಲಾರನು. ಇಂದ್ರನೊಡನೆ ಬರುವ ಎಲ್ಲಾ ದೇವತೆಗಳ ಆಯುಧಗಳನ್ನೂ ನಾನು ವಿಫಲಮಾಡುವೆನು. ರಾಜೇಂದ್ರಾ! ಆ ಇಂದ್ರನ ವಜ್ರಾಯುಧವು ದಿಕ್ಕುಗಳನ್ನೆಲ್ಲ ವ್ಯಾಪಿಸಲಿ! ಬಿರುಗಾಳಿಯಾಗಿ ಬೀಸಲಿ! ಮಳೆಯಾಗಿ ಅರಣ್ಯಗಳಲ್ಲಿ ವರ್ಷಿಸಲಿ! ಆಕಾಶದಲ್ಲಿ ಜಲಪ್ರವಾಹಗಳು ಹರಿಯಲಿ! ಮಿಂಚುಗಳು ಮಿಂಚಲಿ! ಅವೆಲ್ಲವನ್ನೂ ವ್ಯರ್ಥಮಾಡುವೆನು. ಅದೋ ಮಿಂಚು ಕಾಣಿಸುತ್ತಿರುವುದು ನೋಡು. ಆದರೂ ನೀನು ಹೆದರಬೇಡ. ಅಗ್ನಿದೇವನು ನಿನ್ನನ್ನು ಸರ್ವವಿಧದಿಂದಲೂ ರಕ್ಷಿಸಲಿ! ಆ ದೇವೇಂದ್ರನೇ ನಿನಗೆ ಸಮಸ್ತಕಾಮಗಳನ್ನೂ ಈಡೇರಿಸಲಿ! ಹಾಗೆಯೇ ಜಲಪ್ರವಾಹಗಳೊಡನೆ ನಿನ್ನನ್ನು ಮುಳುಗಿಸುವುದಕ್ಕಾಗಿ ಬರುವ ಭಯಂಕರವಾದ ವಜ್ರವು ಹಿಂಜರಿಯಲಿ,'' ಎಂದನು. ಆಗ ಮರುತ್ತನು ''ಓ ಮಹಾತ್ಮಾ! ಅದೋ! ವಜ್ರಾಯುಧದ ಭಯಂಕರ

ಶಬ್ದವು ದೊಡ್ಡ ಬಿರುಗಾಳಿಯ ಘೋಷದೊಡನೆ ನನ್ನ ಕಿವಿಗೆ ಬೀಳು ತ್ತಿರುವುದು! ನನ್ನ ಮನಸ್ಸು ಮೇಲೆಮೇಲೆ ಭಯದಿಂದ ತತ್ತಳಿಸು ತ್ತಿದೆ. ಈಗ ನನ್ನ ಮನಸ್ಸಿಗೆ ಯಾವ ವಿಧದಿಂದಲೂ ನೆಮ್ಮದಿಯಿಲ್ಲ ದಂತಿದೆ! ಏನು ಮಾಡಲಿ?'' ಎಂದನು. ಅದಕ್ಕಾ ಸಂವರ್ತನು, ''ಓ ರಾಜಾ? ಆ ವಜ್ರದ ಭಯವು ನಿನಗೆ ನೀಗಲಿ! ಆ ವಜ್ರವು ನಿನ್ನನ್ನು ಮುಟ್ಟದಂತೆ ಗಾಳಿಯಾಗಿ ಹಾರಿಸಿಬಿಡುವೆನು! ನೀನು ಹೆದರಬೇಡ! ಇದು ಹೊರತು ನಿನಗೆ ಬೇರೆ ವರವೇನಾದರೂ ಬೇಕಾಗಿದ್ದರೆ ಕೇಳು. ಅದನ್ನೂ ಕೊಡುವೆನು'' ಎಂದನು. ಅದಕ್ಕಾ ಮರುತ್ತನು ''ಮುನೀಂದ್ರಾ! ಇಂದ್ರನು ಈ ಆಗ್ರಹವನ್ನು ಬಿಟ್ಟು ಸಾಕ್ಷಾತ್ತಾಗಿ ನಮ್ಮ ಯಜ್ಞಶಾಲೆಗೆ ಬಂದು ಹವಿಸ್ಸನ್ನು ಗ್ರಹಿಸಬೇಕು. ಅದರಂತೆ ಇತರದೇವತೆಗಳೂ ಪ್ರತ್ಯಕ್ಷವಾಗಿ ಬಂದು ನಮ್ಮ ಯಜ್ಞದಲ್ಲಿ ತಮ್ಮತಮ್ಮ ಹವಿರ್ಭಾಗಗಳನ್ನೂ, ಹುತವಾ ಡಿದ ಸೋಮವನ್ನೂ ಗ್ರಹಿಸಬೇಕು'' ಎಂದನು. ಅದಕ್ಕಾ ಸಂವರ್ತನು ರಾಜಾ! ಹಾಗೆಯೇ ಆಗಲಿ! ಈಗಲೇ ಇಂದ್ರನು ತನ್ನ ಹಸುರು ಕುದುರೆಗಳಿಂದ ಕೂಡಿದ ರಥದಲ್ಲಿ ಎಲ್ಲಾ ದೇವತೆಗಳೊಡಗೂಡಿ ಈ ಯಜ್ಞಕ್ಕೆ ಬರುವಂತೆ ಮಾಡುವೆನು. ನನ್ನ ಮಂತ್ರದಿಂದ ಅವನನ್ನು ಬಲಾತ್ಕಾರದಿಂದ ಇಲ್ಲಿಗೆ ಸೆಳೆಯುವೆನು ನೋಡು. ನನ್ನ ಮಂತ್ರಬಲ ದಿಂದ ಅವನಿಗೆ ಶರೀರವೇ ಸ್ವಾಧೀನವಿಲ್ಲದಂತೆ ಇಲ್ಲಿಗೆ ಸೆಳೆಯಲ್ಪಡುವು ದನ್ನಾದರೂ ನೋಡುತ್ತಿರು'' ಎಂದನು.

''ಓ ಧರ್ಮರಾಜಾ! ಇಷ್ಟರಲ್ಲಿಯೇ ದೇವೇಂದ್ರನು ಉತ್ತಮಾಶ್ವ ಗಳಿಂದ ಹೂಡಿದ ರಥದಲ್ಲಿ ಕುಳಿತು, ಇತರದೇವತೆಗಳೊಡನೆ ಆ ಮರು ತ್ತನ ಯಾಗದಲ್ಲಿ ಸೋಮರಸವನ್ನು ಪಾನಮಾಡುವುದಕ್ಕಾಗಿ ಯಜ್ಞ ವಾಟಕ್ಕೆ ತಾನಾಗಿ ಬಂದನು. ದೇವತೆಗಳೊಡನೆ ಬರುತ್ತಿರುವ ಇಂದ್ರ ನನ್ನು ನೋಡಿದಕೂಡಲೆ ಮರುತ್ತನು ತನ್ನ ಪುರೋಹಿತನಾದ ಸಂವ ರ್ತನೊಡನೆ ಮೇಲೆದ್ದು, ಶಾಸ್ತ್ರೋಕ್ತವಾಗಿ ಅವನನ್ನು ಪೂಜಿಸಿ ಸತ್ಕ ರಿಸಿದನು. ಆಗ ಸಂವರ್ತನು ''ಓ ಮಹೇಂದ್ರಾ! ನಿನಗೆ ಸುಖಾ ಗಮನವು. ನೀನು ಪ್ರತ್ಯಕ್ಷವಾಗಿ ಇಲ್ಲಿಗೆ ಬಂದುದರಿಂದ ನನ್ನ ಯ

ಜ್ಞಕ್ಕೆ ಅತಿಶಯವಾದ ಶೋಭೆಯುಂಟಾಯಿತು. ಇದೋ! ನನ್ನ ಯಜ್ಞದಲ್ಲಿ ನೀನು ಯಥೇಚ್ಛವಾಗಿ ನಾನು ಹಿಂಡಿಕೊಟ್ಟ ಸೋಮರಸವನ್ನು ಪಾನಮಾಡಬೇಕು" ಎಂದನು. ಆಗ ಮರುತ್ತರಾಜನೂ ಕೂಡ ಇಂದ್ರನನ್ನು ನೋಡಿ "ಮಹೇಂದ್ರಾ! ನನ್ನನ್ನು ಪ್ರೇಮದೃಷ್ಟಿಯಿಂದ ನೋಡು! ನಿನಗೆ ನನ್ನ ವಂದನವಿರಲಿ! ಈಗ ನನ್ನ ಯಜ್ಞವು ಸಾರ್ಥಕವಾಯಿತು. ನನ್ನ ಜೀವಿತವೂ ಸಫಲವಾಯಿತು. ಬೃಹಸ್ಪತಿಗೆ ತಮ್ಮನಾದ ಈ ಸಂವರ್ತನೇ ನನಗೆ ಯಜ್ಞವನ್ನು ಮಾಡಿಸುವನು" ಎಂದನು. ಅದಕ್ಕಾ ಇಂದ್ರನು "ನಿನ್ನ ಗುರುವಾದ ಈತನು ಮಹಾತಪೋನಿಧಿಯೆಂಬುದನ್ನೂ, ಬೃಹಸ್ಪತಿಯ ತಮ್ಮನೆಂಬುದನ್ನೂ ನಾನು ಬಲ್ಲೆನು. ಅವನು ಮಂತ್ರದಿಂದ ನನ್ನನ್ನು ಸೆದಳೆದುದರಿಂದಲೇ ನಾನು ಇಲ್ಲಿಗೆ ಬಂದೆನು. ಈಗ ನನಗೆ ನಿನ್ನಲ್ಲಿ ವಿಶೇಷಪ್ರೀತಿಯುಂಟಾಯಿತು. ನನ್ನ ಕೋಪವು ಹೋಯಿತು!" ಎಂದನು. ಆಗ ಸಂವರ್ತನು ದೇವರಾಜಾ! ನೀನು ಇವನಲ್ಲಿ ಪ್ರೀತಿಯುಳ್ಳವನಾಗಿದ್ದರೆ, ನೀನೇ ಮುಂದಾಗಿ ನಿಂತು ಈ ಯಜ್ಞಕಾರ್ಯಗಳನ್ನೆಲ್ಲಾ ನಡೆಸಬೇಕು. ನೀನೇ ಆಯಾ ದೇವತೆಗಳಿಗೆ ಸಲ್ಲಬೇಕಾದ ಸಮಸ್ತಭಾಗಗಳನ್ನೂ ಹಂಚಿಕೊಡು. ಇದರಿಂದ ಲೋಕಕ್ಕೆಲ್ಲಾ ಈತನ ಹೆಸರು ಚೆನ್ನಾಗಿ ತಿಳಿಯಲಿ" ಎಂದನು.

ಓ ಧರ್ಮರಾಜಾ! ಒಡನೆಯೇ ದೇವೇಂದ್ರನು ಆ ಯಜ್ಞಕಾರ್ಯಗಳನ್ನು ನಡೆಸುವುದಕ್ಕಾಗಿ ತಾನೇ ಮುಂದಾಗಿ ನಿಂತನು. ದೇವತೆಗಳನ್ನು ಕರೆದು "ಈಗಲೇ ಸಭೆಗಳನ್ನು ನಿರ್ಮಿಸಿರಿ. ಉತ್ತಮವಾದ ಸ್ಥಳಗಳನ್ನು ಸಾವಿರಾರು ಸಂಖ್ಯೆಯಿಂದ ಅಲ್ಲಲ್ಲಿ ಏರ್ಪಡಿಸಿರಿ. ಅವೆಲ್ಲವೂ ಐಶ್ವರ್ಯಸಮೃದ್ಧಿಯುಳ್ಳವುಗಳಾಗಿ, ಗಂಧರ್ವರಿಗೂ, ಅಪ್ಸರಸ್ಸುಗಳಿಗೂ ಆಶ್ಚರ್ಯಕರಗಳಾಗಿರಬೇಕು. ಈಗಲೇ ಸ್ತಂಭಗಳನ್ನು ನಿಲ್ಲಿಸಿರಿ! ಸೋಪಾನಗಳನ್ನು ಕಟ್ಟಿರಿ! ಎಲ್ಲಾ ಅಪ್ಸರಸ್ಸುಗಳೂ ಆ ಸಭೆಯಲ್ಲಿ ನರ್ತನವನ್ನು ಮಾಡಬೇಕು. ಯಾಗಶಾಲೆಯು ನಮ್ಮ ಸ್ವರ್ಗಕ್ಕೆ ಸಮಾನವಾಗಿರಬೇಕು" ಎಂದನು. ಒಡನೆಯೇ ಇಂದ್ರಾಜ್ಞೆಯಿಂದ ದೇವತೆಗಳು ಎಲ್ಲವನ್ನೂ ಸಿದ್ಧಗೊಳಿಸಿದರು. ಆಗ ಇಂದ್ರನು ಸಂತೋ

ಷದಿಂದ ಮರುತ್ತರಾಜನನ್ನು ನೋಡಿ, "ರಾಜೇಂದ್ರಾ! ಈಗ ನನ್ನ ಸಮಸ್ತ ದೇವತೆಗಳೊಡನೆ ನಾನೂ, ನಿನ್ನ ಪೂರ್ವ ಪಿತೃಗಳೂ, ನಿನ್ನ ಯಾಗಕ್ಕಾಗಿ ಸಂತೋಷಗೊಂಡೆವು. ಎಲ್ಲರೂ ನಿನ್ನಿಂದ ಯಜ್ಞದಲ್ಲಿ ಹವಿರ್ಭಾಗಗಳನ್ನು ಗ್ರಹಿಸಲಿ! ಬ್ರಾಹ್ಮಣರು ಈ ಯಜ್ಞದಲ್ಲಿ ಅಗ್ನಿದೇವತಾ ತೃಪ್ತಿಕರವಾದ ಕೆಂಪು ಹೋರಿಯನ್ನೂ, ವಿಶ್ವೇದೇವತೆಗಳಿಗೆ ಪ್ರೀತಿಕರವಾದ ಚಿತ್ರವರ್ಣದ ಹೋರಿಯನ್ನೂ, ಯಾಗಕ್ಕೆ ಉತ್ತಮವೆನಿಸಿದ ನೀಲವರ್ಣವುಳ್ಳ ಮತ್ತು ತೂಗಾಡುತ್ತಿರುವ ಲಿಂಗ (ಶಿಶ್ನ) ವುಳ್ಳ ಹೋರಿಯನ್ನೂ ಆಲಂಭನ (ವಧ) ಮಾಡಲಿ" ಎಂದನು.

ಓ ಧರ್ಮರಾಜಾ! ಆಮೇಲೆ ಮರುತ್ತನ ಯಾಗವು ಮುಂದು ವರಿಯಿತು. ಅದರಲ್ಲಿ ದೇವತೆಗಳು ಸಾಕ್ಷಾತ್ತಾಗಿ ತಾವೇ ಬಂದು ಹವಿಸ್ಸನ್ನು ಗ್ರಹಿಸಿದರು. ಅದರಲ್ಲಿ ಹಸುರುಕುದುರೆಗಳುಳ್ಳವನೂ, ದೇವರಾಜನೂ ಆದ ಇಂದ್ರನು ಬ್ರಾಹ್ಮಣರಿಂದ ಪೂಜಿಸಲ್ಪಡುತ್ತ ಸದಸ್ಯ ನಾಗಿದ್ದನು. ಆಗ ಮಹಾತ್ಮನಾದ ಮರುತ್ತರಾಜನು, ಯಜ್ಞಶಾಲೆ ಯಲ್ಲಿ ಬೇರೊಂದು ಯಾಗಾಗ್ನಿಯಂತೆ ತೇಜಸ್ಸಿನಿಂದ ಜ್ವಲಿಸುತ್ತ, ಉಚ್ಚಧ್ವನಿಯಿಂದ ಮಂತ್ರೋಚ್ಚಾರಣ ಪೂರ್ವಕವಾಗಿ ದೇವಗಣಗಳನ್ನು ಆಹ್ವಾನಮಾಡಿ, ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡುತ್ತಿದ್ದನು. ಇಂದ್ರನೂ, ಸೋಮಪಾನಮಾಡತಕ್ಕ ಇತರ ದೇವತೆಗಳೂ, ಆ ಯಜ್ಞ ದಲ್ಲಿ ಉತ್ತಮವಾದ ಸೋಮವನ್ನು ಪಾನಮಾಡಿದಮೇಲೆ, ಅದರಿಂದ ಯಥೇಷ್ಟವಾಗಿ ತೃಪ್ತಿಹೊಂದಿ, ಮರುತ್ತನ ಅನುಜ್ಞೆಯನ್ನು ಪಡೆದು ಹಿಂತಿರುಗಿದರು.

ಆಮೇಲೆ ಮರುತ್ತರಾಜನು ಅಲ್ಲಲ್ಲಿ ಮೇಲೆಮೇಲೆ ಸುವರ್ಣ ಗಳನ್ನು ರಾಶಿಹಾಕಿಸುತ್ತ, ಬ್ರಾಹ್ಮಣರಿಗೆ ಸಮೃದ್ಧಿಯಾದ ದಾನವನ್ನು ಕೊಟ್ಟು, ಧನಪತಿಯಾದ ಕುಬೇರನಿಗೆ ಸಾಟಿಯಾಗಿ ತೋರುತ್ತಿದ್ದನು. ಹೀಗೆ ಕೊಟ್ಟಮೇಲೆಯೂ, ಮರುತ್ತರಾಜನು ನಾನಾವಿಧ ಸುವರ್ಣ ರಾಶಿಗಳಿಂದ ತುಂಬಿದ ದೊಡ್ಡ ಭಂಡಾರವನ್ನು ಅಲ್ಲಿಯೇ ಬಿಟ್ಟು,

ಗುರುವಿನ ಅನುಮತಿಯನ್ನು ಪಡೆದು, ಅಲ್ಲಿಂದ ಹಿಂತಿರುಗಿ ತನ್ನ ನಗರಕ್ಕೆ ಬಂದು, ಸಮುದ್ರಾವೃತವಾದ ಸಮಸ್ತ ಭೂಮಿಯನ್ನೂ ಪಾಲಿಸುತ್ತಿದ್ದನು. ಓ ಧರ್ಮರಾಜಾ! ಮರುತ್ತರಾಜನ ಮಹಿಮೆಯು ಆ ವಿಧವಾದುದು. ಅವನ ಯಾಗದಲ್ಲಿ ಅಪರಿಮಿತವಾದ ಸುವರ್ಣವು ಸಂಗ್ರಹಿಸಲ್ಪಟ್ಟಿದ್ದಿತು. ಅದರಲ್ಲಿ ಮಿಕ್ಕ ಧನರಾಶಿಯು ಈಗಲೂ ಅಲ್ಲಿಯೇ ಉಳಿದಿದೆ. ನೀನು ಅವನ್ನೆಲ್ಲ ತಂದು ಸುವರ್ಣಮಯ ಸಾಮಗ್ರಿಗಳಿಂದಲೇ ಯಾಗವನ್ನು ನಡೆಸಿ ದೇವತೆಗಳನ್ನು ತೃಪ್ತಿಗೊಳಿಸು" ಎಂದನು. ಆಮೇಲೆ ಧರ್ಮರಾಜನು ವ್ಯಾಸಮುನಿಯ ಈ ವಾಕ್ಯವನ್ನು ಕೇಳಿ, ಅದೇ ರೀತಿಯಾಗಿ ಆ ಧನರಾಶಿಯನ್ನು ತಂದು ಯಜ್ಞವನ್ನು ನಡೆಸುವುದಾಗಿ ಉದ್ದೇಶಿಸಿದನು. ಇದಕ್ಕಾಗಿ ಮಂತ್ರಿಗಳೊಡನೆ ಕಲೆತು ಬಾರಿಬಾರಿಗೂ ಕಾರ್ಯಾಲೋಚನೆ ಮಾಡಿದನು.

ಇದು ಹತ್ತನೆಯ ಅಧ್ಯಾಯವು.

---

{ಕೃಷ್ಣನು ಧರ್ಮರಾಜನಿಗೆ ಇಂದ್ರ ವೃತ್ರಾಸುರರ ಯುದ್ಧದ ವಿಚಾರವನ್ನು ತಿಳಿಸಿದು.}

ಆಮೇಲೆ ಮಹಾತೇಜಸ್ವಿಯೂ ವೃಷ್ಣಿಕುಲಶ್ರೇಷ್ಠನೂ ಆದ ಕೃಷ್ಣನು, ಬಂಧುಮರಣವ್ಯಸನದಿಂದ ರಾಹುಗ್ರಸ್ತನಾದ ಸೂರ್ಯನಂತೆಯೂ, ಹೊಗೆಯಾಡುವ ಅಗ್ನಿಯಂತೆಯೂ ಕಳೆಗುಂದಿದ್ದ ಧರ್ಮರಾಜನನ್ನು ಸಮಾಧಾನಪಡಿಸುತ್ತ ಹೀಗೆಂದು ಹೇಳುವನು. "ರಾಜಾ! ಲೋಕದಲ್ಲಿ ಕಾಮ ಕ್ರೋಧ ಮೋಹಾದಿಗಳೆಂಬ ಕುಟಿಲ ಮಾರ್ಗವೆಲ್ಲ ಮೃತ್ಯುರೂಪವಾದ ಸಂಸಾರವನ್ನುಂಟುಮಾಡತಕ್ಕುವು. ಅಕುಟಿಲವಾದ ಶಮದಮಾದಿಗಳೆಲ್ಲವೂ ಶಾಶ್ವತವಾದ ಮೋಕ್ಷವನ್ನು ತರತಕ್ಕುವು. ಮುಖ್ಯವಾಗಿ ನೀನು ತಿಳಿಯತಕ್ಕ ವಿಚಾರವು ಇದೊಂದೇ. ಸುಮ್ಮನೆ ವಿಲಪಿಸುವುದರಿಂದ ನಿನಗೆ ಆಗುವುದೇನು? ಇನ್ನೂ ನೀನು ಮಾಡಬೇಕಾದ ಕಾರ್ಯವನ್ನು ಮಾಡಿಲ್ಲ. ಇನ್ನೂ ನೀನು ನಿನ್ನ ಶತ್ರುಗಳನ್ನು ಜಯಿಸಿಲ್ಲ. ನಿನ್ನ ದೇಹದಲ್ಲಿರುವ ಶತ್ರುಗಳನ್ನೇ

ನೀನಿನ್ನೂ ತಿಳಿದುಕೊಳ್ಳಲಿಲ್ಲ? ಇದೇ ವಿಷಯದಲ್ಲಿ ಇಂದ್ರನಿಗೂ ವೃತ್ರನಿಗೂ ನಡೆದ ಯುದ್ಧವೃತ್ತಾಂತವನ್ನು ಯಥಾವತ್ತಾಗಿ ತಿಳಿಸುವೆನು ಕೇಳು! ಓ ರಾಜಾ! ಹಿಂದೆ ವೃತ್ರಾಸುರನು ಭೂಮಿಯೆಲ್ಲವನ್ನೂ ಆಕ್ರಮಿಸಿಕೊಂಡನು. ಇದರಿಂದ ಅದರಲ್ಲಿರುವ ಗಂಧವು ಅಪಹರಿಸಲ್ಪಟ್ಟು ಸುಗಂಧಶೂನ್ಯವಾಯಿತು. ಹೀಗೆ ಗಂಧವು ಅಪಹರಿಸಲ್ಪಟ್ಟುದನ್ನು ಕಂಡು ಇಂದ್ರನು ವೃತ್ರನಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು. ಮಹಾತೇಜಸ್ಸುಳ್ಳ ಆ ವಜ್ರಾಯುಧದ ಪೆಟ್ಟನ್ನು ತಪ್ಪಿಸಿಕೊಳ್ಳಲು, ವೃತ್ರಾಸುರನು ನೀರಿನಲ್ಲಿ ಪ್ರವೇಶಿಸಿ ಅದರ ಸಾರವನ್ನು (ರಸವನ್ನು) ಸೆಳೆದುಬಿಟ್ಟನು. ಹೀಗೆ ಜಲದಲ್ಲಿರುವ ರಸವನ್ನು ಗ್ರಹಿಸುವುದನ್ನು ಕಂಡು, ಇಂದ್ರನು ಮಹಾಕೋಪದಿಂದ ಅಲ್ಲಿಗೂ ವಜ್ರಾಯುಧವನ್ನು ಪ್ರಯೋಗಿಸಿದನು. ಒಡನೆಯೇ ವೃತ್ರನು ಜ್ಯೋತಿಯಲ್ಲಿ ಪ್ರವೇಶಿಸಿ, ಅದರಲ್ಲಿರುವ ರೂಪವೆಂಬ ವಿಷಯವನ್ನು ಅಪಹರಿಸುತ್ತಿರಲು, ಇಂದ್ರನು ಅತಿಕೋಪದಿಂದ ಅಲ್ಲಿಗೂ ವಜ್ರಾಯುಧವನ್ನು ಪ್ರಯೋಗಿಸಿದನು. ಅದನ್ನು ನೋಡಿದೊಡನೆಯೇ ವೃತ್ರನು ವಾಯುವಿನಲ್ಲಿ ಪ್ರವೇಶಿಸಿ ಅದರಲ್ಲಿರುವ ಸ್ಪರ್ಶವೆಂಬ ವಿಷಯವನ್ನು ಅಪಹರಿಸುತ್ತಿರಲು, ಇಂದ್ರನು ಅಲ್ಲಿಗೂ ವಜ್ರಾಯುಧವನ್ನು ಪ್ರಯೋಗಿಸಿದನು. ಆಗ ವೃತ್ರನು ಆಕಾಶದ ಕಡೆಗೆ ಹೊರಟನು. ಆಕಾಶದಲ್ಲಿ ಶಬ್ದವೆಂಬ ವಿಷಯವನ್ನು ಅಪಹರಿಸುತ್ತಿರುವುದನ್ನು ಕಂಡು, ಇಂದ್ರನು ಆ ಸ್ಥಳಕ್ಕೂ ವಜ್ರಾಯುಧವನ್ನು ಪ್ರಯೋಗಿಸಿದನು. ಆಮೇಲೆ ಮಹಾತೇಜಸ್ಸುಳ್ಳ ಆ ವಜ್ರಾಯುಧದಿಂದ ಹೊಡೆಯಲ್ಪಡುತ್ತಿರುವ ವೃತ್ರನು, ಇಂದ್ರನಲ್ಲಿಯೇ ಪ್ರವೇಶಿಸಿ, ಅವನಿಂದ ಬುದ್ಧಿಯೆಂಬ ವಿಷಯವನ್ನು ಗ್ರಹಿಸುವುದಕ್ಕಾಗಿ ಆರಂಭಿಸಿದನು. ಇದರಿಂದ ಇಂದ್ರನಿಗೆ ಬುದ್ಧಿಭ್ರಮವುಂಟಾಯಿತು. ಆಗ ವಸಿಷ್ಠನು 'ರಥಂತರ' ವೆಂಬ ಸಾಮದಿಂದ ಆತನಿಗೆ ಪ್ರಜ್ಞೆ ಬರುವಂತೆ ಮಾಡಿದನು. ರಾಜೋತ್ತಮಾ! ಆಗ ಇಂದ್ರನು, ತನ್ನ ಶರೀರದಲ್ಲಿಯೇ ಅಡಗಿದ್ದ ವೃತ್ರನನ್ನು ಇತರರಿಗೆ ಗೋಚರವಾಗದಂತೆ ಕೊಂದನೆಂದು ಕೇಳಿರುವೆನು. ಧರ್ಮಸಾಧಕವಾದ ರಹಸ್ಯವಾದ ಈ

*ಚರಿತ್ರೆಯನ್ನು ಇಂದ್ರನೇ ಮಹರ್ಷಿಗಳಿಗೆ ತಿಳಿಸಿದನು ನಾನೂ ಅದನ್ನು ಋಷಿಗಳಿಂದ ಕೇಳಿದ್ದಂತೆ ಈಗ ನಿನಗೆ ತಿಳಿಸಿರುವೆನು" ಎಂದನು.

ಇದು ಹನ್ನೊಂದನೆಯ ಅಧ್ಯಾಯವು.

*[ ಇಲ್ಲಿ ಇಂದ್ರವೃತ್ರರೆಂದರೆ ಆತ್ಮ ಮತ್ತು ಅಹಂಕಾರವೆಂದು ಅಂತರಾರ್ಥವು. ಅಹಂಕಾರವು ಮೊದಲು ಸ್ಥೂಲಶರೀರವನ್ನೇ ಆತ್ಮವೆಂದೆಣಿಸಿ, ಆಮೇಲೆ ವಿವೇಕ ಜ್ಞಾನವನ್ನು ಹೊಂದಿ ಶರೀರವನ್ನು ಆತ್ಮವಲ್ಲವೆಂದು ತಿಳಿಸಿತು. ಆಮೇಲೆ ಚಂದ್ರ ಲೋಕದಲ್ಲಿ ಜಲಮಯವಾದ ದಿವ್ಯಶರೀರವನ್ನು ಹೊಂದಿದಾಗ ಅದನ್ನೂ ಆತ್ಮವೆಂದು ಕಾಣಿಸಿತು. ಅಲ್ಲಿಯೂ ವಿವೇಕದಿಂದ ಆ ತಪ್ಪುತಿಳುವಳಿಕೆಯನ್ನು ನೀಗಿಸಿ, ಆಮೇಲೆ ಕ್ರಮವಾಗಿ ಹಾಗೆಯೇ ತೇಜಸ್ಸು, ವಾಯು, ಆಕಾಶ, ರೂಪ ಶರೀರಗಳಲ್ಲಿಯೂ ಅವೇ ಆತ್ಮವೆಂಬ ಭ್ರಾಂತಿಯನ್ನು ಹುಟ್ಟಿಸಿ, ಕೊನೆಗೆ ವಿವೇಕದಿಂದ ಆ ಭ್ರಾಂತಿಗಳನ್ನೆಲ್ಲಾ ನೀಗಿಸಿತು. ಆಮೇಲೆ ಅಹಂಕಾರವು ಆತ್ಮದ ನಿಜತತ್ವವನ್ನರಿತು, ಅದರ ನೈಜಗುಣಗಳಲ್ಲಿ ಅಭಿಮಾನವನ್ನು ಹೊಂದಿತು. ಆಮೇಲೆ ಗುರೂಪದೇಶದಿಂದ ಆತ್ಮಕ್ಕೆ ಅಹಂಕಾರವು ನೀಗಲು, ಆ ಗುರುವು ಬ್ರಹ್ಮಜ್ಞಾನವನ್ನು ಉಪದೇಶಿಸಿದುದಾಗಿ ಈ ಅಧ್ಯಾಯದ ಗೂಢಾಭಿಪ್ರಾಯವು. ]

---

{ ಕೃಷ್ಣನು ಶಾರೀರಕ ಮಾನಸಿಕಗಳೆಂಬ ಎರಡು ಬಗೆಯ ವ್ಯಾಧಿಗಳನ್ನು ನೀಗಿಸತಕ್ಕ ಉಪಾಯವನ್ನು ಯುಧಿಷ್ಠಿರನಿಗೆ ತಿಳಿಸಿದುದು. }

"ರಾಜಾ! ವ್ಯಾಧಿಗಳಲ್ಲಿ ಶಾರೀರಕ ಮಾನಸಿಕಗಳೆಂಬ ಎರಡು ಬಗೆಯುಂಟು. ಅವು ಒಂದರಡನೊಂದು ಕಲೆತೇ ಉತ್ಪನ್ನವಾಗುವುವೇ ಹೊರತು ಬೇರೆಬೇರೆಯಾಗಿ ಹುಟ್ಟುವುದಿಲ್ಲ. ಶರೀರದಲ್ಲಿ ಹುಟ್ಟುವ ವ್ಯಾಧಿಯು ಶಾರೀರಕವು. ಮನಸ್ಸಿನಲ್ಲಿ ತಲೆದೋರುವ ವ್ಯಾಧಿಯು ಮಾನಸಿಕವು. ರಾಜಾ! ಕಫ ವಾತ ಪಿತ್ತ (ಉಷ್ಣ) ಗಳೆಂಬುದು ಶಾರೀರಕ ಗುಣಗಳು. ಆ ಗುಣಗಳು ಮೂರೂ ಸಮವಾಗಿರುವುದೇ ದೇಹವು ಸರಿಯಾದ ಆರೋಗ್ಯಸ್ಥಿತಿಯಲ್ಲಿರುವುದೆಂಬುದಕ್ಕೆ ಗುರುತೆಂದು ಹೇಳುವರು. ಉಷ್ಣದಿಂದ ಶೀತವೂ, ಶೀತದಿಂದ ಉಷ್ಣವೂ ನಿಗ್ರಹಿಸಲ್ಪಡುವುದು. ಸತ್ವ ರಜಸ್ತಮೋಗುಣಗಳೆಂಬಿವು ಮೂರೂ ಮಾನ

ಸಿಕಗುಣಗಳು. ಅವೆಲ್ಲವೂ ಸಮವಾಗಿರುವುದೇ ಆತ್ಮವು ಸ್ವಸ್ಥವಾಗಿರುವುದರ ಗುರುತೆಂದು ಹೇಳುವರು. ಅವುಗಳಲ್ಲಿ ಯಾವುದಾದರೊಂದು ಅಧಿಕವಾದರೂ ಅದನ್ನು ಅಡಗಿಸುವ ಉಪಾಯವನ್ನೂ ಹೇಳಿರುವರು. ಸಂತೋಷದಿಂದ ಶೋಕವೂ, ಶೋಕದಿಂದ ಸಂತೋಷವೂ ತಗ್ಗುವುದು. ಇದಕ್ಕಾಗಿ ದುಃಖವನ್ನನುಭವಿಸುತ್ತಿರುವವನೊಬ್ಬನು (ಹಿಂದೆ ಹೇಳಿದ) ಸುಖವನ್ನೂ, ಸುಖವನ್ನನುಭವಿಸುತ್ತಿರುವವನೊಬ್ಬನು (ಮೇಲೆ ಹೇಳಿದ) ದುಃಖವನ್ನೂ ಮನಸ್ಸಿಗೆ ತಂದುಕೊಳ್ಳುವನು. ಓ ಕುಂತೀಪುತ್ರಾ! ಆದರೆ, ನೀನು ದುಃಖವನ್ನನುಭವಿಸುವಾಗ ಆ ದುಃಖವನ್ನಾಗಲಿ, ಸುಖವನ್ನನುಭವಿಸುವಾಗ ಆ ಉತ್ತಮಸುಖವನ್ನಾಗಲಿ ಮನಸ್ಸಿಗೆ ತಂದುಕೊಳ್ಳಲೇ ಬಾರದು. ಇದನ್ನು ತಂದೊಡ್ಡುವ ದೈವವು ಮಹಾಬಲವುಳ್ಳದು. ಅಥವಾ ಅವು ನಿನಗೆ ಸ್ವಭಾವಸಿದ್ಧವಾಗಿ ಅದರಿಂದ ನೀನು ಎಳೆಯಲ್ಪಡುವೆ. ಹಿಂದೆ ಎಲ್ಲರೂ ನೋಡುತ್ತಿರುವಂತೆಯೇ, ರಜಸ್ವಲೆಯಾಗಿ ಏಕವಸ್ತ್ರದಿಂದ ಸಭೆಗೆ ಸೆಳೆತರಲ್ಪಟ್ಟ ದ್ರೌಪದಿಯನ್ನು ನೀನು ನೋಡಿದುದನ್ನು ಈಗ ಮನಸ್ಸಿಗೆ ತಂದುಕೊಳ್ಳಬಾರದು. ಹಿಂದೆ ದೇಶಭ್ರಷ್ಟರಾದ ನೀವು ಕೃಷ್ಣಾಜಿನವನ್ನು ಧರಿಸಿ ಕಾಡಿನಲ್ಲಿ ವಾಸಮಾಡುತ್ತಿದ್ದುದನ್ನೂ ಮರೆತುಬಿಡಬೇಕು. ಜಟಾಸುರನಿಂದುಂಟಾದ ದುಃಖವನ್ನೂ, ಚಿತ್ರಸೇನನೊಡನೆ ಸಂಭವಿಸಿದ ಯುದ್ಧವನ್ನೂ, ಸೈಂಧವನಿಂದುಂಟಾದ ಬಾಧೆಯನ್ನೂ ನೀನು ಮರೆತುಬಿಡಬೇಕು. ನೀವು ಅಜ್ಞಾತವಾಸದಲ್ಲಿರುವಾಗ ಕೀಚಕನು ದ್ರೌಪದಿಯನ್ನು ಕಾಲಿಂದೊದೆದುದನ್ನೂ ಮರೆತುಬಿಡಬೇಕು. ಆಗ ನಿನಗೆ ದ್ರೋಣಭೀಷ್ಮರೊಡನೆ ನಡೆದ ಯುದ್ಧಕ್ಕಿಂತಲ್ಲೂ ಪ್ರಬಲವಾಗಿ, ಅಹಂಕಾರದೊಡನೆ ನೀನು ಮಾಡಬೇಕಾದ ಯುದ್ಧವು ಸಮೀಪಿಸಿರುವುದು. ಆದುದರಿಂದ ನೀನು ಆ ಮಹಾಯುದ್ಧಕ್ಕೆ ಸನ್ನದ್ಧನಾಗಿರು. ಅದರಲ್ಲಿ ಜಯಿಸಿ, ನೀನು ಪಡೆಯಬೇಕಾದ ಆತ್ಮದ ಕೊನೆಯ ನೆಲೆಯನ್ನು ಯೋಗದಿಂದಲೂ, ಕರ್ಮಗಳಿಂದಲೂ ಪಡೆ! ಬಾಣಗಳಿಂದಲೂ, ಸೇವಕರಿಂದಲೂ, ಬಂಧುಗಳ ಸಹಾಯದಿಂದಲೂ ಇದು ನಡೆಯದು. ಇದು ಕೇವಲ ಆತ್ಮಬಲದಿಂದಲೇ ನಡೆಸತಕ್ಕ ಯುದ್ಧವು! ಆ ಯುದ್ಧದಲ್ಲಿ ಮನಸ್ಸನ್ನು ಜಯಿಸದಿದ್ದರೆ.

ದುಃಖಕ್ಕೆ ಗುರಿಯಾಗುವೆ. ಕುಂತೀಪುತ್ರಾ! ನೀನು ಈ ತತ್ವವನ್ನು ತಿಳಿದುಕೊಂಡರೆಮಾತ್ರ ಕೃತಕೃತ್ಯನಾಗುವೆ. ಈ ಬುದ್ಧಿಯನ್ನೂ, ಪ್ರಾಣಿಗಳ ಉತ್ಪತ್ತಿಲಯಗಳನ್ನೂ ನಿಶ್ಚಯಿಸಿ ತಿಳಿದು, ಹಿರಿಯರ ಮಾರ್ಗಗಳನ್ನನುಸರಿಸಿ ಉಚಿತರೀತಿಯಲ್ಲಿ ರಾಜ್ಯವನ್ನಾಳುತ್ತಿರು.

ಇದು ಹನ್ನೆರಡನೆಯ ಅಧ್ಯಾಯವು.

{ ಕೃಷ್ಣನು ಆಶೆಯನ್ನು ಗೆಲ್ಲಬಹುದೆಂಬುದನ್ನೂ, ಅದನ್ನು ಗೆಲ್ಲುವ ರೀತಿಯನ್ನೂ, ಯುಧಿಷ್ಠಿರನಿಗೆ ತಿಳಿಸಿದುದು. }

"ರಾಜಾ! ಬಾಹ್ಯಪರಿಕರಗಳನ್ನು ಮಾತ್ರ ಬಿಡುವುದರಿಂದ ಸಿದ್ಧಿಯುಂಟಾಗುವುದಿಲ್ಲ. ಶರೀರದಲ್ಲಿರುವ ಕಾಮಾದಿಗಳನ್ನು ಬಿಟ್ಟಾಗಲೇ ಸಿದ್ಧಿಯುಂಟಾಗುವುದು. ಅಥವಾ ಆಗಲೂ ಸಿದ್ಧಿಯುಂಟಾಗದೆ ಇದ್ದರೂ ಇರಬಹುದು. ಹೊರಗಿನ ವಸ್ತುಗಳನ್ನು ತೊರೆದರೂ ಶರೀರಗತವಾದ ಕಾಮವೇ ಮೊದಲಾದುವುಗಳಲ್ಲಿ ಕೋರಿಕೆಯುಳ್ಳವನಿಗೆ ಪ್ರಾಪ್ತವಾಗುವ ಧರ್ಮವೂ, ಸುಖವೂ ನಿನ್ನ ಶತ್ರುಗಳಿಗೇ ಲಭಿಸಲಿ. ಎರಡಕ್ಷರಗಳು ಮೃತ್ಯುವಿಗೂ, ಮೂರಕ್ಷರಗಳು ಶಾಶ್ವತ ಬ್ರಹ್ಮವನ್ನು ಪಡೆಯುವುದಕ್ಕೂ ಕಾರಣವಾಗುವುವು. 'ಮಮ' ಎಂಬ ಎರಡಕ್ಷರಗಳು ಸಂಸಾರಕ್ಕೆ ಕಾರಣವು. 'ನ ಮಮ' ಎಂಬೀ ಮೂರಕ್ಷರಗಳು ಶಾಶ್ವತವಾದ ಬ್ರಹ್ಮವನ್ನು ಪಡೆಯಲು ಕಾರಣವಾಗುವುದು.

ಓ ರಾಜಾ! ಆದುದರಿಂದ ಬ್ರಹ್ಮಕ್ಕೆ ಕಾರಣವಾದ ಆಶಾತ್ಯಾಗವೂ, ಸಂಸಾರಕ್ಕೆ ಕಾರಣವಾದ ಆಶೆಯೂ, ಅವ್ಯಕ್ತವಾಗಿಯೇ ಜೀವಿಗಳ ಚಿತ್ತದಲ್ಲಿದ್ದು, ಆ ಜೀವಿಗಳನ್ನು ಯುದ್ಧಕ್ಕೆ ಪ್ರೇರಿಸುವುವೆಂಬುದರಲ್ಲಿ ಸಂಶಯವಿಲ್ಲ. ಈ ಆತ್ಮತತ್ವವನ್ನು ತಿಳಿದವನು ಪ್ರಾಣಿಗಳ ಶರೀರವನ್ನು ಭೇದಿಸಿದರೂ ಹಿಂಸಿಸಿದಂತಾಗುವುದಿಲ್ಲ. ಸ್ಥಾವರ ಜಂಗಮಗಳೊಡಗೂಡಿದ ಭೂಮಿಯೆಲ್ಲವನ್ನೂ ಪಡೆದಿದ್ದರೂ, ಅದರಲ್ಲಿ

ಮಮತೆಯಿಲ್ಲದಿರುವವನನ್ನು ಆ ಭೂಮಿಯುತಾನೇ ಹೇಗೆ ಕದಲಿಸಬಲ್ಲುದು ? ಕುಂತೀಪುತ್ರಾ ! ಅರಣ್ಯದಲ್ಲಿರುವ ವಸ್ತುಗಳನ್ನೇ ಭುಜಿಸುತ್ತಾ, ವನದಲ್ಲಿ ವಾಸಮಾಡುತ್ತಿದ್ದರೂ, ವಸ್ತುಗಳಲ್ಲಿ ಮಮತೆಯನ್ನು ತ್ಯಜಿಸದವನು ಮೃತ್ಯುವಿನ ಬಾಯಿಗೆ ಸಿಕ್ಕಿದಂತೆಯೇ ! ಹೊರಗೂ ಒಳಗೂ ಇರುವ ಶತ್ರುಗಳ ಸ್ವಭಾವವನ್ನು ನೋಡಿದೆಯಾ ? ಅವು ಅನಾದಿಯಾದುದಲ್ಲವೆಂದು ತಿಳಿಯುವವನು. ಭಯಕಾರಣವಾದ ಸಂಸಾರದಿಂದ ಬಿಡುಗಡೆಹೊಂದುವನು. ಲೋಕದಲ್ಲಿ ಆಶಾಗ್ರಸ್ತವಾದ ಮನವುಳ್ಳವನನ್ನು (ಹಿರಿಯರು) ಮೆಚ್ಚುವುದಿಲ್ಲ. ಲೋಕದಲ್ಲಿ ಆಶೆಯಿಲ್ಲದವನಿಗೆ ಯಾವ ಪ್ರವೃತ್ತಿಯೂ ಇಲ್ಲ. ಎಲ್ಲಾ ಕಾಮಗಳೂ ಮನಸ್ಸಿನಲ್ಲಿ ಉಂಟಾಗುವುವು. ತತ್ವಜ್ಞನಾದ ಯೋಗಿಯು ಜನ್ಮ ಜನ್ಮಗಳಲ್ಲಿಯೂ ಮನೋ ನಿಗ್ರಹರೂಪವಾದ ಯೋಗಾಭ್ಯಾಸವೊಂದೇ ಸಾರವಾದ ಮೋಕ್ಷಮಾರ್ಗವೆಂದು ನಿರ್ಧರಿಸಿಕೊಂಡು, ದಾನವನ್ನೂ, ವೇದಾಧ್ಯಯನವನ್ನೂ, ತಪಸ್ಸು, ಕಾಮ್ಯಕರ್ಮಗಳು, ವೈದಿಕಕರ್ಮಗಳು, ವ್ರತಯಜ್ಞನಿಯಮಗಳು, ಧ್ಯಾನಯೋಗಗಳು, ಇವನ್ನೆಲ್ಲಾ ಫಲಾಪೇಕ್ಷೆಯಿಲ್ಲದೆ ಮಾಡುತ್ತ, ತನ್ನ ಆಶೆಯನ್ನು ನಿಗ್ರಹಿಸುವುದೇ ಧರ್ಮವು. ಅದೇ (ಮೋಕ್ಷಕ್ಕೆ) ಕಾರಣವು, ಎಂಬುದನ್ನು ಯೋಚನೆಯಿಂದ ತಿಳಿದು, ಜ್ಞಾನಿಯು ಆ ಆಶೆಯನ್ನು ಅಡಗಿಸುವನು. ಈ ವಿಷಯದಲ್ಲಿ ಪೂರ್ವವೃತ್ತಾಂತವನ್ನು ತಿಳಿದವರು ಕಾಮಗೀತಗಳೆಂಬ ಕೆಲವು ಗಾಥೆಗಳನ್ನು ಹೇಳುವರು. ಆ ಕಾಮನ ಗಾಥೆಗಳನ್ನು ಹೇಳುವೆನು ಕೇಳು. ‘ ಯಾವಪ್ರಾಣಿಯೂ ತಕ್ಕ ಉಪಾಯದಿಂದಲ್ಲದೆ ನನ್ನನ್ನು ಕೊಲ್ಲಲಾರದು. ಯಾವಾತನು ಆಯುಧಬಲವನ್ನು ನಂಬಿ ನನ್ನನ್ನು ಕೊಲ್ಲಲು ಪ್ರಯತ್ನಿಸುವನೋ, ಆತನ ಆಯುಧದಲ್ಲಿಯೇ ನಾನು ತಿರುಗಿ ತಲೆದೋರುವೆನು. ಯಾವನು ಭೂರಿದಕ್ಷಿಣೆಗಳುಳ್ಳನಾನಾ ಬಗೆಯ ಯಾಗಗಳಿಂದ ನನ್ನನ್ನು ಕೊಲ್ಲಲು ಪ್ರಯತ್ನಿಸುವನೋ, ಧರ್ಮಶೀಲನು (ಉತ್ತಮ ಜಾತಿಯ) ಜಂಗಮಜೀವಗಳಲ್ಲಿ ಹುಟ್ಟುವಂತೆ ನಾನು ತಿರುಗಿ ಆತನ ಯಜ್ಞದಲ್ಲಿಯೇ ತೋರುವೆನು. ಯಾವನು ನನ್ನನ್ನು ವೇದಗಳಿಂದಲೂ, ವೇದಾಂತಗಳಲ್ಲಿ ಹೇಳಿದ ಸಾಧನಗಳಿಂದಲೂ ಅಡಗಿಸಲು ಯತ್ನಿಸುವನೋ, ಜೀವನು

ಸ್ಥಾವರಗಳಲ್ಲಿ ಹೇಗೋ ಹಾಗೆ ತಿರುಗಿ ನಾನು ಆತನಲ್ಲಿ ತೋರುವೆನು. ಯಾವನು ಧೈರ್ಯದಿಂದ ನನ್ನನ್ನು ಕೊಲ್ಲಲು ಯತ್ನಿಸುವನೋ, ಹಾಗೆ ನಿಜಪರಾಕ್ರಮದಿಂದಲೂ, ಧೈರ್ಯದಿಂದಲೂ ನನ್ನನ್ನು ಕೊಲ್ಲಲು ಯತ್ನಿಸುವವನ ಚಿತ್ತವೇ ಆಗುವೆನು. ಆಗಲೂ ಅವನು ನನ್ನನ್ನು ತಿಳಿಯಲಾರನು. ತಪೋನಿಷ್ಠನಾದ ಯಾವಾತನು ನನ್ನನ್ನು ತಪಸ್ಸಿನಿಂದ ಕೊಲ್ಲಲು ಯತ್ನಿಸುವನೋ ಆತನ ತಪಸ್ಸಿನಲ್ಲಿ ತಿರುಗಿ ನಾನೇ ತೋರುವೆನು. ಯಾವ ಪಂಡಿತನು ಮೋಕ್ಷಾಪೇಕ್ಷೆಯಿಂದ ನನ್ನನ್ನು ಕೊಲ್ಲಲು ಯತ್ನಿಸುವನೋ, ಮೋಕ್ಷದಾಶೆಯಿಂದಿರತಕ್ಕ ಅವನಲ್ಲಿ ನಾನು ನರ್ತನಮಾಡುವೆನು. ನಗಾಡುತ್ತಿರುವೆನು. ಶಾಶ್ವತನಾದ ನನ್ನೊಬ್ಬನನ್ನು ಮಾತ್ರ ಯಾವ ಪ್ರಾಣಿಯೂ ಕೊಲ್ಲಲಾರದು" ಎಂದು ಕಾಮನೇ ತಿಳಿಸಿರುವನು. ಆದುದರಿಂದ ನೀನು ಹಲವು ಬಗೆಯ ದಕ್ಷಿಣೆಗಳೊಡಗೂಡಿದ ಯಾಗಗಳಿಂದ ಆ ಕಾಮವನ್ನೇ ಧರ್ಮದಲ್ಲಿ ನೆಲೆಗೊಳಿಸು. ಆ ಕಾಮವು ನಿನಗೆ ಧರ್ಮದಲ್ಲಿ ನೆರವಾಗಲಿ. ವಿಧ್ಯುಕ್ತರೀತಿಯಲ್ಲಿ ಭೂರಿದಕ್ಷಿಣೆಗಳೊಡನೆ ಅಶ್ವಮೇಧಯಾಗವನ್ನೂ, ಇನ್ನೂ ಇತರಯಾಗಗಳನ್ನೂ ನೆರವೇರಿಸು. ಯುದ್ಧದಲ್ಲಿ ಹತರಾದ ಬಂಧುಗಳಿಗಾಗಿ ಅಡಿಗಡಿಗೆ ವ್ಯಸನಪಡಬಾರದು. ಮೃತರಾದವರನ್ನು ನೀನು ಇನ್ನುಮೇಲೆ ಹೇಗೂ ನೋಡಲಾರೆ. ಆದುದರಿಂದ ನೀನು ದಕ್ಷಿಣೆಗಳುಳ್ಳ ದೊಡ್ಡ ಯಾಗಗಳನ್ನು ಮಾಡಿ, ಪ್ರಸಿದ್ಧಿ ಪಡೆದು ಉತ್ತಮ ಗತಿಯನ್ನು ಸೇರು" ಎಂದನು.

ಇದು ಹದಿಮೂರನೆಯ ಅಧ್ಯಾಯವು.



(ವ್ಯಾಸನೇ ಮೊದಲಾದವರು ಯುಧಿಷ್ಠಿರನನ್ನು ಸಮಾಧಾನಪಡಿಸಿ ಹಿಂತಿರುಗಿದುದು. ಯುಧಿಷ್ಠಿರನು ಭೀಷ್ಮಾದಿಗಳಿಗೆ ಅಪರ ಕರ್ಮಗಳನ್ನು ಮಾಡಿ ಹಸ್ತಿನಾಪುರಕ್ಕೆ ಬಂದುದು)

ಹೀಗೆ ತಪೋಧನರಾದ ಅನೇಕ ಮಹರ್ಷಿಗಳು, ಬಂಧುಮರಣಕ್ಕಾಗಿ ದುಃಖಪಡುತ್ತಿದ್ದ ಯುಧಿಷ್ಠಿರನನ್ನು ಸಮಾಧಾನಪಡಿಸಿದರು.

ಹೀಗೆ ಯುಧಿಷ್ಠಿರನು ಸಾಕ್ಷಾತ್ತಾಗಿ ಶ್ರೀಕೃಷ್ಣನಿಂದಲೂ, ಶ್ರೀ ಕೃಷ್ಣ ದ್ವೈಪಾಯನನಿಂದಲೂ, ದೇವಸ್ಥಾನಮುನಿಯಿಂದಲೂ, ಭೀಮಾರ್ಜುನ ನಕುಲ ಸಹದೇವರಿಂದಲೂ, ದ್ರೌಪದಿಯಿಂದಲೂ, ಇತರ ಪುರುಷಶ್ರೇಷ್ಠರಿಂದಲೂ ಶಾಸ್ತ್ರವಿದರಾದ ಬ್ರಾಹ್ಮಣರಿಂದಲೂ ಅನೇಕವಿಧವಾಗಿ ಸಮಾಧಾನಗೊಳಿಸಲ್ಪಟ್ಟಮೇಲೆ, ತನ್ನ ಶೋಕ ಸಂತಾಪಗಳನ್ನು ಬಿಟ್ಟು ಬ್ರಾಹ್ಮಣರನ್ನು ಪೂಜಿಸಿದನು. ಆಮೇಲೆ ಬಂಧುಜನರೆಲ್ಲರಿಗೂ ಪ್ರೇತಕಾರ್ಯಗಳನ್ನು ಮುಗಿಸಿ, ಸಮುದ್ರ ಪರ್ಯಂತವಾದ ಭೂಮಿಯೆಲ್ಲವನ್ನೂ ಪರಿಪಾಲಿಸುತ್ತಿದ್ದನು. ಹೀಗೆ ಯುಧಿಷ್ಠಿರನು ಶಾಂತಚಿತ್ತನಾಗಿ ತನ್ನ ರಾಜ್ಯವನ್ನು ವಶಪಡಿಸಿಕೊಂಡಮೇಲೆ, ವ್ಯಾಸನನ್ನೂ ನಾರದನನ್ನೂ ಇನ್ನೂ ಇತರರನ್ನೂ ಕುರಿತು “ಮುನಿಶ್ರೇಷ್ಠರೇ! ಹಿರಿಯರಾದ ನೀವೆಲ್ಲರೂ ಸಮಾಧಾನಪಡಿಸಿದಮೇಲೆ ಇನ್ನು ನನಗೆ ಮನಸ್ಸಿನಲ್ಲಿ ಯಾವ ಕೊರತೆಯೂ ಇಲ್ಲ. ದೇವತೆಗಳನ್ನು ಕುರಿತು ಯಾಗ ಮಾಡುವುದಕ್ಕೆ ಬೇಕಾದ ಸಂಪತ್ತೂ ನಮಗೆ ಸಿಕ್ಕಿರುವುದು. ಇನ್ನು ನಿಮ್ಮನ್ನು ಮುಂದಿಟ್ಟುಕೊಂಡು ಯಾಗವನ್ನಾರಂಭಿಸುವೆನು. ಪಿತಾಮಹಾ? ನಾವು ನಿಮ್ಮಿಂದ ರಕ್ಷಿತರಾಗಿಯೇ ಹಿಮಾಲಯಪರ್ವತಕ್ಕೆ ಹೋಗಬೇಕು. ಅದು ಮಹಾಶ್ಚರ್ಯಕರವಾದ ಪ್ರದೇಶವೆಂದು ಕೇಳಿಬಲ್ಲೆನು. ಪೂಜ್ಯನಾದ ನೀನೂ, ದೇವಋಷಿಯಾದ ನಾರದನೂ, ಈ ದೇವಸ್ಥಾನನೂ ನಮಗೆ ಶ್ರೇಯಸ್ಕರಗಳಾದ ಅನೇಕ ಹಿತವಾಕ್ಯಗಳನ್ನು ತಿಳಿಸಿರುವಿರಿ. ವ್ಯಸನವು ಪ್ರಾಪ್ತವಾದಾಗ ಹಿತಚಿಂತಕರಾದ ನಿಮ್ಮಂತಹ ಆಚಾರ್ಯರು ಮಹಾಭಾಗ್ಯವಿಶೇಷದಿಂದಲ್ಲದೆ ಸಾಮಾನ್ಯರಿಗೆ ಲಭಿಸರಾರರು” ಎಂದನು. ಆಮೇಲೆ ಆ ಋಷಿಶ್ರೇಷ್ಠರೆಲ್ಲರೂ ಧರ್ಮರಾಜನಿಂದಲೂ, ಕೃಷ್ಣಾರ್ಜುನರಿಂದಲೂ ಅನುಮತಿಯನ್ನು ಪಡೆದು, ಅಲ್ಲಿ ಎಲ್ಲರೂ ನೋಡುತ್ತಿದ್ದ ಹಾಗೆಯೇ ಕಣ್ಮರೆಯಾದರು. ಧರ್ಮರಾಜನು ಮಾತ್ರ ಅಲ್ಲಿಯೇ ನಿಂತನು. ಭೀಷ್ಮನ ಮರಣಕ್ಕಾಗಿ ಶುದ್ಧಿಕಾರ್ಯಗಳನ್ನು ಮಾಡುವುದರಲ್ಲಿಯೂ, ಬ್ರಾಹ್ಮಣರಿಗೆ ಮಹಾದಾನಗಳನ್ನು ಕೊಡುವುದರಲ್ಲಿಯೂ, ಭೀಷ್ಮಕರ್ಣರೇ ಮುಂತಾದವರಿಗೆ ಉತ್ತರಕ್ರಿಯೆಗಳನ್ನು ಮಾಡುವುದರಲ್ಲಿಯೂ ಪಾಂಡವರು ಅಲ್ಲಿ ಕೆಲವು ಕಾಲವನ್ನು ಕಳೆ

ದರು. ಯುಧಿಷ್ಠಿರನು ಧೃತರಾಷ್ಟ್ರನೊಡನೆ ಕಲೆತೇ ಎಲ್ಲರಿಗೂ ಉತ್ತರಕ್ರಿಯೆಗಳೆಲ್ಲವನ್ನೂ ಮಾಡಿದನು. ಆಗ ಬ್ರಾಹ್ಮಣರಿಗೆ ಅಪರಿಮಿತವಾದ ಧನವನ್ನು ಕೊಟ್ಟು ಧೃತರಾಷ್ಟ್ರನೊಡನೆ ಹಸ್ತಿನಾಪುರಕ್ಕೆ ಬಂದನು.

ಇದು ಹದಿನಾಲ್ಕನೆಯ ಅಧ್ಯಾಯವು.

## ಯುಧಿಷ್ಠಿರನ ಧರ್ಮಪರಿಪಾಲನದಿಂದ ಪ್ರಜೆಗಳಿಗುಂಟಾದ ಸೌಖ್ಯಗಳು.

ಧರ್ಮಾತ್ಮನಾದ ಯುಧಿಷ್ಠಿರನು, ಜ್ಞಾನ ಚಕ್ಷುಸ್ಸುಳ್ಳವನೂ, ಪಿತನೂ ಆದ ಧೃತರಾಷ್ಟ್ರರಾಜನನ್ನು ಸಮಾಧಾನಪಡಿಸಿ, ತಮ್ಮಂದಿರೊಡಗೂಡಿ ರಾಜ್ಯಪರಿಪಾಲನೆಮಾಡುತ್ತಿದ್ದನು. ಆತನು ಮನುವಿನಂತೆಯೂ, ದಶರಥ ಕುಮಾರನಾದ ರಾಮನಂತೆಯೂ ಭೂಮಿಯುನ್ನಾಳುತ್ತಿದ್ದನು. ಅವನ ಆಳ್ವಿಕೆಯಲ್ಲಿ ಅಧರ್ಮಕ್ಕೆ ಈಷನ್ಮಾತ್ರವೂ ಅವಕಾಶವಿಲ್ಲದೆ ಕಾಲವು ಕೃತಯುಗದಂತಿದ್ದಿತು. ಪ್ರಜೆಗಳೆಲ್ಲರೂ ಧರ್ಮಪ್ರಿಯರಾಗಿದ್ದರು. ರಾಜಕುಮಾರನೂ, ಬುದ್ಧಿಶಾಲಿಯೂ, ಧರ್ಮವನ್ನೇ ಬೆಂಬಲವಾಗಿ ಉಳ್ಳವನೂ ಆದ ಧರ್ಮರಾಜನು, ಆಗಲೇ ತಲೆಯಿಕ್ಕುವುದರಲ್ಲಿದ್ದ ಕಲಿಯನ್ನು ಬಾರದಂತೆ ತಡೆದನು. ಆಗ ಭಗವಂತನಾದ ಇಂದ್ರನು ಕಾಲಕಾಲಕ್ಕೆ ತಕ್ಕ ಸ್ಥಳಗಳಲ್ಲಿ ಸಮೃದ್ಧಿಯಾಗಿ ಮಳೆಯನ್ನು ಸುರಿಸುತ್ತಿದ್ದನು. ಪ್ರಪಂಚದ ಯಾವ ಭಾಗದಲ್ಲಿಯೂ, ಯಾವ ವ್ಯಾಧಿಭಯವೂ ಇರಲಿಲ್ಲ. ಹಸಿವು ಬಾಯಾರಿಕೆಗಳಿಂದ ಯಾರೂ ಕಷ್ಟಪಡುತ್ತಿರಲಿಲ್ಲ. ಮನುಷ್ಯರಿಗೆ ಯಾವ ಮನೋವ್ಯಾಧಿಯೂ ಇರಲಿಲ್ಲ. (ದ್ಯೂತವೇ ಮೊದಲಾದ) ವ್ಯಸನಕಾರ್ಯಗಳಲ್ಲಿ ಯಾರಿಗೂ ಬುದ್ಧಿ ಪ್ರವರ್ತಿಸುತ್ತಿರಲಿಲ್ಲ. ಬ್ರಾಹ್ಮಣರೇ ಮೊದಲಾದ ಚತುರ್ವರ್ಣದವರೂ ಧರ್ಮಗಳನ್ನೇ ಪ್ರಧಾನವಾಗಿ ಹಿಡಿದು, ಧರ್ಮದಿಂದಲೂ, ಸತ್ಯದಿಂದಲೂ ನಡೆಯುತ್ತಿದ್ದರು. ಸತ್ಯವು ಯಾವಾಗಲೂ ಸದ್ವಿಷಯವನ್ನೇ ಆಶ್ರಯಿಸಿದ್ದಿತು. ಧರ್ಮಾಸನದಲ್ಲಿ ವಿದ್ವಾಂಸರೊಡನೆ ಕುಳಿತು ಯುಧಿ

ಷ್ಠಿರನು, ಸ್ತ್ರೀಯರು, ಬಾಲರು, ವ್ಯಾಧಿಗ್ರಸ್ತರು, ಇವರೆಲ್ಲರನ್ನೂ ವರ್ಣಾಶ್ರಮಧರ್ಮಗಳಿಗನುಸಾರವಾಗಿ ವಿಚಾರಿಸಿ, ಅವರ ಕಷ್ಟಗಳನ್ನು ನೀಗಿಸಿ, ಜೀವನವಿಲ್ಲದವರಿಗೆ ಜೀವನವನ್ನು ಕಲ್ಪಿಸಿ ಕಾಪಾಡುತ್ತಿದ್ದನು. ಅವನ ರಾಜ್ಯದಲ್ಲಿರುವವರಿಗೆ ಪರಲೋಕಭಯವಿಲ್ಲ. ಇಹಲೋಕದ ಸೌಖ್ಯಗಳೆಲ್ಲವೂ ರಾಜನಿಂದಲೇ ಕಲ್ಪಿಸಲ್ಪಡುತ್ತಿದ್ದಿತು. ಆ ಯುಧಿಷ್ಠಿರನು ರಾಜ್ಯಪರಿಪಾಲನೆ ಮಾಡುವಾಗ, ಈ ಭೂಲೋಕವು ಸ್ವರ್ಗಸಮಾನವಾಯಿತು. ಎಲ್ಲೆಲ್ಲಿಯೂ ಸುಖಮಯವಾಯಿತು. ಸ್ತ್ರೀಯರೆಲ್ಲರೂ ಪತಿವ್ರತೆಯರೂ, ಲಕ್ಷಣವತಿಯರೂ, ಅಲಂಕೃತರೂ ಆಗಿದ್ದರು. ಶಾಸ್ತ್ರವಿಧಿಗನುಸಾರವಾದ ನಡೆವಳಿಕೆಗಳಿಂದ ಅವರು ವಿಶೇಷಪ್ರೀತಿಕಾರಣರಾದರು. ಅಲ್ಲಿನ ಪುರುಷರೆಲ್ಲರೂ ಶುದ್ಧಸ್ವಭಾವವುಳ್ಳವರೂ, ಸ್ವಧರ್ಮಾವಲಂಬಿಗಳೂ, ಸುಖಿಗಳೂ, ಯಾವಾಗಲೂ ನಿರ್ದೋಷಿಗಳೂ ಆಗಿದ್ದರು. ಅಲ್ಲಿ ಎಲ್ಲಾ ಪುರುಷರೂ, ಸ್ತ್ರೀಯರೂ, ಪ್ರಿಯವಾಕ್ಯಗಳನ್ನೇ ಆಡುತ್ತ, ನಿಷ್ಕಪಟವಾದ ಮನಸ್ಸುಳ್ಳವರಾಗಿದ್ದರು. ಎಲ್ಲರೂ ಹಾರ, ಕಟಕ, ಕುಂಡಲ ಕೇಯೂರಾದಿಗಳಿಂದಲಂಕೃತರಾಗಿ, ಒಳ್ಳೇ ಉಡುಪುಗಳನ್ನುಟ್ಟು, ಸುಗಂಧಲೇಪನದಿಂದ ಶೋಭಿಸುತ್ತಿದ್ದರು. ಅಲ್ಲಿನ ಬ್ರಾಹ್ಮಣರೆಲ್ಲರೂ ಬ್ರಹ್ಮವಿದರು! ಎಲ್ಲಾ ಕಾರ್ಯಗಳಲ್ಲಿಯೂ ನೈಪುಣ್ಯವುಳ್ಳವರು. ದೇಹದಲ್ಲಿ ಸುಕ್ಕು, ನರೆ ಮುಂತಾದ ಮುಪ್ಪಿನ ಲಕ್ಷಣವಿಲ್ಲದೆ ಜನರೆಲ್ಲರೂ ರೂಪವಂತರಾಗಿ! ಸುಖವಾಗಿದ್ದರು. ದೀರ್ಘಾಲೋಚನಾಪರರು. (ಪುರುಷರಿಗೆ) ಪರಸ್ತ್ರೀಯರಲ್ಲಾಗಲಿ, (ಸ್ತ್ರೀಯರಿಗೆ) ಪರಪುಷರಲ್ಲಿಯಾಗಲಿ ಮನಸ್ಸು ಪ್ರವರ್ತಿಸದು. ಅಲ್ಲಿ ವರ್ಣಸಂಕರವಿಲ್ಲ. ಅಲ್ಲಿ ಮನುಷ್ಯರು ಯಾರೂ ತಮ್ಮತಮ್ಮ ನೆಲೆಯನ್ನು ಮೀರಿ ನಡೆಯುತ್ತಿರಲಿಲ್ಲ. ಆ ಧರ್ಮರಾಜನ ರಾಜ್ಯದಲ್ಲಿ ಕಾಡುಮೃಗಗಳಾಗಲಿ, ದುಷ್ಟಗಜಗಳಾಗಲಿ, ಹಾವುಗಳಾಗಲಿ, ಇತರ ಪ್ರಾಣಿಗಳನ್ನು ಯಾವಾಗಲೂ ಪೀಡಿಸುತ್ತಿರಲಿಲ್ಲ. ಅಲ್ಲಿನ ಹಸುಗಳು ಸಮೃದ್ಧವಾದ ಹಾಲಿನಿಂದ ತುಂಬಿ, ಲಕ್ಷಣವಾದ ಬಾಲದಿಂದಲೂ, ಹೊಟ್ಟೆಯಿಂದಲೂ ಶೋಭಿಸುತ್ತಿದ್ದುವು. ವ್ಯವಸಾಯಗಾರರು ಹಸುಗಳನ್ನು ಉಳುವುದಕ್ಕಾಗಿ ಕಟ್ಟಿ ಹಿಂಸಿಸುತ್ತಿರಲಿಲ್ಲ. ಅವುಗಳ ಕರುಗಳೂ ಆರೋಗ್ಯದಿಂದಿದ್ದುವು.

ಜನರು ಶಾಸ್ತ್ರನಿಷಿದ್ಧವಲ್ಲದ ವಿಷಯಗಳಲ್ಲಿಯೇ, ಕಾಲವನ್ನು ಕಳೆಯುತ್ತ, ಮಾಡಬೇಕಾದ ಕರ್ಮಗಳಲ್ಲಿಯೂ, ವೇದಶಾಸ್ತ್ರಗಳಲ್ಲಿಯೂ ಶ್ರದ್ಧೆಯುಳ್ಳವರಾಗಿದ್ದರು. ಅಲ್ಲಿನ ಹೋರಿಗಳೆಲ್ಲ ಸುಲಕ್ಷಣವಾಗಿ ಕೊಬ್ಬಿಬೆಳೆದು, ನಾಭಿಯಲ್ಲಿ ಗೋರೋಚನವುಳ್ಳವುಗಳಾಗಿ ಸುಖದಿಂದಿದ್ದುವು. ಅಲ್ಲಿ ಶಬ್ದಗಳು ಸದಾಮಧುರವಾಗಿಯೂ, ರಸವು ಹಿತವಾಗಿಯೂ, ರೂಪವು ನೋಟಕ್ಕೆ ರಮ್ಯವಾಗಿಯೂ, ಗಂಧವು ಮನೋಹರವಾಗಿಯೂ ಇದ್ದುವು. ಅಲ್ಲಿನ (ಮನುಷ್ಯರ) ಮನಸ್ಸು ಧರ್ಮಾರ್ಥಕಾಮಗಳಿಂದ ಕೂಡಿ, ಮೋಕ್ಷಸುಖಕ್ಕೆ ಸಾಧನವಾಗಿ, ಉತ್ಸಾಹಯುಕ್ತವೂ, ಪರಿಶುದ್ಧವೂ ಆಗಿದ್ದಿತು. ಅಲ್ಲಿ ವೃಕ್ಷಗಳೆಲ್ಲ ಫಲಪುಷ್ಪಗಳಿಂದ ತುಂಬಿ ಒಳ್ಳೇ ನೆಳಲನ್ನು ಕೊಡುತ್ತಿದ್ದುವು. ಮತ್ತು ಅವು ವಿಷಸಂಪರ್ಕವಿಲ್ಲದೆ, ಸುಸ್ಪರ್ಶವುಳ್ಳವುಗಳಾಗಿ, ಸುಂದರವಾದ ಎಲೆಗಳಿಂದಲೂ, ಪಟ್ಟೆ, ಮತ್ತು ಚಿಗುರುಗಳಿಂದಲೂ ಎಲ್ಲರ ಮನಸ್ಸಿಗೂ ಹಿತವಾಗಿ, ಪಿಶಾಚಗಳ ವಾಸಕ್ಕೆ ಆಸ್ಪದವಲ್ಲದವುಗಳಾಗಿಯೂ ಇದ್ದುವು. ಯುಧಿಷ್ಠಿರನ ನಡೆವಳಿಕೆಯು ಸರ್ವಾದರಣೀಯವಾಗಿ, ಅವನ ಚರಿತ್ರವು ಭೂಮಿಯನ್ನೆಲ್ಲಾ ವ್ಯಾಪಿಸಿದ್ದಿತು. ಪಾಂಡವರೆಲ್ಲರೂ ಧರ್ಮವನ್ನಾಚರಿಸುತ್ತ ಕೋಪತಾಪಗಳನ್ನು ಜಯಿಸಿ, ಅಣ್ಣನ ಆಜ್ಞೆಯಂತೆ ನಡೆಯುತ್ತಿದ್ದರು. ಸಿಂಹದಂತೆ ವಿಶಾಲವಾದ ಎದೆ! ಮೊಳಕಾಲಿನವರೆಗೆ ನೀಡಿದ ತೋಳುಗಳು ದಿವ್ಯತೇಜಸ್ಸು, ಇವುಗಳಿಂದ ಸರ್ವಾಂಗಸುಂದರರಾಗಿ ಶೋಭಿಸುತ್ತ, ದಾನಶೀಲರೂ, ಜಿತೇಂದ್ರಿಯರೂ ಆಗಿದ್ದರು. ಧರ್ಮರಾಜನು ರಾಜ್ಯಭಾರಮಾಡುತ್ತಿದ್ದಾಗ ಋತುಗಳು ತಮ್ಮ ಎಲ್ಲಾಗುಣಗಳೊಡನೆ ಪ್ರಕಾಶಿಸಿದುವು. ಗ್ರಹಗಳೂ, ನಕ್ಷತ್ರಗಳೂ, ಸುಖವನ್ನುಂಟುಮಾಡುತ್ತಿದ್ದುವು. ಭೂಮಿಯಲ್ಲಿ ಧನಧಾನ್ಯಗಳು ಸಮೃದ್ಧವಾಗಿ ರತ್ನಗಳು ಹೇರಳವಾಗಿ ದೊರೆಯುತ್ತ, ಕಾಮಧೇನುವಿನಂತೆ ಕೇಳಿದ ಭೋಗಗಳನ್ನು ಸಾವಿರಾರು ವಿಧದಿಂದ ಒದಗಿಸುತ್ತಿದ್ದುವು. ಅಲ್ಲಿನ ಮಾನವರು ತಮ್ಮತಮ್ಮ ಕುಲಾಚಾರಗಳನ್ನೆಲ್ಲ ಮನು ಮೊದಲಾದವರ ವಿಧಿಗೆ ತಪ್ಪದಂತೆ ಆಚರಿಸುತ್ತಿದ್ದರು. ಇತರರಾಜರೆಲ್ಲರೂ ಯುಧಿಷ್ಠಿರನಿಗೆ ಪ್ರಿಯವನ್ನು ಬಯಸಿ, ಧರ್ಮಾಸಕ್ತರಾಗಿ, ವಂಶವೃದ್ಧಿಕರವಾದ ಕಾರ್ಯಗಳನ್ನು ಮಾಡುತ್ತ

ಮನುಧರ್ಮಕ್ಕನುಸಾರವಾಗಿ ರಾಜ್ಯಭಾರವನ್ನು ಮಾಡುತ್ತಿದ್ದರು. ಭೂಮಿಯಲ್ಲಿ ಆ ಅರಸರ ನಡೆವಳಿಕೆಯು ಯಾವಾಗಲೂ ಧರ್ಮದಲ್ಲಿಯೇ ಆಸಕ್ತವಾಗಿದ್ದಿತು. ಎಲ್ಲಾ ಪ್ರಜೆಗಳ ಬುದ್ಧಿಯೂ ರಾಜರ ನಡೆವಳಿಕೆಯನ್ನೇ ಅನುಸರಿಸುತ್ತಿದ್ದಿತು. ಈ ರೀತಿಯಲ್ಲಿ ಯುಧಿಷ್ಠಿರನು ಗಾಂಡೀವಧಾರಿಯಾದ ಅರ್ಜುನನೊಡನೆ ಸೇರಿ, ಇಂದ್ರನು ಸ್ವರ್ಗವನ್ನು ಹೇಗೋ ಹಾಗೆ ಈ ಭಾರತವರ್ಷವನ್ನು ಪರಿಪಾಲಿಸುತ್ತಿದ್ದನು '' ಎಂದನು.

ಇದು ಹದಿನೈದನೆಯ ಅಧ್ಯಾಯವು.

{ ಕೃಷ್ಣಾರ್ಜುನರ ವಿಹಾರಗಳು. ಕೃಷ್ಣನು ತನ್ನ ಊರಿಗೆ ಹೋಗಲು ಯುಧಿಷ್ಠಿರನಿಂದ ಅನುಜ್ಞೆಯನ್ನು ಪಡೆದು ಬರುವಂತೆ ಅರ್ಜುನನಿಗೆ ತಿಳಿಸಿದುದು. }

ಆಗ ಜನಮೇಜಯನು '' ಓ ಬ್ರಾಹ್ಮಣೋತ್ತಮಾ! ಹೀಗೆ ಪಾಂಡವರು ರಾಜ್ಯವನ್ನು ಜಯಿಸಿ, ದೇಶಕ್ಕೆ ಶಾಂತಿಯನ್ನುಂಟುಮಾಡಿದ ಮೇಲೆ ಕೃಷ್ಣಾರ್ಜುನರಿಬ್ಬರೂ ಏನು ಮಾಡಿದರು? '' ಎಂದು ಕೇಳಲು, ವೈಶಂಪಾಯನನು, ' ರಾಜಾ! ಧರ್ಮರಾಜನಿಗೆ ವ್ಯಸನವು ನೀಗಿ ಶಾಂತನಾದಮೇಲೆ, ಕೃಷ್ಣಾರ್ಜುನರಿಬ್ಬರೂ ಸಂತುಷ್ಟರಾದರು. ಸ್ವರ್ಗದಲ್ಲಿ ವಿಹರಿಸುವ ದೇವೇಂದ್ರರಂತೆ ಅವರಿಬ್ಬರೂ ಉಲ್ಲಾಸದಿಂದ ಹೊರಟು, ವಿಚಿತ್ರವಾದ ವನಗಳಲ್ಲಿಯೂ. ಅಂದವಾದ ತಪ್ಪಲುಳ್ಳ ಪರ್ವತಗಳಲ್ಲಿಯೂ, ಇನ್ನೂ ಅಲ್ಲಲ್ಲಿರುವ ಪುಣ್ಯತೀರ್ಥಗಳು, ತಟಾಕಗಳು, ನದಿಗಳು, ಇವುಗಳಲ್ಲೆಲ್ಲಾ ನಂದನವನದಲ್ಲಿ ಅಶ್ವಿನೀದೇವತೆಗಳು ಹೇಗೋ ಹಾಗೆ ಸಂಚರಿಸುತ್ತ ಆನಂದದಿಂದ್ದರು. ಅನ್ಯೋನ್ಯ ಪ್ರೀತಿವಿಶ್ವಾಸಗಳಿಂದ ಆ ಮಹಾತ್ಮರಿಬ್ಬರೂ, ಇಂದ್ರಪ್ರಸ್ಥದೊಳಗಿನ ಮನೋಹರವಾದ ಸಭೆಯಲ್ಲಿ ಪ್ರವೇಶಿಸಿ, ಹಿಂದೆ ನಡೆದ ವಿಚಿತ್ರವಾದ ಯುದ್ಧಕಥೆಗಳನ್ನೂ ಆಗಾಗ ತಮಗುಂಟಾದ ಕಷ್ಟಗಳನ್ನೂ ಕುರಿತು ಅಲ್ಲಿ ಮಾತಾಡುತ್ತಿದ್ದರು. ನಡುನಡುವೆ, ಆಗಾಗ ಪ್ರಸ್ತಾವವಶದಿಂದ ಋಷಿಗಳ ಮತ್ತು ದೇವತೆಗಳ ಕಥೆಗಳನ್ನೂ ಹೇಳಿಕೊಳ್ಳುತ್ತಿದ್ದರು! ಕೃತಜ್ಞನಾದ ಕೃಷ್ಣನು

ನಡುನಡುವೆ ಪಾರ್ಥನಿಗೆ ರಸವತ್ತಾಗಿಯೂ, ವಿಚಿತ್ರವಾಗಿಯೂ, ಉತ್ತಮವಾದ ಶಬ್ದಾರ್ಥತತ್ವಗಳನ್ನೊಳಕೊಂಡುದಾಗಿಯೂ ಇರುವ ಕಥೆಗಳನ್ನು ಹೇಳುತ್ತಿದ್ದನು. ಕೃಷ್ಣನು ಹೀಗೆ ಪುತ್ರ ಮಿತ್ರ ಜ್ಞಾತಿ ವಧದಿಂದ ತಪಿಸುತ್ತಿರುವ ಅರ್ಜುನನನ್ನು ರಸವತ್ತಾದ ಕಥೆಗಳಿಂದ ಸಮಾಧಾನಪಡಿಸುತ್ತಿದ್ದನು. ಕಾರ್ಯದಕ್ಷನೂ, ಮಹಾತೇಜಸ್ವಿಯೂ ಆದ ಕೃಷ್ಣನು ಹೀಗೆ ಆ ಅರ್ಜುನನನ್ನು ಸಮಾಧಾನಪಡಿಸುತ್ತ, ತಾನೂ ತನ್ನ ಮಹಾಭಾರವನ್ನು ಕಳೆದುಕೊಂಡು ವಿಶ್ರಾಂತಿ ಹೊಂದಿದವನಂತೆ ಸಂತುಷ್ಟನಾಗಿದ್ದನು. ಈ ಕಥೆಗಳೆಲ್ಲವೂ ಮುಗಿದಮೇಲೆ ಕೃಷ್ಣನು ಮೃದುವಾಕ್ಯಗಳಿಂದ ಅರ್ಜುನನನ್ನು ಕುರಿತು ಸಮಾಧಾನಪಡಿಸುತ್ತ ಹೀಗೆ ಹೇಳುವನು.

'ಓ ಸವ್ಯಸಾಚೀ! ರಿಪುಭಯಂಕರಾ! ಧರ್ಮರಾಜನೇನೋ ಶಸ್ತ್ರಬಲದಿಂದ ಈ ಭೂಮಿಯೆಲ್ಲವನ್ನೂ ಜಯಿಸಿದನು. ಈಗ ಅತನು ಭೀಮ ನಕುಲ ಸಹದೇವರ ಪ್ರಭಾವದಿಂದ ಶತ್ರುಭಯವಿಲ್ಲದೆ ರಾಜ್ಯವನ್ನು ಅನುಭವಿಸುತ್ತಿರುವನು. ಶತ್ರುವಶವಾಗಿದ್ದ ರಾಜ್ಯವನ್ನು ಯುಧಿಷ್ಠಿರನು ಕ್ಷತ್ರಧರ್ಮದಿಂದಲೇ ಪಡೆದನು. ಧರ್ಮದಿಂದಲೇ ಆ ದುರ್ಯೋಧನನೂ ಯುದ್ಧದಲ್ಲಿ ಕೊಲ್ಲಲ್ಪಟ್ಟನು. ಯಾವಾಗಲೂ ಅಧರ್ಮದಲ್ಲಿಯೇ ಆಸಕ್ತರಾಗಿ, ದುರಾಶೆಯಿಂದ ಅಪ್ರಿಯವಾಕ್ಯಗಳನ್ನಾಡುತ್ತಿದ್ದ ದುರಾತ್ಮರಾದ ಧೃತರಾಷ್ಟ್ರಪುತ್ರರೆಲ್ಲ ತಮ್ಮ ಪರಿವಾರಗಳೊಡನೆ ಕೊಲ್ಲಲ್ಪಟ್ಟರು. ಧರ್ಮಿಷ್ಠನಾದ ಧರ್ಮರಾಜನು ಈಗ ನಿನ್ನಿಂದ ರಕ್ಷಿತನಾಗಿ ನೆಮ್ಮದಿಯಿಂದ ರಾಜ್ಯಭಾರಮಾಡುತ್ತಿರುವನು. ಓ ಶತ್ರುನಾಶಕಾ! ನಿನ್ನೊಡನೆ ಅರಣ್ಯಗಳಲ್ಲಿ ವಾಸಮಾಡುತ್ತಿದ್ದರೂ ನಾನು ಎಷ್ಟೋ ಆನಂದಪಡುವೆನು. ಹೀಗಿರುವಾಗ, ಅನೇಕಜನರೂ, ಕುಂತೀದೇವಿಯೂ ಇರತಕ್ಕ ಈ ಸ್ಥಳದಲ್ಲಿರಲು ನನ್ನ ಸಂತೋಷಕ್ಕೆ ಕಡಿಮೆಯೇನಿದೆ? ಅರಸನಾದ ಈ ಧರ್ಮರಾಜನೂ, ಮಹಾಪರಾಕ್ರಮಶಾಲಿಯಾದ ಭೀಮಸೇನನೂ, ಮಾದ್ರೀಪುತ್ರರಾದ ನಕುಲಸಹದೇವರೂ ಇರುವ ಸ್ಥಳದಲ್ಲಿ ವಾಸಮಾಡುವುದು ನನಗೆ ಇನ್ನೂ ಅಧಿಕಪ್ರಿಯ

ನಾಗಿದೆ. ಆದರೇನು? ಅರ್ಜುನಾ! ಇದುವರೆಗೂ ನಾನು ನಿನ್ನೊಡನೆ ಕಲೆತು, ಸ್ವರ್ಗಸಮಾನವಾದ ಸಭೆಗಳಲ್ಲಿಯೂ, ರಮ್ಯವೂ ಪುಣ್ಯಪ್ರದವೂ ಆದ ಸ್ಥಳಗಳಲ್ಲಿಯೂ ಕಾಲವನ್ನು ಕಳೆದೆನು. ಈ ಸಂತೋಷದಲ್ಲಿದ್ದ ನನಗೆ ವಸುದೇವನನ್ನೂ, ಬಲರಾಮನನ್ನೂ, ಇನ್ನೂ ಇತರ ವೃಷ್ಣಿಕುಲದವರನ್ನೂ ನೋಡಿ ಬಹಳ ದಿನಗಳಾದುವು. ಈಗ ದ್ವಾರಕಾನಗರಕ್ಕೆ ಹೋಗಲು ನೀನು ಸಮ್ಮತಿಸಬೇಕು. ಶೋಕದಿಂದ ತಪಿಸುತ್ತಿದ್ದ ಯುಧಿಷ್ಠಿರನಿಗೆ ನಾನೂ, ಶರತಲ್ಪದಲ್ಲಿದ್ದ ಭೀಷ್ಮನೂ ಆಯಾ ಕಾಲಕ್ಕೆ ತಕ್ಕ ಹಲವು ಬಗೆಯ ಸಮಾಧಾನವಾಕ್ಯಗಳನ್ನು ಹೇಳಿದೆವು. ತಾನೇ ಇತರರಿಗೆ ಉಪದೇಶಿಸಲು ಸಮರ್ಥನಾಗಿದ್ದ ಆ ಧರ್ಮರಾಜನನ್ನು ನಾವು ಸಮಾಧಾನಪಡಿಸಬೇಕಾಯಿತು. ಮಹಾತ್ಮನಾದ ಆತನೂ ನಮ್ಮ ಮಾತಿನಲ್ಲಿ ವಿಶ್ವಾಸವಿಟ್ಟನು. ಅವನಲ್ಲಿ ಸಹಜವಾಗಿಯೇ ಧರ್ಮಬುದ್ಧಿ, ಉಪಕಾರಸ್ಮರಣೆ, ಸತ್ಯ, ಸದ್ಬುದ್ಧಿ, ಮರ್ಯಾದೆ, ಇವೆಲ್ಲ ನೆಲಗೊಂಡಿರುವುವು. ಅರ್ಜುನಾ! ನಿನಗೆ ಸಮ್ಮತವಾದಲ್ಲಿ ನೀನು ಈಗಲೇ ಹೋಗಿ, ಮಹಾತ್ಮನಾದ ಆ ಯುಧಿಷ್ಠಿರನಿಗೆ ಈ ನನ್ನ ಅಭಿಲಾಷೆಯನ್ನು ತಿಳಿಸು. ಪ್ರಾಣವೇ ಹೋಗುವ ಸಂಭವವಿದ್ದರೂ ನಾನು ಆತನಿಗೆ ಅಪ್ರಿಯವಾದ ಕಾರ್ಯವನ್ನು ಮಾಡಲಾರೆನು. ಈಗಲೂ ನಾನು ದ್ವಾರಕೆಗೆ ಹೋಗುವುದು ಆತನಿಗೆ ಸಮ್ಮತವಾಗಿಲ್ಲದಿದ್ದರೆ, ನಾನು ಹೊರಡುವುದೇ ಇಲ್ಲವೆಂದೂ ನಿರ್ಧರವಾಗಿ ಹೇಳುವೆನು. ನಿನ್ನ ಪ್ರಿಯಕ್ಕೂ, ಮೇಲ್ಮೆಗೂ, ನಾನು ಹೀಗೆ ಹೇಳುತ್ತಿರುವೆನೆಂದು ತಿಳಿ. ನಾನು ಇಲ್ಲಿ ವಾಸಮಾಡುವುದರಿಂದ ನಡೆಯಬೇಕಾದ ಪ್ರಯೋಜನವೆಲ್ಲವೂ ನೆರವೇರಿತು. ದುರ್ಯೋಧನನು ತನ್ನ ಸೈನ್ಯದೊಡನೆಯೂ, ಪರಿವಾರಗಳೊಡನೆಯೂ ಹತನಾದನು. ಸಮುದ್ರಾಂತವಾಗಿ, ಪರ್ವತಾರಣ್ಯಗಳಿಂದ ಕೂಡಿದ ರತ್ನಸಮೃದ್ಧವಾದ ಈ ಭೂಮಿಯೆಲ್ಲವೂ ಈಗ ಧರ್ಮರಾಜನ ವಶವಾಯಿತು. ಧರ್ಮಜ್ಞನಾದ ಯುಧಿಷ್ಠಿರನು ಮಹಾತ್ಮರಾದ ಅನೇಕ ಋಷಿಶ್ರೇಷ್ಠರಿಂದಲೂ, ಸಿದ್ಧರಿಂದಲೂ ಉಪಾಸಿಸಲ್ಪಡುತ್ತಿರುವನು. ಇನ್ನುಮೇಲೆ ಆತನು ಯಾವಾಗಲೂ ವಂದಿಗಳಿಂದ ಸ್ತುತಿಸಲ್ಪಡುತ್ತ ಹೀಗೆಯೇ ಭೂಮಿಯನ್ನು ರಕ್ಷಿಸುತ್ತಿರಲಿ. ಆದುದರಿಂದ ಈಗ

ನೀನು ಧರ್ಮರಾಜನ ಬಳಿಗೆ ನನ್ನೊಡನೆ ಬಂದು, ನಾನು ದ್ವಾರಕೆಗೆ ಹೋಗಲು ಆತನ ಅನುಮತಿಯನ್ನು ತೆಗಿಸಿಕೊಡು ! ಮಹಾಬುದ್ಧಿಶಾಲಿಯೂ, ಪೂಜಾರ್ಹನೂ ಆದ ಆ ಯುಧಿಷ್ಠಿರನಲ್ಲಿ ನನಗೆ ಅಸಾಧಾರಣವಿಶ್ವಾಸವುಂಟು. ಆದುದರಿಂದ, ಈ ನನ್ನ ಶರೀರವನ್ನೂ, ಮನೆಯಲ್ಲಿರುವ ಎಲ್ಲಾ ಧನವನ್ನೂ ಯುಧಿಷ್ಠಿರನಿಗಾಗಿಯೇ ಅರ್ಪಿಸಿರುವೆನು. ಅರ್ಜುನಾ! ಇನ್ನುಮೇಲೆ ನಾನು (ಇಲ್ಲಿ) ವಾಸಮಾಡುವುದರಿಂದ ನನಗೆ ನಿನ್ನ ಸಹವಾಸಸುಖವೊಂದುಹೊರತು ನಿಮಗೆ ನನ್ನಿಂದ ಯಾವ ಪ್ರಯೋಜನವೂ ಇಲ್ಲ. ಈಗ ಭೂಮಿಯು ಸದಾಚಾರಸಂಪನ್ನನಾದ ಯುಧಿಷ್ಠಿರನ ನಿಯಮಕ್ಕೊಳಪಟ್ಟಿರುವುದು. ಇನ್ನೇನಾಗಬೇಕು ? ” ಎಂದನು. ಆಗ ಅರ್ಜುನನು ಕೃಷ್ಣನನ್ನು ಪೂಜಿಸಿ ‘ ಹಾಗೆಯೇ ಆಗಲಿ’ ಎಂದನು.

ಇದು ಹದಿನಾರನೆಯ ಅಧ್ಯಾಯವು.

**ಇಲ್ಲಿಗೆ ಅಶ್ವಮೇಧಪರ್ವವು ಮುಗಿದುದು.**

# ಅನುಗೀತಾಪರ್ವವು.

ಅರ್ಜುನನು ಹಿಂದೆ ತನಗೆ ಹೇಳಿದ ಗೀತಾರ್ಥವನ್ನು ಇನ್ನೊಮ್ಮೆ ವಿವರಿಸಿ ಉಪದೇಶಿಸುವಂತೆ ಕೃಷ್ಣನನ್ನು ಪ್ರಾರ್ಥಿಸಿದುದು. ಆತನು ಸಿದ್ಧಕಾಶ್ಯಪಸಂವಾದವಿಚಾರವನ್ನು ತಿಳಿಸಿದುದು.

ಜನಮೇಜಯನು “ ಓ ಬ್ರಾಹ್ಮಣಾ ! ಶತ್ರುಜಯವಾದಮೇಲೆ ಆ ಸಭೆಯಲ್ಲಿ ವಿನೋದಿಸುತ್ತಿದ್ದ ಕೃಷ್ಣಾರ್ಜುನರಿಬ್ಬರಿಗೂ ಆಮೇಲೆ ನಡೆದ ಮಾತುಗಳೇನು ? ” ಎನಲು, ವೈಶಂಪಾಯನನು “ ರಾಜಾ ! ಅರ್ಜುನನು ಕೃಷ್ಣನೊಡನೆ ಸಂತೋಷದಿಂದ ಆ ಸಭೆಯಲ್ಲಿ ವಿನೋದಿಸುತ್ತಿದ್ದನಷ್ಟೆ ! ಅವರಿಬ್ಬರೂ ಪರಿಜನಪರಿವೃತರಾಗಿ, ಆ ಸಭೆಯಲ್ಲಿ ರಮ್ಯವಾದ ಒಂದು ಸ್ಥಳಕ್ಕೆ ಬಂದು ಕುಳಿತರು. ಆಗ ಅರ್ಜುನನು

ಕೃಷ್ಣನನ್ನು ಕುರಿತು 'ದೇವಕೀಪುತ್ರಾ! ಯುದ್ಧವು ಆರಂಭಿಸಿದಾಗ ನಾನು ನಿನ್ನ ಮಹಿಮೆಯನ್ನೂ, ನಿನ್ನ ಈಶ್ವರಸ್ವರೂಪವನ್ನೂ ತಿಳಿದುಕೊಂಡೆನು. ಹಿಂದೆ ನೀನು ವಿಶ್ವಾಸದಿಂದ ತಿಳಿಸಿದ ಗೀತಾರ್ಥಗಳೆಲ್ಲವೂ ಯುದ್ಧಾತುರದಲ್ಲಿದ್ದ ನನಗೆ ಈಗ ಮರೆತುಹೋಗಿವೆ. ಆ ವಿಷಯುಗಳನ್ನು ಅಡಿಗಡಿಗೆ ಕೇಳಬೇಕೆಂಬ ಕುತೂಹಲವೂ ನನ್ನ ಮನಸ್ಸಿನಲ್ಲಿರುವುದು. ನೀನಾದರೋ ಶೀಘ್ರದಲ್ಲಿಯೇ ದ್ವಾರಕೆಗೆ ಹೋಗುವುದರಲ್ಲಿರುವೆ' ಎಂದನು. ಅದನ್ನು ಕೇಳಿ ತೇಜಸ್ವಿಯೂ, ವಾಕ್ಚತುರನೂ ಆದ ಕೃಷ್ಣನು ಅರ್ಜುನನನ್ನು ಆಲಿಂಗಿಸಿ 'ಓ ಪಾರ್ಥಾ! ನಾನು ನಿನಗೆ ರಹಸ್ಯವೂ, ಸನಾತನವೂ ಆದ ಧರ್ಮಸ್ವರೂಪಗಳನ್ನೂ, ಅವುಗಳಿಂದ ಲಭ್ಯವಾಗುವ ಶಾಶ್ವತವಾದ ಎಲ್ಲಾ ಲೋಕಗಳನ್ನೂ ತಿಳಿಸಿರುವೆನು. ನೀನು ಅನ್ಯಮನಸ್ಕನಾಗಿ ಅವನ್ನೆಲ್ಲ ಮನಸ್ಸಿನಲ್ಲಿಡದೆ ಮರೆತುಹೋದುದು ನನಗೆ ಬಹಳ ಅಪ್ರಿಯವಾಗಿರುವುದು. ಅವೆಲ್ಲ ಈಗ ತಿರುಗಿ ನನ್ನ ಸ್ಮರಣೆಗೆ ಬರುವುದೂ ಕಷ್ಟವೇ! ಪಾಂಡವಾ! ನೀನು ಶ್ರದ್ಧೆಯಿಲ್ಲದವನು, ಮತ್ತು ಮಂದಮತಿಯೆಂದೂ ತೋರುವುದು. ಮತ್ತೊಮ್ಮೆ ನಾನು ಅವೆಲ್ಲವನ್ನೂ ಹಾಗೆಯೇ ಹೇಳಲಾರೆನು. ಆಗ ಚಿತ್ತಸಮಾಧಾನದಿಂದ ಪರಬ್ರಹ್ಮಸ್ವರೂಪವನ್ನು ನನ್ನ ಯೋಗಬಲದಿಂದ ಹೇಳಿದೆನು. ಅವೆಲ್ಲವನ್ನೂ ತಿರುಗಿ ಅದೇ ರೀತಿಯಲ್ಲಿ ಈಗ ಹೇಳಲು ಸಾಧ್ಯವಲ್ಲ. ಆದರೆ (ಈಗ) ಆ ವಿಷಯದಲ್ಲಿ ಪುರಾತನವಾದ ಒಂದು ಇತಿಹಾಸವನ್ನು ಸಾಂಗವಾಗಿ ಹೇಳುವೆನು. ಅದನ್ನು ತಿಳಿಯುವುದರಿಂದ ನಿನಗೆ ಉತ್ತಮಗತಿಯು ಲಭಿಸುವುದು. ಹಿಂದೊಮ್ಮೆ ಒಬ್ಬ ಬ್ರಾಹ್ಮಣನು ಸ್ವರ್ಗಲೋಕಕ್ಕೂ, ಬ್ರಹ್ಮಲೋಕಕ್ಕೂ ನಿರಂಕುಶವಾಗಿ ಹೋಗಿ ಹಿಂತಿರುಗಿ ಬರುತಿದ್ದನು. ಆಗ ನಾವು ಆತನನ್ನು ಪೂಜಿಸಿ ಕೆಲವು ವಿಷಯುಗಳನ್ನು ಕೇಳಿದೆವು. ಪಾರ್ಥಾ! ಆಗ ಆತನು ತಿಳಿಸಿದ ವಿಷಯುಗಳನ್ನೇ ನಿನಗೆ ತಿಳಿಸುವೆನು. ನಿಷ್ಕಲ್ಮಷಹೃದಯದಿಂದ ಕೇಳು.

ಆಗ ಆ ಬ್ರಾಹ್ಮಣನು ನನ್ನನ್ನು ಕುರಿತು "ಓ ವಾಸುದೇವಾ! ಪ್ರಾಣಿಗಳಮೇಲಿನ ಕರುಣೆಯಿಂದ ನೀನು ಯಾವ ಮೋಕ್ಷಧರ್ಮವನ್ನು

ಕುರಿತು ಕೇಳುವೆಯೋ, ಅಜ್ಞಾನವನ್ನು ನೀಗಿಸತಕ್ಕ ಆ ವಿಚಾರವನ್ನು ನಾನು ಯಥಾವತ್ತಾಗಿ ತಿಳಿಸುವೆನು. ಎಚ್ಚರಿಕೆಯಿಂದ ಕೇಳು. ತಪಸ್ವಿಯೂ, ಧರ್ಮಸೂಕ್ಷ್ಮವನ್ನು ತಿಳಿದವನೂ ಆದ ಕಾಶ್ಯಪನೆಂಬ ಒಬ್ಬ ಬ್ರಾಹ್ಮಣನು ಮತ್ತೊಬ್ಬ ಬ್ರಾಹ್ಮಣನ ಬಳಿಗೆ ಹೋದನು. ಆ ವಿಪ್ರನು ಧರ್ಮರಹಸ್ಯಗಳನ್ನರಿತವನು! ವೇದವಿದನು! ಶಾಸ್ತ್ರಜ್ಞಾನದ ಅಂತ್ಯವನ್ನೂ, ಯೋಗಬಲದಿಂದುಂಟಾದ ಜ್ಞಾನವನ್ನೂ ಪಡೆದವನು. ಲೌಕಿಕತತ್ವಾರ್ಥಗಳಲ್ಲಿ ಸಮರ್ಥನು. ಸುಖದುಃಖಗಳ ಸ್ವರೂಪವನ್ನರಿತವನು. ಜಾತಿಸ್ಮರಣದತತ್ವವನ್ನರಿತವನು. ಪುಣ್ಯಪಾಪಗಳನ್ನು ತಿಳಿದವನು. ಉತ್ತಮಾಧಮ ಪ್ರಾಣಿಗಳಿಗೆ ಅವುಗಳ ಸ್ವಕರ್ಮದಿಂದುಂಟಾಗುವ ಗತಿಗಳನ್ನೆಲ್ಲ ಬಲ್ಲವನು. ಮುಕ್ತನಂತೆ ಸಂಚರಿಸುವವನು. ಸಿದ್ಧನು. ಮತ್ತು ಇಂದ್ರಿಯನಿಗ್ರಹವುಳ್ಳವನು! ಬ್ರಹ್ಮತೇಜಸ್ಸುಳ್ಳವನು. ಲೋಕಸಂಚಾರಿ. ಅಂತರ್ಧಾನಗತಿಯನ್ನು ತಿಳಿದು, ಚಕ್ರಧಾರಿಗಳಾದ ಸಿದ್ಧರೊಡನೆ ಗೋಪ್ಯವಾಗಿ ಸಂಚರಿಸುವವನು. ಅವರೊಡನೆ ಕುಳಿತು ಏಕಾಂತವಾಗಿ ಮಾತನಾಡುವವನು. ಗಾಳಿಯಂತೆ ಅಂತರಿಕ್ಷದಲ್ಲಿ ಸಂಚರಿಸುವವನು. ಇಂತಹ ಮಹಾಮಹಿಮೆಯುಳ್ಳವನೆಂದು ಕೇಳಿ, ಕಾಶ್ಯಪನು ಧರ್ಮವನ್ನು ಕೇಳುವ ಉದ್ದೇಶದಿಂದ ಆತನ ಸಮೀಪಕ್ಕೆ ಹೋಗಿ, ವಿಧ್ಯುಕ್ತರೀತಿಯಲ್ಲಿ ಆತನ ಪಾದಗಳಿಗೆ ನಮಸ್ಕರಿಸಿ, ಪರಮಭಕ್ತಿಯಿಂದ ಅವನಿಗೆ ವಿವಿಧೋಪಚಾರಗಳನ್ನು ಮಾಡಿ ಸಂತೋಷಗೊಳಿಸಿದನು. ಕಾಶ್ಯಪನು ಆ ಬ್ರಾಹ್ಮಣಶ್ರೇಷ್ಠನನ್ನು ಗುರುವಿನಂತೆ ಭಾವಿಸಿ, ಸಕಲ ಗೌರವಗಳಿಂದಲೂ ಸಂತೋಷಪಡಿಸಿದನು. ಇವುಗಳಿಂದ ಆ ಗುರುವು ತೃಪ್ತನಾಗಿ, ಶಿಷ್ಯನಾದ ಆ ಕಾಶ್ಯಪನಿಗೆ ಸಿದ್ಧಿಕರವಾದ ಮಾರ್ಗವೇನೆಂದು ಪರಿಭಾವಿಸಿ ಹೀಗೆಂದು ಹೇಳುವನು.

'ಅಯ್ಯಾ! ಮನುಷ್ಯರು ತಾವು ಮಾಡಿದ ಹಲವುಬಗೆಯ ಕರ್ಮಗಳಿಂದಲೇ ಈ ಲೋಕದ ಸುಖವನ್ನೂ, ದಿವ್ಯಲೋಕವಾಸವನ್ನೂ ಪಡೆಯುವರು. ಆದರೆ, ಇವುಗಳಲ್ಲಿ ಎಲ್ಲಿಯೂ ಅಕ್ಷಯವಾದ ಶಾಶ್ವತಸುಖವು ಲಭಿಸದು. ಎಲ್ಲಿಯೂ ಅವರು ಶಾಶ್ವತವಾಗಿ ನೆಲೆನಿಲ್ಲುವುದಿಲ್ಲ.

ಶ್ರಮಪಟ್ಟು ಸಂಪಾದಿಸಿದ ಬಹುದೊಡ್ಡ ಪದವಿಯನ್ನೂ ಅಡಿಗಡಿಗೆ ಕಳೆದುಕೊಳ್ಳುವರು. ನಾನೂಕೂಡ ಹಿಂದೆ ಕಾಮಕ್ರೋಧಗಳಿಗೀಡಾಗಿ, ತೃಷ್ಣೆಯಿಂದ ಮೋಹಿತನಾಗಿ, ಹಲವು ಪಾಪಗಳನ್ನು ಮಾಡಿ, ಕಷ್ಟವೂ, ಅಶುಭವೂ ಆದ ಗತಿಗಳನ್ನು ಪಡೆದೆನು. ಅಡಿಗಡಿಗೆ ಜನನಮರಣದ ಕಷ್ಟಗಳನ್ನೂ ಅನುಭವಿಸಿದೆನು. ನಾನಾಬಗೆಯ ಆಹಾರಗಳನ್ನು ಭುಜಿಸಿದೆನು. ಹಲವು ಸ್ತ್ರೀಯರ ಸ್ತನ್ಯಗಳನ್ನು ಪಾನಮಾಡಿದೆನು. ಹಲವು ಬಗೆಯ ತಾಯಿತಂದೆಗಳನ್ನು ಕಂಡೆನು. ವಿಚಿತ್ರಸುಖಗಳನ್ನೂ, ಅನುಭವಿಸಿದೆನು! ಹಲವು ದುಃಖಗಳನ್ನೂ ಅನುಭವಿಸಿದೆನು. ಅನೇಕವೇಳೆ ನನ್ನ ಪ್ರಿಯರಿಂದ ಅಗಲಿ ಅಪ್ರಿಯರೊಡನೆ ಕೂಡಾಡಿದೆನು. ಶ್ರಮಪಟ್ಟು ಸಂಪಾದಿಸಿದ ದ್ರವ್ಯವನ್ನೆಲ್ಲ ಹಾಳುಮಾಡಿಕೊಂಡೆನು. ಬಂಧುಗಳಿಂದಲೂ, ಇತರರಿಂದಲೂ ಅಧಿಕ ಕಷ್ಟತರವಾದ ಅವಮಾನಗಳಳ್ನೂ, ಉಗ್ರವಾದ ಶಾರೀರಕ ಮಾನಸಿಕ ಬಾಧೆಗಳರ್ನೂ ಅನುಭವಿಸಿದೆನು. ಕ್ರೂರವೂ, ಅಸಹ್ಯವೂ ಆದ ಸೆರೆ, ಕೊಲೆ, ಮೊದಲಾದ ಭಂಗಗಳಿಗೂ ಗುರಿಯಾದೆನು. ನರಕದಲ್ಲಿ ಬಿದ್ದು, ಅಲ್ಲಿನ ಯಾತನೆಗಳನ್ನೂ ಸಹಿಸಿದುದಾಯಿತು. ಈ ಲೋಕದಲ್ಲಿ ಶೀತೋಷ್ಣಾದಿ ದ್ವಂದ್ವಗಳಿಂದುಂಟಾದ ಅನೇಕ ವ್ಯಸನಗಳನ್ನೂ ಅನುಭವಿಸಿದುದಾಯಿತು. ಹೀಗೆ ಬಹಳ ಅವಮಾನಗಳನ್ನನುಭವಿಸಿ, ಮಹಾವ್ಯಸನಕ್ಕೆ ಗುರಿಯಾಗಿದ್ದ ನಾನು, ನಿರ್ವೇದದಿಂದ ಈ ಲೋಕವ್ಯವಹಾರವನ್ನು ಬಿಟ್ಟೆನು. ಆ ದುಃಖದಿಂದ ಲೋಕತ್ರಯವೂ ನನಗೆ ಬೇಡವಾಯಿತು. ಕೊನೆಗೆ ಈ (ಸಿದ್ಧ) ಮಾರ್ಗವನ್ನು ತಿಳಿದು, ಅದನ್ನು ಅಭ್ಯಸಿಸಿದೆನು. ಅದರಿಂದ ನನಗೆ ಜ್ಞಾನವಿಕಾಸವುಂಟಾಗಿ ಸಿದ್ಧಿಯನ್ನು ಪಡೆದೆನು. ನಾನು ತಿರುಗಿ ಭೂಲೋಕಕ್ಕೆ ಬರಲಾರೆನು. ಪ್ರಜಾಸೃಷ್ಟಿ ಮೊದಲುಗೊಂಡು, ಮೋಕ್ಷದವರೆಗೂ ಇರುವ ಎಲ್ಲಾ ಲೋಕಗಳನ್ನೂ, ನನಗುಂಟಾದ ಶುಭಗತಿಗಳನ್ನೂ ಈಗ ನಾನು ತಿಳಿಯಬಲ್ಲೆನು. ಓ ಬ್ರಾಹ್ಮಣಶ್ರೇಷ್ಠಾ! ಈಗ್ಗೆ ನಾನು ಈ ಉತ್ತಮಸಿದ್ಧಿಯನ್ನು ಪಡೆದಿರುವೆನು. ಇನ್ನುಮೇಲೆ ಇದಕ್ಕಿಂತಲೂ ಉತ್ತಮವಾದ ಸತ್ಯಲೋಕವನ್ನು ಸೇರುವೆನು. ಆಮೇಲೆ ಅದಕ್ಕಿಂತಲೂ ಮೇಲೆನಿಸಿದ ಅವ್ಯಕ್ತವಾದ ಬ್ರಹ್ಮಪದವನ್ನೂ (ಮೋಕ್ಷವನ್ನೂ) ಪಡೆಯುವೆನು. ಇದರಲ್ಲಿ ನಿನಗೆ

ಯಾವ ಸಂದೇಹವೂ ಬೇಡ. ನಾನು ತಿರುಗಿ ಮನುಷ್ಯಲೋಕಕ್ಕೆ ಬರುವವನಲ್ಲ. ನಿನ್ನಲ್ಲಿ ಪ್ರೀತನಾಗಿರುವೆನು. ನಿನಗೆ ನನ್ನಿಂದ ಏನಾಗಬೇಕೋ ತಿಳಿಸು. ನೀನು ಯಾವುದನ್ನು ಪಡೆಯುವ ಉದ್ದೇಶದಿಂದ ನನ್ನಬಳಿಗೆ ಬಂದಿರುವೆಯೆಂಬುದನ್ನೂ ನಾನು ಬಲ್ಲೆನು. ನಾನು ಶೀಘ್ರದಲ್ಲಿಯೇ (ಮೇಲಿನಲೋಕಕ್ಕೆ) ಹೋಗುವೆನು. ಅದಕ್ಕಾಗಿಯೇ ಈಗ ನಾನು ನಿನ್ನನ್ನು ಪ್ರಶ್ನಿಸಿದೆನು. ನಾನು ನಿನ್ನ ಸೇವೆಗೆ ಮೆಚ್ಚಿದೆನು. ನೀನು ತಿಳಿಯಲಪೇಕ್ಷಿಸುವುದನ್ನೆಲ್ಲ ಕೇಳು. ಈ ನಿನ್ನ ಬುದ್ಧಿಗಾಗಿ ಸಂತೋಷಿಸಿ ನಿನ್ನನ್ನು ಗೌರವಿಸಿ ಪೂಜಿಸುವೆನು. ಕಾಶ್ಯಪಾ! ಈ ನನ್ನ ಸ್ಥಿತಿಯನ್ನು ತಿಳಿದುದರಿಂದಲೇ ನೀನು ಮಹಾಬುದ್ಧಿವಂತನೆಂಬುದು ಸ್ಪಷ್ಟವು" ಎಂದನು.

ಇದು ಹದಿನೇಳನೆಯ ಅಧ್ಯಾಯವು.

{ ಸಿದ್ಧನು ಪ್ರಾಣಿಗಳ ಜನನಮರಣತತ್ವವನ್ನು ಕಶ್ಯಪನಿಗೆ ತಿಳಿಸಿದುದು. }

ಆಮೇಲೆ ಕಾಶ್ಯಪನು ಆ ಸಿದ್ಧನ ಪಾದಗಳಿಗೆ ನಮಸ್ಕರಿಸಿ, ಕಠಿನವಾದ ಕೆಲವು ಧರ್ಮರಹಸ್ಯಗಳನ್ನು ಪ್ರಶ್ನೆಮಾಡಲು, ಸಿದ್ಧನು ಅವುಗಳನ್ನೆಲ್ಲ ವಿವರಿಸತೊಡಗಿದನು. ಕಾಶ್ಯಪನು 'ಜೀವನು ಶರೀರದಿಂದ ಅಗಲುವುದು ಹೇಗೆ? ಆ ಶರೀರದಲ್ಲಿ ತಿರುಗಿ ಸೇರುವುದು ಹೇಗೆ? ಜನನಮರಣದಿಂದ ಕೂಡಿದ ಸಂಸಾರವನ್ನು ಸೇರಿದ ಜೀವನು, ಕಷ್ಟತರವಾದ ಆ ಸಂಸಾರದಿಂದ ಬಿಡುಗಡೆಹೊಂದುವುದು ಹೇಗೆ? ಆತ್ಮವು ಪ್ರಕೃತಿಯನ್ನೂ, ಅದರಿಂದುಂಟಾದ ಶರೀರವನ್ನೂ ತ್ಯಜಿಸುವುದು ಹೇಗೆ? ಒಂದು ಶರೀರವನ್ನು ಬಿಟ್ಟು ಬೇರೊಂದು ಶರೀರವನ್ನು ಹೇಗೆ ಸೇರುವುದು? ಪುರುಷನು ಶುಭಾಶುಭ ಕರ್ಮಗಳನ್ನು ಯಾವ ರೀತಿಯಲ್ಲಿ ಅನುಭವಿಸುವನು? ಶರೀರವಿಲ್ಲದ ಆತ್ಮಕ್ಕೆ (ಶರೀರಕಾರಣವಾದ) ಕರ್ಮವು ಎಲ್ಲಿಂದ ಬರುವುದು?' ಎಂದು ಕೇಳಿದನು. ಓ ವೃಷ್ಣಿಕುಲತಿಲಕಾ! ಇದನ್ನು ಕೇಳಿ ಸಿದ್ಧನು ಆ ಪ್ರಶ್ನೆಗಳಿಗೆಲ್ಲ ಕ್ರಮವಾಗಿ ಹೀಗೆ ಉತ್ತರಕೊಟ್ಟನು.

'ಈ ಜನ್ಮದಲ್ಲಿಯೇ ಶೀಘ್ರಫಲವನ್ನು ತೋರಿಸತಕ್ಕ ಕರ್ಮ ಗಳಿಲ್ಲ ಪ್ರಾಣಿಗಳ ಆಯುಷ್ಯವನ್ನೂ, ಸುಖವನ್ನೂ ವೃದ್ಧಿಮಾಡತಕ್ಕವು. ಆಯುಸ್ಸನ್ನೂ, ಕೀರ್ತಿಯನ್ನೂ ತರತಕ್ಕ ಯಾವಯಾವ ಕರ್ಮಗಳನ್ನು ಯಾವ ಜನ್ಮದಲ್ಲಿ ಮಾಡುವನೋ, ಅವೆಲ್ಲವೂ ಅನುಭವದಿಂದ ನಶಿಸುತ್ತಬಂದಾಗ, ಆ ಶರೀರವನ್ನು ಬಿಟ್ಟು ಮುಂದೆ ಬೇರೆ ಶರೀರವನ್ನು ಹೊಂದಬೇಕಾಗುವುದು. ಆಗ ವಿನಾಶಕಾಲಕ್ಕೆ ತಕ್ಕಂತೆ ವಿಪರೀತ ಬುದ್ಧಿ ಹುಟ್ಟುವುದು. ಆಗ ಅಜ್ಞಾನಿಯಾಗಿ ತನ್ನ ಸ್ವಭಾವವನ್ನೂ, ಬಲವನ್ನೂ, ಕಾಲವನ್ನೂ ತಿಳಿದುಕೊಳ್ಳಲಾರದೆ, ತನ್ನ ದೇಹಕ್ಕೆ ವಿರುದ್ಧವಾದವುಗಳನ್ನೇ ಮಿತಿಯಿಲ್ಲದೆ ಭುಜಿಸುವನು. ಮತ್ತು ಆಗ ಅತಿಕಷ್ಟ ಕಾರ್ಯಗಳಿಗೆ ಕೈಯಿಕ್ಕುವನು. ಒಂದು ಸಮಯದಲ್ಲಿ ಅಧಿಕವಾಗಿ ಭುಜಿಸುವನು. (ಮತ್ತೊಂದು ವೇಳೆಯಲ್ಲಿ) ಉಪವಾಸವಿರುವನು. ದುಷ್ಟಾನ್ನವನ್ನೂ, ಮದ್ಯಮಾಂಸಗಳನ್ನೂ, ಪರಸ್ಪರವಿರುದ್ಧವಾದ ಆಹಾರಗಳನ್ನೂ, ಕಠಿನವಾದ ಆಹಾರಗಳನ್ನೂ, ಸೇವಿಸುವನು. ಬೆಳಗ್ಗೆ ತಿಂದುದು ಸಂಪೂರ್ಣವಾಗಿ ಜೀರ್ಣವಾಗದಿರುವಾಗಲೇ ತಿರುಗಿ ಮಿತಿಮೀರಿ ಭುಜಿಸುವನು. ಮಿತಿಮೀರಿ ಕೆಲಸಮಾಡುವನು. ಮತ್ತು ಮಿತಿಮೀರಿ ಸಂಭೋಗಿಸುವನು. ಯಾವಾಗಲೂ ಕಾರ್ಯಾತುರದಿಂದ (ಮಲಮೂತ್ರಗಳ) ವೇಗವನ್ನು ತಡೆಯುವನು. ಬಾಯಿಗೆ ರುಚಿಯಾದ ಆಹಾರವನ್ನೆಲ್ಲ ಸೇವಿಸುವನು. ಹಗಲು ನಿದ್ರೆ ಮಾಡುವನು. ಅಕಾಲದಲ್ಲಿ ಅಪಕ್ವಾಹಾರವನ್ನು ಭುಜಿಸಿ, ತಾನಾಗಿ (ವಾತವೇ ಮೊದಲಾದ) ದೋಷಗಳನ್ನು ವೃದ್ಧಿಮಾಡಿಕೊಳ್ಳುವನು. ಅದರಿಂದ ಮರಣಾಂತವಾದ ರೋಗದಲ್ಲಿ ಬಿಳುವನು. ನೇಣುಹಾಕಿಕೊಳ್ಳುವುದು ಮೊದಲಾದ ವಿಪರೀತಕಾರ್ಯಗಳಿಗೂ ಯತ್ನಿಸುವನು. ಇದರಿಂದ ಆ ಪೂರ್ವಶರೀರವು ನಶಿಸುವುದು. ಮರಣದಶೆಯವಿಷಯವಾಗಿಯೂ ನಾನು ಹೇಳುವುದನ್ನು ಕೇಳು. ಶರೀರದಲ್ಲಿರುವ ಉಷ್ಣವು ಕ್ರೂರವಾದ ವಾಯುವಿನಿಂದ ಉದ್ರೇಕಗೊಳಿಸಲ್ಪಟ್ಟು, ಶರೀರದಲ್ಲಿ ಪ್ರಸರಿಸಿ, ಎಲ್ಲಾ ಪ್ರಾಣಗಳನ್ನೂ ತಡೆಯುವುದು. ಅಧಿಕವೇಗವುಳ್ಳ ಆ ಉಷ್ಣವು ವೃದ್ಧಿಯಾಗಿ ಜೀವದ ಮುಖ್ಯ ಮರ್ಮಸ್ಥಾನಗಳನ್ನು ದಹಿಸುವುದು. ಇದರ ಪರಿಣಾಮವೇನೆಂದು ಕೇಳು! ಓ ಬ್ರಾಹ್ಮಣೋ

ತ್ತವೂ ! ಮರ್ಮಸ್ಥಾನಗಳು ಭೇದಿಸಲ್ಪಡುವಾಗ, ಜೀವನು ಬಾಧೆಗಳಿಗೀಡಾಗಿ, ಕೊನೆಗೆ ಶರೀರವನ್ನು ತ್ಯಜಿಸುವನು. ಯಾವಾಗಲೂ, ಎಲ್ಲಾ ಪ್ರಾಣಿಗಳಿಗೂ ಜನನಮರಣಗಳಿಂದ ಬಹುಕಷ್ಟವುಂಟು. ಎಲ್ಲವೂ ಶರೀರಗಳನ್ನು ಬಿಟ್ಟುಹೋಗತಕ್ಕವುಗಳೇ ! ಜೀವನು ಗರ್ಭದಲ್ಲಿರುವಾಗಲೂ, ಗರ್ಭದಿಂದ ಹೊರಗೆ ಬರುವಾಗಲೂ ಮಹಾವೇದನೆಯನ್ನು ಅನುಭವಿಸುವನು. ಮನುಷ್ಯನು ಪಂಚಭೂತಗಳ ಸಮವಾಯಸ್ಥಿತಿಯನ್ನು ಯಾವಾಗ ಬಿಡುತ್ತ ಬರುವನೋ, ಆಗ ಅವನ ಕೀಲುಗಳೆಲ್ಲ ಕೆಟ್ಟು, ದೇಹವು ನೀರು ತುಂಬಿಕೊಳಿಯುತ್ತಬರುವುದು. ಆ ಶೈತ್ಯದಿಂದ ಪಂಚಭೂತಗಳಲ್ಲಿಯೂ, ಪ್ರಾಣಾಪಾನಸ್ಥಾನಗಳಲ್ಲಿಯೂ ನೆಲೆಸಿರುವ ವಾಯುವು ಶರೀರದಲ್ಲಿ ಉಗ್ರವಾದ ಬೇರೆ ವಾಯುವಿನಿಂದ ಉದ್ರೇಕಗೊಳಿಸಲ್ಪಟ್ಟು, ಪಂಚಭೂತಗಳನ್ನೂ ಪ್ರತ್ಯೇಕಿಸಿಕೊಂಡು ಕ್ರಮದಿಂದ ಪ್ರಾಣಿಶರೀರವನ್ನು ಬಿಟ್ಟು ಮೇಲಕ್ಕೆ ಹೋಗುವುದು. ಇದೇ ಶರೀರತ್ಯಾಗವು. ಆಗ ಉಸಿರಾಟವು ನಿಂತುಹೋಗುವುದು. ಹೀಗೆ ದೇಹದಲ್ಲಿ ಉಷ್ಣವೂ, ಉಸಿರಾಟವೂ, ಕಾಂತಿಯೂ, ಚೈತನ್ಯವೂ, ಅಂಗಚೇಷ್ಟೆಯೂ ಇಲ್ಲದೆಹೋಗುವುದೇ ಮರಣವು. ಶರೀರವುಳ್ಳ ಜೀವನು (ಜೀವಂತನಾಗಿರುವಾಗ) ಯಾವ ಇಂದ್ರಿಯಗಳಿಂದ ಆಯಾ ವಿಷಯಗಳನ್ನು ತಿಳಿಯುತಿದ್ದನೋ, ಆ ಇಂದ್ರಿಯಗಳಿಂದ (ಪ್ರಾಣಹೋದಮೇಲೆ) ಅವೊಂದನ್ನೂ ತಿಳಿಯಲಾರನು. ಶರೀರದಲ್ಲಿದ್ದುಕೊಂಡು ಆಹಾರಗಳಮೂಲಕ ಅವಕ್ಕೆಲ್ಲ ತ್ರಾಣವನ್ನುಂಟುಮಾಡುವ ಜೀವನಾದರೋ ನಾಶರಹಿತನು. ಜೀವನಿಂದ ಮರಣಕಾಲದಲ್ಲಿ ಯಾವಯಾವುವು ಬಿಡಲ್ಪಡುವುವೋ, ಅವೇ ಮರ್ಮಸ್ಥಾನಗಳೆಂದು ಶಾಸ್ತ್ರಗಳು ತಿಳಿಸುವುವು. ಆ ಮರ್ಮಸ್ಥಾನಗಳು ಕೀಳಡುತ್ತ, ಪ್ರಾಣವು ಆಯಾಸ್ಥಾನಗಳಿಂದ ಅಗಲಿ, ಹೃದಯದಲ್ಲಿ ಪ್ರವೇಶಿಸಿ, ಅತಿಶೀಘ್ರದಲ್ಲಿಯೇ ಜ್ಞಾನವನ್ನು ಮರೆಸಿಬಿಡುವುದು. ಮೊದಲು ಚೈತನ್ಯದಿಂದಿದ್ದ ಆ ಪ್ರಾಣಿಗೆ, ಆಗ ತಮಸ್ಸಿನಿಂದ ಜ್ಞಾನವೂ, ಮರ್ಮಸ್ಥಾನಗಳೂ ಮರೆಸಲ್ಪಟ್ಟು, ಯಾವುದೂ ತಿಳಿಯದಂತಾಗುವುದು. ಆಗ ಜೀವನು ನಿರಾಶ್ರಯನಾಗಿ, ವಾಯುವಿನಿಂದ ಕದಲಿಸಲ್ಪಡುವನು. ಆ ಸ್ಥಿತಿಯಲ್ಲಿ ಭಯಂಕರವಾಗಿಯೂ, ತೀವ್ರವಾಗಿಯೂ ಇರುವ ನಿಶ್ವಾಸದೊಡನೆ ಜೀವನು ಹೊರಹೊರಡುತ್ತ, ಅಚೇ

ತನವಾದ ಆ ಶರೀರವನ್ನು ಬಲವಾಗಿ ಆಡಿಸಿಬಿಡುವನು. ಅವನು ಆ ಶರೀರವನ್ನು ಬಿಟ್ಟಮೇಲೆ, ತನ್ನ ಹಿಂದಿನ ಪುಣ್ಯಪಾಪಕರ್ಮಗಳಲ್ಲಿ ಬದ್ಧನಾಗಿ, ಆಯಾ ಕರ್ಮಗಳಿಗೆ ತಕ್ಕ ದೇಹಲಕ್ಷಣಗಳಿಂದ ಗುರ್ತಿಸಲ್ಪಡುವನು. ರಾತ್ರಿಯಲ್ಲಿ ಜನರು ಮಿಣಕುಹುಳುಗಳನ್ನು ಕಣ್ಣಿಂದ ಹೇಗೋ ಹಾಗೆ ಶಾಸ್ತ್ರಜ್ಞರು, ಜ್ಞಾನಚಕ್ಷುಸ್ಸಿನಿಂದಲೇ ಪುಣ್ಯಮಾಡಿದವನನ್ನೂ, ಪಾಪಿಷ್ಠನನ್ನೂ ಆಯಾಲಕ್ಷಣಗಳಿಂದ ತಿಳಿದುಕೊಳ್ಳುವರು. ಅಲ್ಲದೆ ಜೀವನು ಶರೀರದಲ್ಲಿ ಪ್ರವೇಶಿಸುವುದನ್ನೂ, ಶರೀರವನ್ನು ಬಿಟ್ಟು ಹೊರಗೆಹೋಗುವುದನ್ನೂ, ಅವನ ಪುನರ್ಜನ್ಮವನ್ನೂ ಸಿದ್ಧರು ತಮ್ಮ ದಿವ್ಯನೇತ್ರಗಳಿಂದ ನೋಡಬಲ್ಲರು. ಆ ಜೀವನಿಗೆ ಈ ಲೋಕದಲ್ಲಿಯೇ ಹಲವು ಸ್ಥಾನಗಳು ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿವೆ. ಇದು ಕರ್ಮಭೂಮಿಯೆನಿಸಿದೆ. ಆದುದರಿಂದ ಎಲ್ಲಾ ಪ್ರಾಣಿಗಳೂ ಪಾಪಪುಣ್ಯಕರ್ಮಗಳನ್ನು ಮಾಡಿ, ಈ ಲೋಕದಲ್ಲಿಯೇ ಕೆಲವು ಸುಖದುಃಖಗಳನ್ನು ಅನುಭವಿಸುವುವು. ಅಧಿಕ ಪಾಪಕರ್ಮಗಳನ್ನು ಮಾಡಿದವರು ನರಕಕ್ಕೂ ಗುರಿಯಾಗುವರು. ನರಕಗತಿಯು ಬಹಳ ಹೀನವೂ, ಕಷ್ಟವೂ ಆದುದು. ಇದರಲ್ಲಿ ಮನುಷ್ಯರು ಹಲವು ಬಾಧೆಗಳಿಗೊಳಗಾಗುವರು. ಆದುದರಿಂದ ಮೋಕ್ಷವು ಲಭಿಸುವುದು ಸುಲಭವಲ್ಲ. ಇದಕ್ಕಾಗಿಯೇ ಆತ್ಮವನ್ನು ರಕ್ಷಿಸಿಕೊಳ್ಳಬೇಕು. ಪ್ರಾಣಿಗಳು ಊರ್ಧ್ವಲೋಕಗಳನ್ನು ಸೇರಿ ಯಾವಯಾವ ಸ್ಥಾನಗಳಲ್ಲಿ ನೆಲೆಗೊಳ್ಳುವರೋ ಅವುಗಳನ್ನೂ ತಿಳಿಸುವೆನು ಕೇಳು. ಅವುಗಳನ್ನು ಕೇಳಿ ನೀನು ಮನೋದಾರ್ಢ್ಯವನ್ನೂ, ಕರ್ಮಗಳ ತತ್ವವನ್ನೂ ತಿಳಿಯಬಹುದು. ಯಾವ ಸ್ಥಳಗಳಲ್ಲಿ ಎಲ್ಲಾ ನಕ್ಷತ್ರಗಳೂ, ಚಂದ್ರಮಂಡಲವೂ ಇರುವುವೋ, ಯಾವ ಲೋಕದಲ್ಲಿ ಸೂರ್ಯಮಂಡಲವು ತನ್ನ ಕಾಂತಿಯಿಂದ ಪ್ರಕಾಶಿಸುತ್ತಿರುವುದೋ, ಅವೆಲ್ಲವೂ ಪುಣ್ಯಶಾಲಿಗಳು ವಾಸಮಾಡತಕ್ಕ ಸ್ಥಳಗಳು. ಆದರೆ, ಅಲ್ಲಿಗೆ ಹೋದವರೆಲ್ಲರೂ ಅಲ್ಲಿ ಕರ್ಮಕ್ಷಯವಾದಮೇಲೆ ಆಡಿಗಡಿಗೆ (ಆ ಲೋಕಗಳಿಂದ) ಕೆಳಗಿನ ಲೋಕಗಳಿಗೆ ಬರುವರು. ಆ ದಿವ್ಯಲೋಕಗಳಲ್ಲಿಕೂಡ ಉತ್ತಮಾಧಮಮಧ್ಯಮಗಳೆಂಬ ಭೇದಗಳುಂಟು. ಆದುದರಿಂದ ಅಲ್ಲಿಯೂ (ಇನ್ನೊಬ್ಬನು) ಸಂಪತ್ತಿನಿಂದ ಪ್ರಕಾಶಿಸುವುದನ್ನು ನೋಡಿ, ಮತ್ತೊಬ್ಬನಿಗೆ ತೃಪ್ತಿಯಿರದು. ಹೀಗೆ ಬೇರೆಬೇರೆ ಕರ್ಮಗತಿ

ಗಳನ್ನು ನಿನಗೆ ತಿಳಿಸಿದೆನು. ಇನ್ನು ಕರ್ಮಸಂಬಂಧವುಂಟಾಗುವ ರೀತಿಯನ್ನೂ ವಿವರಿಸುವೆನು. ಸಾವಧಾನದಿಂದ ಕೇಳು.

ಇದು ಹದಿನೆಂಟನೆಯ ಅಧ್ಯಾಯವು.

{ ಜೀವನಿಗೆ ಗರ್ಭಪ್ರವೇಶಾದಿ ವ್ಯಾಪಾರಗಳನ್ನು ಕುರಿತು ಸಿದ್ಧ ಕಾಶ್ಯಪರಿಗೆ ನಡೆದ ಸಂವಾದಗಳನ್ನು ಬ್ರಾಹ್ಮಣನು ಕೃಷ್ಣನಿಗೆ ತಿಳಿಸಿದುದು. }

ಈ ಲೋಕದಲ್ಲಿ ಪುಣ್ಯಕರ್ಮಗಳಾಗಲಿ, ಪಾಪಕರ್ಮಗಳಾಗಲಿ ನಶಿಸುವುದಿಲ್ಲ. ಅವು ಒಂದೊಂದು ಶರೀರವನ್ನೂ ಹಿಂಬಾಲಿಸುತ್ತಬಂದು, ಅಲ್ಲಲ್ಲಿಗೆ ತಕ್ಕ ಫಲವನ್ನು ಕೊಡುವುವು. ಫಲವೃಕ್ಷಗಳನ್ನು ಬೆಳೆಸಿದಷ್ಟೂ ಅವು ಅಧಿಕಫಲವನ್ನು ಕೊಡುವಂತೆ, ಶುದ್ಧಮನಸ್ಸಿನಿಂದ ಮಾಡಿದ ಪುಣ್ಯವು ಹೆಚ್ಚುಫಲವನ್ನು ತರುವುದು. ಹಾಗೆಯೇ ಕೆಟ್ಟ ಮನಸ್ಸಿನಿಂದ ಮಾಡಿದ ಪಾಪವೂ ಅಧಿಕ ದುಷ್ಫಲವನ್ನು ತರುವುದು. ಈ ಲೋಕದಲ್ಲಿ ಆತ್ಮನು ಮನಸ್ಸನ್ನು ಮುಂದಿಟ್ಟುಕೊಂಡೇ ಕರ್ಮದಲ್ಲಿ ಪ್ರವರ್ತಿಸುವುದು. ಕರ್ಮದಲ್ಲಿ ಬಿದ್ದು, ಕಾಮಕ್ರೋಧಗಳಿಂದಾವೃತವಾದ ಆತ್ಮವು ಹೇಗೆ ಗರ್ಭದಲ್ಲಿ ಪ್ರವೇಶಿಸುವುದೋ ಅದನ್ನೂ ತಿಳಿಸುವೆನು ಕೇಳು. ಪುರುಷವೀರ್ಯವು ಸ್ತ್ರೀಯ ಗರ್ಭಾಶಯವನ್ನು ಪ್ರವೇಶಿಸಿ ಶೋಣಿತದೊಡನೆ ಸೇರುವುದು. ಜೀವನು ತನ್ನ ಕರ್ಮಗಳಿಗೆ ತಕ್ಕ ಶುಭಾಶುಭಶರೀರಗಳನ್ನು ಆ ಶುಕ್ರ (ವೀರ್ಯ)ದ ಮೂಲಕವಾಗಿ ಪ್ರವೇಶಿಸುವನು. ಆತ್ಮನು ಸೂಕ್ಷ್ಮವಾಗಿಯೂ, ಅವ್ಯಕ್ತವಾಗಿಯೂ ಇರುವುದರಿಂದ, ಶರೀರಗಳಲ್ಲಿ ಸೇರಿಯೂ, ಆಯಾ ದೇಹಸಂಬಂಧವನ್ನು ಹೊಂದುವುದಿಲ್ಲ. ಕೊನೆಗೆ ಬ್ರಹ್ಮಜ್ಞಾನಿಯಾದ ಜೀವನು ಶಾಶ್ವತವಾದ ಆ ಬ್ರಹ್ಮವನ್ನೇ ಸೇರುವನು. ಆ ಬ್ರಹ್ಮವೇ ಎಲ್ಲಾ ಭೂತಗಳಿಗೂ ಉತ್ಪತ್ತಿಕಾರಣವು. ಅದರಿಂದಲೇ ಪ್ರಾಣಿಗಳೆಲ್ಲವೂ ಜೀವಿಸುವುವು. ಆ ಬ್ರಹ್ಮವೇ ಜೀವಿಗಳಿಗೂ ಜೀವನಾಗಿ, ಎಲ್ಲಾ ಪ್ರಾಣಿಗಳ ಗರ್ಭದಲ್ಲಿಯೂ ಪ್ರವೇಶಿಸಿ, ಇಂದ್ರಿಯಸ್ಥಾನಗಳಲ್ಲಿದ್ದುಕೊಂಡು, ಜ್ಞಾನವನ್ನುಂಟುಮಾಡುವನು. ಜ್ಞಾನವಿಶಿಷ್ಟನಾಗಿ ಗರ್ಭದಲ್ಲಿರುವ ಆ ಜೀವ

ನೇ ಅವಯುವಗಳನ್ನು ಆಡಿಸುವನು. ತಾಮ್ರಾದಿಲೋಹಗಳಿಂದ ಪ್ರತಿಮೆ ಮಾಡುವಾಗ, ಸ್ವರ್ಣವೇ ಮೊದಲಾದ ಇತರ ಲೋಹಗಳನ್ನು ಅಲ್ಪಪ್ರಮಾಣದಲ್ಲಿ ಸೇರಿಸಿದರೂ, ಅವು ಪ್ರತಿಮೆಯ ಶರೀರದಲ್ಲೆಲ್ಲ ವ್ಯಾಪಿಸುವಂತೆಯೇ, (ಸೂಕ್ಷ್ಮನಾದ) ಜೀವನು ಗರ್ಭವನ್ನೆಲ್ಲ ವ್ಯಾಪಿಸಿರುವನೆಂದು ತಿಳಿ. ಬೆಂಕಿಯ ಕಾವು ಕಬ್ಬಿಣದ ಗುಂಡಿನಲ್ಲಿ ಪ್ರವೇಶಿಸಿದಾಗ, ಆ ಉಷ್ಣವು ಗುಂಡಿನ ಸಮಸ್ತಭಾಗಕ್ಕೂ ವ್ಯಾಪಿಸುವಂತೆ ಶರೀರಗರ್ಭದಲ್ಲಿ ಜೀವನ ಸ್ಥಿತಿಯೆಂದು ತಿಳಿ. ಒಂದುಕಡೆಯಲ್ಲಿ ಬೆಳಗಿಸಿಟ್ಟ ದೀಪವು ಮನೆಯನ್ನೆಲ್ಲ ಪ್ರಕಾಶಪಡಿಸುವಂತೆಯೇ, ಜೀವನೂ ಶರೀರಭಾಗಗಳನ್ನೆಲ್ಲ ಪ್ರಕಾಶಪಡಿಸುವನು. ಆತನು ಹಿಂದಿನಜನ್ಮದಲ್ಲಿ ಮಾಡಿದ ಶುಭಾಶುಭಕರ್ಮಗಳಿಗನುಸಾರವಾಗಿ ಫಲವನ್ನನುಭವಿಸುವನು. (ಆ ಕರ್ಮವು) ಫಲಾನುಭವದಿಂದ ನಶಿಸುತ್ತಿದ್ದರೂ, ತಿರುಗಿತಿರುಗಿ ಬೇರೆ ಕರ್ಮಗಳು ಮಾಡಲ್ಪಡುತ್ತಿರುವುವು. ಜೀವನು ಮೋಕ್ಷಸಾಧಕವಾದ ಧರ್ಮವನ್ನು ತಿಳಿಯುವವರೆಗೆ, ಹೀಗೆಯೇ ಕರ್ಮದಲ್ಲಿ ನಿರತನಾಗಿರುವನು. ಹಲವುಬಗೆಯ ಜನ್ಮಗಳಲ್ಲಿ ತೊಳಲುತ್ತಿರುವ ಜೀವನು, ಯಾವ ಸದುಪಾಯದಿಂದ ಸುಖವನ್ನು ಪಡೆಯುವನೋ ಆ ಧರ್ಮವನ್ನೂ ನಿನಗೆ ತಿಳಿಸುವೆನು. ದಾನ, ವ್ರತ, ಬ್ರಹ್ಮಚರ್ಯೆ, ಶಾಸ್ತ್ರವಿಹಿತಗಳಾದ ನಿಯಮಗಳನ್ನನುಷ್ಠಿಸುವುದು, ಇಂದ್ರಿಯನಿಗ್ರಹ, ಮನೋನಿಗ್ರಹ, ಪ್ರಾಣಿದಯೆ, ಸಹನೆ, ಪರರ ಧನವನ್ನಪಹರಿಸದಿರುವುದು, ಪ್ರಾಣಿಗಳಿಗೆ ಮನಸ್ಸಿನಲ್ಲಿಯೂ ಅಪ್ರಿಯವನ್ನು ಬಯಸದಿರುವುದು, ತಂದೆತಾಯಿಗಳನ್ನು ಸೇವಿಸುವುದು, ದೇವತೆಗಳನ್ನೂ ಅತಿಥಿಗಳನ್ನೂ ಪೂಜಿಸುವುದು, ಗುರುಪೂಜೆ, ಶುಚಿತ್ವ, ಶುಭಕಾರ್ಯಗಳನ್ನು ಮಾಡುವುದು, ಇವೆಲ್ಲವೂ ಸಾಧುಗಳ ವ್ರತಗಳು. ಇವುಗಳಿಂದಲೇ ಆತ್ಮೋಜ್ಜೀವನಕ್ಕೆ ಸಾಧಕವಾದ ಧರ್ಮವನ್ನು ಗಳಿಸಬಹುದು. ಸಾಧುಗಳಿಂದ ಆಚರಿಸಲ್ಪಡುವ ಧರ್ಮವೇ ಸದಾಚಾರವು. ಅದು ಸ್ವರ್ಗ ಮೋಕ್ಷಗಳೆಂಬ ಎರಡು ಫಲಗಳನ್ನೂ ತರುವುದು. ಸಾಧುಗಳಲ್ಲಿ ಇವು ಯಾವಾಗಲೂ ನೆಲೆಸಿರುವುದನ್ನು ಕಾಣಬಹುದು. ಸಾಧುಗಳು ಅನುಷ್ಠಿಸುವ ಆಚಾರವೇ ಧರ್ಮವನ್ನು ನಿರ್ದೇಶಿಸುವುದು. ಅದೇ ಸನಾತನಧರ್ಮವು. ಅವುಗಳನ್ನು ಸರಿಯಾಗಿ ಅನುಷ್ಠಿಸುವವನು ಎಂದಿಗೂ ದುರ್ಗತಿಗೆ ಹೋ

ಗುವುದಿಲ್ಲ. ಆ ಧರ್ಮವನ್ನು ಬಿಟ್ಟವನು ಸಂಸಾರಬಂಧದಲ್ಲಿ ಕಟ್ಟಲ್ಪಡುವನು. ಯೋಗಿಯೂ, ಮುಕ್ತನೂ ಆದವನು ಇವರೆಲ್ಲರಿಗಿಂತಲೂ ಶ್ರೇಷ್ಠನು. ಎಲ್ಲಾ ವಿಧಗಳಲ್ಲಿಯೂ ಧರ್ಮದಿಂದಿರುವವನು ದೀರ್ಘಕಾಲದ ಮೇಲಾದರೂ ಸಂಸಾರವನ್ನು ದಾಟುವನು. ಹೀಗೆ ಎಲ್ಲಾ ಜೀವಿಗಳೂ ಹಿಂದೆ ಮಾಡಿದ ಕರ್ಮಕ್ಕೆ ತಕ್ಕ ಫಲವನ್ನನುಭವಿಸುವುವು. ಆ ಕರ್ಮವೇ ಜನ್ಮಕ್ಕೆ ಕಾರಣವು. ಆತ್ಮನು ಅವುಗಳಿಂದಲೇ ಭಂಗಕ್ಕೀಡಾಗಿ ಶರೀರವನ್ನು ಪಡೆಯುವನು. ಆತ್ಮಕ್ಕೆ ಮೊಟ್ಟಮೊದಲು ಶರೀರವು ಯಾರಿಂದ, ಹೇಗೆ ಬಂತೆಂಬ ವಿಷಯದಲ್ಲಿ ಪ್ರಪಂಚವೆಲ್ಲವೂ ಸಂಶಯಪಡುವುದು. ಆ ತತ್ವವನ್ನೂ ತಿಳಿಸುವೆನು ಕೇಳು. ಲೋಕಪಿತಾಮಹನಾದ ಬ್ರಹ್ಮದೇವನು, ತನಗೆತಾನೇ ಶರೀರವನ್ನು ಸೃಷ್ಟಿಮಾಡಿಕೊಂಡು, ಸ್ಥಾವರಜಂಗಮಗಳಾದ ಮೂರು ಲೋಕಗಳನ್ನೂ ಸೃಷ್ಟಿಸತೊಡಗಿದನು. ಆಮೇಲೆ ಅವನು ಪ್ರಾಣಿಗಳಿಗೆ (ಪೃಥಿವ್ಯಪ್ ತೇಜಸ್ಸು ಎಂಬೀ ಮೂರರಿಂದಾದ) ಪ್ರಧಾನವಾದ ಪ್ರಕೃತಿಯನ್ನು (ಶರೀರವನ್ನು) ಪಡೆದನು. ಅದು ಈ ಲೋಕವೆಲ್ಲವನ್ನೂ ವ್ಯಾಪಿಸಿರುವುದು. ಅದೇ ಈ ಲೋಕಕ್ಕೆ ಪ್ರಧಾನವೆಂದು ಹೇಳುವರು. ಶರೀರವು ಕ್ಷರವೆಂದೂ, ಅದರಿಂದ ಬೇರೆಯಾಗಿ ನಾಶರಹಿತವಾದ ಜೀವವು ಅಕ್ಷರವೆಂದೂ ಹೇಳಲ್ಪಡುವುದು. ಶರೀರ, ಜೀವ, ಬ್ರಹ್ಮ, ಈ ಮೂರರಲ್ಲಿಯೂ ಶರೀರವೂ, ಜೀವನೂ ಒಂದೊಂದರಲ್ಲಿ ಪ್ರತ್ಯೇಕವಾಗಿಯೇ ಇರುವುವು. ಹೀಗೆ ಮೊದಲು ತಲೆದೋರಿದ ಬ್ರಹ್ಮದೇವನು ಸಕಲಭೂತಗಳನ್ನೂ, ಸ್ಥಾವರಗಳನ್ನೂ, ಜಂಗಮಗಳನ್ನೂ ಪಡೆದನೆಂದು ಪುರಾತನವಾದ ನಮ್ಮ ವೇದವು ತಿಳಿಸುವುದು. ಆ ಬ್ರಹ್ಮದೇವನೇ ಆಯಾ ಶರೀರಗಳಿಗೆ ಜೀವಿತಕಾಲಪರಿಮಾಣವನ್ನೂ, ಹಲವು ಜನ್ಮಗಳಲ್ಲಿ ಸುತ್ತಿ ಬರುವಿಕೆಯನ್ನೂ ವಿಧಿಸಿರುವನು. ತನಗೆ ಹಿಂದಿನ ಜನ್ಮದಲ್ಲಿದ್ದ ಸ್ವರೂಪವನ್ನು ತಿಳಿದ ಪ್ರಾಜ್ಞನೊಬ್ಬನು ತಿಳಿಸಿದುದನ್ನೇ ನಾನು ಹೇಳುವುದರಿಂದ ಇವೆಲ್ಲವೂ ನಿಜವು. ಯಾವಾತನು ಸುಖವನ್ನೂ, ದುಃಖವನ್ನೂ ಅನಿತ್ಯವೆಂದೂ, ಶರೀರವು ಅಶುದ್ಧವಸ್ತುಗಳಿಂದ ತುಂಬಿ, ನಾಶಕ್ಕೀಡಾಗಿ, ಕರ್ಮದಿಂದ ಏರ್ಪಟ್ಟುದೆಂದೂ ತಿಳಿಯುವನೋ ಮತ್ತು ಯಾವನು ಸುಖವನ್ನೆಲ್ಲ ದುಃಖಮಯವಾಗಿಯೇ ಭಾವಿಸುವನೋ, ಆತನು ಘೋರವೂ,

ದುಸ್ತರವೂ ಆದ ಸಂಸಾರಸಮುದ್ರವನ್ನು ದಾಟುವನು. ಜನನಮರಣಗಳಿಗೆ ಗುರಿಯಾಗುವ ಪ್ರಕೃತಿಯ ತತ್ವವನ್ನು ತಿಳಿದವನು, ಚೈತನ್ಯವುಳ್ಳ ಪ್ರಾಣಿಗಳೊಳಗಿನ ಆತ್ಮವನ್ನೆಲ್ಲ ಸಮವಾಗಿ ಕಾಣುವನು. ಓ ಸಾಧುಶ್ರೇಷ್ಠಾ! ಆದುದರಿಂದ ಯಾವಾತನು ಉತ್ತಮಪದವನ್ನು ಲಕ್ಷ್ಯದಲ್ಲಿಟ್ಟು, ಅದರ ಸಾಧನೆಗಾಗಿ ವಿಷಯವೈರಾಗ್ಯವನ್ನು ಪಡೆಯುವನೋ, ಅಂತವನಿಗೆ ಉಪದೇಶಿಸಬೇಕಾದ ವಿಷಯಗಳನ್ನೆಲ್ಲ ನಿನಗೆ ತಿಳಿಸುವೆನು. ಮತ್ತು ಶಾಶ್ವತವೂ, ನಾಶರಹಿತವೂ ಆದ ಆತ್ಮವಿಷಯವಾದ ಉತ್ತಮತತ್ವಗಳನ್ನೂ ತಿಳಿಸುವೆನು. ಇವುಗಳೆಲ್ಲವನ್ನೂ ಸಾವಧಾನವಾಗಿ ಕೇಳು"

ಇದು ಹತ್ತೊಂಭತ್ತನೆಯ ಅಧ್ಯಾಯವು.

{ ಸಿದ್ಧನು ಕಾಶ್ಯಪನಿಗೆ ಮೋಕ್ಷಸಾಧನಮಾರ್ಗಗಳನ್ನು ತಿಳಿಸಿದುದು. }

ಯಾವಾತನು ಏಕಾಂತಸ್ಥಳದಲ್ಲಿ ಕುಳಿತು, ಮಾತನಾಡದೆ, ಯಾವುದನ್ನೂ ಚಿಂತಿಸದೆ, ಹಿಂದಿನವುಗಳನ್ನು ಒಂದೊಂದಾಗಿ ತ್ಯಜಿಸುತ್ತಬರುವನೋ, ಆತನು ಕರ್ಮ (ಬಂಧದಿಂದ) ವಿಮುಕ್ತನಾಗುವನು. ಎಲ್ಲರನ್ನೂ ಮಿತ್ರರಂತೆ ಕಾಣುತ್ತ, ಎಲ್ಲವನ್ನೂ ಸಹಿಸುತ್ತ, ಮನಸ್ಸನ್ನು ನಿಗ್ರಹಿಸಿ, ಇಂದ್ರಿಯಗಳನ್ನು ಜಯಿಸಿ, ಕಾಮಕ್ರೋಧ ಭೀತಿಗಳನ್ನು ಬಿಟ್ಟವನೂ ಸಂಸಾರದಿಂದ ಮುಕ್ತನಾಗುವನು. ಯಾವನು ಎಲ್ಲಾ ಪ್ರಾಣಿಗಳನ್ನೂ ತನ್ನಂತೆಯೇ ಭಾವಿಸುತ್ತ, ಇಂದ್ರಿಯಗಳನ್ನಡಗಿಸಿ, ಶುದ್ಧನಾಗಿ, ಯಾವಾಗಲೂ ನೀತಿಮಾರ್ಗವನ್ನು ಹಿಡಿದು, ಗರ್ವಾಭಿಮಾನಗಳನ್ನು ಬಿಡುವನೋ, ಅವನೂ ಸರ್ವಸಂಗದಿಂದ ವಿಮುಕ್ತನಾಗುವನು. ಯಾವಾತನು ಜನನಮರಣಗಳು, ಸುಖದುಃಖಗಳು, ಲಾಭಾಲಾಭಗಳು, ಇಷ್ಟಾನಿಷ್ಟಗಳು, ಶತ್ರುಮಿತ್ರರು, ಎಂಬೀ ದ್ವಂದ್ವಗಳೊಳಗೆಲ್ಲ ಸಮಭಾವದಿಂದಿರುವನೋ, ಆತನು ಮೋಕ್ಷವನ್ನು ಪಡೆಯುವನು. ಯಾವುದಕ್ಕೂ ಆಸೆಪಡದೆ, ಯಾವುದನ್ನೂ ನಿರಾಕರಿಸದೆ, ಆಶಾರಹಿತನಾಗಿರುವವನೂ ಮುಕ್ತನೆನಿಸುವನು. ಯಾವನಿಗೆ ಶತ್ರುಗಳೂ, ಬಂಧುಗಳೂ,

ಮಕ್ಕಳೂ ಇರುವುದಿಲ್ಲವೋ, ಯಾವನು ಧರ್ಮಾರ್ಥಕಾಮಗಳನ್ನು ತ್ಯಜಿಸಿ, ಯಾವ ಸ್ಥಳದಲ್ಲಿಯೂ, ಯಾವುದರಲ್ಲಿಯೂ ನಿರಪೇಕ್ಷನಾಗಿರುವನೋ, ಅವನು ಮೋಕ್ಷವನ್ನು ಪಡೆಯುವನು. ಯಾವನು ಧರ್ಮಾಧರ್ಮಗಳೆರಡನ್ನೂ ತ್ಯಜಿಸಿ, ಪ್ರಾರಬ್ಧಕರ್ಮಗಳನ್ನು ಫಲಾನುಭವದಿಂದ ತೀರಿಸಿ, ಧಾತುಗಳು ಕಂದಿ, ಶಾಂತಾತ್ಮನೆನಿಸಿರುವನೋ ಅಂತವನು ಮುಕ್ತನೇ! ಕರ್ಮಗಳನ್ನೂ, ಆಸೆಯನ್ನೂ ತ್ಯಜಿಸಿ, ಈ ಪ್ರಪಂಚವು ಅಶಾಶ್ವತವೆಂದೂ, ನೆಲೆಯಿಲ್ಲದುದೆಂದೂ, ಜನ್ಮ, ಮೃತ್ಯು, ಜರಾ, ಮರಣ, ಪರಿಪೂರ್ಣವಾದುದೆಂದೂ ಯಾವಾತನು ತಿಳಿಯುವನೋ, ಮತ್ತು ಯಾವಾಗಲೂ ವೈರಾಗ್ಯಬುದ್ಧಿಯುಳ್ಳವನಾಗಿ, ತನ್ನ ದೋಷಗಳನ್ನು ತಾನೇ ಚೆನ್ನಾಗಿ ತಿಳಿಯುವನೋ, ಆತನು ಶೀಘ್ರದಲ್ಲಿಯೇ ಆತ್ಮವನ್ನು ಬಂಧನದಿಂದ ಬಿಡಿಸಿಕೊಳ್ಳುವನು. ಆತ್ಮನು ರೂಪ, ರಸ, ಶಬ್ದ, ಗಂಧ, ಸ್ಪರ್ಶಗಳಾಗಲಿ, ಇತರ ಪರಿಗ್ರಹಗಳಾಗಲಿ ಇಲ್ಲದವನೆಂದೂ, ಸುಲಭವಾಗಿ ಕಂಡುಕೊಳ್ಳಲಸಾಧ್ಯನೆಂದೂ ಯಾವನು ತಿಳಿಯುವನೋ ಅವನು ಮುಕ್ತನಾಗುವನು. ಆತ್ಮನು ಪಂಚಭೂತಗುಣಗಳಿಲ್ಲದವನು, ರೂಪವಿಲ್ಲದವನು, ನಿರ್ಗುಣನಾಗಿ ಗುಣಗಳನ್ನನುಭವಿಸುವವನು, ಎಂದು ಯಾವನು ತಿಳಿಯುವನೋ ಆತನು ಮೋಕ್ಷವನ್ನು ಪಡೆಯುವನು. ಯಾವಾತನು ಶಾರೀರಕ ಮಾನಸಿಕ ಸಂಕಲ್ಪಗಳನ್ನೆಲ್ಲ ಬುದ್ಧಿಯಿಂದ ತ್ಯಜಿಸಿ, ಉರಿಯಾರಿದ ಬೆಂಕಿಯಂತೆ ಶಾಂತಮನಸ್ಕನಾಗಿ, ಎಲ್ಲಾ ಸಂಸ್ಕಾರಗಳನ್ನೂ, ದ್ವಂದ್ವಗಳನ್ನೂ, ಬಂಧನಗಳನ್ನೂ ತೊರೆದು, ಇಂದ್ರಿಯಸಮೂಹಗಳನ್ನು ತಪಸ್ಸಿನಲ್ಲಿ ನಿಲ್ಲಿಸುವನೋ ಆತನು ಮುಕ್ತನೇ ಆಗುವನು. ಎಲ್ಲಾ ಸಂಸ್ಕಾರಗಳಿಂದಲೂ ಬಿಡಲ್ಪಟ್ಟವನು, ಸನಾತನವೂ, ಉತ್ತಮವೂ, ಶಾಂತವೂ, ಅಚಲವೂ, ನಾಶರಹಿತವೂ ಆದ ಬ್ರಹ್ಮವನ್ನು ಪಡೆಯುವನು. ಇನ್ನು ಈ ಪ್ರಪಂಚದಲ್ಲಿ ಯೋಗಿಗಳು ಯಾವುದನ್ನರಿತು ತಾವು ಸಿದ್ಧಿಪಡೆದಂತೆ ತಿಳಿಯುವರೋ ಶ್ರೇಷ್ಠವಾದ ಆ ಯೋಗಶಾಸ್ತ್ರವನ್ನೂ, ಮತ್ತು ಯಾವ ಯೋಗಗಳಿಂದ ಸದಾ ಧ್ಯಾನಪರನಾದವನು ಆತ್ಮವನ್ನು ತನ್ನಲ್ಲಿತಾನೇ ಕಾಣುವನೋ, ಅವುಗಳನ್ನೂ ಯಥಾವತ್ತಾಗಿ ಉಪದೇಶಿಸುವೆನು ಕೇಳು.

ಮೊದಲು ಇಂದ್ರಿಯಗಳನ್ನು (ವಿಷಯಗಳಿಂದ) ತಿರುಗಿಸಿ, ಮನಸ್ಸನ್ನು ಆತ್ಮದಲ್ಲಿಯೇ ನೆಲೆಗೊಳಿಸತಕ್ಕ ಉಗ್ರತಪಸ್ಸನ್ನು ಹಿಡಿದು, ಆಮೇಲೆ ಮೋಕ್ಷಯೋಗವನ್ನು ಅನುಷ್ಠಿಸಬೇಕು. ತಪಸ್ವಿಯಾಗಿ, ಶಾಶ್ವತವಾದ ವಸ್ತುವನ್ನು ಪಡೆಯುವ ಸಂಕಲ್ಪದಿಂದ, ಡಂಭಾಹಂಕಾರಗಳನ್ನು ತ್ಯಜಿಸಿದ ವಿದ್ವಾಂಸನಾದ ಬ್ರಾಹ್ಮಣನು ತನ್ನಲ್ಲಿಯೇ ಪರಮಾತ್ಮನಿರುವುದನ್ನು ತನ್ನ ಮನಸ್ಸಿನಿಂದ ಕಾಣುವನು. ಮನಸ್ಸನ್ನು ಪರಮಾತ್ಮನಲ್ಲಿ ದೃಢವಾಗಿಡಲು ಶಕ್ತಿಯುಳ್ಳವನು, ಬ್ರಹ್ಮಪ್ರಾಪ್ತಿಗೆ ಸಾಧಕವಾದ ಆ ಧ್ಯಾನವೊಂದನ್ನೇ ಹಿಡಿದು, ಸದಾ ಧ್ಯಾನಶೀಲನಾಗಿದ್ದು, ತನ್ನಲ್ಲಿ ಆ ಪರಮಾತ್ಮನನ್ನು ಕಾಣುವನು. ಯಾವಾತನು ಯಾವಾಗಲೂ ನಿಯಮ, ಧ್ಯಾನ, ಧೈರ್ಯ, ಇಂದ್ರಿಯನಿಗ್ರಹಗಳುಳ್ಳವನಾಗಿರುವನೋ, ಆತನು ಚೆನ್ನಾಗಿ ಯೋಗವನ್ನು ಹಿಡಿದು, ಅದರಿಂದ ಮನಸ್ಸಿನಲ್ಲಿ ಪರಮಾತ್ಮನನ್ನು ಕಾಣುವನು. ಒಬ್ಬನು ಸ್ವಪ್ನದಲ್ಲಿ ಕಂಡವನನ್ನು ಎಚ್ಚರವಾದ ಮೇಲೆ ನೋಡಿದಾಗ, ಅವನೇ ಇವನೆಂದು ತಿಳಿಯುವಂತೆ, ಒಳ್ಳೆಯ ಯೋಗಿಯು ಯೋಗಮಾಡುವಾಗ ಕಂಡ ಪರಮಾತ್ಮಸ್ವರೂಪವನ್ನೇ ಯೋಗವನ್ನು ನಿಲ್ಲಿಸಿದಮೇಲೆಯೂ ಅದೇ ಸ್ವರೂಪದಿಂದ ತಿಳಿಯುವನು. ಒಬ್ಬನು ಹುಲ್ಲಿನ ಹೊದಿಕೆಯಿಂದ ಹಂಚಿಯಕಡ್ಡಿಯನ್ನೆಳೆದು ಅದನ್ನು ಪ್ರತ್ಯೇಕಿಸಿ ನೋಡುವಂತೆಯೇ, ಯೋಗಿಯು ಆತ್ಮವನ್ನು ದೇಹದಿಂದ ಬೇರೆಯಾಗಿ ಕಾಣುವನು. ಆ ಹೊದಿಕೆಯನ್ನು ಶರೀರವನ್ನಾಗಿಯೂ, ಕಡ್ಡಿಯನ್ನು ಆತ್ಮಸ್ವರೂಪವನ್ನಾಗಿಯೂ ನಿರೂಪಿಸಿ, ಯೋಗಿಗಳು ಇದನ್ನೇ ಉತ್ತಮವಾದ ಒಂದು ಉದಾಹರಣೆಯಾಗಿ ತಿಳಿಸುವರು. ಶರೀರಿ (ಯೋಗಿ) ಯಾದವನು, ಯಾವಾಗ ತನ್ನನ್ನು ಯೋಗಿಯೆಂದು ತಿಳಿಯುವನೋ, ಅದರಿಂದಾಚೆಗೆ ಆತನಿಗೆ ತ್ರಿಲೋಕಾಧಿಪತಿಯೂ ಪ್ರಭುವೆನಿಸಲಾರನು. (ಆ ಯೋಗಿಯು) ಜರಾಮರಣಗಳೇನೂ ಇಲ್ಲದೆ, ಇಷ್ಟಾನುಸಾರವಾಗಿ ಬೇರೆ ಬೇರೆ ಶರೀರಗಳನ್ನು ಧರಿಸುವನು. ಆತನಿಗೆ ದುಃಖವೂ ಇಲ್ಲ! ಸಂತೋಷವೂ ಇಲ್ಲ! ಇಂದ್ರಿಯಗಳನ್ನು ಜಯಿಸಿದ ಯೋಗಿಯು ದೇವತೆಗಳಿಗೂ ದೇವನಾಗುವನು. ಅವನು ನೆಲೆಯಿಲ್ಲದ ನಶ್ವರಶರೀರವನ್ನು ತ್ಯಜಿಸಿ, ಶಾಶ್ವತವಾದ ಬ್ರಹ್ಮವನ್ನು ಸೇರುವನು. ಪ್ರಪಂಚನಾಶದಲ್ಲಿಯೂ ಆತನಿಗೆ

ಭಯವಿಲ್ಲ. ಇತರಪ್ರಾಣಿಗಳು ಕಷ್ಟಗಳನ್ನನುಭವಿಸುವಾಗಲೂ ಆತನಿಗೆ ಯಾವುದರಿಂದಲೂ ಕಷ್ಟವಿಲ್ಲ. ಆಶೆಯನ್ನು ತ್ಯಜಿಸಿ, ಶಾಂತಮನಸ್ಕನಾದ ಯೋಗಿಗೆ, ಸಂಗದಿಂದಲೂ, ಸ್ನೇಹದಿಂದಲೂ ಉಂಟಾಗುವ ಭಯಂಕರಗಳಾದ ದುಃಖಶೋಕಗಳಾವುವೂ ಇಲ್ಲ. ಆತನನ್ನು ಆಯುಧಗಳು ನೋಯಿಸಲಾರವು. ಆತನಿಗೆ ಮರಣವಿಲ್ಲ. ಅವನಿಗೆ ಅದಕ್ಕಿಂತಲೂ ಉತ್ತಮವಾದ ಸುಖವು ಪ್ರಪಂಚದಲ್ಲಿ ಬೇರೆ ಯಾವುದೂ, ಎಲ್ಲಿಯೂ ಇಲ್ಲ. ಆತನು ಮನಸ್ಸನ್ನು ಪರಮಾತ್ಮನಲ್ಲಿಯೇ ನೆಲೆಗೊಳಿಸಿ, ಜರಾ ಮರಣ ದುಃಖಗಳಿಲ್ಲದೆ ಸುಖವಾಗಿ ನಿದ್ರೆಮಾಡುವನು. ಈ ಮನುಷ್ಯಶರೀರವನ್ನು ಬಿಟ್ಟರೂ, ಇಷ್ಟಾನುಸಾರವಾಗಿ (ಬೇರೆ) ಶರೀರಗಳನ್ನು ಧರಿಸುವನು. ಆತನು (ಯೋಗದಿಂದುಂಟಾಗುವ) ಐಶ್ವರ್ಯವನ್ನು ಅನುಭವಿಸುವಾಗ, ಯಾವರೀತಿಯಿಂದಲೂ (ಆ ಯೋಗದಿಂದ) ವೈರಾಗ್ಯವನ್ನು ಪಡೆಯಲಾರನು. ಒಳ್ಳೇ ಯೋಗಿಯು ಯಾವಾಗ ಪರಮಾತ್ಮನನ್ನು ತನ್ನಲ್ಲಿ ಕಾಣುವನೋ, ಆಗ ಆತನು ಮಹೇಂದ್ರಪದವಿಯನ್ನಾದರೂ ಅಪೇಕ್ಷಿಸಲಾರನು. ಬ್ರಹ್ಮಪ್ರಾಪ್ತಿಗೆ ಸಾಧಕವಾದ ಧ್ಯಾನಮಾಡುವ ಸ್ವಭಾವವುಳ್ಳವನು, ಯೋಗಸಿದ್ಧಿಯನ್ನು ಪಡೆಯುವ ಬಗೆ ಹೇಗೆಂಬುದನ್ನೂ ತಿಳಿಸುವೆನು ಕೇಳು. ವೇದಾಂತಶ್ರವಣಮಾಡಿ, ಆ ಉಪದೇಶಗಳನ್ನೆಲ್ಲ ಮನನಮಾಡಿ, ತಾನು ಯಾವ ಶರೀರದಲ್ಲಿ ವಾಸಮಾಡುವನೋ ಆ ಶರೀರದೊಳಗೆಹೊರತು ಅದರಿಂದ ಹೊರಗಿನ ಬೇರೆ ಯಾವ ವಸ್ತುಗಳಲ್ಲಿಯೂ ಮನಸ್ಸನ್ನಿರಿಸಬಾರದು. ಶರೀರದೊಳಗೇ ಅಡಗಿದ್ದು ನಿತ್ಯವಾಸಮಾಡುವುದಕ್ಕೆ ಅನುಕೂಲವಾದ ಮೂಲಾಧಾರ ಮೊದಲಾದ ಚಕ್ರಗಳಲ್ಲೊಂದರಲ್ಲಿ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳಿಂದ ಕೂಡಿದ ಮನಸ್ಸನ್ನು ನೆಲೆಗೊಳಿಸಬೇಕು. (ಆ) ಚಕ್ರದಲ್ಲಿಟ್ಟು ಧ್ಯಾನಮಾಡುತ್ತ, ಸರ್ವಾತ್ಮಕವಾದ ಬ್ರಹ್ಮವನ್ನು ಅವನು ಯಾವಾಗ ಸಾಕ್ಷಾತ್ಕರಿಸುವನೋ, ಆಗ ಆತನ ಮನಸ್ಸು ಮತ್ತಾವುದನ್ನೂ ನೋಡಲಾರದು. ನಿರ್ಜನವಾದ ವನದಲ್ಲಿ, ನಿಶ್ಶಬ್ದವಾದ ಸ್ಥಳದಲ್ಲಿ, ಇಂದ್ರಿಯಸಮೂಹವನ್ನು ನಿಗ್ರಹಿಸಿ, ಶರೀರದ ಒಳಗೂ, ಹೊರಗೂ ವ್ಯಾಪಿಸಿರುವ ಬ್ರಹ್ಮವನ್ನು ಏಕಮನಸ್ಸಿನಿಂದ ಧ್ಯಾನಮಾಡಬೇಕು. ಹಲ್ಲು, ದವಡೆ, ನಾಲಗೆ, ಅಣ್ಣಾಲಗೆ, ಮಾಂಸಖಂಡಗಳು, ಹೃದಯ, ಹೃದಯಬಂಧನ,

(ನಾಡಿ) ಈ ಎಲ್ಲಾ ಕಡೆಯೂ ಆ ಬ್ರಹ್ಮವನ್ನು ನೆಲೆಗೊಳಿಸಿ ಧ್ಯಾನಮಾಡ ಬೇಕು ” ಎಂದೆನು. ಆ ಶಿಷ್ಯನು ಮೋಕ್ಷಧರ್ಮದ ವಿಷಯವಾಗಿ ಇಷ್ಟನ್ನು ಕೇಳಿದಮೇಲೆಯೂ, ತಿರುಗಿ ಪ್ರಶ್ನೆಮಾಡಿದನು. ಏನೆಂದರೆ, ‘ ನಾವು ಭುಜಿಸುವ ಅನ್ನವೆಲ್ಲವೂ ಹೊಟ್ಟೆಯಲ್ಲಿ ಜೀರ್ಣವಾಗುವುದು ಹೇಗೆ ? ಅದು ಯಾವ ರೀತಿಯಲ್ಲಿ ರಸವಾಗುವುದು ? ಮತ್ತು ಹೇಗೆ ರಕ್ತವಾಗುವುದು ? ಅದು ಮಾಂಸವನ್ನೂ, ಮೇದಸ್ಸನ್ನೂ, ನರಗಳನ್ನೂ, ಎಲುಬುಗಳನ್ನೂ ವೃದ್ಧಿಮಾಡುವುದು ಹೇಗೆ? ಪ್ರಾಣಿಗಳ ಶರೀರವು ವೃದ್ಧಿಯಾಗುವುದು ಹೇಗೆ? ಶರೀರವು ಬೆಳೆಯುತ್ತ, ಅದರಲ್ಲಿ ಬಲವು ಯಾವ ರೀತಿಯಲ್ಲಿ ಹೆಚ್ಚುವುದು ? ದೇಹವು ಮಲಮೂತ್ರಾದಿ ಕಶ್ಮಲಗಳನ್ನು ಬೇರೆಬೇರೆ ಯಾಗಿ ಹೊರಗೆ ತಳ್ಳುವುದೂ, ಅಡಗಿಸುವುದೂ ಹೇಗೆ ? ಯಾವ ಶಕ್ತಿ ಯಿಂದ ಈ ಆತ್ಮನು ಉಚ್ಛ್ವಾಸ ನಿಶ್ವಾಸಗಳನ್ನು ನಡೆಸುವನು ? ಈ ಆತ್ಮನು ಶರೀರದಲ್ಲಿ ಯಾವ ಸ್ಥಳದಲ್ಲಿರುವನು ? ಜೀವನು ಯಾವ ವ್ಯಾಪಾರದಿಂದ ಶರೀರವನ್ನು ಧರಿಸುವನು ? ತಿರುಗಿ ಯಾವ ವರ್ಣದ, ಮತ್ತು ಯಾವ ರೂಪದ ಶರೀರವನ್ನು ಪಡೆಯುವನು ? ನೀನು ಇದನ್ನು ಯಥಾವತ್ತಾಗಿ ತಿಳಿಸು ’ ಎಂದು ಕೇಳಿದನು. ಆಗ ನಾನು, ಆತನ ಪ್ರಶ್ನೆ ಗಳಿಗೆಲ್ಲ, (ನನ್ನ ಗುರುವಿನ ಬಳಿಯಲ್ಲಿ) ನಾನು ಕೇಳಿದ್ದಂತೆಯೇ ಉತ್ತರ ಹೇಳಿದೆನು.

ಕೃಷ್ಣಾ ! ಒಬ್ಬನು ತನ್ನ ಮನೆಯಲ್ಲಿಯೇ ಇಟ್ಟುಕೊಂಡಿರುವ ಒಂದು ಭಾಂಡವನ್ನು ಹುಡುಕುವಂತೆ, ಚಂಚಲವಾದ ಇಂದ್ರಿಯಗಳ ಮೂಲಕವಾಗಿ ಹೊರಗೆ ಹೊರಡುವ ಮನಸ್ಸನ್ನು ತನ್ನ ಶರೀರದಲ್ಲಿಯೇ ತಡೆದು ನಿಲ್ಲಿಸಿ, ಜಾಗರೂಕತೆಯಿಂದ ಆತ್ಮವನ್ನು ಹುಡುಕಬೇಕು. ಹೀಗೆ ಯಾವಾಗಲೂ ಪ್ರಯತ್ನಿಸುತ್ತ, ಸಂತೋಷದಿಂದಿರುವ ಮನುಷ್ಯನು ಬ್ರಹ್ಮವನ್ನು ಸಾಕ್ಷಾತ್ಕರಿಸಿ, ಪ್ರಧಾನವೆಂಬುದನ್ನೂ ತಿಳಿದವನಾಗಿ ಆಮೇಲೆ ಆ ಬ್ರಹ್ಮವನ್ನು ಸೇರುವನು. ಆ ಪರಮಾತ್ಮನನ್ನು ಕಣ್ಣುಗಳಿಂದಾಗಲಿ, ಬೇರೆ ಎಲ್ಲಾ ಇಂದ್ರಿಯಗಳಿಂದಾಗಲಿ ತಿಳಿಯುವುದು ಸಾಧ್ಯವಲ್ಲ. ಮನ ಸ್ಸೆಂಬ ಉತ್ತಮದೀಪದಿಂದಮಾತ್ರ ಅವನನ್ನು ಕಾಣಬಹುದು. ಆತನಿಗೆ

ಎಲ್ಲೆಲ್ಲಿಯೂ ಕೈಕಾಲುಗಳು! ಎಲ್ಲೆಲ್ಲಿಯೂ ಕಣ್ಣುಗಳು! ಎಲ್ಲೆಲ್ಲಿಯೂ ತಲೆಗಳು ಮತ್ತು ಮುಖಗಳು! ಎಲ್ಲೆಲ್ಲಿಯೂ ಕಿವಿಗಳು! ಅವನು ಪ್ರಪಂಚ ವನ್ನೆಲ್ಲ ವ್ಯಾಪಿಸಿರುವನು. ಜೀವನು ಶರೀರಕ್ಕಿಂತ ಬೇರೆಯಾದ ತನ್ನ ನಿಜವನ್ನು ಚೆನ್ನಾಗಿ ತಿಳಿದುಕೊಂಡು, ಶರೀರಾಭಿಮಾನವನ್ನು ತೊರೆದು, ಶುದ್ಧಸ್ವರೂಪಿಯಾದ ಆ ಬ್ರಹ್ಮವನ್ನು ಪಡೆಯಬೇಕು. ಜೀವನು ಮನಸ್ಸಿನಲ್ಲಿ ನಗುವಂತೆಯೇ ಪರಮಾತ್ಮನನ್ನು ಕಾಣುವನು. ಹೀಗೆ ಆ ಬ್ರಹ್ಮವನ್ನಾಶ್ರಯಿಸಿದಮೇಲೆ ಮೋಕ್ಷವನ್ನು ಪಡೆಯುವನು. ಓ ಬ್ರಾಹ್ಮಣಶ್ರೇಷ್ಠಾ! ನಿನ್ನ ಅನುಮತಿಯಮೇರೆಗೆ ಇಷ್ಟು ರಹಸ್ಯಗಳನ್ನು ತಿಳಿಸಿದೆನು. ಇನ್ನು ನೀನು ಸುಖವಾಗಿ ಹೊರಡು' ಎಂದೆನು. ಮಹಾತಪಸ್ವಿಯಾದ ಆ ಬ್ರಾಹ್ಮಣಶಿಷ್ಯನು, ಹೀಗೆ ತನ್ನ ಸಂಶಯಗಳನ್ನು ನೀಗಿಸಿಕೊಂಡು ತನ್ನ ಇಷ್ಟಾನುಸಾರವಾಗಿ ಹೊರಟನು' ಎಂದನು.

"ಓ ಕುಂತೀಪುತ್ರಾ! ಹೀಗೆ ನನಗೆ ಮೋಕ್ಷಧರ್ಮವನ್ನು ತಿಳಿಸಿದ ಮೇಲೆ ಆ ಬ್ರಾಹ್ಮಣನೂ ಅಲ್ಲಿಯೇ ಕಣ್ಮರೆಯಾದನು. ಪಾರ್ಥಾ! ಇದನ್ನೆಲ್ಲ ನೀನೂ ಸಾವಧಾನದಿಂದ ಕೇಳಿದೆಯಲ್ಲವೆ? ಹಿಂದೆ ನೀನು ರಥದಮೇಲಿದ್ದಾಗಲೂ ನಾನು ಇದನ್ನೇ ಹೇಳಿದ್ದರೂ, ಆಗ ನಿನ್ನ ಮನಸ್ಸು ಬೇರೆ ವಿಷಯದಲ್ಲಿದ್ದುದರಿಂದ, ಅದನ್ನು ಚೆನ್ನಾಗಿ ತಿಳಿಯಲಾರದೆಹೋಗಿರಬಹುದು. ಈ ತತ್ವಗಳೆಲ್ಲ ಪರಿಶುದ್ಧವಾದ ಏಕಾಗ್ರಚಿತ್ತವುಳ್ಳ ಮನುಷ್ಯನಿಂದಮಾತ್ರವೇ ತಿಳಿಯಲು ಸಾಧ್ಯವು. ಇದು ದೇವತೆಗಳಿಗೂ ದುರ್ಜ್ಞೇಯವಾದ ರಹಸ್ಯವು. ಈ ಲೋಕದಲ್ಲಿ ಬೇರೆ ಯಾವ ಮನುಷ್ಯನೂ ಇದನ್ನು ಕೇಳಿದವನಿಲ್ಲ. ನಿನ್ನಹೊರತು ಬೇರೆ ಮನುಷ್ಯನಾವನೂ ಇದನ್ನು ಕೇಳಲು ತಕ್ಕವನೂ ಅಲ್ಲ. ವಿಷಯಾಂತರಗಳಲ್ಲಿ ಮನಸ್ಸುಳ್ಳವನಾವನೂ ಇದನ್ನು ತಿಳಿಯಲಾರನು. ಓ ಕುಂತೀಕುಮಾರಾ! ಪುಣ್ಯಕರ್ಮಗಳನ್ನು ಮಾಡಿದವರೆಲ್ಲ ದೇವಲೋಕದಲ್ಲಿ ತುಂಬಿಹೋಗುವರು. ಹೀಗೆ ಮನುಷ್ಯರು ಮೇಲೆ ಬರುವುದು ದೇವತೆಗಳಿಗೆ ಇಷ್ಟವಿಲ್ಲ. ಯಾವುದು ಸನಾತನವಾದ ಬ್ರಹ್ಮವೋ, ಯಾವುದನ್ನು ಪಡೆದವನು ದುಃಖಲೇಶವಿಲ್ಲದೆ ನಿತ್ಯಸುಖವುಳ್ಳವನೂ, ಮರಣರಹಿತನೂ ಆಗುವನೋ, ಅದೇ ಎಲ್ಲಕ್ಕಿಂತ

ಲೂ ಉತ್ತಮವಾದ ಗತಿ! ಹೀನವರ್ಣದಲ್ಲಿ ಹುಟ್ಟಿದ್ದರೂ, ಸ್ತ್ರೀಯರಾಗಿದ್ದರೂ, ವೈಶ್ಯ ಶೂದ್ರರಾಗಿದ್ದರೂ (ಆತ್ಮದರ್ಶನವೆಂಬ) ಈ ಧರ್ಮವನ್ನು ಅವಲಂಬಿಸಿದವರೆಲ್ಲರೂ ಅಂತಹ ಸರ್ವೋತ್ತಮಗತಿಯನ್ನೇ ಪಡೆಯುವರು. ಹೀಗಿರುವಾಗ ನಾನಾಶಾಸ್ತ್ರಗಳನ್ನು ಕಲಿತು, ಸ್ವಧರ್ಮಗಳಲ್ಲಿ ಶ್ರದ್ಧೆಯುಳ್ಳವರಾಗಿ, ಬ್ರಹ್ಮಲೋಕವನ್ನೇ ಲಕ್ಷ್ಯದಲ್ಲಿಟ್ಟಿರುವ ಬ್ರಾಹ್ಮಣರೂ, ಕ್ಷತ್ರಿಯರೂ ಉತ್ತಮಗತಿಯನ್ನು ಪಡೆಯುವುದೇನು ದೊಡ್ಡದು? ಈ ಧರ್ಮತತ್ವವನ್ನೂ, ಇದನ್ನು ಪಡೆಯಲು ತಕ್ಕ ಉಪಾಯಗಳನ್ನೂ, ಅವುಗಳ ಸಿದ್ಧಿಯನ್ನೂ, ಫಲವನ್ನೂ, ಮೋಕ್ಷವಿಚಾರವನ್ನೂ, ದುಃಖಸ್ವರೂಪವನ್ನೂ ತಿಳಿಸಿದೆನು. ಇದಕ್ಕಿಂತಲೂ ಉತ್ತಮವಾದ ಸುಖವು ಬೇರೊಂದೂ ಇಲ್ಲ. ಇದನ್ನು ನೀನೂ ಶ್ರದ್ಧೆಯಿಂದಲೂ, ದೃಢಭಕ್ತಿಯಿಂದಲೂ ಕೇಳಿದೆಯಷ್ಟೆ! ಯಾವ ಮನುಷ್ಯನು ಈ ಲೋಕದಲ್ಲಿ ಚಿನ್ನ, ಬೆಳ್ಳಿ, ಮುಂತಾದ ಬೆಲೆಯುಳ್ಳ ವಸ್ತುಗಳನ್ನೂ, ಹುಲ್ಲು ಕಡ್ಡಿ ಮೊದಲಾದ ಹೀನವಸ್ತುಗಳಂತೆ ಭಾವಿಸಿ, ಅವುಗಳಲ್ಲಿ ಆಸೆಯನ್ನು ತೊರೆಯುವನೋ ಅಂತವನು ಮೇಲೆ ಹೇಳಿದ ಈ ಉಪಾಯಗಳಿಂದ ಶೀಘ್ರದಲ್ಲಿಯೇ ಉತ್ತಮಗತಿಯನ್ನು ಪಡೆಯುವನು. ಓ ಪಾರ್ಥ! ನಾನು ಹೇಳಬೇಕಾದುದು ಇಷ್ಟೇ! ಇದರಮೇಲೆ ನಾನು ನಿನಗೆ ತಿಳಿಸಬೇಕಾದುದು ಬೇರೊಂದೂ ಇಲ್ಲ. ಆರುತಿಂಗಳು ಬಿಡದೆ ಯೋಗಮಾಡುವವನಿಗೆ, ಆ ಯೋಗವು ಸಿದ್ಧಿಸುವುದು" ಎಂದನು.

ಇದು ಇಪ್ಪತ್ತನೆಯ ಅಧ್ಯಾಯವು.

---

{ ಕೃಷ್ಣನು ಅರ್ಜುನನಿಗೆ ಬ್ರಾಹ್ಮಣದಂಪತಿಸಂವಾದರೂಪವಾಗಿ ಭೂತಗಳಲ್ಲಿ ಪ್ರಾಣಾದಿಸೃಷ್ಟಿಕ್ರಮಗಳನ್ನು ತಿಳಿಸಿದುದು. }

ಆಮೇಲೆ ಕೃಷ್ಣನು "ಪಾರ್ಥ! ಕೇಳು. ಪ್ರಪಂಚ ತತ್ವ ವಿಚಾರವಾಗಿ ಪೂರ್ವದಲ್ಲಿ ಬ್ರಾಹ್ಮಣದಂಪತಿಸಂವಾದರೂಪವಾದ ಇತಿಹಾಸವೊಂದನ್ನು ಹೇಳುವರು. ಅದನ್ನೇ ನಿನಗೆ ತಿಳಿಸುವೆನು. ಪ್ರಪಂಚಜ್ಞಾನದಲ್ಲಿಯೂ, ಶಾಸ್ತ್ರಜ್ಞಾನದಲ್ಲಿಯೂ ಪಾರಂಗತನಾದ ಬ್ರಾಹ್ಮಣನೊಬ್ಬನು,

ಏಕಾಂತವಾಗಿ ಕುಳಿತಿದ್ದಾಗ, ಆವನ ಪತ್ನಿಯು ಅವನಲ್ಲಿಗೆ ಬಂದು ಹೀಗೆಂದು ಪ್ರಶ್ನೆಮಾಡಿದಳು. "ನಾಥಾ! ನೀನೇನೊ ಅಗ್ನಿಹೋತ್ರಕರ್ಮಗಳನ್ನೆಲ್ಲ ಬಿಟ್ಟು ಕುಳಿತಿರುವೆ! ನನ್ನಲ್ಲಿ ದಯಾಹೀನನಾಗಿ ರಾಕ್ಷಸಸ್ವಭಾವದಿಂದ ವರ್ತಿಸುವೆ! ನಿನ್ನನ್ನು ಬಿಟ್ಟರೆ ನನಗೆ ಗತಿಯಿಲ್ಲವೆಂಬುದನ್ನೂ ಯೋಚಿಸದಿರುವೆ. ಇಂತಹ ನಿನ್ನನ್ನು ಪತಿಯಾಗಿ ಕೈಹಿಡಿದ ನನಗೆ ಮುಂದೆ ಯಾವ ಪುಣ್ಯಗತಿಗಳುಂಟು? ಭಾರ್ಯೆಯರು ತಮ್ಮ ಪತಿಗಳಿಂದ ಸಂಪಾದಿಸಲ್ಪಟ್ಟ ಲೋಕಗಳನ್ನೇ ಹೊಂದುವರೆಂದು ಹಿರಿಯರು ಹೇಳಿದುದನ್ನು ನಾನು ಕೇಳಿರುವೆನು. ನಿನ್ನಂತವನನ್ನು ಪತಿಯನ್ನಾಗಿ ಪಡೆದ ನಾನು ಯಾವಗತಿಯನ್ನು ಹೊಂದುವೆನು?" ಎಂದಳು. ಬಹಳ ಶಾಂತಸ್ವಭಾವವುಳ್ಳ ಆ ಬ್ರಾಹ್ಮಣನು ತನ್ನ ಪತ್ನಿಯ ಮಾತನ್ನು ಕೇಳಿ ನಗುತ್ತ "ಎಲೆ ಭಾಗ್ಯಶಾಲಿನಿ! ನಿನ್ನ ಈ ಮಾತಿಗೆ ನನಗೆ ಲವಮಾತ್ರವೂ ಅಸಮಾಧಾನವಿಲ್ಲ! ನಿರ್ದುಷ್ಟಳಾದ ನಿನ್ನ ವಾಕ್ಯಕ್ಕಾಗಿ ನಾನು ಕೋಪಿಸುವುದಿಲ್ಲ. ಕರ್ಮವೆಂದರೆ ಏನೆಂದು ಬಲ್ಲೆಯಾ? ಮನಸ್ಸಿನಿಂದ ಗ್ರಹಿಸುವುದು, ಕಣ್ಣಿಂದ ನೋಡುವುದು, ಕಿವಿಯಿಂದ ಕೇಳುವುದು, ಈ ವ್ಯಾಪಾರಗಳೆಲ್ಲವನ್ನೂ ಕರ್ಮಜ್ಞರು ಕರ್ಮವೆಂದೇ ಹೇಳುವರು. ಆದರೆ ಜ್ಞಾನವಿಲ್ಲದೆ ಕರ್ಮಗಳನ್ನು ಮಾಡುವವರು ಕೇವಲಮೋಹಕ್ಕೆ ಈಡಾಗುವರು. ಈ ಲೋಕದಲ್ಲಿ ಮುಹೂರ್ತಕಾಲವಾದರೂ, ಕರ್ಮವಿಲ್ಲದ ಸ್ಥಿತಿಯನ್ನು ಯಾವ ವ್ಯಕ್ತಿಯಲ್ಲಿಯೂ ಕಾಣಲಾಗದು. ಮನೋವಾಕ್ಕಾಯಗಳೆಂಬ ತ್ರಿಕರಣಗಳ ಮೂಲಕವಾಗಿ ನಡೆಯುತ್ತಿರುವ ಸತ್ಕರ್ಮ ದುಷ್ಕರ್ಮಗಳೇ ಜನ್ಮದಿಂದುಂಟಾಗುವ ಶರೀರಭೇದಗಳಿಗೆ ಕಾರಣಗಳೆನಿಸುವುವು. ದೃಶ್ಯ, ಶ್ರಾವ್ಯಾದಿಬಾಹ್ಯಕರ್ಮಗಳೆಲ್ಲ ರಾಕ್ಷಸರಿಂದ (ದುಷ್ಟರಿಂದ) ಕೆಡಿಸಲ್ಪಡುತ್ತಿರುವುದನ್ನು ನೋಡಿ ನಾನು, ವಿರಕ್ತಿಯನ್ನು ಹೊಂದಿ, ಶರೀರದಲ್ಲಿಯೇ ಆತ್ಮನಿಗೆ ನೆಲೆಯಾದ ಒಂದು ಸ್ಥಳವನ್ನು (ಭ್ರೂಮಧ್ಯವನ್ನು) ಸ್ವಬುದ್ಧಿಯಿಂದ ಯೋಚಿಸಿ ತಿಳಿದುಕೊಂಡೆನು. ಆ ಸ್ಥಳದಲ್ಲಿಯೇ ದ್ವಂದ್ವರಹಿತವಾದ ಬ್ರಹ್ಮವು ನೆಲೆಗೊಂಡಿರುವುದು. ಅಲ್ಲಿಯೇ ಸೋಮನೂ, ಅಗ್ನಿಯೂ ವಾಸಿಸುವರು. ಬುದ್ಧಿಗೆ ಪ್ರೇರಕನೂ, ಭೂತಗಳಿಗೆ ಧಾರಕನೂ ಆದ ವಾಯುವೂ ಅಲ್ಲಿಯೇ ಯಾವಾಗಲೂ ಸಂಚರಿ

ಸುವನು. ಬ್ರಹ್ಮನೇ ಮೊದಲಾದವರೂ, ವ್ರತನಿಷ್ಠರರೂ, ವಿದ್ವಾಂಸರೂ, ಜಿತೇಂದ್ರಿಯರೂ, ಶಾಂತಾತ್ಮರೂ, ಅಲ್ಲಿಯೇ ಅಕ್ಷರವೆನಿಸಿದ ಆ ಪರ ಬ್ರಹ್ಮವನ್ನು ಉಪಾಸಿಸುವರು. ಆ ಬ್ರಹ್ಮವನ್ನು ಮೂಗಿನಿಂದ ಮೂಸಿತಿಳಿಯುವುದಕ್ಕಾಗಲಿ, ನಾಲಗೆಯಿಂದ ಸವಿಯುವುದಕ್ಕಾಗಲಿ, ತ್ವಗಿಂದ್ರಿಯದಿಂದ ಸ್ಪರ್ಶಿಸುವುದಕ್ಕಾಗಲಿ ಸಾಧ್ಯವಿಲ್ಲ. ಮನಸ್ಸಿನಿಂದ ಮಾತ್ರವೇ ತಿಳಿಯಬಹುದು. ಅದು ಕಣ್ಣಿಗೆ ಕಾಣುವಹಾಗಿಲ್ಲ. ಕಿವಿಗೆ ವಿಷಯವಾದರೂ ಅದಕ್ಕೂ ಎಷ್ಟೋ ದೂರದಲ್ಲಿರುವುದು. ಅದಕ್ಕೆ ಗಂಧವಿಲ್ಲ! ರಸವಿಲ್ಲ! ಸ್ಪರ್ಶವಿಲ್ಲ! ರೂಪವಿಲ್ಲ! ಶಬ್ದವೂ ಇಲ್ಲ! ಆದರೆ ಸೃಷ್ಟ್ಯಾದಿವ್ಯಾಪಾರಗಳೆಲ್ಲವೂ ಆ ಬ್ರಹ್ಮನಿಂದಲೇ ಉಂಟಾಗುವುವು. ಪ್ರಪಂಚವೆಲ್ಲ ಆ ಬ್ರಹ್ಮನಲ್ಲಿಯೇ ನೆಲೆಗೊಂಡಿರುವುದು. ಪ್ರಾಣ, ಅಪಾನ, ಸಮಾನ, ವ್ಯಾನ, ಉದಾನಗಳೆಂಬ ಪಂಚವಾಯುಗಳೂ ಆ ಬ್ರಹ್ಮನಿಂದಲೇ ಉಂಟಾಗುವುವು. ಮತ್ತು ಅವು ಅಲ್ಲಿಯೇ ಲಯ ಹೊಂದುವುವು. ಆ ಐದು ವಾಯುಗಳಲ್ಲಿ ಸಮಾನಕ್ಕೂ, ವ್ಯಾನಕ್ಕೂ ನಡುವೆ, ಪ್ರಾಣವೂ ಅಪಾನವೂ ಸಂಚರಿಸುತ್ತಿರುವುವು. ಇವೆರಡೂ ತಡೆ ಯಲ್ಪಟ್ಟಾಗ, ಸಮಾನ ವ್ಯಾನಗಳೂ ಅಡಗಿರುವುವು. ಪ್ರಾಣಾಪಾನ ಗಳನಡುವೆ ಉದಾನವು ವ್ಯಾಪಿಸಿಕೊಂಡಿರುವುದು. ಇದರ ಹಿಡಿತದಿಂದಲೇ ಮಲಗಿದ್ದ ಮನುಷ್ಯನನ್ನು ಪ್ರಾಣಾಪಾನಗಳೆರಡೂ ಬಿಡದಿರುವುವು. ಹೀಗೆ ಪ್ರಾಣವನ್ನು ಹಿಡಿದಿರುವ ಕಾರಣದಿಂದಲೇ ಅದನ್ನು ಉದಾನ ವೆಂದು ಕರೆಯುವರು. ಬ್ರಹ್ಮವಾದಿಗಳು ತಪಸ್ಸನ್ನು ಅದರ ಬಲದಿಂದ ನಡೆಸುವುದಾಗಿ ಹೇಳುವರು. ಹೀಗೆ ಒಂದಕ್ಕೊಂದು ಬೆಂಬಲವಾಗಿ ಸೇರಿ, ಶರೀರದಲ್ಲಿ ಸಂಚರಿಸುತ್ತಿರುವ ಆ ಎಲ್ಲಾ ವಾಯುಗಳಲ್ಲಿ ಸಮಾನವೆಂಬ ವಾಯುವಿಗೆ ನಾಭಿಯು ಸ್ಥಾನವಾಗಿರುವುದು. ಆ ನಾಭಿಮಧ್ಯದಲ್ಲಿ ವೈಶ್ವಾನರವೆಂಬ ಅಗ್ನಿಯೊಂದು ಏಳು ಶಾಖೆಗಳಾಗಿ ನೆಲೆಗೊಂಡಿರುವುವು. ಮೂಗು, ನಾಲಗೆ, ಕಣ್ಣು, ಚರ್ಮ, ಕಿವಿ, ಮನಸ್ಸು, ಬುದ್ಧಿ ಎಂಬಿವೇಳೂ ಆ ಅಗ್ನಿಯ ಏಳು (ಜ್ವಾಲೆಗಳು) ಶಾಖೆಗಳು. ಮೂಗಿನಿಂದ ಮೂಸತಕ್ಕುದು, ಕಣ್ಣಿನಿಂದ ನೋಡತ ಕ್ಕುದು, ಹಾಗೆಯೇ ಸವಿಯತಕ್ಕುದು, ಮುಟ್ಟತಕ್ಕುದು, ಕೇಳತಕ್ಕುದು

ಮನಸ್ಸಿನಿಂದ ಯೋಚಿಸತಕ್ಕದು, ಬುದ್ಧಿಯಿಂದ ತಿಳಿಯತಕ್ಕದು, ಎಂಬೀ ಏಳು ವಿಷಯಗಳೂ ಆ ಅಗ್ನಿಜ್ವಾಲೆಗೆ ಆಹಾರವಾದ ಸಮಿತ್ತುಗಳೆನಿಸುವುವು. ಅವೇಳನ್ನೂ ಅನುಭವಿಸುವ ಭೋಕ್ತೃಗಳೇ ಏಳು ಮಂದಿ ಋತ್ವಿಕ್ಕುಗಳು. ಮೂಗಿನಿಂದ ಮೂಸತಕ್ಕದು, ಮುಂತಾದ ಭೋಗ್ಯವಸ್ತುಗಳೆಂಬ ಆ ಏಳು ಹವಿಸ್ಸುಗಳನ್ನೂ, ಏಳುಮಂದಿ ಹೋತೃಗಳು, ಮೇಲೆ ಹೇಳಿದ ಏಳು ಅಗ್ನಿಜ್ವಾಲೆಗಳಲ್ಲಿ ಹೋಮಮಾಡಿ, ತಾನೆಂಬ ಬ್ರಹ್ಮರೂಪವಾದ ಕಾರಣದಲ್ಲಿ ಪೃಥ್ವಿ ಮೊದಲಾದುವುಗಳನ್ನು ಹುಟ್ಟಿಸುವರು. ಪೃಥಿವಿ, ವಾಯು, ಆಕಾಶ, ನೀರು, ತೇಜಸ್ಸು, ಮನಸ್ಸು, ಬುದ್ಧಿ, ಇವಿಷ್ಟೂ ಜ್ಞಾನವನ್ನು ಪ್ರಕಾಶಗೊಳಿಸುವ ಕಾರಣಗಳೆಂದು ಹೇಳಲ್ಪಡುವುವು. ಹವಿಸ್ಸಿನ ರೂಪವಾಗಿರುವ ಎಲ್ಲಾ ವಿಷಯಗಳೂ, ಇಂದ್ರಿಯಗಳೆಂಬ ಅಗ್ನಿಗಳಿಂದ ಹುಟ್ಟಿದ ವಿಷಯಜ್ಞಾನರೂಪವಾದ ಬುದ್ಧಿಯ ವೃತ್ತಿಯನ್ನು ಹೊಂದಿ (ಸುಷುಪ್ತಿಯಲ್ಲಿ) ಚಿತ್ತದಲ್ಲಿ ಅಡಗಿದ್ದು, ತಿರುಗಿ ತಮಗೆ ಕಾರಣಗಳಾದ ಇಂದ್ರಿಯಗಳಲ್ಲಿ ಸೇರುವುವು. ಇವೇ ಭೂತಗಳನ್ನು ಹುಟ್ಟಿಸುವುವು. ಪ್ರಳಯದಲ್ಲಿ ಅವು ಆ ಚಿತ್ತದಲ್ಲಿಯೇ ತಡೆದಿಡಲ್ಪಡುವುವು. ಆ ಭೂತಸಂಘಾತದಿಂದ ಮೊದಲು ಗಂಧವುಂಟಾಗುವುದು, ಆ ಗಂಧದಿಂದ ರಸವೂ, ರಸದಿಂದ ರೂಪವೂ, ರೂಪದಿಂದ ಸ್ಪರ್ಶವೂ, ಅದರಿಂದ ಶಬ್ದವೂ, ಅದರಿಂದ (ಮನಸ್ಸೂ) ಸಂಶಯವೂ, ಅದರಿಂದ ನಿಶ್ಚಯಬುದ್ಧಿಯೂ ಉಂಟಾಗುವುದು. ಹೀಗೆ ವಿದ್ವಾಂಸರು ಜನ್ಮಕ್ರಮವನ್ನೂ ಏಳು ಬಗೆಯಾಗಿ ತಿಳಿದಿರುವರು. ಪುರಾತನಮಹರ್ಷಿಗಳೂ ಈ ವಿಧವಾಗಿಯೇ ಗ್ರಹಿಸಿರುವರು. ಅವರು ಪೂರ್ಣವಾದ ಈ ಬ್ರಹ್ಮಜ್ಞಾನಬಲದಿಂದಲೇ ತೇಜಃಪೂರ್ಣರಾಗಿ ಬೆಳಗುವರು.

ಇದು ಇಪ್ಪತ್ತೊಂದನೆಯ ಅಧ್ಯಾಯವು.



{ದಶೇಂದ್ರಿಯಗಳ ಗುಣಗಳನ್ನು ಕುರಿತು ಬ್ರಾಹ್ಮಣದಂಪತಿಗಳಿಗೆ ನಡೆದ ಸಂವಾದವನ್ನು ಕೃಷ್ಣನು ಅರ್ಜುನನಿಗೆ ತಿಳಿಸಿದುದು.}

ಬ್ರಾಹ್ಮಣನು ಪತ್ನಿಯನ್ನು ಕುರಿತು “ಕಾಂತೇ ಕೇಳು! ಇದೇ ವಿಷಯದಲ್ಲಿ ಪುರಾತನವಾದ ಇತಿಹಾಸವೊಂದನ್ನು ಹೇಳುವರು. ಇಂದ್ರಿಯಗಳೆಂಬ ಹತ್ತುಮಂದಿ ಹೋತೃಗಳ ಕಾರ್ಯಕ್ರಮಗಳೆನೆಂಬುದನ್ನೂ ತಿಳಿಸುವೆನು ಕೇಳು! ಕಿವಿ, ಚರ್ಮ, ಕಣ್ಣು, ನಾಲಗೆ, ಮೂಗು, ಕೈ, ಕಾಲು, ಉಪಸ್ಥ, ವಾಯು, ವಾಕ್ಕು ಎಂಬೀ (ಜಡವಸ್ತುಗಳು) ಹತ್ತೂ ಹೋತೃಗಳು! ಶಬ್ದ, ಸ್ಪರ್ಶ, ರೂಪ, ರಸ, ಗಂಧ, ನಡೆ, ಕಾರ್ಯ, ಮಲವಿಸರ್ಜನೆ, ರೇತೋವಿಸರ್ಜನೆ, ನುಡಿವುದು, ಎಂಬೀ ಹತ್ತೂ ಆ ಹೋತೃಗಳಿಂದ ಹೋಮಮಾಡಲ್ಪಡುವ ಹತ್ತುಬಗೆಯ ಹವಿಸ್ಸುಗಳು. ದಿಕ್ಕು, ವಾಯು, ಸೂರ್ಯ, ಚಂದ್ರ, ಭೂಮಿ, ಅಗ್ನಿ, ವಿಷ್ಣು, ಇಂದ್ರ, ಪ್ರಜಾಪತಿ, ಮಿತ್ರರೆಂಬೀ ಹತ್ತುಮಂದಿ ಅಭಿಮಾನದೇವತೆಗಳೂ ಹತ್ತು ಹೋಮಾಗ್ನಿಗಳು. ಹೀಗೆ ದಶೇಂದ್ರಿಯಗಳೆಂಬ ಹೋತೃಗಳು, ವಿಷಯಗಳೆಂಬ ಹವಿಸ್ಸುಗಳನ್ನು, ಹತ್ತು ಅಗ್ನಿಗಳಲ್ಲಿ ಹೋಮಮಾಡುವಾಗ, ಕೊನೆಗೆ ಚಿತ್ತವೂ, ಸಂಸ್ಕಾರಗಳೂ, ಸ್ರುವವಾಗಿಯೂ, ದಕ್ಷಿಣಾದ್ರವ್ಯವಾಗಿಯೂ ತ್ಯಜಿಸಲ್ಪಡುವುವು. ಕೊನೆಗೆ ಜ್ಞಾನವೊಂದೇ ಜಗತ್ತಿಗಿಂತಲೂ ಪ್ರತ್ಯೇಕವಾಗಿ ಉಳಿಯುವುದು. ಆದುದರಿಂದ ಜ್ಞಾನವನ್ನು ಬಯಸುವನು, ಅವೆಲ್ಲವೂ ತನ್ನ ಚಿತ್ತದಲ್ಲಿರುವುದಾಗಿ ತಿಳಿದುಕೊಳ್ಳಬೇಕು. ರೇತೋಜನ್ಯವಾದ ಶರೀರದಲ್ಲಿ ಅಭಿಮಾನವುಳ್ಳ ಜೀವನು, ಸೂಕ್ಷ್ಮ (ಲಿಂಗ) ಶರೀರವುಳ್ಳವನಾಗಿದ್ದು ಅದನ್ನು ತಿಳಿಯತಕ್ಕವನಾಗಿರುವನು. ಶರೀರಾಭಿಮಾನವುಳ್ಳ ಆ ಜೀವನು ಹೃದಯದಲ್ಲಿ ಗಾರ್ಹಪತ್ಯವೆಂಬ ಅಗ್ನಿಯೆನಿಸುವನು. ಈ ಅಗ್ನಿಯಿಂದ ಮನೋರೂಪವಾದ ಆಹವನೀಯವೆಂಬ ಎರಡನೆಯ ಅಗ್ನಿಯುಂಟಾಗುವುದು. ಆ ಅಗ್ನಿಯಲ್ಲಿಯೇ ಹವಿಸ್ಸು ಹೋಮಮಾಡಲ್ಪಡುವುದು. ಅದರಿಂದ ಮೊದಲು ವೇದಮಯವಾದ ದಿವ್ಯವಾಕ್ಕುಂಟಾಯಿತು. ಆಮೇಲೆ ಪಾರ್ಥಿವವಾದ ಮನಸ್ಸು ಹುಟ್ಟಿ ಅದನ್ನು ಸೃಷ್ಟಿಕಾರ್ಯಕ್ಕಾಗಿ ಬಯಸಿತು. ಅದರಿಂದ ಪ್ರಾಣವಾಯು

ಜನಿಸಿತು. ಅದು ಮನಸ್ಸನ್ನು ಆಶ್ರಯಿಸಿತು " ಎನಲು, ಬ್ರಾಹ್ಮಣಸ್ತ್ರೀಯು "ನಾಥಾ ! ಯಾವ ಕಾರಣಕ್ಕಾಗಿ ವಾಕ್ಕು ಮೊದಲು ಹುಟ್ಟಿತು ? ಮತ್ತು ಮನಸ್ಸು ಆಮೇಲೆ ಹುಟ್ಟಿದ ಕಾರಣವೇನು ? ಮೊದಲು ಮನಸ್ಸಿನಿಂದ ಆಲೋಚಿಸಿದ ಮೇಲಲ್ಲವೇ ಬಾಯಿಂದ ವಾಕ್ಕು ಹೊರಡಬೇಕು. ಯಾವ ಶಾಸ್ತ್ರಜ್ಞಾನದಿಂದ ಪ್ರಾಣವು ಚಿತ್ತವನ್ನು ಆಶ್ರಯಿಸಿದುದಾಗಿ ತಿಳಿಯಬಹುದು ? ಅದು ಸುಷುಪ್ತಿಯಲ್ಲಿ ಏತಕ್ಕಾಗಿ ವಿಷಯಗಳನ್ನು ಗ್ರಹಿಸುವುದಿಲ್ಲ ? ಆಗ ಅದು ಏತರಿಂದ ನಿರೋಧಿಸಲ್ಪಡುವುದು ? " ಎಂದು ಪ್ರಶ್ನೆಮಾಡಿದಳು.

ಆಗ ಬ್ರಾಹ್ಮಣನು "ಭಾಮಿನಿ! ಕೇಳು. ಅಪಾನವೆಂಬುದು ಪ್ರಾಣನಿಗೆ ಪ್ರಭುವೆನಿಸಿರುವುದು. ಆದುದರಿಂದ ಅದನ್ನೂ ಸುಷುಪ್ತಿಯಲ್ಲಿ ಅಪಾನವನ್ನಾಗಿಯೇ ಮಾಡುವುದು. ಈ ಪ್ರಾಣಗತಿಯೇ ಮನೋಗತಿಗೆ ಸಾಧನವು. ಪ್ರಿಯೆ ! ವಾಕ್ಕು ಮತ್ತು ಮನಸ್ಸಿನ ವಿಚಾರವನ್ನು ಕೇಳಿದೆಯಲ್ಲವೆ ? ಅದೇ ವಿಷಯವಾಗಿ ನಡೆದ ಒಂದು ಸಂವಾದವನ್ನು ಹೇಳುವೆನು ಕೇಳು. ವಾಕ್ಕು, ಮನಸ್ಸು, ಇವೆರಡೂ ಒಮ್ಮೆ ಭೂತಾತ್ಮನಲ್ಲಿಗೆ (ಜೀವನಲ್ಲಿಗೆ) ಬಂದು "ಓ ಪ್ರಭೂ ! ನಮ್ಮಿಬ್ಬರಲ್ಲಿ ದೊಡ್ಡವರು ಯಾರೆಂಬದನ್ನು ಹೇಳಿ, ನಮ್ಮ ಸಂದೇಹವನ್ನು ನೀಗಿಸಬೇಕು" ಎನಲು, ಆಗ ಅವನು ವಾಕ್ಕನ್ನು ನೋಡಿ "ಮನಸ್ಸೇ ದೊಡ್ಡದು " ಎಂದನು. ಆಗ ವಾಕ್ಕು ತಿರುಗಿ ಅವನನ್ನು ನೋಡಿ "ನಾನಲ್ಲವೆ ನಿನಗೆ ಎಲ್ಲಾ ಇಷ್ಟಗಳನ್ನೂ ಕೊಡಿಸತಕ್ಕವನು " ಎಂದು ಕೇಳಿತು. ಆಗ ಅವನು ಅದನ್ನು ನೋಡಿ "ಸ್ಥಾವರಜಂಗಮಗಳೆಂದು ನನ್ನ ಮನಸ್ಸಿನಲ್ಲಿ ಎರಡು ವಿಧಗಳು. ಅವೆರಡರಲ್ಲಿ (ಬಾಹ್ಯೇಂದ್ರಿಯಗ್ರಾಹ್ಯವಾದ) ಸ್ಥಾವರವು ನನ್ನ ವಶದಲ್ಲಿಯೂ, (ಅತೀಂದ್ರಿಯವಾದ) ಜಂಗಮವು ನಿನ್ನ ವಶದಲ್ಲಿಯೂ ಇರುವುವು. ನಿನಗೆ ವಿಷಯವಾದ ಮಂತ್ರ ವರ್ಣಸ್ವರಗಳೆಂಬಿವು ಜಂಗಮವೆನಿಸುವುವು. ಅದರಿಂದ ನೀನು ಮೇಲೆನಿಸಿರುವೆ. ಈ ಕಾರಣಕ್ಕಾಗಿ ನಾನು ನಿನ್ನನ್ನಾಶ್ರಯಿಸಿ ಕ್ಷೇಮವನ್ನು ಪಡೆಯಬೇಕಾಗಿದೆ. ಓ ಸರಸ್ವತೀ ! ನಾನು ಯಾವ ಬಲದಿಂದ

ನನ್ನ ಮನಸ್ಸಿನ ಮೇಲ್ಮೆಯನ್ನು ಹೇಳುವೆನೋ ಕೇಳು! ಪ್ರಾಣಾಪಾನಗಳೆರಡಕ್ಕೂ ನಡುವೆ ಸದಾ ನೆಲೆಗೊಂಡಿರುವ ವಾಕ್ಕೆಂಬುದು, ಪ್ರಾಣಗಳಿಂದಲೂ, ನನ್ನಿಂದಲೂ ದೂಡಲ್ಪಟ್ಟು, ಬ್ರಹ್ಮನಲ್ಲಿಗೆ ಹೋಗಿ "ಭಗವನ್ ಪ್ರಸನ್ನನಾಗು" ಎಂದು ಕೂಗಿತು. ಆಮೇಲೆ ಪ್ರಾಣವು ತಿರುಗಿ ಅಲ್ಲಿ ತಲೆದೋರಿ, ವಾಕ್ಕನ್ನು ಆಪ್ಯಾಯನಗೊಳಿಸಿತು. ವಾಕ್ಕು ಆದರಿಂದ ಚೇತರಿಸಿಕೊಂಡರೂ ಯಾವುದನ್ನೂ ನುಡಿಯಲಿಲ್ಲ. ವಾಕ್ಕು ಘೋಷಿಣಿಯಾಗಿಯೂ (ಶಬ್ದವುಳ್ಳದ್ದಾಗಿಯೂ), ಜಾತನಿರ್ಘೋಷೆಯಾಗಿಯೂ, (ಶಬ್ದವಿಲ್ಲದುದಾಗಿಯೂ) ಪ್ರವರ್ತಿಸುವುದು. ಅವೆರಡರಲ್ಲಿ *ಮೊದಲನೆಯದಕ್ಕಿಂತ ಎರಡನೆಯದೇ ಮೇಲೆನಿಸುವುದು. ಘೋಷಿಣಿಯು ಧೇನುವಿನಂತೆ ಉತ್ತಮವಾದ ರಸವನ್ನು ಸ್ರವಿಸುವುದು. ಉಪನಿಷದ್ವಾರ್ತೆಯೆನಿಸಿದ ನಿರ್ಘೋಷೆಯಾದರೋ, ಶಾಶ್ವತವಾದ ಮೋಕ್ಷವನ್ನು ತರುವುದು. ದೇವೀ! ದಿವ್ಯವೂ, ಅದಿವ್ಯವೂ ಆದ ಪ್ರಭಾವವುಳ್ಳ ಇವೆರಡರ ಪ್ರಯತ್ನದಲ್ಲಿರುವ ಸೂಕ್ಷ್ಮವ್ಯತ್ಯಾಸವನ್ನು ನೋಡಿದೆಯಾ? ಎಂದನು" ಆಗ ಬ್ರಾಹ್ಮಣಸ್ತ್ರೀಯು "ನಾಥಾ! ವಾಕ್ಯಗಳು ಉಂಟಾಗದೆ ಇದ್ದಾಗ, ಮಾತಾಡಬೇಕೆಂಬ ಆಸೆಯಿಂದ ಪ್ರೇರಿಸಲ್ಪಟ್ಟ ಸರಸ್ವತೀದೇವಿಯು ಮೊದಲು ಯಾವ ರೀತಿಯಲ್ಲಿ ಹುಟ್ಟಿದಳು?" ಎಂದು ಕೇಳಲು, ಆಗ ಬ್ರಾಹ್ಮಣನು "ಕಾಂತೇ! ಕೇಳು, ವಾಕ್ಕು ಶರೀರದಲ್ಲಿ ಮೊದಲು ಪ್ರಾಣದಿಂದ ಉಂಟಾಗಿ, ಅಲ್ಲಿಂದ ಅಪಾನವನ್ನು ಸೇರಿ, ಆಮೇಲೆ ಉದಾನದೊಡನೆ ಕಲೆತು, ಶರೀರದಿಂದ ಹೊರಗೆ ಬರುವಾಗ ವ್ಯಾನದೊಡನೆ ಸೇರಿ ಆಕಾಶವನ್ನೆಲ್ಲಾ ವ್ಯಾಪಿಸುವುದು. ಆಮೇಲೆ ಸಮಾನದಲ್ಲಿಯೇ ಬಂದು ನೆಲೆಗೊಂಡಿರುವುದು. ಈ ರೀತಿಯಾಗಿಯೇ ವಾಕ್ಕು ಮೊದಲು ಹೊರಟಿತು. ಈ ಕಾರಣದಿಂದ ಮನಸ್ಸು ಸ್ಥಾವರತ್ವದಿಂದ ಮೇಲೆನಿಸಿತು! ಸರಸ್ವತಿಯು ಜಂಗಮತ್ವದಿಂದ ಮೇಲೆನಿಸುವಳು"

ಇದು ಇಪ್ಪತ್ತೆರಡನೆಯ ಅಧ್ಯಾಯವು.

---

* ಘೋಷಿಣಿಯು ಪ್ರಾಣಬಲವನ್ನಾಶ್ರಯಿಸಿರುವುದು. ನಿರ್ಘೋಷಿಯು ಮಂತ್ರರೂಪವಾಗಿ ಎಲ್ಲಾ ಅವಸ್ಥೆಗಳಲ್ಲಿಯೂ ಸ್ವತಂತ್ರವಾಗಿ ಪ್ರವರ್ತಿಸುವುದರಿಂದ ಈ ಎರಡನೆಯದಕ್ಕೆ ಮೇಲ್ಮೆಯೆಂದು ಭಾವವು.

ಇಂದ್ರಿಯಗಳಿಗೂ, ಮನಸ್ಸಿಗೂ ನಡೆದ ವಿವಾದರೂಪವಾಗಿ ಅವುಗಳ ಸ್ವಭಾವ ಗುಣಗಳನ್ನು ಬ್ರಾಹ್ಮಣನು ತನ್ನ ಪತ್ನಿಗೆ ತಿಳಿಸಿದುದು.

"ಓ ಭಾಗ್ಯವತಿ! ಹಿಂದೆ ಹೇಳಿದಂತೆ ಇಂದ್ರಿಯಗಳೆಂಬ ಏಳು ಮಂದಿ ಹೋತೃಗಳ ರೀತಿಯೇನೆಂಬುದನ್ನು ಕುರಿತು ಪುರಾತನವಾದ ಒಂದು ಇತಿಹಾಸವನ್ನು ಉದಾಹರಿಸುವರು. ಅದನ್ನು ತಿಳಿಸುವೆನು. ಮೂಗು, ಕಣ್ಣು, ನಾಲಗೆ, ಚರ್ಮ, ಕಿವಿ, ಮನಸ್ಸು, ಬುದ್ಧಿ, ಇವೇಳುಮಂದಿಹೋತೃಗಳೂ, ಬೇರೆಬೇರೆ ಆಶ್ರಯವನ್ನು ಮಾಡಿಕೊಂಡು, ಸೂಕ್ಷ್ಮವಾದ ಒಂದೇ ಸ್ಥಳದಲ್ಲಿದ್ದರೂ, ಒಬ್ಬರನ್ನೊಬ್ಬರು ಕಾಣಲಾರರು. ಅವರ ಸ್ವಭಾವವೂ ಬೇರೆಬೇರೆಯಾಗಿರುವುದು" ಎಂದನು. ಆಗ ಪತ್ನಿಯು "ನಾಥಾ! ಸೂಕ್ಷ್ಮವಾದ ಸ್ಥಳದಲ್ಲಿ ಇವೆಲ್ಲವೂ ಒಂದಾಗಿದ್ದರೂ, ಒಂದನ್ನೊಂದು ನೋಡದಿರುವುದು ಹೇಗೆ? ಇವುಗಳ ಸ್ವಭಾವವು ಪ್ರತ್ಯೇಕವೆಂಬುದು ಹೇಗೆ? ಅದನ್ನು ನನಗೆ ತಿಳಸಬೇಕು" ಎಂದಳು. ಅದಕ್ಕಾ ಬ್ರಾಹ್ಮಣನು "ಎಲೆಭದ್ರೆ! ಗುಣಗಳನ್ನು ತಿಳಿಯದಿರುವುದೇ ಅಜ್ಞಾನವೆನಿಸುವುದು. ಗುಣಗಳನ್ನು ತಿಳಿಯುವುದು ಅಭಿಜ್ಞತೆಯೆನಿಸುವುದು. ಈ ಮೇಲೆಹೇಳಿದ ಜಡೇಂದ್ರಿಯಗಳು ಒಂದರ ಗುಣವನ್ನು ಮತ್ತೊಂದು ಗ್ರಹಿಸಲಾರವು. ಹೇಗೆಂದರೆ, ನಾಲಗೆ ಕಣ್ಣು, ಕಿವಿ, ಚರ್ಮ, ಮನಸ್ಸು, ಇವಾರೂ ಗಂಧವನ್ನರಿಯಲಾರವು. ಮೂಗುಮಾತ್ರ ಅದನ್ನು ತಿಳಿಯಬಲ್ಲುದು. ಮೂಗು, ಕಿವಿ, ಚರ್ಮ, ನಾಲಗೆ, ಮನಸ್ಸು, ಬುದ್ಧಿ ಇವಾರೂ ರೂಪವನ್ನು ಕಾಣಲಾರವು. ಕಣ್ಣುಮಾತ್ರವೇ ಅದನ್ನು ತಿಳಿಯಬಲ್ಲುದು. ಇದರಂತೆಯೇ ಚರ್ಮವೊಂದೇ ಸ್ಪರ್ಶವನ್ನು ತಿಳಿಯಬಲ್ಲುದೇಹೊರತು ಮೂಗು ಮುಂತಾದುವೊಂದೂ ಆ ಸ್ಪರ್ಶವನ್ನು ಅರಿಯಲಾರವು. ಕಿವಿಯೊಂದೇ ಶಬ್ದವನ್ನು ಅರಿಯಬಲ್ಲುದಲ್ಲದೆ ಬೇರೆ ಯಾವುದೂ ಅದನ್ನು ತಿಳಿಯಲಾರದು. ಸಂಕಲ್ಪಗಳು ಮನಸ್ಸಿಗೆ ಮಾತ್ರ ಗೋಚರವೇಹೊರತು ಬೇರೆಯಾವುದೂ ಅದನ್ನು ಕಾಣಲಾರವು. ನಿಶ್ಚಯಜ್ಞಾನವನ್ನು ಬುದ್ಧಿಯೊಂದು ಪಡೆಯುವುದೇಹೊರತು, ಮೂಗು, ನಾಲಗೆ, ಮನಸ್ಸು ಮುಂತಾದುವೊಂದೂ ಅದನ್ನು ಪಡೆಯಲಾರದು.

ಇದೇವಿಷಯದಲ್ಲಿ ಇಂದ್ರಿಯಗಳಿಗೂ, ಮನಸ್ಸಿಗೂ ನಡೆದ ಸಂವಾದರೂಪವಾದ ಒಂದು ಇತಿಹಾಸವನ್ನು ಹೇಳುವರು. ಅದನ್ನೂ ತಿಳಿಸುವೆನು ಕೇಳು.

ಒಮ್ಮೆ ಮನಸ್ಸು ಇಂದ್ರಿಯಗಳಮುಂದೆ ಹೆಮ್ಮೆಯಿಂದ ನಾನಿಲ್ಲದಿದ್ದರೆ ಮೂಗು ವಾಸನೆಯನ್ನು ಗ್ರಹಿಸಲಾರದು. ನಾಲಗೆಯು ರಸವನ್ನು ಗ್ರಹಿಸಲಾರದು, ಹಾಗೆಯೇ ನಾನಿಲ್ಲದೆ ಕಣ್ಣು ರೂಪವನ್ನೂ, ತ್ವಕ್ಕು ಸ್ಪರ್ಶವನ್ನೂ, ಕಿವಿಯು ಶಬ್ದವನ್ನೂ ಗ್ರಹಿಸಲಾರವು. ಆದುದರಿಂದ ನಾನೇ ಎಲ್ಲಾ ಭೂತಗಳಲ್ಲಿಯೂ, ಮೇಲಾಗಿಯೂ, ಸನಾತನನಾಗಿಯೂ ಇರುವೆನು. ನಾನಿಲ್ಲದಮೇಲೆ ಇಂದ್ರಿಯಗಳು ಜನಗಳಿಲ್ಲದ ಮನೆಯಂತೆಯೂ, ಉರಿಯಿಲ್ಲದ ಅಗ್ನಿಯಂತೆಯೂ ಪ್ರಕಾಶಿಸಲಾರವು. ನಾನಿಲ್ಲದಮೇಲೆ ಎಲ್ಲಾಪ್ರಾಣಿಗಳೂ ತಮ್ಮ ಇಂದ್ರಿಯಗಳಿಂದ ಎಷ್ಟೇ ಪ್ರಯತ್ನಪಟ್ಟರೂ, ಒಣಗಿಯೂ, ಒಣಗದೆಯೂ ಇರುವ ಕಟ್ಟಿಗೆಗಳಂತೆ ಮಂದವಾಗಿ ವಿಷಯಗಳನ್ನು ತಿಳಿಯಲಾರವು" ಎಂದು ಹೇಳಿತು.

ಇದನ್ನುಕೇಳಿ ಇಂದ್ರಿಯಗಳು ನಗುತ್ತ "ಓ ಮನಸ್ಸೇ! ನಾವಿಲ್ಲದೆ ನೀನೇ ಸ್ವತಂತ್ರವಾಗಿ ನಮಗೆ ವಿಷಯಗಳಾದ ಭೋಗಗಳನ್ನು ಅನುಭವಿಸಬಲ್ಲವನಾಗಿದ್ದರೆ, ಆಗ ನೀನು ಹೇಳಿದುದೆಲ್ಲವೂ ವಾಸ್ತವವೇ ಆಗುತ್ತಿದ್ದಿತು. ನಾವು ಲಯಹೊಂದಿರುವಾಗ ನೀನೇ ಸ್ವತಂತ್ರವಾಗಿ ಭೋಗಗಳನ್ನೆಲ್ಲಾ ಅನುಭವಿಸಿ, ಪ್ರಾಣವನ್ನೂ ಧರಿಸುತ್ತ, ಆತ್ಮನಿಗೆ ತೃಪ್ತಿಯನ್ನುಂಟುಮಾಡುವಪಕ್ಷದಲ್ಲಿ ಆಗಲೂ ನೀನು ಹೇಳಿದುದು ಸತ್ಯವಾಗುತ್ತಿತ್ತು. ಅಥವಾ ನಾವು ನಮ್ಮನಮ್ಮ ವಿಷಯಗಳಲ್ಲಿ ಲಯಿಸಿದ್ದಾಗ, ನೀನು ಸಂಕಲ್ಪಮಾತ್ರದಿಂದಲೇ ಭೋಗಗಳನ್ನು ಅನುಭವಿಸುವಹಾಗಿದ್ದರೂ ಆಗಲೂ ನೀನು ಹೇಳಿದುದು ಸತ್ಯವಾಗುತ್ತಿತ್ತು. ಅಥವಾ ನಮನಮಗೆ ಗ್ರಾಹ್ಯವಾದ ವಿಷಯಗಳೊಳಗೆಲ್ಲ ನಿನಗೆ ಯಾವಾಗಲೂ ಸಿದ್ಧಿ (ತೃಪ್ತಿ) ಯುಂಟಾಗುವಹಾಗೆ ನೀನು ಎಣಿಸಿದ್ದ ಪಕ್ಷದಲ್ಲಿ, ಮೂಗಿನಿಂದ ರೂಪವನ್ನೂ, ಕಣ್ಣಿನಿಂದ ರಸವನ್ನೂ, ಕಿವಿಯಿಂದ ಗಂಧವನ್ನೂ ನಾಲಗೆಯಿಂದ ಸ್ಪರ್ಶವನ್ನೂ, ಚರ್ಮದಿಂದ ಶಬ್ದವನ್ನೂ, ಬುದ್ಧಿಯಿಂದ

ಸ್ಪರ್ಶವನ್ನೂ ಅನುಭವಿಸು, ನೋಡುವೆವು. ಕೇವಲ ದುರ್ಬಲರಾಗಿದ್ದರೂ ನಮ್ಮನಮ್ಮ ನಿಯಮಗಳು ಬಲವುಳ್ಳವುಗಳಾಗಿ ಮತ್ತೊಬ್ಬರಿಗೆ ವಶವಾಗದಂತಿರುವುವು. ಆದುದರಿಂದ ನಿನಗೆ ಶಕ್ತಿಯಿದ್ದರೆ ನಿನಗೆ ನೀನೇ ಹೊಸ ಭೋಗಗಳನ್ನು ಅನುಭವಿಸಬೇಕು. ನಮ್ಮ ಎಂಜಲನ್ನು ಭುಜಿಸಬಾರದು. ಮತ್ತು ಒಬ್ಬ ಶಿಷ್ಯನು ಉಪದೇಶಕನಾದ ಒಬ್ಬ ಆಚಾರ್ಯನಲ್ಲಿಗೆ ಹೋಗಿ ವೇದಾರ್ಥಗಳನ್ನು ತಿಳಿದುಕೊಂಡುಬಂದು, ಆಮೇಲೆ ಅದನ್ನು ತಾನು ತನ್ನಲ್ಲಿ ಚಿಂತಿಸುವಂತೆಯೇ, ನಾವು ತೋರಿಸಿಕೊಟ್ಟು, ಮತ್ತು ಕನಸಿನಲ್ಲಿಯೂ, ಎಚ್ಚರದಲ್ಲಿಯೂ, ಅನುಭವಿಸಿ ತೀರಿಹೋದ ವಿಷಯುಗಳನ್ನೇ ನೀನು ಯಾವಾಗಲೂ ಸ್ಮರಿಸತಕ್ಕವನು. ದುರ್ಬಲಹೃದಯುವುಳ್ಳ ಮತ್ತು ಮನೋವ್ಯಾಕುಲತೆಯಿಂದ ಕೂಡಿದ ಪ್ರಾಣಿಗಳಿಗೆ, ನಮ್ಮಮೂಲಕವಾದ ಕಾರ್ಯಗಳು ನಡೆದಾಗಲೇ ಪ್ರಾಣಧಾರಣವುಂಟಾಗುವುದು. ಒಬ್ಬನು ನಾನಾಬಗೆಯ ಸಂಕಲ್ಪಗಳನ್ನು ನೆನೆಸಿದರೂ, ಸ್ವಪ್ನಗಳನ್ನು ಕಂಡರೂ, ಮೇಲೆಮೇಲೆ, ವಿಷಯುಗಳನ್ನು ಅನುಭವಿಸಬೇಕೆಂಬ ಇಚ್ಛೆಯಿಂದ ಪೀಡಿತನಾಗಿ ವಿಷಯುಗಳನ್ನುಕುರಿತೇ ಹೋಗುವನು. ಬಾಗಿಲಿಲ್ಲದ ಮನೆಯೊಳಗೆ ಸೇರಿದಂತೆ, ಸಂಕಲ್ಪಭೋಗಗಳೆಂಬ ವಿಷಯುಗಳನ್ನು ಕಾಣದೆ ಮನಸ್ಸು ಅಲ್ಲಿಯೇ ಲಯಿಸಿರುವಾಗ, ಉರಿಯುವ ಬೆಂಕಿಗೆ ಸೌದೆಯಿಲ್ಲದಿದ್ದಾಗ ಹೇಗೋಹಾಗೆ ನೀನು ಕೇವಲ ಶಾಂತನಾಗಿರಬೇಕು. ನಮಗೂ ನಮ್ಮನಮ್ಮ ಗುಣಗಳಲ್ಲಿಮಾತ್ರ ಸಂಬಂಧವುಂಟು. ನಮ್ಮಲ್ಲಿ ಒಬ್ಬರ ಗುಣವನ್ನು ಇನ್ನೊಬ್ಬರು ಹೊಂದಲಾರರು. ನಮ್ಮನ್ನು ಬಿಟ್ಟು ನಿನಗೂ ಗುಣಗ್ರಹಣಶಕ್ತಿಯಿಲ್ಲ. ನಿನ್ನನ್ನುಬಿಟ್ಟು ನಮಗೂ ಉಲ್ಲಾಸವಿಲ್ಲ" ಎಂದುವು

ಇದು ಇಪ್ಪತ್ತುಮೂರನೆಯ ಅಧ್ಯಾಯುವು.



ಪ್ರಾಣಾಪಾನಾದಿಗಳ ಮೇಲ್ಮೆಯನ್ನು ಕುರಿತು ಅವುಗಳ ವಿವಾದರೂಪವಾದ ಇತಿಹಾಸವನ್ನು ಬ್ರಾಹ್ಮಣನು ತನ್ನ ಪತ್ನಿಗೆ ಹೇಳಿದುದು.

ಆಗ ಬ್ರಾಹ್ಮಣನು "ಸುಂದರೀ! ಇದೇ ವಿಷಯವಾಗಿ ಪ್ರಾಣಾದಿಗಳೆಂಬ ಐದುಮಂದಿ ಹೋತೃಗಳ ಸ್ಥಿತಿಯೇನೆಂಬುದನ್ನು ಕುರಿತು ಪುರಾತನವಾದ ಇತಿಹಾಸವೊಂದನ್ನು ಹೇಳುವರು. ವಿದ್ವಾಂಸರು, ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬೀ ಐದುಮಂದಿ ಹೋತೃಗಳನ್ನೂ, ಅವುಗಳ ಮೇಲ್ಮೆಯನ್ನೂ ಚೆನ್ನಾಗಿ ಬಲ್ಲರು" ಎಂದನು. ಆಗ ಅವನ ಪತ್ನಿಯು "ನಾಥಾ! ಇದಕ್ಕೆಮೊದಲು ನೀನು ಏಳುಮಂದಿ ಹೋತೃಗಳ ವಿಷಯವಾಗಿ ಹೇಳಿದುದನ್ನು ಕೇಳಿದೆನು. ಈಗ ನೀನು ಹೇಳುವ ಐದುಮಂದಿ ಹೋತೃಗಳನ್ನೂ, ಅವರ ಮೇಲ್ಮೆಯನ್ನೂ ಕುರಿತು ನಾನು ಕೇಳಬೇಕೆಂದಿರುವೆನು" ಎಂದು ಕೇಳಲು, ಬ್ರಾಹ್ಮಣನು ಹೀಗೆಂದು ಹೇಳತೊಡಗಿದನು. "ಕಾಂತೇ! ಪ್ರಾಣನಿಂದ ತುಂಬಿದ ವಾಯುವು ಆಮೇಲೆ ಅಪಾನವಾಗುವುದು. ಅಪಾನನಿಂದ ವಹಿಸಲ್ಪಟ್ಟ ವಾಯುವು, ಅದರಿಂದಾಚೆಗೆ ವ್ಯಾನವಾಗುವುದು. ವ್ಯಾನದಿಂದ ವಹಿಸಲ್ಪಟ್ಟ ವಾಯುವು ಆಮೇಲೆ ಉದಾನವಾಗುವುದು. ಉದಾನನಿಂದ ವಹಿಸಲ್ಪಟ್ಟ ವಾಯುವು ಆಮೇಲೆ ಸಮಾನವಾಗುವುದು. ಈ ಪಂಚವಾಯುಗಳೂ ಹಿಂದೆ ಬ್ರಹ್ಮನಲ್ಲಿಗೆ ಹೋಗಿ "ದೇವಾ! ನಮ್ಮಲ್ಲಿ ಯಾರು ಮೇಲೆಂಬುದನ್ನು ಹೇಳು. ಅವನೇ ನಮ್ಮಲ್ಲಿ ಪ್ರಧಾನನಾಗಿರಲಿ" ಎಂದು ಕೇಳಿದುವು. ಅದಕ್ಕೆ ಬ್ರಹ್ಮನು "ಎಲೈ! ಪ್ರಾಣಿಗಳ ಶರೀರದಲ್ಲಿ ಯಾವುದು ಲಯಹೊಂದಿದಾಗ, ಅದರೊಡನೆ ಎಲ್ಲಾ ಪ್ರಾಣಗಳೂ ಲಯಹೊಂದುವುವೋ, ಮತ್ತು ಯಾವುದು ಕಾರ್ಯಪ್ರವೃತ್ತವಾದರೆ, ತಿರುಗಿ ಎಲ್ಲವೂ ತಲೆಯೆತ್ತುವುವೋ, ಅವನೇ ನಿಮ್ಮೈವರಲ್ಲಿ ದೊಡ್ಡವನು. ಇದನ್ನು ನಿಮ್ಮಲ್ಲಿ ನೀವೇ ಪರೀಕ್ಷಿಸಿ ತಿಳಿಯಿರಿ!, ನಿಮ್ಮ ಇಷ್ಟಬಂದಕಡೆಗೆ ಹೋಗಿರಿ" ಎಂದನು.

ಒಡನೆಯೇ ಪ್ರಾಣವು 'ಇದೋ! ನಾನು ಅಡಗಿಕೊಂಡರೆ ಪ್ರಾಣಿಶರೀರದಲ್ಲಿರುವ ಎಲ್ಲಾ ಪ್ರಾಣಗಳೂ ಅಡಗಿಹೋಗುವುವು. ನಾನು ಮೇಲೆ

ದ್ದರೆ, ಎಲ್ಲವೂ ತಿರುಗಿ ಕೆಲಸಮಾಡುವುವು. ನಾನೇ ಶ್ರೇಷ್ಠನು. ಇದೋ! ಈಗಲೇ ನಾನು ಅಡಗಿಕೊಳ್ಳುವೆನು ನೋಡಿರಿ'' ಎಂದು ಹೇಳಿ, ತಾನು ಅಡಗಿಕೊಂಡಿತು. ಸ್ವಲ್ಪಹೊತ್ತಿನಮೇಲೆ ತಿರುಗಿ ಚಲಿಸಲಾರಂಭಿಸಿತು. ಆಗ ಸಮಾನ, ಉದಾನಗಳೆಂಬಿವೆರಡೂ ಆ ಪ್ರಾಣವನ್ನು ನೋಡಿ 'ಪ್ರಾಣಾ! ನಮ್ಮಹಾಗೆ ನೀನು ಪ್ರಾಣಿಶರೀರವನ್ನೆಲ್ಲ ವ್ಯಾಪಿಸಿರತಕ್ಕವನಲ್ಲ. ನಮಗಿಂತಲೂ ನೀನು ಹೇಗೂ ಶ್ರೇಷ್ಠನಲ್ಲ. ಅಪಾನವೊಂದುಮಾತ್ರ ನಿನ್ನ ವಶವಾಗಿರುವುದು' ಎಂದು ಹೇಳಿದುವು. ಆಮೇಲೆ ತಿರುಗಿ ಪ್ರಾಣವು ಮೊದಲಿನಂತೆ ಸಂಚರಿಸತೊಡಗಿತು. ಆಗ ಅಪಾನವು ಮುಂದೆ ಬಂದು 'ನಾನು ಅಡಗಿಬಿಟ್ಟರೆ ಪ್ರಾಣಿಶರೀರದಲ್ಲಿ ಎಲ್ಲಾ ಪ್ರಾಣಗಳೂ ಅಡಗಿಹೋಗುವುವು. ನಾನು ಚಲಿಸಲಾರಂಭಿಸಿದರೆ, ಎಲ್ಲವೂ ತಿರುಗಿ ನಡೆಯುವುವು. ಆದುದರಿಂದ ಎಲ್ಲರಿಗಿಂತಲೂ ನಾನೇ ಮೇಲು! ನಾನು ಅಡಗಿಕೊಳ್ಳುವೆನು. ಏನಾಗುವುದೋ ನೋಡಿರಿ' ಎಂದಿತು. ಆಗ ವ್ಯಾನ, ಉದಾನಗಳೆರಡೂ ಅಪಾನವನ್ನು ಕುರಿತು 'ಅಪಾನಾ! ನೀನೂ ನಮಗಿಂತಲೂ ಮೇಲಲ್ಲ! ನಿನ್ನ ವಶದಲ್ಲಿರುವುದು ಪ್ರಾಣವೊಂದಲ್ಲವೆ?' ಎಂದು ಹೇಳಿದುವು. ಆಮೇಲೆ ಅಪಾನವು ಮೊದಲಿನಂತೆ ಸಂಚರಿಸತೊಡಗಿತು. ಆಮೇಲೆ ವ್ಯಾನವು 'ಇದೋ! ನಾನು ನಿಮ್ಮೆಲ್ಲರಿಗಿಂತಲೂ ಶ್ರೇಷ್ಠನು. ಕಾರಣವೇನೆಂಬುದನ್ನು ಹೇಳುವೆನು ಕೇಳಿರಿ. ನಾನು ಲಯಿಸಿದರೆ ಪ್ರಾಣಿಶರೀರದಲ್ಲಿ ಎಲ್ಲಾ ಪ್ರಾಣಗಳೂ ಲಯಿಸುವುವು. ನಾನು ಕೆಲಸಮಾಡಲಾರಂಭಿಸಿದರೆ, ತಿರುಗಿ ಎಲ್ಲವೂ ನಡೆಯಲಾರಂಭಿಸುವುವು. ಅದರಿಂದ ನಾನು ಮೇಲು! ಇದೋ! ನಾನು ಅಡಗುವೆನು ನೋಡಿರಿ!' ಎಂದು ಹೇಳಿ, ಅಲ್ಲಿಯೇ ಅಡಗಿದ್ದು ತಿರುಗಿ ಸಂಚರಿಸತೊಡಗಿತು. ಆಗ ಪ್ರಾಣ, ಅಪಾನ, ಉದಾನ, ಸಮಾನಗಳೆಂಬೀ ನಾಲ್ಕೂ ಅದನ್ನು ನೋಡಿ 'ವ್ಯಾನಾ! ನೀನೂ ದೊಡ್ಡವನಲ್ಲ. ಸಮಾನವೊಂದುಮಾತ್ರ ನಿನ್ನವಶದಲ್ಲಿರುವುದು' ಎಂದು ಹೇಳಿದುವು. ಆಮೇಲೆ ವ್ಯಾನವು ತಿರುಗಿ ಸಂಚಾರಮಾಡತೊಡಗಿತು. ಆಮೇಲೆ ಸಮಾನವು 'ಎಲೈ! ನಾನು ನಿಮ್ಮೆಲ್ಲರಲ್ಲಿಯೂ ಶ್ರೇಷ್ಠನು. ನಾನು ಅಡಗಿಕೊಂಡರೆ ಪ್ರಾಣಿಶರೀರದಲ್ಲಿ ಸಮಸ್ತಪ್ರಾಣಗಳೂ ಅಡಗಿಹೋಗುವುವು.

ನಾನು ಸಂಚರಿಸತೊಡಗಿದರೆ ಎಲ್ಲವೂ ಸಂಚರಿಸುವುವು. ಅದರಿಂದ ನಾನೇ ದೊಡ್ಡವನು. ನಾನು ಅಡಗಿಕೊಳ್ಳುವೆನು ನೋಡಿರಿ' ಎಂದಿತು. ಹೀಗೆಂದುಹೇಳಿ ಅಡಗಿದ್ದು ತಿರುಗಿ ಸಂಚರಿಸತೊಡಗಿತು. ಆಗ ಬೇರೆ ನಾಲ್ಕು ವಾಯುಗಳೂ 'ಸಮಾನಾ! ನೀನೂ ಶ್ರೇಷ್ಠನಲ್ಲ. ವ್ಯಾನ ವೊಂದೇ ನಿನ್ನ ಅಧೀನವು' ಎಂದು ಹೇಳಿದುವು. ಆಮೇಲೆ ಸಮಾನವು ಸಂಚರಿಸತೊಡಗಿತು. ಅದರಿಂದಾಚೆಗೆ ಉದಾನವು ನಿಮ್ಮೆಲ್ಲರಿಗಿಂತಲೂ ನಾನೇ ಮೇಲು. ನಾನು ನಿಂತರೆ ಶರೀರದಲ್ಲಿ ಎಲ್ಲಾ ಪ್ರಾಣಗಳೂ ನಿಂತುಹೋಗುವುವು. ನಾನು ಚಲಿಸತೊಡಗಿದರೆ ಎಲ್ಲವೂ ತಿರುಗಿ ಚಲಿಸು ವುವು. ಇದರಿಂದ ನಾನೇ ಮೇಲು. ನಾನು ಅಡಗುವೆನು ನೋಡಿರಿ!' ಎಂದು ಹೇಳಿ ಸ್ವಲ್ಪಹೊತ್ತು ಅಡಗಿತು. ತಿರುಗಿ ಸಂಚರಿಸತೊಡಗಿತು. ಆಗ ಪ್ರಾಣಾಪಾನ ಸಮಾನ ವ್ಯಾನಗಳೆಂಬ ನಾಲ್ಕೂ ಅದನ್ನು ನೋಡಿ 'ಉದಾನಾ! ನೀನೂ ಶ್ರೇಷ್ಠನಲ್ಲ. ವ್ಯಾನವೊಂದೇ ನಿನ್ನ ಅಧೀನವು' ಎಂದುವು.

ದೇವೀ! ಇದನ್ನೆಲ್ಲ ನೋಡುತ್ತಿದ್ದ ಬ್ರಹ್ಮನು ನಗುತ್ತ, ಆ ಐದು ಪ್ರಾಣವಾಯುಗಳನ್ನೂ ನೋಡಿ 'ಎಲೈ! ನೀವೆಲ್ಲರೂ ಶ್ರೇಷ್ಠರೇ! ಆದರೆ ಒಬ್ಬರ ಸಹಾಯವು ಮತ್ತೊಬ್ಬರಿಗೆ ಬೇಕಾದುದರಿಂದ ಒಬ್ಬರೂ ಶ್ರೇಷ್ಠ ರಲ್ಲ! ನಿಮ್ಮಷ್ಟಕ್ಕೆಮಾತ್ರ ನೀವು ಮೇಲು. ನಿಮ್ಮನಿಮ್ಮ ಕೆಲಸದಲ್ಲಿ ನಿಮಗೆ ಮೇಲ್ಮೆಯುಂಟು. ಆದರೆ, ನೀವೆಲ್ಲರೂ ಒಬ್ಬರ ಧರ್ಮವನ್ನು ಮತ್ತೊಬ್ಬರು ಅನುಸರಿಸತಕ್ಕವರಾಗಿರುವಿರಿ' ಎಂದು ಹೇಳಿ, ತಿರುಗಿ ಅವು ಗಳನ್ನು ಕುರಿತು 'ನಿಮ್ಮಲ್ಲಿ ಒಬ್ಬೊಬ್ಬರೂ ಸ್ಥಿರವಾಗಿಯೂ, ಅಸ್ಥಿರವಾಗಿ ಯೂ ವರ್ತಿಸತಕ್ಕವರು. ಮುಖ್ಯವಾಗಿ ಐದು ವಾಯುಗಳೂ ಸಂಚರಿಸ ತಕ್ಕವುಗಳೇ! ಒಬ್ಬನೇ ಎಲ್ಲರಿಗೂ ಆತ್ಮವಾಗಿದ್ದುಕೊಂಡು ಬೇರೆಬೇರೆ ವೃತ್ತಿ ಭೇದಗಳನ್ನು ಹೊಂದುವನು. ನೀವು ಅನ್ಯೋನ್ಯಸುಹೃತ್ತುಗಳಾಗಿ ಒಬ್ಬರನ್ನೊಬ್ಬರು ರಕ್ಷಿಸುತ್ತ, ಅನ್ಯೋನ್ಯಾಶ್ರಯದಿಂದ ಇರಬೇಕು. ಇನ್ನು ನಿಮಗೆ ಮಂಗಳವಾಗಲಿ. ಕ್ಷೇಮದಿಂದ ಹೋಗಿರಿ' ಎಂದು ಹೇಳಿ ಕಳು ಹಿಸಿಬಿಟ್ಟನು.

ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು.

ಸೃಷ್ಟ್ಯಾದಿಕಾರ್ಯವಿಷಯವಾಗಿ ನಾರದನಿಗೂ, ದೇವಮತನಿಗೂ ನಡೆದ ಸಂವಾದಗಳನ್ನು ಕುರಿತು ಬ್ರಾಹ್ಮಣದಂಪತಿಗಳ ಸಂಭಾಷಣೆ.

ಆಗ ಬ್ರಾಹ್ಮಣನು ಪತ್ನಿಯನ್ನು ಕುರಿತು, “ದೇವೀ! ಇದೇ ಪ್ರಾಣವಾಯುಗಳ ವಿಷಯವಾಗಿ ನಾರದ ದೇವಮತರಿಗೆ ನಡೆದ ಸಂವಾದರೂಪವಾದ ಇತಿಹಾಸವೊಂದನ್ನು ಉದಾಹರಿಸುವರು. ದೇವಮತನು ನಾರದನನ್ನು ನೋಡಿ ‘ಮನುಷ್ಯನು ಹುಟ್ಟುವಕಾಲದಲ್ಲಿ ಮೊದಲು ಹುಟ್ಟಿದುದಾವುದು? ಪ್ರಾಣವೇ? ಅಪಾನವೇ? ಸಮಾನವೇ? ವ್ಯಾನವೇ! ಅಥವಾ ಉದಾನವೇ?’ ಎಂದು ಕೇಳಲು, ಅದಕ್ಕೆ ನಾರದನು ‘ಪ್ರಾಣಿಯು ಯಾವ ಪ್ರಾಣದಿಂದ ಸೃಷ್ಟಿಸಲ್ಪಡುವುದೋ, ಅದಕ್ಕಿಂತಲೂ ಬೇರೆಕಾರಣವೊಂದು ಅದನ್ನು ಮೊದಲೇ ಸೇರುವುದು. ಅದನ್ನೂ, ಪ್ರಾಣದ್ವಂದ್ವವನ್ನೂ, ತಿರ್ಯಕ್ಕು ಊರ್ಧ್ವ, (ಮೇಲಾದುದು) ಅಧಸ್ಸು (ಕೀಳಾದುದು) ಇವನ್ನೆಲ್ಲ, ಈ ವಿಷಯವಾಗಿ ತಿಳಿಯಬೇಕಾದುದವಶ್ಯವು’ ಎಂದನು. ಆಗ ದೇವಮತನು ‘ಓ ಮುನೀಂದ್ರಾ! ಹಾಗಿದ್ದರೆ ಪ್ರಾಣಿಯು ಯಾವುದರಿಂದ ಸೃಷ್ಟಿಸಲ್ಪಡುವುದು? ಬೇರೆ ಯಾವುದು ಅದನ್ನು ಮೊದಲು ಬಂದು ಸೇರುವುದು? ಪ್ರಾಣದ್ವಂದ್ವವೆಂದರೇನು? ತಿರ್ಯಕ್ಕು, ಊರ್ಧ್ವ, ಅಧಸ್ಸು ಎಂದರೇನು? ಇವನ್ನೆಲ್ಲ ನನಗೆ ತಿಳಿಸಬೇಕು’ ಎಂದು ಕೇಳಲು, ನಾರದನು ಹೇಳತೊಡಗಿದನು.

‘ಮಹರ್ಷೀ! ಮೊದಲು ಆನಂದವು (ಆತ್ಮವು) ಸಂಕಲ್ಪದಿಂದಲೂ, ಶಬ್ದ, ರೂಪ, ರಸ, ಗಂಧ, ಸ್ಪರ್ಶ (ವಾಸನೆ) ಗಳಿಂದಲೂ (ಜಂತುರೂಪದಿಂದ) ಉಂಟಾಗುವುದು. ಶುಕ್ಲಶೋಣಿತಗಳ ಸಂಸರ್ಗದಿಂದ ಮೊದಲು ಪ್ರಾಣವು ಪ್ರವರ್ತಿಸುವುದು. ಆ ಪ್ರಾಣದಿಂದ ಶುಕ್ಲವು ವಿಕೃತಿಹೊಂದಿಸಲ್ಪಟ್ಟು ಅಪಾನವಾಗುವುದು. ಆ ಅಪಾನವು ಶುಕ್ಲದಿಂದಲೂ, ರಸದಿಂದಲೂ ಉತ್ಪನ್ನವಾಗುವುದು. ದಂಪತಿಗಳನಡುವೆ ಆನಂದವೆಂಬುದೇ ಉದಾನದ ರೂಪವನ್ನು ಹೊಂದುವುದು. ಕಾಮದಿಂದ ಶುಕ್ಲವೂ, ಶುಕ್ಲದಿಂದ ರಜಸ್ಸೂ ಉಂಟಾಗುವುದು. ಸಮಾನ ವ್ಯಾನಗಳೆರಡರಿಂದಲೂ ಸಾಮಾನ್ಯವಾಗಿ ಶುಕ್ಲಶೋಣಿತಗಳುಂಟಾಗುವುವು. ಪ್ರಾಣಾಪಾನ

ಗಳೆಂಬ ದ್ವಂದ್ವವು ಕ್ರಮವಾಗಿ ಮೇಲಕ್ಕೂ, ಕೆಳಕ್ಕೂ ಹೋಗುವುದು. ವ್ಯಾನ ಸಮಾನಗಳೆರಡೂ ತಿರ್ಯಕ್ಕಾಗಿ ಸಂಚರಿಸುವ ದ್ವಂದ್ವವು.

'ಅಗ್ನಿಯೇ ಎಲ್ಲಾ ದೇವತೆಗಳು' ಎಂಬುದಾಗಿ ವೇದಗಳು ವಿಧಿಸುವುವು. ಪ್ರಾಣಿಗಳಲ್ಲಿ ಬುದ್ಧಿಯೊಡನೆ ಜ್ಞಾನವು ಹುಟ್ಟುವುದು. ದಿವ್ಯತೇಜಸ್ಸುಳ್ಳ ಪರಮಾತ್ಮನೆನಿಸಿದ ಆ ಅಗ್ನಿಗೆ ತಮೋಗುಣವು ಹೊಗೆಯಾಗಿಯೂ, ರಜಸ್ಸು ಭಸ್ಮವಾಗಿಯೂ ಇರುವುದು. ಯಾವ ಪರಮಾತ್ಮರೂಪವಾದ ಅಗ್ನಿಯಲ್ಲಿ ಹವಿಸ್ಸು ಹೋಮಮಾಡಲ್ಪಡುವುದೋ, ಆ ಅಗ್ನಿಯಿಂದಲೇ ಎಲ್ಲವೂ ಉತ್ಪನ್ನವಾಗುವುವು. ಯಜ್ಞವಿದರು ಸಮಾನವ್ಯಾನಗಳೆರಡನ್ನೂ ಅದಕ್ಕೆ ಹವಿಸ್ಸೆಂದು ಹೇಳುವರು. ಪ್ರಾಣಾಪಾನಗಳೆರಡೂ ಆಜ್ಯಗಳು. ಅವೆರಡರ ನಡುವೆ ಪರಮಾತ್ಮನೆಂಬ ಅಗ್ನಿ ನೆಲೆಗೊಂಡಿದೆ. ಉದಾನವೆನಿಸಿದ ಈ ಬ್ರಹ್ಮದ ರೂಪವನ್ನು ಬ್ರಹ್ಮಜ್ಞರು ತಿಳಿಯುವರು. ಸತ್ಯ, ಅಸತ್ಯಗಳೆಂಬಿವೆರಡೂ ದ್ವಂದ್ವಗಳು. ಅವುಗಳ ನಡುವೆ ಪರಮಾತ್ಮನೆಂಬ ಅಗ್ನಿಯು ನೆಲೆಗೊಂಡಿರುವುದು. ಉದಾನವೆಂಬೀ ಬ್ರಹ್ಮದ ದಿವ್ಯರೂಪವನ್ನು ಬ್ರಾಹ್ಮಣರು ತಿಳಿಯುವರು. ಇದರಂತೆಯೇ ಸತ್ತು, ಅಸತ್ತು, (ಕಾರಣ ಮತ್ತು ಕಾರ್ಯ) ಇವೆರಡೂ ದ್ವಂದ್ವವು. ಇವುಗಳನಡುವೆ ಬ್ರಹ್ಮರೂಪವಾದ ಅಗ್ನಿಯಿರುವುದು. ಉದಾನವೆನಿಸಿದ ಈ ಬ್ರಹ್ಮಸ್ವರೂಪವನ್ನು ಬ್ರಾಹ್ಮಣರು ತಿಳಿಯುವರು. ಶುಭಾಶುಭಗಳೆರಡೂ, ದ್ವಂದ್ವವೆನಿಸುವುವು. ಅವುಗಳ ನಡುವೆ ಪರಮಾತ್ಮನೆನಿಸಿದ ಅಗ್ನಿಯಿರುವನು. ಉದಾನವೆಂಬೀ ಬ್ರಹ್ಮದ ಸ್ವರೂಪವನ್ನು ಬ್ರಾಹ್ಮಣರು ತಿಳಿಯುವರು. ಆ ಬ್ರಹ್ಮವು ಯಾವ ಸಂಕಲ್ಪದಿಂದ ಸಮಾನ ವ್ಯಾನಗಳಾಗುವುದೋ, ಅದೇ ಸಂಕಲ್ಪದಿಂದ ಕರ್ಮವೂ ವಿಸ್ತರಿಸಲ್ಪಡುವುದು. ಮೂರನೆಯದು (ಸುಷುಪ್ತಿ)ಸಂಕಲ್ಪರಹಿತವಾದರೂ, ಸಮಾನನಿಂದ ನಿಶ್ಚಯಿಸಲ್ಪಡುವುದು. ವಾಮದೇವನ ಜ್ಞಾನದಲ್ಲಿ ಶಾಂತಿಯೇ ಇವಕ್ಕೆಲ್ಲ ಪ್ರಧಾನವು. ಶಾಂತಿಯೇ ಸನಾತನಬ್ರಹ್ಮವು. ಉದಾನವೆಂಬ ಬ್ರಹ್ಮದ ರೂಪವನ್ನು ಬ್ರಾಹ್ಮಣರು ಹೀಗೆಂದು ತಿಳಿದಿರುವರು' ಎಂದನು.

ಇದು ಇಪ್ಪತ್ತೈದನೆಯ ಅಧ್ಯಾಯವು.

{ ಕರಣ, ಕರ್ಮ, ಕರ್ತೃ, ಮೋಕ್ಷಗಳೆಂಬ ನಾಲ್ಕು ವಿಭಾಗಗಳನ್ನು ಕುರಿತು ಬ್ರಾಹ್ಮಣದಂಪತಿಗಳ ಸಂವಾದಗಳು. }

" ಇದೇ ವಿಷಯದಲ್ಲಿ ಚಾತುರ್ಹೋತ್ರವಿಧಾನವೆಂಬ ಇತಿಹಾಸವೊಂದನ್ನು ಉದಾಹರಿಸುವರು. ಅದರ ವಿಧಿಗಳನ್ನೆಲ್ಲ ನಿನಗೆ ತಿಳಿಸುವೆನು ಕೇಳು. ಇದು ಬಹಳ ರಹಸ್ಯವೂ, ಮತ್ತು ಆಶ್ಚರ್ಯಕರವೂ ಆದುದು. ಕರಣ, ಕರ್ಮ, ಕರ್ತೃ, ಮೋಕ್ಷಗಳೆಂಬಿವು ನಾಲ್ಕೂ ಹೋತೃಗಳು. ಇವು ನಾಲ್ಕೇ ಲೋಕವನ್ನೆಲ್ಲ ವ್ಯಾಪಿಸಿರುವುವು. ಹೋತೃಗಳಿಗೆ ಸಾಧನಗಳಾವುವೆಂಬುದನ್ನು ಮೊದಲು ಕೇಳು. ಮೂಗು, ನಾಲಗೆ, ಕಣ್ಣು, ಚರ್ಮ, ಕಿವಿ, ಮನಸ್ಸು, ಬುದ್ಧಿ, ಇವೇಳೂ (ಅವಿದ್ಯೆಗೆ) ಕರಣರೂಪವಾದ ಕಾರಣಗಳು. ಗಂಧ, ರಸ, ರೂಪ, ಸ್ಪರ್ಶ, ಶಬ್ದ, ನೆನೆಸತಕ್ಕುದು, ತಿಳಿಯತಕ್ಕುದು, ಇವೇಳೂ ಕರ್ಮಕಾರಣಗಳು. ಮೂಸುವವನು, ಸವಿಯುವವನು, ನೋಡುವವನು, ಸ್ಪರ್ಶಿಸುವವನು, ಕೇಳುವವನು, ನೆನೆಸುವವನು, ತಿಳಿಯುವವನು, ಇವರೇಳುಮಂದಿಯೂ ಕರ್ತೃಗಳು. ಘ್ರಾಣಾದಿ ಗುಣಗಳುಳ್ಳ ಇವರು, (ಕರ್ತೃಗಳು) ಗಂಧವೇ ಮೊದಲಾಗಿ ಶುಭಾಶುಭರೂಪಗಳಾದ ತಮ್ಮ ಗುಣಗಳನ್ನೇ ಭುಜಿಸುವರು. (ಅನುಭವಿಸುವರು) ಇವರೇಳುಮಂದಿಯೂ ಸ್ವಾಭಿಮಾನವನ್ನೂ, ಆ ಗುಣಗಳನ್ನೂ ತೊರೆದಾಗ ಮೋಕ್ಷಕ್ಕೆ ಕಾರಣಭೂತರಾಗುವರು. ತಮ್ಮತಮ್ಮ (ಇಂದ್ರಿಯ) ಸ್ಥಾನಗಳನ್ನು ವಿಧ್ಯುಕ್ತವಾಗಿ ತಿಳಿದ ವಿದ್ವಾಂಸರಿಗಾದರೋ ಆ ಗುಣಗಳೇ (ಇಂದ್ರಿಯಗಳೇ) ದೇವತೆಗಳಾಗಿ, ಆ ವಿಷಯಗಳೆಂಬ ಹವಿಸ್ಸನ್ನು ಅವು ತಾವೇ ಅನುಭವಿಸುತ್ತಿರುವುವು. (ಎಂದರೆ, ಅವರಿಗೆ ಅದರಲ್ಲಿ ಸಂಬಂಧವಿರುವುದಿಲ್ಲ.)

ಹವಿಸ್ಸುಗಳನ್ನೂ, ಅನ್ನಗಳನ್ನೂ ಭುಜಿಸುವವನು (ಭೋಕ್ತೃವು) ಅದರಲ್ಲಿ ಮಮತೆಯಿಂದಲೇ ಕೆಡಿಸಲ್ಪಡುವನು. ತನಗಾಗಿಮಾತ್ರ ಅನ್ನವನ್ನು ಪಾಕಮಾಡುವವನು, ಅದು ತನಗೆಂಬ ಭಾವದಿಂದಲೇ ಕೆಡುವನು. ಅಂತವನು ಭುಜಿಸಬಾರದುದನ್ನು ಭುಜಿಸಿದವನಂತೆಯೂ, ಮದ್ಯ (ಅಪೇಯ) ಪಾನಮಾಡಿದವನಂತೆಯೂ ಆಗಿ, ಅದರಿಂದಲೇ ಕೆಡುವನು.

ಅವನು ಅನ್ನವನ್ನು ಕೊಲ್ಲುವನು. ಅನ್ನವು ಅವನನ್ನು ಕೊಲ್ಲುವುದು. (ಎಂದರೆ ಇಂದ್ರಿಯಗಳನ್ನು ಅವನು ಕೆಡಿಸುವನು. ಆ ಇಂದ್ರಿಯಗಳು ಅವನನ್ನು ಕೆಡಿಸುವುವು.) ಆವನು ತಾನು ಕೆಡಿಸಿದ ಅನ್ನದಿಂದಲೇ ತಾನು ಕೆಡಿಸಲ್ಪಡುವನು. ಈ ಸೂಕ್ಷ್ಮವನ್ನು ಅರಿತವನು, ಆ ಅನ್ನವನ್ನು ಸರಿಯಾಗಿ ಭುಜಿಸಿದರೆ, ತಾನೇ ಈಶ್ವರನಾಗಿ ಅನ್ನಾದಿಗಳನ್ನುಂಟುಮಾಡಬಲ್ಲನು. ಆಗ ಅವನಿಗೆ ಆ ಅನ್ನದಿಂದ ದೋಷವುಂಟಾಗದು. ಆದುದರಿಂದ ಮನಸ್ಸಿನಿಂದ ನೆನೆಸುವುದು, ಬಾಯಿಂದಾಡುವುದು, ಕಿವಿಯಿಂದ ಕೇಳುವುದು, ಕಣ್ಣಿಂದ ನೋಡುವುದು, ತ್ವಕ್ಕಿನಿಂದ ಸ್ಪರ್ಶಿಸುವುದು, ಮೂಗಿನಿಂದ ಘ್ರಾಣಿಸುವುದು, ಈ ವಿಧವಾದ ಹವಿಸ್ಸುಗಳನ್ನೆಲ್ಲ, ಮನಸ್ಸು ಮೊದಲಾದ ಷಡಿಂದ್ರಿಯಗಳನ್ನೂ ಅಡಗಿಸಿ ಅದರಲ್ಲಿ ಹೋಮಮಾಡಬೇಕು. ಪ್ರಿಯೆ! ನನ್ನ ಶರೀರದೊಳಗೆ ಬ್ರಹ್ಮರೂಪವಾದ ಅಗ್ನಿಯು ಜ್ವಲಿಸುತ್ತಿರುವುದು. ನನಗೆ ಬ್ರಹ್ಮಮಯವಾದ ಜ್ಞಾನವೇ ಹವಿಸ್ಸು! ಪ್ರಾಣವೆಂಬ ಸ್ತೋತ್ರವುಳ್ಳುದಾಗಿಯೂ, ಅಪಾನವೆಂಬ ಶಸ್ತ್ರವುಳ್ಳುದಾಗಿಯೂ, ಸರ್ವತ್ಯಾಗವೆಂಬ ದಕ್ಷಿಣೆಯುಳ್ಳುದಾಗಿಯೂ ಇರುವ ಯೋಗವೆಂಬ ಯಜ್ಞವು ಸಿದ್ಧವಾಯಿತು. ಈ ಯಾಗಕ್ಕೆ ಅಹಂಕಾರ, ಮನಸ್ಸು, ಬುದ್ಧಿ, ಇವು ಮೂರೂ ಕ್ರಮವಾಗಿ ಹೋತೃ, ಅಧ್ವರ್ಯು, ಉದ್ಗಾತೃಗಳೆಂಬ ಮೂರು ಋತ್ವಿಕ್ಕುಗಳಾಗಿಯೂ, ತಾನೇ ಬ್ರಹ್ಮವಾಗಿಯೂ ಇರುವುದು. ಸತ್ಯವೆಂಬುದು ಪ್ರಶಾಸ್ತೃವಾಗಿಯೂ, ಅದೇ ಅವನ ಶಸ್ತ್ರವಾಗಿಯೂ, ಮೋಕ್ಷವೇ ಅದರ ದಕ್ಷಿಣೆಯಾಗಿಯೂ ಇರುವುದು. ವೇದಜ್ಞರಾದ ವಿದ್ವಾಂಸರು ಈ ವಿಷಯದಲ್ಲಿ ಕೆಲವು ಋಕ್ಕುಗಳನ್ನು ಪ್ರಮಾಣವಾಗಿಯೂ ಹೇಳುವರು. ಭಗವಂತನಾದ ನಾರಾಯಣನನ್ನು ಹೊಂದುವುದಕ್ಕೆ ಪೂರ್ವಕಾಲದಲ್ಲಿ ಇಂದ್ರಿಯಗಳನ್ನು ವಶಪಡಿಸಿಕೊಂಡ ಮಹನೀಯರು ಅವನ ವಿಷಯವಾದ ಸಾಮಗಳನ್ನು ಗಾನಮಾಡುವರು. ಆ ವಿಷಯದಲ್ಲಿ ನಿದರ್ಶನಗಳನ್ನೂ ಹೇಳುವರು. ಎಲೆ ಪ್ರಿಯೆ! ದೇವನಾದ ಆ ನಾರಾಯಣನೇ ನಮ್ಮೆಲ್ಲರಿಗೂ ಅಂತರಾತ್ಮನಾಗಿರತಕ್ಕವನೆಂದು ತಿಳಿ.''

ಇದು ಇಪ್ಪತ್ತಾರನೆಯ ಅಧ್ಯಾಯವು.



ಬ್ರಹ್ಮದೇವನು ಒಂದೇ ಮಾತಿನಿಂದ ಬ್ರಹ್ಮವನ್ನು ಉಪದೇಶಿಸಿದಾಗ, ದೇವತೆಗಳು ತಮ್ಮತಮ್ಮ ಜ್ಞಾನಕ್ಕೆ ತಕ್ಕಂತೆ ಅದನ್ನು ಗ್ರಹಿಸಿದವಿಷಯವಾಗಿ ಬ್ರಾಹ್ಮಣದಂಪತಿಗಳ ಸಂಭಾಷಣೆ.

"ಎಲೆ ದೇವಿ! ಇನ್ನು ಆ ನಾರಾಯಣನ ಸ್ವರೂಪವೆಂತದೆಂಬುದನ್ನೂ ಹೇಳುವೆನು ಕೇಳು. ಆ ನಾರಾಯಣನೊಬ್ಬನೇ ಸರ್ವನಿಯಾಮಕನು. ಹಾಗೆ ನಿಯಮಿಸತಕ್ಕವನು ಬೇರೊಬ್ಬನಿಲ್ಲ. ನಮ್ಮೆಲ್ಲರ ಹೃದಯದಲ್ಲಿ ಇರುವಾತನನ್ನೇ ಈಗ ನಾನು ಹೇಳುವೆನೆಂದು ತಿಳಿ. ನೀರು ಎಲ್ಲಿದ್ದರೂ ಹಳ್ಳದಕಡೆಗೇ ಎಳೆಯಲ್ಪಡುವಂತೆ, ಅವನಿಂದ ಪ್ರೇರಿತನಾಗಿಯೇ ನಾನು ಎಲ್ಲಾ ವಿಧದಲ್ಲಿಯೂ ನಡೆಯುತ್ತಿರುವೆನು. ಅವನೊಬ್ಬನೇ ಗುರು! ಬೇರೊಬ್ಬನು ಗುರುವಿಲ್ಲ. ನಮ್ಮ ಹೃದಯದಲ್ಲಿರುವವನನ್ನು ಕುರಿತೇ ನಾನು ಹೇಳುವೆನು. ಆ ಗುರುವಿನಿಂದ ನಿಗ್ರಹಿಸಲ್ಪಟ್ಟೇ ಪೂರ್ವದಲ್ಲಿ ದಾನವರೆಲ್ಲರೂ ಸಂಹೃತರಾದರು. ಅವನೊಬ್ಬನೇ ಎಲ್ಲರಿಗೂ ಬಂಧು. ಅವನನ್ನು ಬಿಟ್ಟು ಬೇರೆ ಬಂಧುವಿಲ್ಲ. ನಮ್ಮೆಲ್ಲರ ಹೃದಯದಲ್ಲಿರುವವನನ್ನೇ ಕುರಿತು ನಾನು ಹೇಳುವೆನು. ಅವನಿಂದ ಆದರಿಸಲ್ಪಟ್ಟವರೇ ಬಂಧುಗಳುಳ್ಳವರು. ಸಪ್ತಋಷಿಗಳು ಅವನ ಬಲದಿಂದಲೇ ಆಕಾಶದಲ್ಲಿ ಪ್ರಕಾಶಿಸುವರು. ಅವನೊಬ್ಬನೇ ಕಿವಿಗೊಟ್ಟು ಕೇಳುವವನು. ಅವನನ್ನು ಬಿಟ್ಟರೆ ಎರಡನೆಯವನಿಲ್ಲ. ಎಲ್ಲರ ಹೃದಯದಲ್ಲಿರುವವನನ್ನೇಕುರಿತು ನಾನು ಹೇಳುವೆನು. ದೇವೇಂದ್ರನೂ ಕೂಡ ಅವನಲ್ಲಿ ಗುರುಕುಲವಾಸವನ್ನು ಮಾಡಿಯೇ ತ್ರೈಲೋಕ್ಯಾಧಿಪತ್ಯಪದವಿಯನ್ನು ಪಡೆದನು. ಅವನೊಬ್ಬನೇ ದ್ವೇಷ್ಯನು. ಅವನ ನಿಯೋಗದಿಂದಲೇ ಲೋಕದಲ್ಲಿ ಪನ್ನಗರೆಲ್ಲರೂ ಯಾವಾಗಲೂ ದ್ವೇಷ್ಯರಾಗಿರುವರು. ನಮ್ಮ ಹೃದಯದಲ್ಲಿರುವವನನ್ನೇ ಕುರಿತು ನಾನು ಹೇಳುವೆನೆಂದು ತಿಳಿ. ಹೀಗೆ ಎಲ್ಲರಿಗೂ ನಿಯಾಮಕನೊಬ್ಬನೇ ಆಗಿದ್ದರೂ, ಅವರವರ ಬುದ್ಧಿಭೇದದಿಂದ ಅವರವರ ನಡತೆಯು ಭಿನ್ನವಾಗುವುದು.

ದೇವೀ! ಇದೇ ವಿಷಯವಾಗಿ ಹಿಂದೆ ಬ್ರಹ್ಮದೇವನ ಬಳಿಯಲ್ಲಿ ಪನ್ನಗರಿಗೂ, ಋಷಿಗಳಿಗೂ, ದೇವತೆಗಳಿಗೂ, ಏರ್ಪಟ್ಟ ಜ್ಞಾನಭೇದ

ವನ್ನು ಕುರಿತು ಪುರಾತನವಾದ ಒಂದು ಇತಿಹಾಸವನ್ನು ಹೇಳುವರು. ಅದನ್ನು ತಿಳಿಸುವೆನು ಕೇಳು. ಒಮ್ಮೆ ದೇವತೆಗಳೂ, ಋಷಿಗಳೂ, ನಾಗರೂ, ಅಸುರರೂ ಸಭೆಯಲ್ಲಿ ಕುಳಿತಿದ್ದ ಬ್ರಹ್ಮದೇವನಲ್ಲಿಗೆ ಬಂದು ತಮ್ಮ ಶ್ರೇಯಸ್ಸಿಗೆ ದಾರಿಯೇನೆಂದು ಕೇಳಿದರು. ಆಗ ಬ್ರಹ್ಮದೇವನು ಅವರ ಮುಂದೆ "ಓಮ್" ಎಂಬ ಒಂದೇ ಅಕ್ಷರವನ್ನು ಹೇಳಿ, ಇದೇ ಬ್ರಹ್ಮವೆಂದು ತಿಳಿಸಿದನು. ಅದನ್ನು ಕೇಳಿ ಒಬ್ಬೊಬ್ಬರಿಗೆ ಒಂದೊಂದು ಜ್ಞಾನವು ಹುಟ್ಟಿ, ಒಬ್ಬೊಬ್ಬರು ಒಂದೊಂದು ದಾರಿಯನ್ನು ಹಿಡಿದರು. ಮೊದಲು ಅದನ್ನು ಕೇಳಿದ ನಾಗರಿಗೆ* ಬಾಯಿತೆರೆದು ಕಡಿಯುವುದರಲ್ಲಿ ಬುದ್ಧಿಯುಂಟಾಯಿತು. ಅಸುರರಿಗೆ ಸಹಜವಾದ ಡಂಭದಲ್ಲಿ ಬುದ್ಧಿಹೋಯಿತು. ದೇವತೆಗಳಿಗೆ ದಾನದಲ್ಲಿ ಶ್ರೇಯಸ್ಸುಂಟೆಂಬ ನಿಶ್ಚಯವು ಹುಟ್ಟಿತು. ಮಹರ್ಷಿಗಳಿಗೆ ಇಂದ್ರಿಯಗಳನ್ನು ಅಡಗಿಸುವುದೇ ಶ್ರೇಯಸ್ಸೆಂಬ ಬುದ್ಧಿ ಹುಟ್ಟಿತು. ಹೀಗೆ ದೇವಾಸುರ ಮಹರ್ಷಿ ನಾಗರೆಲ್ಲರೂ, ತಾವು ಗುರುವಿನಲ್ಲಿ ಕೇಳಿದ ಒಂದೇ ಶಬ್ದದಿಂದ ವಿವಿಧಾರ್ಥಗಳನ್ನು ಗ್ರಹಿಸಿ, ಬೇರೆಬೇರೆ ನಿಶ್ಚಯಬುದ್ಧಿಯನ್ನು ಹೊಂದಿದರು. ಆ ಭಗವಂತನಾದರೋ ಹೇಳಿದುದೆಲ್ಲವನ್ನೂ ಸರಿಯಾಗಿ ಕೇಳುವನು. ಯಥಾಸ್ಥಿತವಾಗಿ ಗ್ರಹಿಸಬಲ್ಲನು. ವಿಷಯಗಳನ್ನು ಕೇಳತಕ್ಕವರಿಗೆ ಅವುಗಳನ್ನು ನ್ಯಾಯವಾಗಿ ಉಪದೇಶಿಸುವನು. ಆದುದರಿಂದ ಇವನಿಗಿಂತಲೂ ಬೇರೆ ಗುರುವಿಲ್ಲ. ಇವನ ಅನುಮತಿಯಿಲ್ಲದೆ ಕರ್ಮಗಳು ನಡೆಯುವುದಿಲ್ಲ. ಗುರುವೂ, ಬಂಧುವೂ, ಶಿಕ್ಷಕನೂ, ದ್ವೇಷ್ಯನೂ ಆದ ಆ ಪರಮಾತ್ಮನು, ಹೃದಯದಲ್ಲಿಯೇ ನೆಲೆ

---

* ಬ್ರಹ್ಮನು "ಓಮ್" ಎಂದು ಹೇಳಿದಾಗ, ತೆರೆದು ಮುಚ್ಚಿದ ಅವನ ಬಾಯನ್ನು ನೋಡಿ, ಸರ್ಪಗಳಿಗೆ ಬಾಯಿತೆರೆದು ಕಡಿಯಬೇಕೆಂಬುದೇ ಅವನ ಉಪದೇಶವೆಂಬ ಬುದ್ಧಿಯುಂಟಾಯಿತು. ಅಸುರರಿಗೆ ಡಂಭಕ್ಕಾಗಿ ತುಟಿಯನ್ನಾಡಿಸುತ್ತ ಜಪಮಾಡುವುದು ಶ್ರೇಯಸ್ಸೆಂದು ತೋರಿತು. ಕೇಳಿದವರಿಗೆ ಕೊಡುವ ವಿಷಯದಲ್ಲಿ 'ಓಮ್' ಎಂಬ ಅಂಗೀಕಾರಶಬ್ದವನ್ನುಚ್ಚರಿಸಬೇಕೆಂಬ ಬುದ್ಧಿಯಿಂದ ದೇವತೆಗಳಿಗೆ ದಾನದಲ್ಲಿ ಆಸ್ಥೆ ಹುಟ್ಟಿತು. ತೆರೆದ ತುಟಿಯು ಮುಚ್ಚುವುವನ್ನು ನೋಡಿ ಮಹರ್ಷಿಗಳು, ಇಂದ್ರಿಯಗಳ ವಿಕಾಸವನ್ನಡಗಿಸಿ ನಿಗ್ರಹಿಸುವುದೇ ತಮಗೆ ಶ್ರೇಯಸ್ಸೆಂದು ತಿಳಿದುದಾಗಿ ಭಾವವು.

ಸಿರುವನು. ಲೋಕದಲ್ಲಿ ಜೀವನು ಪಾಪಮಾರ್ಗದಲ್ಲಿ ಪ್ರವರ್ತಿಸಿ, ಪಾಪಿಯಾಗುವನು. ಪುಣ್ಯದಲ್ಲಿ ಪ್ರವರ್ತಿಸಿದರೆ ಪುಣ್ಯಶಾಲಿಯಾಗುವನು. ಇಷ್ಟಬಂದಹಾಗೆ ಇಂದ್ರಿಯಸುಖದಲ್ಲಿ ತಗುಲಿದವನು ಕಾಮಚಾರಿಯೆನಿಸುವನು. ದೃಢವಾದ ಇಂದ್ರಿಯಜಯದಿಂದಿರುವವನು ಬ್ರಹ್ಮಚಾರಿಯೆನಿಸುವನು. ವ್ರತಗಳನ್ನೂ, ಕರ್ಮಗಳನ್ನೂ ತ್ಯಜಿಸಿ, ಬ್ರಹ್ಮದಲ್ಲಿಯೇ ನೆಲೆಗೊಂಡು, ಬ್ರಹ್ಮಮಯನಾಗಿ ವರ್ತಿಸುವವನೂ ಬ್ರಹ್ಮಚಾರಿಯೆನಿಸುವನು. ಇಂತವನ ತಪಸ್ಸೆಂಬ ಯಾಗಕ್ಕೆ ಬ್ರಹ್ಮವೇ ಸಮಿತ್ತು. ಬ್ರಹ್ಮವೇ ಅಗ್ನಿ! ಬ್ರಹ್ಮವೇ ಸಂಸ್ತರಣವು. ಬ್ರಹ್ಮವೇ ಜಲವು! ಬ್ರಹ್ಮವೇ ಗುರು! ಅವನು ಬ್ರಹ್ಮದಲ್ಲಿಯೇ ನೆಲೆಗೊಂಡವನು. ವಿದ್ವಾಂಸರು ಈ ಸ್ಥಿತಿಯನ್ನೇ ಸೂಕ್ಷ್ಮಬ್ರಹ್ಮಚರ್ಯವೆಂದು ಹೇಳುವರು. ತತ್ವಜ್ಞಾನಿಗಳಿಂದ ಉಪದೇಶಹೊಂದಿ ಅನೇಕಮಹರ್ಷಿಯರು ಇದನ್ನೇ ಅನುಸರಿಸಿರುವರು.

ಇದು ಇಪ್ಪತ್ತೆಂಟನೆಯ ಅಧ್ಯಾಯವು.

---

{ ವಿದ್ಯೆಯನ್ನೂ, ಬ್ರಹ್ಮನನ್ನೂ ವನರೂಪವಾಗಿ ವರ್ಣಿಸಿದೆ ಬ್ರಾಹ್ಮಣದಂಪತಿಗಳ ಸಂಭಾಷಣೆ. }

ಆಗ ಬ್ರಾಹ್ಮಣನು "ಎಲೆ ದೇವಿ! ನಾನು ಮೊದಲು ಮನಸ್ಸಂಕಲ್ಪಗಳೆಂಬ ಸೊಳ್ಳೆನೊಣಗಳಿಂದಲೂ, ದುಃಖಹರ್ಷಗಳೆಂಬ ಚಳಿಬಿಸಿಲುಗಳಿಂದಲೂ, ಮೋಹವೆಂಬ ಅಂಧಕಾರದಿಂದಲೂ, ಲೋಭಮತ್ತು ವ್ಯಾಧಿಗಳೆಂಬ ಹಾವುಗಳಿಂದಲೂ, ವಿಷಯಗಳೆಂಬ ಒಂದೇಕಾಲುದಾರಿಯಿಂದಲೂ, ಕಾಮಕ್ರೋಧಗಳೆಂಬ ಕಿರಾತರಿಂದಲೂ ಮಹಾದುರ್ಗಮವಾದ ಒಂದು ಸ್ಥಳದಲ್ಲಿದ್ದು, ಹೇಗೋ ಅದನ್ನು ಪ್ರಯತ್ನದಿಂದ ದಾಟಿಬಂದು, ಉತ್ತಮವಾದ ಬೇರೊಂದು ಉದ್ಯಾನಕ್ಕೆ ಬಂದಿರುವೆನು" ಎಂದನು. ಆಗ ಆ ಬ್ರಾಹ್ಮಣಪತ್ನಿಯು ಅವನನ್ನು ಕುರಿತು, "ನೀನು ಹೇಳುವ ಉದ್ಯಾನವನವೆಲ್ಲಿರುವುದು? ಅಲ್ಲಿನ ವೃಕ್ಷಗಳಾವುವು? ಅಲ್ಲಿನ ನದಿಗಳಾವುವು? ಅಲ್ಲಿರುವ ಪರ್ವತಗಳೆಷ್ಟು? ಆ ತೋಟವು ಎಷ್ಟು ದೂರದಲ್ಲಿರುವುದು? ಎಂದಳು" ಅದಕ್ಕಾ ಬ್ರಾಹ್ಮಣನು "ಪ್ರಿಯೆ ಕೇಳು! ಅದ

ಕ್ಕಿಂತಲೂ ಬೇರೆಯಾದ ವಸ್ತುವಿಲ್ಲ. ಅದಕ್ಕಿಂತಲೂ ಬೇರೆಯಾದ ಸುಖ ವಿಲ್ಲ. ಅದರೊಡನೆ ಅಭಿನ್ನವಾದ (ಅಂಟದ) ಪದಾರ್ಥವೂ ಇಲ್ಲ. ಸುಖ ವನ್ನು ಉಂಟುಮಾಡತಕ್ಕ ಸಾಧನವು ಅದನ್ನು ಬಿಟ್ಟು ಬೇರೆ ಯಾವುದೂ ಇಲ್ಲ. ಅದಕ್ಕಿಂತಲೂ ಸಣ್ಣ ಪದಾರ್ಥವೂ ಬೇರೆ ಯಾವುದೂ ಇಲ್ಲ! ಅದ ಕ್ಕಿಂತಲೂ ದೊಡ್ಡದೂ ಇಲ್ಲ. ದುಃಖವನ್ನು ದಾಟಿಸುವುದು ಅದಕ್ಕಿಂತಲೂ ಬೇರೆ ಯಾವುದೂ ಇಲ್ಲ. ಅದಕ್ಕೆ ಸಮಾನವಾದ ಸುಖವೂ ಬೇರೆ ಯಾ ವುದೂ ಇಲ್ಲ! ಅಲ್ಲಿ ಪ್ರವೇಶಿಸಿದವರಿಗೆ ದುಃಖವೂ ಇಲ್ಲ! ಹರ್ಷವೂ ಇಲ್ಲ! ಅವರಿಗೆ ಬೇರೆ ಯಾರಿಂದಲೂ ಭಯವಿಲ್ಲ. ಅವರಿಂದಲೂ ಬೇರೆ ಯಾರಿಗೂ ಭಯವಿಲ್ಲ. *ಅಲ್ಲಿ ಏಳು ಮಹಾವೃಕ್ಷಗಳುಂಟು! ಅಲ್ಲಿ ಏಳು ಹಣ್ಣುಗಳೂ, ಏಳು ಅತಿಥಿಗಳೂ, ಏಳು ಆಶ್ರಮಗಳೂ, ಏಳು ಸಮಾಧಿ ಗಳೂ, ಏಳು ದೀಕ್ಷೆಗಳೂ ಇರುವುವು. ಇದೇ ಆ ಅರಣ್ಯದ ಸ್ವರೂಪವು. ಅಲ್ಲಿ ಮನಸ್ಸೆಂಬ ಮರಗಳು, ಶಬ್ದ ಮೊದಲಾದ ಐದು ವರ್ಣಗಳಿಂದ ಕೂಡಿದ ವಿಷಯಾನುಭವವೆಂಬ ದಿವ್ಯ ಪುಷ್ಪಗಳನ್ನೂ, ಅವುಗಳಿಂದ ಉತ್ಪನ್ನವಾಗುವ ಪ್ರೀತಿ ಮೊದಲಾದ ಫಲಗಳನ್ನೂ ಬಿಡುತ್ತ, ಆ ವನ ವನ್ನೆಲ್ಲಾ ವ್ಯಾಪಿಸಿರುವುವು. ಮತ್ತು ಅಲ್ಲಿನ (ಕಣ್ಣುಗಳೆಂಬ) ಮರಗಳು ಎರಡು ಬಣ್ಣವುಳ್ಳ ಪುಷ್ಪಗಳನ್ನೂ, ಫಲಗಳನ್ನೂ ಬೆಳೆಯುತ್ತ ಆ ವನ ವನ್ನು ವ್ಯಾಪಿಸಿರುವುವು. ಮತ್ತು ಅವಿದ್ಯೆಯೆಂಬ ವೃಕ್ಷಗಳು, ಸುಖಕರ ಗಳಾಗಿ ತ್ರಿಗುಣಗಳೆಂಬ ಮೂರು ವರ್ಣವುಳ್ಳ ವಿಷಯಾನುಭವವೆಂಬ ಪುಷ್ಪಗಳನ್ನೂ, ಫಲಗಳನ್ನೂ ಹುಟ್ಟಿಸುತ್ತ ಆ ವನವನ್ನೆಲ್ಲಾ ಆವರಿಸಿ ರುವುವು. ಮತ್ತು ಅಲ್ಲಿ ಯಾಗಾದಿಕರ್ಮಗಳೆಂಬ ವೃಕ್ಷಗಳು, ಸ್ವರ್ಗಾ

---

* ಏಳು ಮಹಾವೃಕ್ಷಗಳೆಂದರೆ ಮಹತ್ತು, ಅಹಂಕಾರ, ಪಂಚತನ್ಮಾತ್ರಗಳಿಂದಾದ ಶರೀರವೆಂದೂ, ಫಲಗಳೆಂದರೆ ಆ ಶರೀರಕಾರಣವಾದ ಯಾಗಾದ್ಯಪೂರ್ವವೆಂದೂ, ಅತಿಥಿ ಗಳೆಂದರೆ ಆ ಅಪೂರ್ವಕ್ಕೆ ಕಾರಣವಾಗಿ, ದೇವತೆಗಳೆಂಬ ಅತಿಥಿಗಳ ಪ್ರೀತಿಗೆ ಸಾಧನ ವಾದ ಯಾಗಕ್ರಿಯೆಯೆಂದೂ, ಆ ಆಶ್ರಮಗಳೆಂದರೆ ಯಾಗಾಶ್ರಯನಾದ ಕರ್ತನೆಂದೂ, ಸಮಾಧಿಗಳೆಂದರೆ ಆ ಯಾಗಾದಿಕರ್ಮಗಳಲ್ಲಿ ಅಭಿಮಾನವನ್ನು ಹುಟ್ಟಿಸತಕ್ಕ ರಾಗಾದಿ ಗಳೆಂದೂ, ದೀಕ್ಷೆಗಳೆಂದರೆ ಶರೀರಧರ್ಮಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳುವುದೆಂದೂ ವ್ಯಾಖ್ಯಾನವಿದೆ

ದಿಗಳೆಂಬ ಸುವಾಸನೆಯುಳ್ಳ ಪುಷ್ಪಗಳನ್ನೂ, ಫಲಗಳನ್ನೂ, ಹುಟ್ಟಿಸುತ್ತ ಆ ವನವನ್ನೆಲ್ಲಾ ವ್ಯಾಪಿಸಿಕೊಂಡಿರುವುವು. ಮತ್ತು ಅಲ್ಲಿ ಧ್ಯಾನತಪೋರೂಪವಾದ ಮರಗಳು ಬ್ರಹ್ಮಸ್ವರೂಪವೆಂಬ ಒಂದೇ ಬಣ್ಣವುಳ್ಳ ಪುಷ್ಪಗಳನ್ನೂ ಫಲಗಳನ್ನೂ ಬಿಡುತ್ತ ಆ ವನವನ್ನೆಲ್ಲಾ ವ್ಯಾಪಿಸಿರುವುವು. ಮತ್ತು ಅಲ್ಲಿ ಬುದ್ಧಿ, ಮನಸ್ಸು ಎಂಬೀ ಮಹಾವೃಕ್ಷಗಳು ಅವ್ಯಕ್ತಸ್ವರೂಪವುಳ್ಳ (ಮನೋರಥಗಳೆಂಬ) ಪುಷ್ಪಫಲಗಳನ್ನು ಬಿಡುತ್ತ ಆ ವನವನ್ನೆಲ್ಲಾ ವ್ಯಾಪಿಸಿಕೊಂಡಿರುವುವು. ಅಲ್ಲಿ ಜ್ಞಾನವೆಂಬ ಒಂದು ಅಗ್ನಿಯೂ, ಬ್ರಹ್ಮಜ್ಞಾನಿಯೆಂಬ ಯಜಮಾನನೂ, ಒಳ್ಳೇ ಮನಸ್ಸು ಮತ್ತು ಬುದ್ಧಿಯೆಂಬ ಸ್ರುಕ್ಸ್ರುವಗಳೂ, ಪಂಚೇಂದ್ರಿಯಗಳೆಂಬ ಸಮಿತ್ತುಗಳೂ ಸಿದ್ಧವಾಗಿರುವುವು. ಅಲ್ಲಿ ಮನಸ್ಸು ಮೊದಲಾದುವುಗಳನ್ನು ಹೋಮ ಮಾಡುವುದರಿಂದ ಮೋಕ್ಷಗಳೆಂಬ ಏಳು ವೃಕ್ಷಗಳು ಹುಟ್ಟಿ ದೀಕ್ಷಾಪ್ರಧಾನವಲ್ಲದ ಫಲಗಳನ್ನು ಬಿಡುವುವು. ದೇವತೆಗಳೆಂಬ ಅತಿಥಿಗಳು ಆ ಫಲಗಳನ್ನು ಭುಜಿಸುವರು. ಅಲ್ಲಿ ಇಂದ್ರಿಯಾಧಿಷ್ಠಾನದೇವತೆಗಳೆಂಬ ಏಳುಮಂದಿಮಹರ್ಷಿಗಳೂ ಅತಿಥಿಸತ್ಕಾರವನ್ನು ಹೊಂದುವರು. ಅವರೆಲ್ಲರೂ ಸತ್ಕೃತರಾಗಿ ಕಣ್ಮರೆಯಾದಮೇಲೆ ಮತ್ತೊಂದು ವನವು ಕಾಣಿಸುವುದು. ಅಲ್ಲಿ ಸಾಧುಗಳಿಗೆ ಮುಖ್ಯಾಶ್ರಯವೆನಿಸಿದ ಜ್ಞಾನವೆಂಬ ಮಹಾವೃಕ್ಷವುಂಟು. ಮೋಕ್ಷವೆಂಬುದೇ ಅದರ ಮಹಾಫಲವು. ಶಾಂತಿಯೇ ಅದರ ನೆಳಲು! ಶಾಸ್ತ್ರದಿಂದಲೂ, ಆಚಾರ್ಯೋಪದೇಶದಿಂದಲೂ ಉಂಟಾಗತಕ್ಕ ಜ್ಞಾನವೇ ಅದರ ಪಾತಿ! ತೃಪ್ತಿಯೇ ಅದಕ್ಕೆರೆಯುವ ನೀರು? ಒಳಗಿರುವ ಕ್ಷೇತ್ರಜ್ಞನೆಂಬ ಜೀವನೇ ಅದರ ವೃದ್ಧಿಗೆ ಕಾರಣವಾದ ಸೂರ್ಯನು! (ಬ್ರಹ್ಮಸಾಕ್ಷಾತ್ಕಾರವೆಂಬ) ಆ ವೃಕ್ಷವನ್ನಾಶ್ರಯಿಸಿದವರಿಗೆ ಪುನರ್ಜನ್ಮವೆಂಬುದಿಲ್ಲ. ಎತ್ತರದಲ್ಲಿಯೂ, ಆಳದಲ್ಲಿಯೂ, ಅಡ್ಡಲಾಗಿಯೂ ಬೆಳೆದ ಆ ವೃಕ್ಷದ ಕೊನೆಯನ್ನು ಯಾರೂ ಕಂಡವರಿಲ್ಲ. ಆ ವೃಕ್ಷವನ್ನಾಶ್ರಯಿಸಿದ ಪಕ್ಷದಲ್ಲಿ, ಒಳ್ಳೇ ಕಾಂತಿಯಿಂದ ಬೆಳಗುವವರೂ, ಸತ್ಯಸ್ವರೂಪಿಣಿಯರೂ, ಇದನ್ನು ವಶಪಡಿಸಲಾರದೆ ಲಜ್ಜೆಯಿಂದ ತಲೆಬಗ್ಗಿಸಿದವರೂ ಆದ ಏಳು ಮಂದಿ ಸ್ತ್ರೀಯರು ಸುತ್ತಿಸುತ್ತಿ ಬರುತ್ತಿರುವರು. ವಿಷಯಾನುಭವದಿಂದುಂಟಾದ ಆನಂದ

ವನ್ನುಂಟುಮಾಡತಕ್ಕ ಈ ಉತ್ತಮಸ್ತ್ರೀಯರು, ಇವನ ಸುತ್ತಲೂ ಅಲ್ಲಿ ಸುತ್ತುತ್ತಿರುವರು. ಅಲ್ಲಿರುವವರಿಗೆ ಪ್ರಜೆಗಳಿಗಿಂತಲೂ ಮೇಲಾದ ನಿತ್ಯಾನಿತ್ಯಭೇದವುಳ್ಳ ಎಲ್ಲಾ ಆನಂದಗಳೂ ಅನುಭವಕ್ಕೆ ಬರುವವು. ಅಲ್ಲಿಯೇ ಪ್ರಾಣಗಳೂ, ಇಂದ್ರಿಯಗಳೂ ಲಯಿಸುವುವು. ಸಿದ್ಧರೂ, ಅತಿಶಯವಾದ ಶ್ರೀಮಂತರೂ ಅಲ್ಲಿಯೇ ಲಯಿಸುವರು ! ತಿರುಗಿ ಅಲ್ಲಿಯೇ ಉದ್ಭವಿಸುವರು. ನಿತ್ಯತೇಜಸ್ಸುಳ್ಳ ಆ ಜ್ಞಾನಿಗೆ ಯಶಸ್ಸು, ವರ್ಚಸ್ಸು, ಐಶ್ವರ್ಯ, ಜಯ ಎಲ್ಲವೂ ಸ್ವಾಧೀನವಾಗಿರುವುವು. ಸಪ್ತಜ್ಯೋತಿಗಳೂ, ಜ್ಞಾನಿಯಾದ ಆ ಸೂರ್ಯನನ್ನೇ ಅನುಸರಿಸಿರುವುವು, ಆವನದಲ್ಲಿ ಪರ್ವತಗಳೂ, ಬ್ರಹ್ಮದಿಂದುಂಟಾದ ಆನಂದರಸವನ್ನು ಪ್ರವಹಿಸುವ ಒಟ್ಟಾಗಿ ಕೂಡುವುವು. ಯೋಗವೆಂಬ ಯಜ್ಞವನ್ನು ನಡೆಸತಕ್ಕ ರಹಸ್ಯವಾದ ಹೃದಯಾಕಾಶದಲ್ಲಿ ಎಲ್ಲಾ ನದಿಗಳ ಸಂಗಮವೂ ಉಂಟಾಗುವುದು. ತಮ್ಮಲ್ಲಿಯೇ ತಾವು ತೃಪ್ತರಾದ ಯೋಗಿಗಳು ಅಲ್ಲಿಂದ ಸಾಕ್ಷಾತ್ತಿತಾಮಹನನ್ನು ಹೊಂದುವರು. ಆಸೆಯನ್ನು ತೊರೆದು, ಬ್ರಹ್ಮವ್ರತದಲ್ಲಿಯೇ ಆಸೆಯನ್ನಿಟ್ಟು, ಶಾಂತರಾಗಿ, ತಪಸ್ಸಿನಿಂದ ಪಾಪಕಾರ್ಯಗಳೆಲ್ಲವನ್ನೂ ನೀಗಿದ ಯೋಗಿಗಳು ತಮ್ಮ ಆತ್ಮನಲ್ಲಿಯೇ ಬ್ರಹ್ಮೋಪಾಸನವನ್ನು ಮಾಡುವರು. ವಿದ್ಯೆಯೆಂಬ ಈ ಅರಣ್ಯವನ್ನು ತಿಳಿದ ಜನರು ಇಂದ್ರಿಯಜಯವೇ ಇದಕ್ಕೆ ಮೇಲಾದುದೆಂದು ಪ್ರಶಂಸಿರುವರು. ಈ ಅರಣ್ಯವನ್ನು ಸೇರಿದವರು ಸತ್ಯವನ್ನು ಬಿಟ್ಟಗಲುವುದಿಲ್ಲ. ಬ್ರಹ್ಮಜ್ಞಾನಿಗಳು ಈ ಅರಣ್ಯವನ್ನೇ, ಪರಮಪುಣ್ಯವೆಂದು ತಿಳಿದಿರುವರು. ಅದನ್ನು ತಿಳಿದು ವಿವೇಕವುಳ್ಳ ಆತ್ಮದಿಂದ ಶಮಾದಿಗಳನ್ನೇ ಅನುಷ್ಠಿಸುತ್ತಿರುವರು.

ಇದು ಇಪ್ಪತ್ತೆಂಟನೆಯ ಅಧ್ಯಾಯವು.

ಯಾಗದಲ್ಲಿ ಪಶುಗಳನ್ನು ಕೊಲ್ಲುವುದು ಅಧರ್ಮವಲ್ಲವೆಂಬುದನ್ನು ಕುರಿತು ಅಧ್ವರ್ಯುವಿಗೂ, ಯತಿಗೂ ನಡೆದ ಸಂವಾದವು.

ಬ್ರಾಹ್ಮಣನು ಪತ್ನಿಯನ್ನು ಕುರಿತು, “ಕಾಂತೆ! ನಾನು ಗಂಧಗಳನ್ನು ಆಘ್ರಾಣಿಸುವುದಿಲ್ಲ! ರಸವನ್ನು ಸವಿಯುವುದಿಲ್ಲ! ರೂಪವನ್ನು

ನೋಡುವುದಿಲ್ಲ! ಸ್ಪರ್ಶವನ್ನು ತಿಳಿಯುವುದಿಲ್ಲ! ಶಬ್ದಗಳನ್ನು ಕೇಳುವುದಿಲ್ಲ! ಮನಸ್ಸಿನಲ್ಲಿ ಯಾವ ಸಂಕಲ್ಪವನ್ನೂ ಇಡುವುದಿಲ್ಲ. ಸ್ವಭಾವವೆಂಬುದು ತನಗೆ ಇಷ್ಟವಾದ ಕೋರಿಕೆಗಳನ್ನು ಆಶಿಸುವುದು! ತನಗೆ ಆಗದಿದ್ದವರನ್ನೂ ದ್ವೇಷಿಸತಕ್ಕುದೂ ಸ್ವಭಾವವೇ! ಕಾಮದ್ವೇಷಗಳು ಉಂಟಾಗುವುದೂ ಸ್ವಭಾವದಿಂದಲೇ! ಪ್ರಾಣಾಪಾನಗಳೆರಡೂ ಪ್ರಾಣಿದೇಹದಲ್ಲಿ ಇದ್ದುಕೊಂಡು, ಮನುಷ್ಯನ ಸುಷುಪ್ತಿದಶೆಯಲ್ಲಿಯೂ, ಆಹಾರಗಳನ್ನು ಪಕ್ವಮಾಡುವುದು ಮುಂತಾದ ಸಹಜಕಾರ್ಯಗಳನ್ನು ನಡೆಸುತ್ತಿರುವಂತೆಯೇ, ಮನುಷ್ಯನು ಇಷ್ಟಾನಿಷ್ಟಗಳನ್ನು ಕುರಿತು ಚಿಂತಿಸದಿದ್ದರೂ ಸ್ವಭಾವವು ಅದರಲ್ಲಿ ಪ್ರವರ್ತಿಸುವುದು. ಜಾಗರಾವಸ್ಥೆಯಲ್ಲಿ ತೋರುವ ಇವೆಲ್ಲಕ್ಕೂ ಬೇರೆಯಾದ ವಸ್ತುಗಳನ್ನೂ, ಅವುಗಳ ನಿಯತ ಸ್ವಭಾವಗಳನ್ನೂ, ಮತ್ತು ಪರಮಾತ್ಮನನ್ನೂ ನಾನು ನನ್ನ ಶರೀರದೊಳಗೇ ಸಾಕ್ಷಾತ್ಕರಿಸುತ್ತಿರುವೆನು! ಆ ಪರಮಾತ್ಮನಲ್ಲಿಯೇ ನೆಲೆಗೊಂಡಿರತಕ್ಕ ನನ್ನ ಮನಸ್ಸು ಬೇರೊಂದನ್ನೂ ಯಾವ ವಿಧದಿಂದಲೂ ಗಮನಿಸುವುದಿಲ್ಲ. ಹೀಗಿರುವುದರಿಂದ, ಕಾಮ ಕ್ರೋಧ, ಜರಾಮರಣಗಳೊಂದೂ ನನ್ನನ್ನು ಮುಟ್ಟಲಾರವು. ಯಾವ ಕೋರಿಕೆಗಳನ್ನೂ ಬಯಸದೆ, ಯಾವ ದೋಷಗಳನ್ನೂ ದ್ವೇಷಿಸದಿರುವ ನನಗೆ, ತಾವರೆಯೆಲೆಯಲ್ಲಿ ಬಿದ್ದನೀರು ಅದಕ್ಕೆ ಹೇಗೆ ಅಂಟುವುದಿಲ್ಲವೋ ಹಾಗೆ ಸ್ವಭಾವಜನ್ಯವಾದ ಯಾವ ವಿಕಾರಗಳೂ ಅಂಟುವುದಿಲ್ಲ. ಅನೇಕ ಸ್ವಭಾವಗಳನ್ನು ನೋಡುತ್ತ ನಿತ್ಯವಾಗಿರತಕ್ಕ ಈ ಜೀವನಿಗೆ ಅವನ ಕರ್ಮಗಳೂ ನಿತ್ಯವೇ ಆಗುವುವು. ಆದರೆ ಆ ಕರ್ಮಗಳನ್ನು ಮಾಡಿದರೂ, ಸೂರ್ಯಕಿರಣಗಳು ಆಕಾಶಕ್ಕೆ ಅಂಟದಂತೆ ಅದರಿಂದುಂಟಾದ ಭೋಗಗಳಲ್ಲಿ ಇವನಿಗೆ ಸಂಬಂಧವುಂಟಾಗದು. ಎಲೆ ಕೀರ್ತಿಮತಿ! ಇದೇ ವಿಷಯವಾಗಿ ಒಬ್ಬ ಯತಿಗೂ, ಯಾಗಶೀಲನಾದ ಒಬ್ಬ ಅಧ್ವರ್ಯುವಿಗೂ ನಡೆದ ಸಂವಾದರೂಪವಾದ ಇತಿಹಾಸವೊಂದನ್ನು ಉದಾಹರಿಸುವರು. ಅದನ್ನು ತಿಳಿಸುವೆನು ಕೇಳು. ಒಮ್ಮೆ ಒಂದು ಅಜಮೇಧಯಾಗದಲ್ಲಿ ಕೊಲೆಗಾಗಿ ನಿಲ್ಲಿಸಿದ್ದ ಒಂದು ಪಶುವನ್ನು ಕಂಡು ಒಬ್ಬ ಸನ್ಯಾಸಿಯು, ಅದರಲ್ಲಿ ಕನಿಕರಗೊಂಡು, ಆ ಯಾಗಕಾರ್ಯದಲ್ಲಿದ್ದ

ಅಧ್ವರ್ಯವನ್ನು ನೋಡಿ "ಅಯ್ಯೋ! ಇದು ಹಿಂಸೆಯಲ್ಲವೆ!" ಎಂದು ನಿಂದಿಸಿದನು. ಆಗ ಅಧ್ವರ್ಯುವು "ಓ ಮುನೀಂದ್ರಾ? ನೀನು ತಿಳಿದಿರುವುದು ತಪ್ಪು! ಈ ಪಶುವು ಇದರಿಂದ ಕೆಟ್ಟುಹೋಗುವುದೆಂದು ತಿಳಿಯಬಾರದು. ಇದರಿಂದ ಇದಕ್ಕೆ ಒಳ್ಳೆಯ ಶ್ರೇಯಸ್ಸೇ ಉಂಟಾಗುವುದು. ಈ ಯಾಗವು ಇದಕ್ಕೆ ಶ್ರೇಯಸ್ಕರವೇ ಹೊರತು ಹಾನಿಕರವಲ್ಲ. ವೇದವೇ ಹೀಗೆಂದು ಹೇಳುವುದು. ಈ ಜಂತುವಿನ ಪಂಚಭೂತಾತ್ಮಕವಾದ ದೇಹದಲ್ಲಿ. ಪಾರ್ಥಿವಭಾಗವು ಪೃಥ್ವಿಯನ್ನೂ, ಜಲಭಾಗವು ಜಲವನ್ನೂ, ನೇತ್ರವು ಸೂರ್ಯನನ್ನೂ, ಕಿವಿಗಳು ದಿಕ್ಕುಗಳನ್ನೂ, ಪ್ರಾಣವು ಆಕಾಶವನ್ನೂ ಸೇರುವುವು. ವೇದವಿಧಿಯನ್ನನುಸರಿಸಿ ಈ ಕಾರ್ಯವನ್ನು ಮಾಡುವ ನನಗೂ ಇದರಿಂದ ಯಾವ ದೋಷವೂ ಇಲ್ಲ" ಎಂದನು.

ಅದಕ್ಕಾ ಸನ್ಯಾಸಿಯು "ಅಯ್ಯಾ! ಈ ಯಾಗದಿಂದ ಇದರಲ್ಲಿ ಸಾಯತಕ್ಕ ಈ ಜಂತುವಿಗೆ ಶ್ರೇಯಸ್ಸಾಗುವುದಾದರೆ, ನಿನ್ನ ಯಾಗವು ಈ ಪಶುವಿಗೇ ಆದಂತಾಯಿತು. ಈ ಕೊಲೆಗೆಲಸದಿಂದ ನಿನಗೆ ಬಂದ ಲಾಭವೇನು? ಅಲ್ಲದೆ ನೀನು ವಧಕಾಲದಲ್ಲಿ ಮಂತ್ರವನ್ನು ಹೇಳುವಾಗಲೂ "ಇದಕ್ಕೆ ನಿನ್ನ ತಾಯಿಯು ಅನುಮತಿಸಲಿ! ನಿನ್ನ ತಂದೆಯು ಅನುಮತಿಸಲಿ! ನಿನ್ನ ಒಡಹುಟ್ಟಿದವರೂ, ನಿನ್ನ ಸ್ನೇಹಿತರೂ ಅನುಮತಿಸಲಿ!" ಎಂದು ಮಂತ್ರವನ್ನು ಹೇಳುವೆ! ಆಗ ಅವರೆಲ್ಲರೂ ನಿನಗೆ ಈ ಅನುಮತಿಯನ್ನು ಕೊಡಬೇಕಲ್ಲವೆ! ನೀನು ಅವರನ್ನೆಲ್ಲ ಕಂಡು ಅವರ ಅನುಮತಿಯನ್ನು ಕೇಳಿ, ಆಮೇಲೆ ಈ ಕಾರ್ಯಕ್ಕೆ ಆಲೋಚನೆಮಾಡಬೇಕಲ್ಲವೆ? ಇದಲ್ಲದೆ ಈಗಾಗಲೇ ನಿನ್ನ ಮಂತ್ರದಿಂದ ಈ ಆಡಿನ ಪ್ರಾಣಗಳು ತಮ್ಮ ಉತ್ಪತ್ತಿಸ್ಥಾನವಾದ ಆಕಾಶವನ್ನು ಸೇರಿಬಿಟ್ಟುವು; ಈಗ ನಿಶ್ಚೇಷ್ಟವಾದ ಶರೀರವೊಂದೇ ಇಲ್ಲಿ ಉಳಿದಿರುವುದೆಂದೂ ನನಗೆ ತೋರುವುದು. ಚೈತನ್ಯವಿಲ್ಲದೆ ಕೇವಲ ಕಟ್ಟಿಗೆಯಂತಿರುವ ಈ ಜಂತು ಶರೀರದಿಂದ ಯಾಗಮಾಡಲು ಯತ್ನಿಸುವ ನಿಮಗೆ, ಬರೀ ಕಟ್ಟಿಗೆಯೇ ಪಶುವಿನ ಸ್ಥಾನದಲ್ಲಿದ್ದಂತಾಯಿತು! ಈ ಕಾರ್ಯವೇನೋ ಹಿಂಸೆಯೊಂದೇ

ನನಗೆ ತೋರುವುದು. ಎಲ್ಲಾ ಧರ್ಮಗಳಿಗಿಂತಲೂ, ಅಹಿಂಸೆಯೇ ಉತ್ತಮ ಧರ್ಮವೆಂದು ಹಿರಿಯರು ಹೇಳುವರು. ಆದುದರಿಂದ ಅಹಿಂಸೆಯಿಲ್ಲದ ಕಾರ್ಯವೇ ಪ್ರಶಸ್ತವಾದುದು. ಇದೂ ಅಹಿಂಸೆಯೆಂದೇ ನೀನು ಹೇಳಬಹುದು. ಅಲ್ಲದೆ ಬೇರೆ ಯಾವ ಕಾರ್ಯವನ್ನಾದರೂ ಯಾವುದಾದರೂ ನೆವದಿಂದ ದೂಷಿಸಲೂ ಅವಕಾಶವುಂಟಾದರೂ, ಯಾವಾಗಲೂ ಯಾವ ಪ್ರಾಣಿಗೂ ಹಿಂಸೆ ಮಾಡುವುದೇನೋ ಪಾಪವೆಂದೇ ನಮ್ಮ ಅಭಿಪ್ರಾಯವು. ನಮಗೆ ನೀನು ಮಾಡತಕ್ಕ ಈ ಹಿಂಸೆಯು ಪ್ರತ್ಯಕ್ಷವಾದುದರಿಂದ, ಇದು ಹಿಂಸೆಯೇ! ಕಣ್ಣಿಗೆ ಕಾಣದಂತೆ ನಡೆದುಹೋಗತಕ್ಕುದನ್ನು ಹಿಂಸೆಯೆಂದು ಎಣಿಸಲು ಅವಕಾಶವಿಲ್ಲ" ಎಂದನು.

ಆಗ ಅಧ್ವರ್ಯುವು "ಓ ಬ್ರಾಹ್ಮಣೋತ್ತಮಾ! ನಿನಗೆ ಇದಕ್ಕಾಗಿ ಒಂದು ನಿದರ್ಶನವನ್ನು ತೋರಿಸುವೆನು! ನೀನು ಭೂಮಿಯಲ್ಲಿರುವ ಗಂಧವೆಂಬ ಗುಣವನ್ನು ಭುಜಿಸುತ್ತಿರುವೆ. ಜಲದಲ್ಲಿರುವ ರಸವನ್ನು ಅನುಭವಿಸುವೆ. ತೇಜೋಗುಣವಾದ ರೂಪವನ್ನು ಗ್ರಹಿಸುವೆ! ಗಾಳಿಯ ಗುಣವನ್ನೂ ಸ್ಪರ್ಶಿಸುವೆ. ಆಕಾಶ ಜನ್ಯವಾದ ಶಬ್ದವನ್ನೂ ಕೇಳುವೆ. ಮನಸ್ಸಿನಿಂದ ಸಂಕಲ್ಪವನ್ನು ಮಾಡುವೆ. ಈ ಭೂತಗಳೆಲ್ಲವೂ ಪ್ರಾಣವುಳ್ಳವುಗಳೆಂದೇ ನನ್ನ ಭಾವನೆ. ಆಗ ಈ ಪ್ರಾಣಿಗಳನ್ನೆಲ್ಲಾ ನೀನು ಹಿಂಸಿಸಿದಂತಾಗುವುದಿಲ್ಲ! ಇದೂ ಹಿಂಸೆಯೇ ಆಯಿತಲ್ಲವೇ? ಆದುದರಿಂದ ನೀನಾದರೂ ಹಿಂಸಾಕಾರ್ಯವನ್ನು ಬಿಟ್ಟವನೆಂದು ಹೇಗೆ ಹೇಳುವುದು? ಲೋಕದಲ್ಲಿ ಹಿಂಸೆಯಿಲ್ಲದ ಯಾವ ಕಾರ್ಯವೂ ಇಲ್ಲ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು" ಎಂದನು.

ಆದಕ್ಕಾ ಸನ್ಯಾಸಿಯು, "ಅಯ್ಯಾ! ಆತ್ಮವು ಅಕ್ಷರವೆಂದೂ, ಕ್ಷರವೆಂದೂ ಎರಡು ಬಗೆಯಾಗಿ ಎಣಿಸಲ್ಪಡುವುದು. ಅವುಗಳಲ್ಲಿ ತ್ರಿಕಾಲಗಳಲ್ಲಿಯೂ ಇರುವುದು ಅಕ್ಷರವೆಂದೂ, ಆ ಮೂರುಕಾಲಗಳಲ್ಲಿಯೂ ಇಲ್ಲದುದು ಕ್ಷರವೆಂದೂ ಹೇಳಲ್ಪಡುವುದು. ಪ್ರಾಣ, ನಾಲಗೆ, ಮನಸ್ಸು, ಬುದ್ಧಿ, ಇವೆಲ್ಲ ಮಾಯೆಯಿಂದ ಉಂಟಾಗತಕ್ಕುದು. ಇವುಗಳಿಂದ ಬಿಡಲ್ಪಟ್ಟು, ದ್ವಂದ್ವರಹಿತನಾಗಿ, ಆಶಾರಹಿತನಾಗಿ, ಸಮಸ್ತ

ಭೂತಗಳಲ್ಲಿಯೂ ಸಮಾನಬುದ್ಧಿಯುಳ್ಳವನಾಗಿ, ಮಮತೆಯನ್ನು ಬಿಟ್ಟು ಮನಸ್ಸನ್ನು ಜಯಿಸಿ, ಎಲ್ಲಾ ವಿಷಯಗಳನ್ನೂ ತೊರೆದವನಿಗೆ ಎಲ್ಲಿಯೂ ಭಯವಿರುವುದಿಲ್ಲ" ಎಂದನು. ಆಗ ಅಧ್ವರ್ಯುವು "ಓ ಯತಿವರ್ಯ! ಇಂತಹ ವಿಷಯದಲ್ಲಿ ವಿದ್ವಾಂಸರೊಡನೆಯೇ ವಿವಾದಗಳನ್ನು ನಡೆಸಬೇಕು. ನಿನ್ನ ಅಭಿಪ್ರಾಯವನ್ನು ಕೇಳಿ ನನಗೆ ಎಷ್ಟೋ ಬುದ್ಧಿವಿಕಾಸವುಂಟಾಯಿತು! ಓ ಪೂಜ್ಯಾ! ಈಗ ನಿನ್ನ ಉಪದೇಶದಿಂದ ಜ್ಞಾನವನ್ನು ಪಡೆದ ನಾನು ಒಂದು ಮಾತನ್ನು ಹೇಳುವೆನು. ಮಂತ್ರಗಳಿಂದ ಏರ್ಪಟ್ಟ ವ್ರತವನ್ನನುಷ್ಠಿಸತಕ್ಕ ನನಗೆ ಇದರಿಂದ ದೋಷವೇನೂ ಇಲ್ಲವೆಂದು ಭಾವಿಸುವೆನು" ಎಂದನು.

ಅದಕ್ಕೆಮೇಲೆ ಸನ್ಯಾಸಿಯು ಅವನು ಹೇಳಿದುದು ಯುಕ್ತವೆಂದೇ ತಿಳಿದು, ಮುಂದೆ ಬಾಯೆತ್ತದೆ ಸುಮ್ಮನಾದನು! ಅಧ್ವರ್ಯುವು ಮೋಹವನ್ನು ಬಿಟ್ಟು ಆ ಯಾಗವನ್ನು ಮುಗಿಸಿದನು. ಬ್ರಹ್ಮಜ್ಞಾನಿಗಳು ಇದೇ ರೀತಿಯಾಗಿ ಮೋಕ್ಷಮಾರ್ಗವು ಅತಿ ಸೂಕ್ಷ್ಮವಾದುದೆಂಬುದನ್ನು ತಿಳಿದಿರುವರು. ಕಾರ್ಯಜ್ಞನಾದ ಉಪದೇಶಕನಿಂದಲೂ ತಿಳಿದು ಅದರಂತೆ ಅನುಷ್ಠಿಸುವರು.

ಇದು ಇಪ್ಪತ್ತೊಂಭತ್ತನೆಯ ಅಧ್ಯಾಯವು.



ಪತ್ನಿಯರನ್ನು ಪತಿಯು ಹಿಂಸಿಸಕೂಡದೆಂಬ ನೀತಿಗೆ ನಿದರ್ಶನವಾಗಿ ಪರಶುರಾಮನ ಚರಿತ್ರವು. ಪರಶುರಾಮನು ಕಾರ್ತವೀರ್ಯನನ್ನು ಕೊಂದಮೇಲೆ ಅವನ ಕಡೆಯವರು ಜಮದಗ್ನಿಯನ್ನು ಕೊಂದುದು. ಇದರಿಂದ ಕೋಪಗೊಂಡ ಪರಶುರಾಮನು, ಎಲ್ಲಾ ಕ್ಷತ್ರಿಯರನ್ನೂ ಇಪ್ಪತ್ತೊಂದಾವರ್ತಿ ಕೊಂದುದು.

ಆಗ ಬ್ರಾಹ್ಮಣನು "ಎಲೆ ಭಾಮಿನಿ! ಇದೇ ವಿಷಯಕ್ಕೆ ಉದಾಹರಣೆಯಾಗಿ ಹಿಂದೆ ಕಾರ್ತವೀರ್ಯನಿಗೂ, ಸಮುದ್ರನಿಗೂ ನಡೆದ ಸಂವಾದರೂಪವಾದ ಇತಿಹಾಸವೊಂದನ್ನು ಹೇಳುವರು. ಅದನ್ನು ತಿಳಿಸುವೆನು.

ಕೇಳು. ಪೂರ್ವದಲ್ಲಿ ಸಾವಿರತೋಳುಗಳುಳ್ಳ ಕಾರ್ತವೀರ್ಯಾರ್ಜುನನೆಂಬ ರಾಜನೊಬ್ಬನಿದ್ದನು. ಅವನು ತನ್ನ ಧನುರ್ಬಲದಿಂದ ಸಮುದ್ರಾಂತವಾದ ಸಮಸ್ತಭೂಮಿಯನ್ನೂ ಜಯಿಸಿ ವಶಪಡಿಸಿಕೊಂಡಿದ್ದನು. ಅವನು ಒಮ್ಮೆ ತನಗಿರುವ ಬಲದ ಹೆಮ್ಮೆಯಿಂದ ಸಮುದ್ರತೀರದಲ್ಲಿ ಸಂಚರಿಸುತ್ತಿರುವಾಗ, ಆ ಸಮುದ್ರದ ಆರ್ಭಟವನ್ನು ನೋಡಿ, ಸಮುದ್ರದ ಮೇಲೆ ನೂರಾರು ಬಾಣಗಳನ್ನು ಪ್ರಯೋಗಿಸಿದನಂತೆ! ಆಗ ಸಮುದ್ರನು ಭಯದಿಂದ ಬಂದು ಕಾರ್ತವೀರ್ಯನಿಗೆ ನಮಸ್ಕರಿಸಿ, ಕೈಮುಗಿಯುತ್ತ 'ಓ ವೀರಾಗ್ರಣೀ! ಏಕೆ ನನ್ನಮೇಲೆ ಬಾಣಗಳನ್ನು ಬಿಡುವೆ? ನನ್ನನ್ನು ಹೊಡೆಯಬೇಡ! ನನ್ನಿಂದ ನಿನಗೆ ಆಗಬೇಕಾದ ಕಾರ್ಯವೇನೋ ಅದನ್ನು ಹೇಳು. ಓ ರಾಜೋತ್ತಮಾ! ನನ್ನಲ್ಲಿ ಎಷ್ಟೋ ಪ್ರಾಣಿಗಳು ಸೇರಿಕೊಂಡು ಜೀವಿಸುತ್ತಿರುವುವು. ಅವೆಲ್ಲವೂ ನಿನ್ನ ಬಾಣಗಳಿಂದ ಸಾಯುವುವು. ಅವುಗಳಿಗೆ ಅಭಯವನ್ನು ಕೊಟ್ಟು ಕಾಪಾಡು'' ಎಂದನು. ಆಗ ಕಾರ್ತವೀರ್ಯನು 'ಓ ಸಮುದ್ರಾ! ಯುದ್ಧದಲ್ಲಿ ನನಗೆ ಸಮಾನನಾದ ಧನುರ್ಧಾರಿಯು ಬೇರೆ ಯಾವನಾದರೂ, ಎಲ್ಲಿಯಾದರೂ ಇದ್ದರೆ ತಿಳಿಸು. ಅವನೊಡನೆ ನಾನು ಯುದ್ಧಮಾಡಬೇಕು' ಎಂದನು. ಅದಕ್ಕಾ ಸಮುದ್ರನು 'ಓ ರಾಜೇಂದ್ರ! ಜಮದಗ್ನಿಯೆಂಬ ಮಹರ್ಷಿಯ ಹೆಸರನ್ನು ನೀನು ಹಿಂದೆ ಯಾವಾಗಲಾದರೂ ಕೇಳಿಬಲ್ಲೆಯಾ? ಅವನಿಗೆ ಮಹಾಪರಾಕ್ರಮಿಯಾದ ಮಗನೊಬ್ಬನಿರುವನು. ಅವನು ಯುದ್ಧದಲ್ಲಿ ನಿನಗೆ ತೃಪ್ತಿಯನ್ನುಂಟುಮಾಡಬಲ್ಲನು' ಎಂದನು. ಈ ಮಾತನ್ನು ಕೇಳಿದೊಡನೆ ಕಾರ್ತವೀರ್ಯನು ಮಹತ್ತಾದ ಕೋಪದಿಂದ ಜಮದಗ್ನಿಯ ಆಶ್ರಮಕ್ಕೆ ಬಂದು, ಜಮದಗ್ನಿಪುತ್ರನಾದ ರಾಮನನ್ನು ಇದಿರಿಸುವುದಕ್ಕಾಗಿ ಮುಂದುವರಿದನು. ರಾಮನನ್ನು ರೇಗಿಸುವುದಕ್ಕಾಗಿ ತನ್ನ ಬಂಧುಗಳೊಡನೆ ಸೇರಿ ಅವನಿಗೆ ಪ್ರತಿಕೂಲವಾದ ಕಾರ್ಯಗಳನ್ನೇ ಮಾಡುತ್ತ, ಮಹಾತ್ಮನಾದ ರಾಮನ ಮನಸ್ಸಿಗೆ ಬಹಳ ಬೇಸರವನ್ನು ಹುಟ್ಟಿಸಿದನು. ಎಣೆಯಿಲ್ಲದ ತೇಜಸ್ಸುಳ್ಳ ರಾಮನಿಗೆ ಇದರಿಂದ ಮಹತ್ತಾದ ಕೋಪವುಂಟಾಯಿತು. ಅವನು ತೇಜಸ್ಸಿನಿಂದ ಉರಿಯುವಂತೆ ಕಾಣುತ್ತ, ತನ್ನ ಪ್ರತಾಪಾಗ್ನಿಯಿಂದ ಶತ್ರುಸೈನ್ಯಗಳನ್ನೆಲ್ಲ ದಹಿಸಿಬಿಟ್ಟನು. ಆಮೇಲೆ

ತನ್ನ ಆಯುಧವಾದ ಕೊಡಲಿಯನ್ನು ತೆಗೆದುಕೊಂಡು, ಮರದ ಕೊಂಬೆಗಳನ್ನು ಕಡಿಯುವಂತೆ, ಕಾರ್ತವೀರ್ಯನ ಸಾವಿರತೋಳುಗಳನ್ನೂ ಕಡಿದುಬಿಟ್ಟನು. ಕಾರ್ತವೀರ್ಯನು ಸತ್ತುಬಿದ್ದುದನ್ನು ಕಂಡು, ಅವನ ಕಡೆಯ ಬಂಧುಮಿತ್ರಪರಿವಾರದವರೆಲ್ಲರೂ ಕತ್ತಿಗಳನ್ನೂ, ಶಕ್ತ್ಯಾಯುಧಗಳನ್ನೂ ಹಿಡಿದು ಪರಶುರಾಮನನ್ನು ಇದಿರಿಸಿದರು. ರಾಮನೂಕೂಡ ರಥವನ್ನೇರಿ ಧನುರ್ಬಾಣಗಳನ್ನು ಹಿಡಿದು, ಆ ರಾಜಸಮೂಹವನ್ನೆಲ್ಲಾ ಕೊಲ್ಲುತ್ತ ಬಂದನು. ಇಷ್ಟರಲ್ಲಿ ಕೆಲವು ಕ್ಷತ್ರಿಯರು ರಾಮನ ತಂದೆಯಾದ ಜಮದಗ್ನಿಯನ್ನು ಹಿಡಿದು, ಅವನನ್ನು ಕೊಂದುಬಿಟ್ಟು, ಸಿಂಹಕ್ಕೆ ಹೆದರಿದ ಜಿಂಕೆಗಳಂತೆ ರಾಮನ ಭಯಕ್ಕಾಗಿ, ಎಲ್ಲಿಯೋ ಬೆಟ್ಟಗಳಲ್ಲಿ ಅಡಗಿಕೊಂಡಿದ್ದಾಗ, ವಿಧ್ಯುಕ್ತವಾದ ಕರ್ಮಗಳನ್ನೆಲ್ಲ ಬಿಟ್ಟುಬಿಟ್ಟುದರಿಂದ, ಆಯಾ ರಾಜರ ಪ್ರಜೆಗಳೂ ತಮ್ಮ ಆಶ್ರಮಧರ್ಮಗಳನ್ನು ಬಿಟ್ಟು, ತಮಗೆ ಉಪದೇಶಿಸತಕ್ಕ ಬ್ರಾಹ್ಮಣರನ್ನೂ ಕಾಣದೆ, ಶೂದ್ರತ್ವವನ್ನು ಹೊಂದಿದರು. ಹೀಗೆ ಆ ರಾಜಸಂತತಿಯವರೂ, ಅವರ ಪ್ರಜೆಗಳೂ ಸ್ವಧರ್ಮಗಳನ್ನು ಬಿಟ್ಟು ಶೂದ್ರತ್ವವನ್ನು ಹೊಂದಿದುದರಿಂದ ದ್ರವಿಡರೆಂದೂ, ಭೀರರೆಂದೂ, ಪುಂಡ್ರರೆಂದೂ, ಶಬರರೆಂದೂ ಬೇರೆಬೇರೆ ಜಾತಿಯವರಾದರು. ಆಮೇಲೆ ಇತ್ತಲಾಗಿ ಪರಶುರಾಮನು ಕ್ಷತ್ರಿಯಜಾತಿಯಲ್ಲಿರುವ ವೀರರನ್ನೆಲ್ಲ ಮೇಲೆಮೇಲೆ ಕೊಲ್ಲುತ್ತ ಬರಲು, ಕ್ಷತ್ರಿಯಸಂತತಿಯೇ ಇಲ್ಲದಂತಾಗುವುದನ್ನು ನೋಡಿ, ಪತಿಗಳನ್ನು ಕಳೆದುಕೊಂಡ ಕ್ಷತ್ರಿಯಸ್ತ್ರೀಯರುಗಳಲ್ಲಿ ಬ್ರಾಹ್ಮಣರಿಂದ ಕೆಲವು ಸಂತಾನಗಳುಂಟಾದುವು. ಪರಶುರಾಮನು ಆ ಕ್ಷತ್ರಿಯರನ್ನೂ ಕಡಿದುಹಾಕುತ್ತ ಬಂದನು. ಹೀಗೆ ಇಪ್ಪತ್ತುಸಾರಿ ಪರಶುರಾಮನು ಕ್ಷತ್ರಿಯಸಂತತಿಯನ್ನು ನಾಶಮಾಡಿದಮೇಲೆ, ಇಪ್ಪತ್ತೊಂದನೆಯ ಸಾರಿ, ಅವನು ಇದೇ ಕೊಲೆಗೆಲಸಕ್ಕಾಗಿ ಹೊರಟಾಗ, ಅಶರೀರವಾಣಿಯೊಂದು ಕಿವಿಗೆ ಬಿದ್ದಿತು. ಆ ಅಶರೀರವಾಣಿಯು ಎಲ್ಲರ ಕಿವಿಗೂ ಬೀಳುವಂತೆ 'ಓ ರಾಮಾ! ಈ ಕ್ರೂರಕಾರ್ಯವನ್ನು ನಿಲ್ಲಿಸು. ಹೀಗೆ ಬಾರಿಬಾರಿಗೂ ಕ್ಷತ್ರಿಯರನ್ನು ಕೊಲ್ಲುವುದರಿಂದ ನಿನಗಾಗುವುದೇನು?' ಎಂದು ನುಡಿಯಿತು. ಈ ಸಮಯಕ್ಕೆ ಸರಿಯಾಗಿ, ಈ ಪರಶುರಾಮನ ಪಿತಾಮಹನಾದ ಋಚೀಕನೂ, ಇತರ ಮಹರ್ಷಿಗಳೂ

ಬಂದು, 'ರಾಮಾ! ಓ ಮಹಾತ್ಮಾ! ಬೇಡ! ಈ ಕೊಲೆಗೆಲಸವನ್ನು ನಿಲ್ಲಿಸು' ಎಂದರು. ಹಾಗಿದ್ದರೂ ಪರಶುರಾಮನು ತಂದೆಯ ಮರಣ ದಿಂದುಂಟಾದ ಕೋಪವನ್ನು ಸಹಿಸಲಾರದೆ 'ಈ ವಿಷಯದಲ್ಲಿ ನೀವು ನನ್ನನ್ನು ತಡೆಯಬಾರದು' ಎಂದು ಹೇಳಿದನು. ಆಗ ಪಿತೃಗಳು 'ಎಲೈ ಜಯಶೀಲನೆ! ಕ್ಷತ್ರಿಯರನ್ನು ನೀನು ಕೊಲ್ಲಬಾರದು. ಅದರಲ್ಲಿಯೂ ಬ್ರಾಹ್ಮಣನೆನಿಸಿಕೊಂಡ ನಿನಗೆ ರಾಜರನ್ನು ಕೊಲ್ಲುವ ಈ ಹಿಂಸಾಕಾರ್ಯವು ಧರ್ಮವಲ್ಲ' ಎಂದನು.

ಇದು ಮೂವತ್ತನೆಯ ಅಧ್ಯಾಯವು.

---

{ ಪರಶುರಾಮನ ಪಿತೃಗಳು ಅವನಿಗೆ ಅಲರ್ಕೋಪಾಖ್ಯಾನ ವನ್ನು ಹೇಳಿದುದು. ಅದನ್ನು ಕೇಳಿದಮೇಲೆ ರಾಮನು ತನ್ನ ಕೊಲೆಗೆಲಸವನ್ನು ನಿಲ್ಲಿಸಿ ತಪಸ್ಸಿಗಾಗಿ ಹೊರಟುದು. }

ಆಗ ಪಿತೃಗಳು ಪರಶುರಾಮನನ್ನು ಕುರಿತು 'ರಾಮಾ! ಈ ವಿಷ ಯದಲ್ಲಿ ಪುರಾತನವಾದ ಇತಿಹಾಸವೊಂದುಂಟು. ಅದನ್ನು ಕೇಳಿಯಾ ದರೂ ನೀನು ಅದರಂತೆ ನಡೆಸು. ಪೂರ್ವದಲ್ಲಿ ಅಲರ್ಕನೆಂಬ ರಾಜರ್ಷಿ ಯೊಬ್ಬನಿದ್ದನು. ಅವನು ಮಹಾ ತಪಸ್ವಿಯೂ, ಧರ್ಮಜ್ಞನೂ, ಸತ್ಯ ವಾದಿಯೂ, ದೃಢವ್ರತನೂ ಆಗಿ ಮಹಾತ್ಮನೆನಿಸಿದ್ದನು. ಅವನು ಸಮು ದ್ರಾಂತವಾದ ಸಮಸ್ತಭೂಮಿಯನ್ನೂ ತನ್ನ ಧನುಸ್ಸಿನಿಂದ ಜಯಿಸಿ, ಎಷ್ಟೋ ಅಸಾಧ್ಯಕಾರ್ಯಗಳನ್ನೆಲ್ಲ ಮಾಡಿದಮೇಲೆ, ಕೊನೆಗೆ ಅವನಿಗೆ ಮೋಕ್ಷಮಾರ್ಗದಲ್ಲಿ ಮನಸ್ಸು ಹುಟ್ಟಿತು. ಒಡನೆಯೇ ಅವನು ತನ್ನ ದೊಡ್ಡ ರಾಜ್ಯವನ್ನೆಲ್ಲ ಬಿಟ್ಟು, ಒಂದು ಮರದಡಿಯಲ್ಲಿ ಕುಳಿತನು. ಅವನ ಮನಸ್ಸಿನಲ್ಲಿ ಮೋಕ್ಷವಿಷಯವಾದ ಚಿಂತೆಯು ಪ್ರಬಲವಾಗಿ ನೆಲೆಗೊಂ ಡಿತು. ಆಗ ಅಲರ್ಕನು ತನ್ನಲ್ಲಿತಾನು 'ಈಗ ನನ್ನ ಮನಸ್ಸು ಬಲಿತು ಹೋಗಿದೆ. ಈ ಮನಸ್ಸನ್ನು ಜಯಿಸಿದಮೇಲೆಯೇ ಮನುಷ್ಯನಿಗೆ ನಿಜವಾದ ಜಯವು. ಈಗ ನನ್ನನ್ನು ಮುತ್ತುತ್ತಿರುವ ಬೇರೆ ಶತ್ರು

ಗಳಮೇಲೆ (ಇಂದ್ರಿಯಗಳಮೇಲೆ) ಮೊದಲು ಬಾಣಗಳನ್ನು ಪ್ರಯೋಗಿಸಿ ಅವುಗಳನ್ನು ಜಯಿಸುವೆನು. ಎಲ್ಲಾ ಮನುಷ್ಯರನ್ನೂ ಆಶಾಪಾಶದಿಂದ ಬಿಗಿದು, ಕರ್ಮವನ್ನು ಮಾಡುವಹಾಗೆ ಪ್ರೇರಿಸುವ ಈ ಮನಸ್ಸನ್ನು ಕುರಿತು ನಾನು ಈಗಲೇ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿ ಅದನ್ನಡಗಿಸಬೇಕು' ಎಂದು ನಿರ್ಧರಿಸಿಕೊಂಡನು. ಆಗ ಅವನ ಮನಸ್ಸು ಅವನನ್ನು ಕುರಿತು 'ಅಲರ್ಕಾ! ಈ ಬಾಣಗಳೆಲ್ಲ ನನ್ನನ್ನು ಹೇಗೂ ಅಡಗಿಸಲಾರವು. ಇದರಿಂದ ನಿನ್ನ ಮರ್ಮಸ್ಥಾನಗಳೇ ಭೇದಿಸಲ್ಪಡುವುವು. ಆ ಮರ್ಮಭೇದನದಿಂದ ನೀನೇ ಸಾಯುವೆ. ಆದುದರಿಂದ ನೀನು ನನ್ನನ್ನು ಕೊಲ್ಲಬಹುದಾದ ಬೇರೆ ಬಾಣಗಳೇನಾದರೂ ಇದ್ದರೆ ಹುಡುಕು' ಎಂದಿತು. ಈ ಮಾತನ್ನು ಕೇಳಿ ಅಲರ್ಕನು ತನ್ನಲ್ಲಿತಾನೇ ಆಲೋಚಿಸಿ, ಹಾಗಿದ್ದರೆ, ಈ ನನ್ನ ಘ್ರಾಣೇಂದ್ರಿಯವು ವಿಧವಿಧವಾದ ಗಂಧಗಳನ್ನು ಆಘ್ರಾಣಿಸಿದಷ್ಟೂ ತಿರುಗಿ ಅವುಗಳನ್ನೇ ಹೆಚ್ಚಾಗಿ ಆಶಿಸುವುದು. ಆದುದರಿಂದ ಈ ಘ್ರಾಣೇಂದ್ರಿಯದಮೇಲೆ ನಾನು ತೀಕ್ಷ್ಣಬಾಣಗಳನ್ನು ಪ್ರಯೋಗಿಸುವೆನು' ಎಂದನು. ಆಗ ಅವನ ಘ್ರಾಣೇಂದ್ರಿಯವು 'ಅಲರ್ಕಾ! ಈ ಬಾಣಗಳು ನನ್ನನ್ನೇನೂ ಮಾಡಲಾರವು. ಇವು ನಿನ್ನ ಮರ್ಮಗಳನ್ನೇ ಭೇದಿಸುವುದರಿಂದ, ನೀನೇ ಸಾಯುವೆ. ನನ್ನನ್ನು ಕೊಲ್ಲುವ ಬೇರೆ ಯಾವುದಾದರೂ ಬಾಣಗಳನ್ನು ನೋಡು' ಎಂದಿತು. ಅದನ್ನು ಕೇಳಿ ಅಲರ್ಕನು ಸ್ವಲ್ಪಹೊತ್ತು ಆಲೋಚಿಸಿ 'ಹಾಗಿದ್ದರೆ ರುಚಿರುಚಿಯಾದ ರಸಗಳನ್ನು ಸವಿದು, ಮೇಲೆಮೇಲೆ ಅವುಗಳಿಗಾಗಿಯೇ ಆತುರಪಡುತ್ತಿರುವ ಈ ಜಿಹ್ವೇಂದ್ರಿಯದಮೇಲೆ (ನಾಲಗೆಯ) ತೀಕ್ಷ್ಣಬಾಣಗಳನ್ನು ಬಿಡುವೆನು' ಎಂದನು. ಆಗ ಅವನ ಜಿಹ್ವೆಯು 'ಅಲರ್ಕಾ! ಈ ನಿನ್ನ ಬಾಣಗಳೆಲ್ಲಾ ನನ್ನನ್ನೇನೂ ಮಾಡಲಾರವು. ನೀನು ಬಿಟ್ಟ ಬಾಣಗಳು ನಿನ್ನ ಮರ್ಮಗಳನ್ನೇ ಭೇದಿಸುವುವು. ಅದರಿಂದ ನೀನೇ ಸಾಯುವೆ ನನ್ನನ್ನು ಕೊಲ್ಲಬೇಕಾದರೆ ಬೇರೆ ಬಾಣಗಳನ್ನು ನೋಡು' ಎಂದಿತು. ಆಗ ಅವನು ತನ್ನಲ್ಲಿ ಸ್ವಲ್ಪಹೊತ್ತು ಚಿಂತಿಸಿ, "ಹಾಗಿದ್ದರೆ ನನ್ನ ಚರ್ಮವು ಬೇರೆಬೇರೆ ಸ್ಪರ್ಶಸುಖಗಳನ್ನನುಭವಿಸಿಯೂ ತಿರುಗಿ ತಿರುಗಿ ಆ ಕಡೆಗೇ ಎಳೆಯುತ್ತಿರುವುದು. ಆದುದರಿಂದ ವಿವಿಧಬಾಣಗಳಿಂದ ನನ್ನ ಚರ್ಮ

ವನ್ನು ಹರಿದುಬಿಡುವೆನು' ಎಂದನು. ಆಗ ಅವನ ಚರ್ಮವು 'ಅಲರ್ಕಾ! ಈ ಬಾಣಗಳು ನನ್ನನ್ನೇನೂ ಮಾಡಲಾರವು. ಇವು ನಿನ್ನ ಮರ್ಮವನ್ನೇ ಹರಿದು, ನಿನ್ನನ್ನೇ ಕೊಲ್ಲುವುವು. ನನ್ನನ್ನು ಕೊಲ್ಲುವ ಬೇರೆ ಬಾಣಗಳನ್ನು ನೋಡು' ಎಂದಿತು.

ಆಮೇಲೆ ಅಲರ್ಕನು ಸ್ವಲ್ಪಹೊತ್ತು ಯೋಚಿಸಿ, 'ಈ ಕಿವಿಗಳು ಇಂಪಾದ ನಾನಾಬಗೆಯ ಶಬ್ದಗಳನ್ನು ಕೇಳುತ್ತ, ಮೇಲೆಮೇಲೆ ಅವುಗಳನ್ನೇ ಆಶಿಸುತ್ತಿರುವುವು. ಈ ತೀಕ್ಷ್ಣಬಾಣಗಳಿಂದ ಈ ಕಿವಿಗಳನ್ನು ಹರಿದುಬಿಡುವೆನು' ಎಂದನು. ಆಗ ಅವನ ಕಿವಿಯು, 'ಅಲರ್ಕಾ! ಈ ಬಾಣಗಳು ನನ್ನನ್ನೇನೂ ಮಾಡಲಾರವು. ಆದರಿಂದ ನೀನೇ ಸಾಯುವೆ. ನನ್ನನ್ನು ಕೊಲ್ಲತಕ್ಕ ಬೇರೆ ಬಾಣಗಳನ್ನು ನೋಡು' ಎಂದಿತು.

ಇದನ್ನು ಕೇಳಿ ಅಲರ್ಕನು ಸ್ವಲ್ಪಹೊತ್ತು ಚಿಂತಿಸಿ, 'ಈ ನನ್ನ ಕಣ್ಣುಗಳು ಅಂದವಾದ ರೂಪಗಳನ್ನು ನೋಡುತ್ತ ನೋಡುತ್ತ, ಮೇಲೆ ಮೇಲೆ ಅವುಗಳಕಡೆಗೇ ನನ್ನನ್ನು ಸೆಳೆಯುವುವು. ತೀಕ್ಷ್ಣಬಾಣಗಳಿಂದ ಈ ಕಣ್ಣುಗಳನ್ನು ಕೆಡಿಸಬೇಕು' ಎಂದನು. ಆಗ ಕಣ್ಣು ಅವನನ್ನು ನೋಡಿ 'ಅಕಲರ್ಕಾ! ಈ ನಿನ್ನ ಬಾಣಗಳು ನನ್ನನ್ನೇನೂ ಮಾಡಲಾರವು. ಈ ಬಾಣಗಳು ನಿನ್ನ ಮರ್ಮವನ್ನೇ ಭೇದಿಸಿ, ನಿನ್ನನ್ನೇ ಕೊಲ್ಲುವುವು. ಆದುದರಿಂದ ನನ್ನನ್ನು ಕೊಲ್ಲುವುದಕ್ಕೆ ಬೇರೆ ಬಾಣಗಳನ್ನು ನೋಡು' ಎಂದಿತು. ಇದನ್ನು ಕೇಳಿ ಅಲರ್ಕನು ಸ್ವಲ್ಪಹೊತ್ತು ಚಿಂತಿಸಿ, ತನ್ನಲ್ಲಿತಾನು 'ಹಾಗಿದ್ದರೆ ಅವೆಲ್ಲವನ್ನೂ ಬಿಟ್ಟು ಈ ನನ್ನ ಬುದ್ಧಿಯನ್ನು ಕೊಲ್ಲಬೇಕು. ಈ ಬುದ್ಧಿಯು ತನ್ನ ತಿಳಿವಳಿಕೆಯಿಂದ ಹಲವುಬಗೆಯ ಸಂಕಲ್ಪಗಳನ್ನುಂಟುಮಾಡಿ, ನನ್ನನ್ನು ನಾನಾಕಡೆಗೆ ಎಳೆಯುತ್ತಿರುವುದು. ಆದುದರಿಂದ ನನ್ನ ತೀಕ್ಷ್ಣಬಾಣಗಳನ್ನು ಬಿಟ್ಟು ಇದನ್ನು ಕೊಲ್ಲುವೆನು' ಎಂದನು. ಆಗ ಬುದ್ಧಿಯು 'ಅಲರ್ಕಾ! ಈ ಬಾಣಗಳಾವುವೂ ನನ್ನನ್ನು ಕೊಲ್ಲಲಾರವು! ಬೇರೆ ಬಾಣಗಳನ್ನು ನೋಡು' ಎಂದಿತು.

ಆಗ ಅಲರ್ಕನು ಅಲ್ಲಿಯೇ ಮತ್ತೊಬ್ಬರಿಗೆ ಸಾಧ್ಯವಲ್ಲದ ಘೋರ ತಪಸ್ಸನ್ನು (ಆಲೋಚನೆಯನ್ನು) ಮಾಡಿಯೂ, ಹಿಂದೆ ಹೇಳಿದ ಏಳು

ಶತ್ರುಗಳನ್ನೂ ಕೊಲ್ಲುವ ಬಾಣಗಳಾವುವೆಂದು ತಿಳಿಯದೆಹೋದನು. ತಿರುಗಿ ತನ್ನಲ್ಲಿತಾನು ಏಕಾಗ್ರಮನಸ್ಸಿನಿಂದ ಆಲೋಚಿಸಿದನು. ಬಹುಕಾಲದ ವರೆಗೆ ಆಲೋಚಿಸಿದಮೇಲೆ, ಅದಕ್ಕೆ ಮನೋನಿಗ್ರಹವೆಂಬ ರಾಜಯೋಗಕ್ಕಿಂತಲೂ ಮೇಲಾದ ಉಪಾಯವು ಬೇರೆ ಯಾವುದೂ ತೋರಲಿಲ್ಲ. ಒಡನೆ ಅವನು ಆ ಯೋಗವೆಂಬ ಒಂದೇ ಬಾಣದಿಂದ ಇಂದ್ರಿಯಗಳನ್ನೆಲ್ಲ ಅಡಗಿಸಿ, ಉತ್ತಮಸಿದ್ಧಿಯನ್ನು ಪಡೆದನು. ಹೀಗೆ ಪರಮಾತ್ಮಸಾಕ್ಷಾತ್ಕಾರವೆಂಬ ಉತ್ತಮಸಿದ್ಧಿಯನ್ನು ಪಡೆದ ಆ ರಾಜರ್ಷಿಯು, ತನ್ನ ಅನುಭವಕ್ಕೆ ಬಂದ ವಿಷಯವನ್ನು ಕುರಿತು ಕೆಲವು ಗಾದೆಗಳನ್ನು ಹೇಳಿರುವನು. ಅವುಗಳ ಅರ್ಥವೇನೆಂದರೆ, "ಅಯ್ಯೋ! ಕಷ್ಟವು! ನಾನು ಬಾಹ್ಯಕರ್ಮಗಳನ್ನೆಲ್ಲ ಅನುಷ್ಠಿಸಿದೆನು! ಭೋಗದಾಸೆಯಿಂದ ರಾಜ್ಯವನ್ನೂ ಅನುಭವಿಸಿದೆನು. ಇವೆಲ್ಲವನ್ನೂ ನೋಡಿದಮೇಲೆ ನನಗೆ ಮನೋನಿಗ್ರಹರೂಪವಾದ ರಾಜಯೋಗಕ್ಕಿಂತಲೂ ಮೇಲಾದ ಸುಖವಿಲ್ಲವೆಂದು ಸ್ಪಷ್ಟವಾಯಿತು" ಎಂಬುದೇ ಅವನು ಹೇಳಿದ ಗಾದೆಯ ಮುಖ್ಯಾರ್ಥವು. ಓ ಪರಶುರಾಮಾ! ನೀನು ಈ ಅಂಶವನ್ನು ಚೆನ್ನಾಗಿ ಮನನಸ್ಸಿಲ್ಲಿಡು! ಕ್ಷತ್ರಿಯರನ್ನು ಕೊಲ್ಲಬೇಡ. ದೃಢವಾದ ತಪಸ್ಸನ್ನು ಮಾಡಿ ನಿನ್ನ ಇಂದ್ರಿಯಗಳನ್ನು ಕೊಲ್ಲು! ನಿನಗೆ ಮೇಲ್ಮೆಯುಂಟು" ಎಂದರು. ಓ ಭಾಗ್ಯವತೀ! ಪಿತೃಗಳ ಈ ಮಾತುಗಳನ್ನು ಕೇಳಿ ಪರಶುರಾಮನು ಉಗ್ರತಪಸ್ಸನ್ನು ಹಿಡಿದು ಉತ್ತಮಸಿದ್ಧಿಯನ್ನು ಹೊಂದಿದನು.

ಇದು ಮೂವತ್ತೊಂದನೆಯ ಅಧ್ಯಾಯವು.



{ ಬ್ರಾಹ್ಮಣನು ತನ್ನ ಭಾರ್ಯೆಗೆ, ಕಾಮಕ್ರೋಧಾದಿಗಳನ್ನು ತ್ಯಜಿಸುವುದರಮೂಲಕವಾಗಿ ಪರಮಾತ್ಮಜ್ಞಾನಸ್ವರೂಪವೇ ಪರಮಪುರುಷಾರ್ಥವೆಂದು ತಿಳಿಸುವ ಅಂಬರೀಷಗೀತೆಗಳನ್ನು ಹೇಳಿದುದು. }

ಬ್ರಾಹ್ಮಣನು ಪತ್ನಿಯನ್ನು ಕುರಿತು "ತರುಣೀ ಕೇಳು! ಲೋಕದಲ್ಲಿ ಜೀವನಿಗೆ (ಸತ್ವ ರಜಸ್ತಮಗಳೆಂಬೀ) ಮೂರುಮಂದಿ ಮುಖ್ಯಶತ್ರು

ಗಳಿರುವರು. ಇವರು ಗುಣಗಳಲ್ಲಿ ಒಂಭತ್ತು ವಿಧವಾಗಿ ತೋರುತ್ತಿರುವರು. ಪ್ರಹರ್ಷ, ಪ್ರೀತಿ ಆನಂದವೆಂಬಿವು ಮೂರೂ ಸತ್ವಜನ್ಯವಾದ ಗುಣಗಳು. ಶೋಕ, ಕ್ರೋಧ, ದ್ವೇಷಗಳೆಂಬಿವು ಮೂರೂ ರಜೋಜನ್ಮಗಳಾದ ಗುಣಗಳು. ಕನಸು, ಸೋಮಾರಿತನ, ಮೋಹ, ಇವು ಮೂರೂ ತಮಸ್ಸಿನಿಂದಾಗುವ ಗುಣಗಳು. ಧೀರನಾದವನು ವಿಳಂಬಮಾಡದೆ ಶಮದಮಾದಿಗಳೆಂಬ ಶಸ್ತ್ರಗಳಿಂದ ಆ ಶತ್ರುಗಳನ್ನು ಮೊದಲು ಕೊಂದು, ಮನಶ್ಶಾಂತಿ ಹೊಂದಿ, ಇಂದ್ರಿಯಗಳನ್ನು ಜಯಿಸಿದಮೇಲೆ, ಇತರಶತ್ರುಗಳನ್ನು ಜಯಿಸಲು ಯತ್ನಿಸಬೇಕು. ಇದೇ ವಿಷಯದಲ್ಲಿ ಪೂರ್ವಕಲ್ಪವೃತ್ತಾಂತನ್ನು ಕೇಳಿದ ಪ್ರಾಜ್ಞರು, ಅಂಬರೀಷ ಮಹಾರಾಜನಿಂದ ಕೀರ್ತಿಸಲ್ಪಟ್ಟ ಕೆಲವು ಗಾಥೆಗಳನ್ನು ಹೇಳುವರು. ರಾಗದ್ವೇಷಾದಿವೈರಿಗಳಿಂದ ಶಮದಮಾದಿಗುಣಗಳೆಂಬ ಸಾಧುಗಳಿಗೆ ಬಾಧೆಯುಂಟಾದ ಕಾಲದಲ್ಲಿ ಅಂಬರೀಷನು ರಾಜ್ಯಕ್ಕೆ ಬಂದನೆಂದು ಕೇಳಿರುವೆನು. ಅವನು ಆ ವೈರಿಗಳೆಲ್ಲರನ್ನೂ ಅಡಗಿಸಿ, ಸಾಧುಗಳನ್ನು ಆದರಿಸಿ, ದೊಡ್ಡ ಸಿದ್ಧಿಯನ್ನು ಪಡೆದಮೇಲೆ, ಸ್ವಾನುಭವದಿಂದ ಈ ಗಾಥೆಗಳನ್ನು ಹಾಡಿದನು. ಅವುಗಳ ಅರ್ಥವೇನೆಂದರೆ:—

“ನಾನು ಪ್ರಾಯಕವಾಗಿ ದೋಷಗಳೆಲ್ಲವನ್ನೂ ಜಯಿಸಿದೆನು. ಎಲ್ಲಾ ಶತ್ರುಗಳನ್ನೂ ಕೊಂದೆನು. ಪ್ರಬಲವಾದ ಒಂದು ದೋಷವನ್ನು ಮಾತ್ರ ಇನ್ನೂ ನಾನು ಕೊಲ್ಲಲಿಲ್ಲ. ಈ ಜೀವನು ಯಾವುದರ ಸಂಬಂಧದಿಂದ ವೈರಾಗ್ಯವನ್ನು ಪಡೆಯಲಾರದೆ, ದಾಹಾತುರದಿಂದ ಓಡುವವನು ಮುಂದಿರುವ ಹಳ್ಳವನ್ನು ಕಾಣದೆ ಆ ಹಳ್ಳದಲ್ಲಿ ಬೀಳುವಂತೆ, ತೃಷ್ಣಾವಶನಾಗಿ ಅಕಾರ್ಯವೆಂದು ತಿಳಿಯದೆ ಪ್ರವರ್ತಿಸುತ್ತಿರುವನೋ, ಅಂತಹ ಲೋಭವನ್ನು ತೀಕ್ಷ್ಣಗಳಾದ ಕತ್ತಿಗಳಿಂದ ಕತ್ತರಿಸಿದ ಹೊರತು ಅವನಿಗೆ ನೆಮ್ಮದಿಯಿಲ್ಲ. ಆ ಲೋಭದಿಂದ ತೃಷ್ಣೆಯೂ, ಆ ತೃಷ್ಣೆಯಿಂದ ನಾನಾವಿಧ ಚಿಂತೆಗಳೂ ಹುಟ್ಟುವುವು. ಅರ್ಥಾಶೆಯಿಂದ ಅವನು ಪ್ರಬಲವಾದ ರಾಜಸಗುಣಗಳಿಗೆ ಈಡಾಗುವನು. ತಾನು ಕೋರಿದುದನ್ನು ಪಡೆದಮೇಲೆ, ಅವನಲ್ಲಿಯೇ ತಾಮಸಗುಣಗಳೂ ತಲೆಯೆ

ತ್ತಿರುವುವು. ಈ ದುರ್ಗುಣಗಳಿಂದ ಅವನು ಶರೀರವೆಂಬ ಬಂಧನದಲ್ಲಿ ಸಿಕ್ಕಿಬಿದ್ದು ಅಡಿಗಡಿಗೆ ಜನ್ಮಗಳನ್ನೆತ್ತುವನು. ತಿರುಗಿ ಕರ್ಮಗಳಲ್ಲಿಯೂ ಪ್ರವರ್ತಿಸುವನು. ಆಯುಸ್ಸಿನ ಕೊನೆಯಲ್ಲಿ ಶರೀರಪಾತವಾಗಿ ಸಾಯು ವನು. ಆಮೇಲೆ ತಿರುಗಿ ಹುಟ್ಟುವನು. ಆದುದರಿಂದ ಲೋಭ ದಿಂದಾಗುವ ಕೇಡನ್ನು ಚೆನ್ನಾಗಿ ಗಮನಿಸಿ, ಮನಸ್ಸಿನಲ್ಲಿಯೇ ಅದನ್ನು ನಿಗ್ರಹಿಸಿದಮೇಲೆ (ಆತ್ಮ) ರಾಜ್ಯವನ್ನಾಳಬೇಕು. ಈ ಲೋಕದಲ್ಲಿ ಅದೇ ರಾಜ್ಯವು. ಬೇರೆ ರಾಜ್ಯವಿಲ್ಲ. ತತ್ವಜ್ಞಾನವುಳ್ಳ ಆತ್ಮವೇ ಆ ರಾಜ್ಯಕ್ಕೆ ಅರಸನು" ಹೀಗೆ ಅಂಬರೀಷನು ಪ್ರಸಿದ್ಧಚಕ್ರವರ್ತಿಯಾಗಿದ್ದರೂ ಲೋಭವನ್ನು ಜಯಿಸುವ ಯತ್ನದಲ್ಲಿ ಈ ಗಾಥೆಗಳನ್ನು ಹಾಡಿದನು" ಎಂದನು.

ಇದು ಮೂವತ್ತೆರಡನೆಯ ಅಧ್ಯಾಯವು.

ಮಮತೆಯನ್ನು ಬಿಡುವುದೇ ಉತ್ತಮ ಪುರುಷಾರ್ಥಸಾಧಕ ವೆಂಬ ವಿಷಯದಲ್ಲಿ, ಬ್ರಾಹ್ಮಣನಿಗೂ, ಜನಕರಾಜನಿಗೂ ನಡೆದ ಸಂವಾದವನ್ನು ಬ್ರಾಹ್ಮಣನು ತನ್ನ ಪತ್ನಿಗೆ ತಿಳಿಸಿದುದು.

ಬ್ರಾಹ್ಮಣನು ಪತ್ನಿಯನ್ನು ಕುರಿತು "ಕಾಂತೇ ಕೇಳು! ಇದೇ ವಿಷಯದಲ್ಲಿ ಪೂರ್ವಿಕರು ಬ್ರಾಹ್ಮಣ ಜನಕ ಸಂವಾದರೂಪವಾದ ಇತಿ ಹಾಸವೊಂದನ್ನು ಉದಾಹರಿಸುವರು. ಹಿಂದೆ ಜನಕರಾಜನು ಅಪರಾ ಧಿಯೆಂದು ಕಂಡುಬಂದ ಒಬ್ಬ ಬ್ರಾಹ್ಮಣನನ್ನು ಕರೆದು, ಅವನನ್ನು ಶಿಕ್ಷಿಸುವುದಕ್ಕಾಗಿ "ಇನ್ನುಮೇಲೆ ನೀನು ನನ್ನದೇಶದಲ್ಲಿರಕೂಡದು" ಎಂದು ಆಜ್ಞಾಪಿಸಿದನು. ಈ ಮಾತನ್ನುಕೇಳಿ ಬ್ರಾಹ್ಮಣನು "ಓ ಮಹಾ ರಾಜಾ! ನಿನ್ನ ದೇಶವೆಂದು ಹೇಳಿದೆಯಲ್ಲವೆ! ನಿನ್ನ ದೇಶವೆಂಬುದಾ ವುದು! ನಿನ್ನ ವಶದಲ್ಲಿರುವ ರಾಜ್ಯದ ವಿಸ್ತೀರ್ಣವೆಷ್ಟು? ಅದರ ಪರಿ ಮಾಣವನ್ನು ನಿರ್ಣಯಿಸಿ ಹೇಳಿದರೆ, ಒಡನೆಯೇ ನಿನ್ನ ಆಜ್ಞೆಯಂತೆ ನಿನ್ನ ಎಲ್ಲೆಯನ್ನು ಬಿಟ್ಟು, ಬೇರೊಬ್ಬರಾಜನ ದೇಶದಲ್ಲಿ ವಾಸಮಾಡಲು

ಹೋಗುವೆನು" ಎಂದನು. ಮಹಾಬುದ್ಧಿವಂತನಾದ ಆ ಬ್ರಾಹ್ಮಣನ ಮಾತನ್ನು ಕೇಳಿದೊಡನೆ, ಜನಕರಾಜನು ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತ, ಯಾವ ಮಾತನ್ನೂ ಆಡದೆ ಸುಮ್ಮನಿದ್ದನು. ಹೀಗೆ ಮೌನದಿಂದ ಏನನ್ನೋ ಯೋಚಿಸುತ್ತ ಕುಳಿತಿದ್ದ ಆ ರಾಜನಿಗೆ ಇದ್ದಕ್ಕಿದ್ದ ಸೂರ್ಯನನ್ನು ರಾಹು ಹಿಡಿದಂತೆ ಮೂರ್ಛೆಯು ಬಂದಿತು. ಆಮೇಲೆ ಸ್ವಲ್ಪಹೊತ್ತಿಗೆ ತನಗೆತಾನೇ ಪ್ರಜ್ಞೆ ಬಂದಿತು. ಆಮೇಲೆ ಸ್ವಲ್ಪಹೊತ್ತು ಚೇತರಿಸಿಕೊಂಡು, ಆ ಬ್ರಾಹ್ಮಣನನ್ನು ನೋಡಿ ಹೀಗೆಂದು ಹೇಳುವನು "ಓ ಬ್ರಾಹ್ಮಣೋತ್ತಮಾ! ನನ್ನ ಪಿತೃ ಪಿತಾಮಹಪರಂಪರೆಯಾಗಿ ಬಂದ ಎಲ್ಲಾ ನಗರವೂ, ದೇಶವೂ ನನ್ನ ವಶವಾಗಿದ್ದರೂ, ನಾನು ಈ ಭೂಮಿಯನ್ನೆಲ್ಲಾ ಹುಡುಕಿದರೂ, ನನ್ನ ದೇಶವು ಇಂಥದೆಂದು ತಿಳಿಯಲಿಲ್ಲ. ದೇಶವನ್ನೆಲ್ಲಾ ಹುಡುಕಿದರೂ ನನ್ನ ದೇಶವಿದೆಂದು ತಿಳಿಯದಿದ್ದಮೇಲೆ, ನನ್ನ ರಾಜಧಾನಿಯಾದ ಮಿಥಿಲೆಯಲ್ಲಿಮಾತ್ರ ಹುಡುಕಿದೆನು. ಅದರಲ್ಲಿಯೂ ನನ್ನ ಸ್ವಂತಸ್ಥಳವಾವುದೆಂದು ತಿಳಿಯಲಿಲ್ಲ. ಆಮೇಲೆ ನನ್ನ ಪ್ರಜೆಗಳಲ್ಲಿ ಹಡುಕಿದೆನು. ಆ ಪ್ರಜೆಗಳಲ್ಲಿಯೂ ನನ್ನವರಾರೆಂದು ನನಗೆ ತಿಳಿಯಲಿಲ್ಲ. ಹೀಗಾಗಿ ನನಗೆ ಏನೊಂದೂ ತೋರದೆ, ಹಾಗೆಯೇ ಮೂರ್ಛೆ ಬಂದಂತಾಯಿತು. ಆಮೇಲೆ ತಿರುಗಿ ಪ್ರಜ್ಞೆ ಬರುವಷ್ಟರಲ್ಲಿ, ನಿಜವಾದ ತತ್ವವು ನನ್ನ ಮನಸ್ಸಿಗೆ ತಿಳಿದುಬಂದಿತು. ಅದರಮೇಲೆ ನನಗೆ ನಿಶ್ಚಯಜ್ಞಾನವು ಹುಟ್ಟಿತು. ಏನೆಂದರೆ, ಈ ಪ್ರಪಂಚದಲ್ಲಿ ಯಾವುದೂ ನನ್ನ ದೇಶವಲ್ಲ! ಅಥವಾ ಎಲ್ಲವೂ ನನ್ನ ದೇಶವೇ! ಅಥವಾ ಈ ಶರೀರವೂ ನನ್ನದಲ್ಲ! ಎಲ್ಲಾ ಪ್ರಾಣಿಗಳೂ, ಭೂಮಿಯೂ ನನ್ನವೇ! ಎಂಬ ಬುದ್ಧಿಯು ತೋರಿತು. ಓ ಬ್ರಾಹ್ಮಣೋತ್ತಮಾ! ಈಗ ನನಗೆ ತೋರಿದ ಬುದ್ಧಿಯೇ ಮತ್ತಾವರಿಗೂ ಇರಬೇಕು. ಇನ್ನು ನಿನ್ನ ಇಷ್ಟವಿರುವವರೆಗೆ ಇಲ್ಲಿಯೇ ಇರುತ್ತಿರು. ಇಲ್ಲಿ ನಿನಗೆ ಬೇಕಾದುದನ್ನು ಯಥೇಚ್ಛವಾಗಿ ಅನುಭವಿಸು" ಎಂದನು.

ಆಗ ಬ್ರಾಹ್ಮಣನು "ರಾಜೇಂದ್ರಾ! ನೀನು ಕುಲಪರಂಪರೆಯಾಗಿ ಬಂದ ರಾಜ್ಯವನ್ನನುಭವಿಸುತ್ತಿರುವಾಗಲೂ, "ಅದು ನನ್ನದಲ್ಲವೆಂಬ"

ಮಮತೆಯನ್ನು ತೊರೆಯುವುದಕ್ಕೆ ಕಾರಣವೇನು? ನೀನು ತಿರುಗಿ ಯಾವ ಅಭಿಪ್ರಾಯದಿಂದ ಎಲ್ಲವೂ ನನ್ನ ದೇಶವೆಂದು ಹೇಳಿದೆ? ಮೊದಲು ಯಾವ ದೇಶವೂ ನನ್ನದಲ್ಲವೆಂದೂ, ಆಮೇಲೆ "ಎಲ್ಲವೂ ನನ್ನದೇ" ಎಂದೂ, ಪರಸ್ಪರ ವಿರುದ್ಧವಾಗಿ ಹೇಳಿದ ಅಭಿಪ್ರಾಯಗಳೇನು?" ಎಂದನು. ಆದಕ್ಕಾ ಜನಕನು, ಬ್ರಾಹ್ಮಣಶ್ರೇಷ್ಠಾ! ಈ ಲೋಕದಲ್ಲಿ ಸಮಸ್ತಕಾರ್ಯಗಳ ಆರಂಭವೂ, ಎಂದಾದರೂ ಅಂತವುಳ್ಳವುಗಳೇ ಎಂದು ಚೆನ್ನಾಗಿ ತಿಳಿದಿದೆ. ಯಾವ ಫಲವೂ ಒಬ್ಬನಲ್ಲಿ ಸ್ಥಿರವಾಗಿಲ್ಲದಿರುವುದರಿಂದ, ಈ ಪ್ರಪಂಚದಲ್ಲಿ ನನ್ನದು ಯಾವುದೆಂದು ಹೇಳಲು ನನಗೆ ತೋರಲಿಲ್ಲ. ಹಾಗೆಯೇ "ಇದು ಯಾರಧನವು! ಇದು ಯಾರಿಗೆ ಸೇರಿದುದು!" ಎಂಬ ವೇದವಾಕ್ಯಗಳುಂಟು. ಅದರ ಅರ್ಥವನ್ನು ಸ್ವಬುದ್ಧಿಯಿಂದ ಯೋಚಿಸಿದರೆ, ಯಾವ ವಸ್ತುವನ್ನು ಯಾರೂ ತನ್ನದೆಂದು ಹೇಳುವುದಕ್ಕೆ ಆಧಾರವು ತೋರುವುದಿಲ್ಲ. ಈ ಬುದ್ಧಿಯಿಂದಲೇ ನಾನು ಎಲ್ಲದರಲ್ಲಿಯೂ ನನ್ನದೆಂಬ ಮಮತೆಯನ್ನು ಬಿಡಬೇಕಾಯಿತು. ಎಲ್ಲವೂ ನನ್ನದೆಂದು ಹೇಳುದುದಕ್ಕೂ ಕಾರಣವನ್ನು ತಿಳಿಸುವೆನು ಕೇಳು. ನನ್ನ ಮೂಗಿನೊಳಗಿಟ್ಟ ಗಂಧವನ್ನಾದರೂ ನಾನು ನನ್ನ ಪ್ರಯೋಜನಕ್ಕಾಗಿ ಆಶಿಸುವುದಿಲ್ಲ. ಇದರಿಂದ ಗಂಧಗುಣವುಳ್ಳ ಭೂಮಿಯನ್ನೆಲ್ಲಾ ನಾನು ಜಯಿಸಿದಂತಾಯಿತು, ಅದು ಯಾವಾಗಲೂ ನನ್ನ ಅಧೀನವಾಗಿರುವುದು. ಇದರಂತೆಯೇ ನಾನು ನಾಲಗೆಯಮೇಲಿನ ರಸವನ್ನಾಗಲಿ, ನೇತ್ರದೊಳಗಿನ ರೂಪವನ್ನಾಗಲಿ, ಚರ್ಮದ ಮೇಲಿನ ಸ್ಪರ್ಶವನ್ನಾಗಲಿ, ಕಿವಿಯೊಳಗಿನ ಶಬ್ದವನ್ನಾಗಲಿ, ನಾನು ನನಗೆಂದು ಅಪೇಕ್ಷಿಸುವವನಲ್ಲ. ಈ ಕಾರಣದಿಂದ ರಸ, ರೂಪ, ಸ್ಪರ್ಶ ಶಬ್ದಗುಣಗಳುಳ್ಳ ತೇಜಸ್ಸು, ವಾಯು, ಆಕಾಶಗಳೆಂಬ ಭೂತಗಳೆಲ್ಲವೂ ನನ್ನಿಂದ ಜಯಿಸಲ್ಪಟ್ಟು, ನನ್ನ ಅಧೀನವಾದಂತೆಯೇ! ಇದರಂತೆಯೇ ನಾನು ಮನಸ್ಸಿನಲ್ಲಿರುವ ಸಂಕಲ್ಪಗಳನ್ನೂ ನನಗಾಗಿ ಆಶಿಸುವುದಿಲ್ಲ. ಆದ್ದರಿಂದ ಮನಸ್ಸು ನನ್ನಿಂದ ಜಿತವಾಗಿ, ಯಾವಾಗಲೂ ನನ್ನ ವಶದಲ್ಲಿರುವುದು. ನಾನು ನಡೆಸತಕ್ಕ ಎಲ್ಲಾ ಕಾರ್ಯಗಳನ್ನೂ ದೇವತೆಗಳು, ಪಿತೃಗಳು, ಭೂತಗಳು, ಅತಿಥಿಗಳು, ಇವರಿಗಾಗಿಯೇ ನಡೆಸುವೆನು. ಇವುಗಳಲ್ಲಿ ಯಾವುದೂ ನನಗಾಗಿ

ಅಲ್ಲ! ಇವೆಲ್ಲವನ್ನೂ ನಾನು ಜಯಿಸಿದಂತಾಯಿತು. ಈ ಕಾರಣದಿಂದಲೇ ಪ್ರಪಂಚದಲ್ಲಿ ಯಾವುದೂ ನನ್ನದಲ್ಲವೆಂದೂ, ಎಲ್ಲವೂ ನನ್ನ ವಶವೆಂದೂ ನಾನು ಹೇಳಿದೆನು'' ಎಂದನು. ಆಗ ಬ್ರಾಹ್ಮಣನು ನಗುತ್ತ ಜನಕನನ್ನು ನೋಡಿ, ''ಮಹಾರಾಜಾ! ವಾಸ್ತವದಲ್ಲಿ ನಾನು ಬ್ರಾಹ್ಮಣನೂ ಅಲ್ಲ! ಅಪರಾಧಿಯೂ ಅಲ್ಲ. ನಿನ್ನನ್ನು ಪರೀಕ್ಷಿಸುವುದಕ್ಕಾಗಿ ಬಂದ ಧರ್ಮದೇವನೇ ನಾನೆಂದು ತಿಳಿ. ಓ ರಾಜಾ! ಬ್ರಹ್ಮನನ್ನೇ ನಾಭಿಯನ್ನಾಗಿಯೂ, ಸತ್ವಗುಣವನ್ನೇ ಸುತ್ತಿನ ಬಳೆಯಾಗಿಯೂ ಉಳ್ಳ, ಮತ್ತು ಯಾರಿಂದಲೂ ತಡೆಯಲಸಾಧ್ಯವೂ, ಯಾವಾಗಲೂ ಹಿಂತಿರುಗದುದೂ ಆದ ಜ್ಞಾನವೆಂಬ ಚಕ್ರವನ್ನು ನಡೆಸಬಲ್ಲ ಸಮರ್ಥನು ಲೋಕದಲ್ಲಿ ನೀನೊಬ್ಬನೇ!'' ಎಂದನು.

ಇದು ಮೂವತ್ತುಮೂರನೆಯ ಅಧ್ಯಾಯವು.



ಬ್ರಾಹ್ಮಣನು ತನ್ನ ಪತ್ನಿಗೆ ತನ್ನ ಮಹಿಮೆಯನ್ನು ತಿಳಿಸಿದುದು.

''ಎಲೇ ಭೀರು! ನೀನು ನನ್ನನ್ನು ಎಂತವನೆಂದು ಭಾವಿಸಿ ಹೆದರಿಸಿದೆಯೋ, ನಾನು ಅಂಥವನಲ್ಲ. ನನ್ನ ನಿಜಸ್ಥಿತಿಯನ್ನು ತಿಳಿಸುವೆನು ಕೇಳು. ನಾನು ಬ್ರಾಹ್ಮಣನು! ಮುಕ್ತನು! ವನಗಳಲ್ಲಿ ಸಂಚರಿಸತಕ್ಕವನು. ಗೃಹಸ್ಥ ಧರ್ಮಗಳುಳ್ಳವನು. ವ್ರತವುಳ್ಳವನು. ನೀನು ನನ್ನನ್ನು ಪುಣ್ಯಪಾಪಗಳ ಸಂಬಂಧವುಳ್ಳವನನ್ನಾಗಿ ತಿಳಿದು ಹಿಂದೆ ನನ್ನೊಡನೆ ಮಾತನಾಡಿದೆ. ನಾನು ಅಂಥವನಲ್ಲ. ಈ ಪ್ರಪಂಚದಲ್ಲಿರುವ ಎಲ್ಲಾ ವಸ್ತುಗಳೂ ನನ್ನಿಂದ ಆವೃತವಾಗಿದೆ. ಅಗ್ನಿಯು ಕಾಡುಮರಗಳನ್ನು ಹೇಗೋ ಹಾಗೆ ಪ್ರಪಂಚದೊಳಗಿನ ಸ್ಥಾವರಜಂಗಮಗಳನ್ನೆಲ್ಲ ನಾನು ನಾಶಮಾಡಬಲ್ಲವನೆಂದು ತಿಳಿ. ರಾಜ್ಯದಲ್ಲಿಯೂ, ಈ ಎಲ್ಲಾ ಭೂಮಿಯಲ್ಲಿಯೂ, ಕೊನೆಗೆ ಸ್ವರ್ಗದಲ್ಲಿಯೂ, ನನ್ನ ಬುದ್ಧಿಯು ಒಂದೇ ಸಮವಾಗಿರುವುದು. ನನಗೆ ಬುದ್ಧಿಯೇ ಧನವು. ಬ್ರಹ್ಮಚಾರಿಗಳಾಗಲಿ ಗೃಹಸ್ಥರಾಗಲಿ, ವಾನಪ್ರಸ್ಥರಾಗಲಿ, ಸನ್ಯಾಸಿಗಳಾಗಲಿ, ಇವರಲ್ಲಿ ಬ್ರಹ್ಮಜ್ಞಾನಿಗಳಿಗೆ ಜ್ಞಾನವೆಂಬುದೊಂದೇ ಮಾರ್ಗವು. ಆ ಮಾರ್ಗದಿಂದಲೇ

ಉತ್ತಮಗತಿಯನ್ನು ಹೊಂದುವರು. ಹಲವು ಬಗೆಯ ಆಶ್ರಮಲಕ್ಷಣಗಳುಳ್ಳವರಿಗಾದರೂ, ಶಾಂತಿಪ್ರಧಾನವಾದ ಬುದ್ಧಿಯೊಂದೇ ಉಪಾಸ್ಯವು. ಹೀಗೆ ಶಮಪ್ರಧಾನವಾದ ಬುದ್ಧಿಯುಳ್ಳವರು, ನದಿಗಳೆಲ್ಲವೂ ಸಮುದ್ರವನ್ನು ಸೇರುವಂತೆ, ಆ ಬ್ರಹ್ಮಜ್ಞಾನವೊಂದನ್ನೇ ಹಿಡಿಯುವರು. ಆ ಜ್ಞಾನಮಾರ್ಗವು ಬುದ್ಧಿಯಿಂದಲೇ ಲಭಿಸತಕ್ಕುದು. ಶರೀರವು ಕರ್ಮಗಳಿಂದ ಉಂಟಾಗುವುದು. ಆದುದರಿಂದ ನನಗೆ ಪರಲೋಕದ ಭಯವಿಲ್ಲ. ನೀನೂ ನನ್ನಂತೆ ಬ್ರಹ್ಮಜ್ಞಾನವುಳ್ಳವಳಾಗಿದ್ದರೆ, ಆಗ ನನ್ನಂತೆ ನೀನೂ ಆತ್ಮಸ್ವರೂಪವನ್ನು ಹೊಂದುವೆ ''

ಇದು ಮೂವತ್ತುನಾಲ್ಕನೆಯ ಅಧ್ಯಾಯವು.

---

ಕೃಷ್ಣನು ಅರ್ಜುನನಿಗೆ ತಾನು ಹೇಳಿದ ಬ್ರಾಹ್ಮಣಸ್ತ್ರೀ ಮತ್ತು ಬ್ರಾಹ್ಮಣನೆಂಬುದು ಕ್ರಮವಾಗಿ ಬುದ್ಧಿ ಮತ್ತು ಮನಸ್ಸು ಎಂಬಿವುಗಳೇ ಎಂದು ತಿಳಿಸಿದುದು.

ಆಗ ಬ್ರಾಹ್ಮಣಸ್ತ್ರೀಯು ಪ್ರಶ್ನೆ ಮಾಡಿದಳು. "ನೀನು ಹೇಳಿದ ಈ ವಿಷಯವು ಅಲ್ಪಬುದ್ಧಿಯುಳ್ಳವರಿಗೂ, ಅಶಿಕ್ಷಿತವಾದ ಬುದ್ಧಿಯುಳ್ಳವರಿಗೂ ತಿಳಿಯಲಾರದು. ನೀನು ಹೇಳಿದ ವಿಷಯವು ಬಹುವಾಗಿಯೂ ಅಲ್ಪವಾಗಿಯೂ, ಸಂಕ್ಷಿಪ್ತವಾಗಿಯೂ, ವಿಸ್ತಾರವಾಗಿಯೂ ಇರುವುದೆಂದು ನನಗೆ ತೋರಿದೆ. ನೀನು ಹೇಳಿದಂತೆ ಆ ಬುದ್ಧಿಯು ಲಭಿಸಬೇಕಾದರೆ ಉಪಾಯವೇನೆಂಬುದನ್ನು ನನಗೆ ತಿಳಿಸಬೇಕು. ಇದನ್ನು ಪಡೆಯುವುದಕ್ಕೆ ಕಾರಣವನ್ನೂ ನಿನ್ನಿಂದಲೇ ನಾನು ತಿಳಿಯಬೇಕಾಗಿದೆ" ಎಂದಳು. ಆಗ ಬ್ರಾಹ್ಮಣನು "ಎಲೆ ರಮಣಿ! ಕೇಳು. ಬ್ರಹ್ಮವಿಷಯಕವಾದ ಬುದ್ಧಿಯೇ, ಅರಣಿಯೆಂದೂ, ಗುರುವೇ ಅದರ ಮೇಲಿನ ಉತ್ತರಾರಣಿಯೆಂದೂ, ವೇದಾಂತಶ್ರವಣವಾದ ಮನನಗಳನ್ನು ಕಡೆಯತಕ್ಕ ಸಾಧನವನ್ನಾಗಿಯೂ ತಿಳಿ'' ಎಂದನು.

ಆಗ ಬ್ರಾಹ್ಮಣಿಯು "ನಾಥಾ! ಕ್ಷೇತ್ರಜ್ಞನೆಂದು ಕರೆಯಲ್ಪಡುವ ಬ್ರಹ್ಮಸ್ವರೂಪವನ್ನು ಯಾವ ಲಕ್ಷಣಗಳಿಂದ ತಿಳಿಯಬಹುದೋ ಅದನ್ನು

ತಿಳಿಸಬೇಕು'' ಎಂದಳು. ಅದಕ್ಕಾಬ್ರಾಹ್ಮಣನು, " ಎಲೆ ಪ್ರಿಯೇ ! ಕೇಳು. ಅದಕ್ಕೆ ರೂಪವಿಲ್ಲ! ಗುಣವೂ ಇಲ್ಲ. ಅದನ್ನರಿಯುವುದಕ್ಕೆ ತಕ್ಕ ಕಾರಣಗಳೂ ಇಲ್ಲ. ಅದನ್ನು ಧ್ಯಾನದಿಂದ ಸಾಕ್ಷಾತ್ಕರಿಸತಕ್ಕ ಉಪಾಯವನ್ನುಮಾತ್ರ ತಿಳಿಸುವೆನು. ಆ ವಿಷಯವನ್ನು ಚೆನ್ನಾಗಿ ಉಪದೇಶಿಸಿದರೆ, ಅದರಿಂದ ನೀನು ಅಮೃತದಿಂದ ಹೇಗೋಹಾಗೆ ತೃಪ್ತಿಯನ್ನು ಹೊಂದುವೆ. ಕಾಮ್ಯಕರ್ಮಗಳಲ್ಲಿ ಬುದ್ಧಿಯುಳ್ಳವನಿಗೆ ಬ್ರಹ್ಮವಿಷಯವಾದ ಬುದ್ಧಿಯು ತಪ್ಪಿಹೋಗುವುದರಿಂದ, ಜ್ಞಾನಸ್ವರೂಪಿಯಾದ ಆ ಬ್ರಹ್ಮನಿಂದ ದೂರವಾಗಿ ತಳ್ಳಲ್ಪಡುವನು. ಮೋಕ್ಷದಶೆಯಲ್ಲಿ " ಇದನ್ನು ಮಾಡಬೇಕು, ಇದನ್ನು ಮಾಡಬಾರದು " ಎಂಬ ಉಪದೇಶವಿಲ್ಲ. ಮುಕ್ತನಿಗೆ ಯಾವುದನ್ನು ನೋಡುತ್ತಿದ್ದರೂ, ಯಾವುದನ್ನು ಕೇಳುತ್ತಿದ್ದರೂ, ಆ ಪರಮಾತ್ಮನೊಬ್ಬನಲ್ಲಿಯೇ ಬುದ್ಧಿಯು ನೆಲೆಗೊಂಡಿರಬೇಕು. ಈ ವಿಷಯದಲ್ಲಿ ಎಲ್ಲಾ ಅನುಮಾನಗಳಿಂದಲೂ, ಪ್ರತ್ಯಕ್ಷಪ್ರಮಾಣಗಳಿಂದಲೂ ಸಿದ್ಧವಾದ ಮತ್ತು ವ್ಯಕ್ತಾವ್ಯಕ್ತಸ್ವರೂಪವುಳ್ಳ ಎಲ್ಲವನ್ನೂ ಎಷ್ಟು ಅಂಶಗಳಾಗಿ ವಿಭಾಗಿಸಬಹುದೋ, ಅಷ್ಟರವರೆಗೂ, ನೂರು ಸಾವಿರ ಸಂಖ್ಯೆಯಿಂದ ವಿಭಾಗಿಸಿ ನೋಡಬೇಕು. ಯಾವುದಕ್ಕಿಂತಲೂ ಮೇಲಾದುದಿಲ್ಲವೋ ಅಂತಹ ಸರ್ವೋತ್ತಮವಾದ ಬ್ರಹ್ಮಜ್ಞಾನವು ಶಮದಮಾದಿಗಳ ಅಭ್ಯಾಸಬಲದಿಂದ ಉಂಟಾಗುವುದು'' ಎಂದನು.

" ಅರ್ಜುನಾ ! ಆಮೇಲೆ ಆ ಬ್ರಾಹ್ಮಣಸ್ತ್ರೀಯ ಬುದ್ಧಿಯು, ಜೀವನನ್ನು ಪರಮಾತ್ಮನಲ್ಲಿ ಲಯಿಸುವುದಕ್ಕಾಗಿ, ಕ್ಷೇತ್ರವೆನಿಸುವ ಶರೀರದ ಸ್ವರೂಪಜ್ಞಾನವನ್ನು ತಿಳಿದುಕೊಂಡು ಎಲ್ಲಾ ಜೀವಿಗಳಿಗೂ ಮೇಲಾದ ಪರಮಾತ್ಮನಲ್ಲಿ ಸೇರಿತು " ಎಂದನು. ಆಗ ಅರ್ಜುನನು, " ಕೃಷ್ಣಾ ! ಇಂತಹ ಉತ್ತಮಸಿದ್ಧಿಯನ್ನು ಹೊಂದಿದ ಆ ಬ್ರಾಹ್ಮಣದಂಪತಿಗಳು ಈಗೆಲ್ಲಿರುವರು ? ಅವರಿಬ್ಬರ ವಿಚಾರವನ್ನು ನನಗೆ ತಿಳಿಸಬೇಕು " ಎಂದು ಕೇಳಲು, ಆಗ ಕೃಷ್ಣನು " ಧನಂಜಯಾ ! ಅವರು ಬೇರೆಯಾರೂ ಅಲ್ಲ. ನನ್ನ ಮನಸ್ಸನ್ನೇ ಬ್ರಾಹ್ಮಣನನ್ನಾಗಿಯೂ, ನನ್ನ ಬುದ್ಧಿಯನ್ನೇ

ಬ್ರಾಹ್ಮಣಸ್ತ್ರೀಯನ್ನಾಗಿಯೂ ಹೇಳಿದೆನೇಹೊರತು ಬೇರೆಯಲ್ಲ. ಕ್ಷೇತ್ರಜ್ಞನೆಂದು ಹೇಳಲ್ಪಡುವವನೂ, ಅಂತರಾತ್ಮನೂ ನಾನೇ '' ಎಂದನು.

ಇದು ಮೂವತ್ತೈದನೆಯ ಅಧ್ಯಾಯವು.

(ಕೃಷ್ಣನು ಅರ್ಜುನನಿಗೆ ಪರಬ್ರಹ್ಮಸ್ವರೂಪವನ್ನೂ, ಆ ಬ್ರಹ್ಮಪ್ರಾಪ್ತಿಗೆ ಸಾಧನವನ್ನೂ ತಿಳಿಸುವುದಕ್ಕಾಗಿ ಗುರು ಶಿಷ್ಯಸಂವಾದವನ್ನು ಹೇಳಿದುದು.)

ಆಗ ಅರ್ಜುನನು ಕೃಷ್ಣನನ್ನು ಕುರಿತು “ವಾಸುದೇವಾ! ಉತ್ತಮವಾದ ಪರಬ್ರಹ್ಮಸ್ವರೂಪವನ್ನು ನೀನು ನನಗೆ ವಿವರಿಸಿ ತಿಳಿಸಬೇಕು. ನಿನ್ನ ಕೃಪೆಯಿಂದ ಅನೇಕಸೂಕ್ಷ್ಮವಿಷಯಗಳು ನನ್ನ ಬುದ್ಧಿಗೆ ಗೋಚರಿಸಿ ಆನಂದವುಂಟಾಗುತ್ತಿರುವುದು '' ಎಂದನು. ಆಗ ಕೃಷ್ಣನು “ಅರ್ಜುನಾ! ಇದೇ ವಿಷಯದಲ್ಲಿ ಗುರು ಶಿಷ್ಯಸಂವಾದರೂಪವಾದ ಒಂದು ಇತಿಹಾಸವನ್ನು ಉದಾಹರಿಸುವರು. ಮೋಕ್ಷಸಾಧಕವಾದ ಆ ವಿಚಾರವನ್ನೇ ನಿನಗೆ ತಿಳಿಸುವೆನು. ಮೇಧಾವಿಯಾದ ಶಿಷ್ಯನೊಬ್ಬನು, ಕಠಿನವ್ರತವುಳ್ಳ ತನ್ನ ಆಚಾರ್ಯನು ಕುಳಿತಿದ್ದ ಸಮಯದಲ್ಲಿ ಅವನನ್ನು ನೋಡಿ ‘ಆಚಾರ್ಯಾ! ಶ್ರೇಯಸ್ಸೆಂದರೆ ಯಾವುದು? ಮೋಕ್ಷದಲ್ಲಿ ಮುಖ್ಯೋದ್ದೇಶವುಳ್ಳ ನಾನು ನಿನ್ನ ಅನುಗ್ರಹದಿಂದ ಅದನ್ನು ತಿಳಿಯಬೇಕೆಂದಿರುವೆನು. ನಿನ್ನಲ್ಲಿ ತಲೆಬಗ್ಗಿ ಮರೆಹೊಕ್ಕು ಪ್ರಾರ್ಥಿಸುವೆನು. ನಾನು ಕೇಳುವ ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಹೇಳಬೇಕು’ ಎಂದನು. ಅದಕ್ಕಾ ಗುರುವು ‘ಆಗಲಿ! ನಿನಗೆ ಯಾವ ವಿಷಯದಲ್ಲಿ ಸಂಶಯವೋ ಅದನ್ನು ತಿಳಿಸು. ಸಮಾಧಾನವನ್ನು ಹೇಳುವೆನು’ ಎನಲು, ಶಿಷ್ಯನು ಬದ್ಧಾಂಜಲಿಯಾಗಿ ನಿಂತು ಪ್ರಶ್ನೆಮಾಡುವನು.

“ಆಚಾರ್ಯಾ! ನಾನು ಎಲ್ಲಿಂದ ಹುಟ್ಟಿದೆನು? ನೀನು ಎಲ್ಲಿಂದ ಜನಿಸಿದೆ? ಈ ತತ್ವವನ್ನು ನನಗೆ ತಿಳಿಸಬೇಕು. ಮತ್ತು ಚರಾಚರಗಳಾದ ಭೂತಗಳೆಲ್ಲವೂ ಯಾರಿಂದುಂಟಾದುವು? ಯಾರ ಬಲದಿಂದ

ಅವು ಬದುಕಿರುವುವು? ಅವುಗಳ ಪರಮಾಯುಷ್ಯವೆಷ್ಟು? ಅವು ಎಲ್ಲಿ ಲಯಿಸುವುವು? ಸತ್ಯವು ಯಾವುದು? ತಪಸ್ಸೆಂಬುದಾವುದು? ಸತ್ಪುರುಷರು ಆದರಿಸುವ ಗುಣಗಳಾವುವು? ಶ್ರೇಯಸ್ಸನ್ನು ಕೊಡತಕ್ಕ ಮಾರ್ಗಗಳಾವುವು? ಸುಖವೆಂಬುದೇನು? ದುಃಖವೆಂಬುದೇನು? ಓ ಬ್ರಹ್ಮರ್ಷೀ! ಈ ಪ್ರಶ್ನೆಗಳಿಗೆಲ್ಲ ನೀನು ಉತ್ತರವನ್ನು ಕೊಡಬೇಕು. ಈ ಸಂಶಯಗಳನ್ನು ನೀಗಿಸುವುದಕ್ಕೆ ನಿನ್ನನ್ನು ಬಿಟ್ಟರೆ ಬೇರೊಬ್ಬನೂ ಲಭಿಸಲಾರನು. ಓ ಧರ್ಮಜ್ಞನೇ! ನನಗೆ ಬಹಳ ಕುತೂಹಲವಿರುವುದರಿಂದ, ಧರ್ಮಾರ್ಥಮೋಕ್ಷಗಳಲ್ಲಿ ಬಹಳ ಕುಶಲನೆಂದು ಲೋಕಪ್ರಖ್ಯಾತಿಗೊಂಡ ನೀನು ಆ ಅಂಶವನ್ನು ನನಗೆ ತಿಳಿಸಬೇಕು. ಈ ಎಲ್ಲಾ ಸಂಶಯಗಳನ್ನೂ ನೀಗಿಸಬಲ್ಲವನು ನಿನ್ನಂತೆ ಬೇರೊಬ್ಬನಿಲ್ಲ. ಸಂಸಾರಕ್ಕೆ ಭಯಪಟ್ಟು ಮೋಕ್ಷಾರ್ಥಿಗಳಾಗಿರುವ ನಮಗೆ ನೀನೇ ಉದ್ಧಾರಕನು" ಎಂದನು.

ಓ ಪಾರ್ಥಾ! ಹೀಗೆ ತನ್ನಲ್ಲಿ ಮರೆಹೊಕ್ಕು ಪ್ರಾರ್ಥಿಸುತ್ತಿರುವ ಆ ಶಿಷ್ಯನ ಗುಣಗಳನ್ನೂ, ವಿನಯವನ್ನೂ, ಗುರುಶುಶ್ರೂಷೆಯನ್ನೂ ನೋಡಿ ಸಂತೋಷಿಸಿ, ಧೀಮಂತನೂ, ದೃಢವ್ರತನೂ ಆದ ಆ ಗುರುವು, ಜಿತೇಂದ್ರಿಯನೂ, ಬ್ರಹ್ಮಚಾರಿಯೂ ಪ್ರಯತ್ನಪರನೂ, ನೆಳಲಿನಂತೆ ತನ್ನನ್ನು ಅನುವರ್ತಿಸತಕ್ಕವನೂ ಆದ ಆ ಶಿಷ್ಯನಿಗೆ ಅವನು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಕ್ರಮವಾಗಿ ಉತ್ತರವನ್ನು ಹೇಳತೊಡಗಿದನು. "ಓ ಶಿಷ್ಯಾ! ನೀನು ಕೇಳತಕ್ಕ ಈ ಧರ್ಮರಹಸ್ಯವು ಅನೇಕ ಪುರಾತನಮಹರ್ಷಿಳಿಗೂ ಆದರಣೀಯವಾದುದು. ವೇದವಿದ್ಯೆಯಿಂದ ಲಬ್ಧವಾದುದು. ತತ್ವಾರ್ಥವಿಚಾರವುಳ್ಳದು. ಈ ಧರ್ಮತತ್ವವನ್ನು ಕುರಿತು "ಬ್ರಹ್ಮಜ್ಞಾನವೇ ಉತ್ತಮವಾದ ಶ್ರೇಯಸ್ಸು! ಸನ್ಯಾಸವೇ ಉತ್ತಮವಾದ ತಪಸ್ಸು!" ಎಂದು ಬ್ರಹ್ಮದೇವನೇ ಹೇಳಿದಂತೆ ನಮಗೆ ತಿಳಿದಿದೆ. ಯಾವನು ಎಂದಿಗೂ ನಾಶವಿಲ್ಲದ ಜ್ಞಾನತತ್ವವನ್ನೂ, ಎಲ್ಲಾ ಪ್ರಾಣಿಗಳಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನೂ, ನಿಶ್ಚಯವಾಗಿ ತಿಳಿಯಬಲ್ಲನೋ, ಅವನು ಸಮಸ್ತ ಲೋಕಗಳಲ್ಲಿಯೂ ತನ್ನ ಇಷ್ಟಬಂದಂತೆ ಯಥೇಚ್ಛವಾಗಿ ವಿಹರಿಸಬಲ್ಲನೆಂದು ಹೇಳಲ್ಪಟ್ಟಿದೆ. ಯಾವನು ಜಿದಚಿತ್ತುಗಳ

ಸಂಯೋಗ ವಿಯೋಗಗಳನ್ನೂ, ಜೀವೇಶ್ವರರಿಗಿರುವ ಭೇದಾಭೇದಗಳನ್ನೂ ತಿಳಿಯಬಲ್ಲನೋ, ಅವನು ಸಮಸ್ತ ದುಃಖಗಳಿಂದ ಮುಕ್ತನಾಗುವನು. ಯಾವನು ಯಾವುದನ್ನೂ ಆಶಿಸದೆ, ಯಾವುದರಲ್ಲಿಯೂ ಅಭಿಮಾನವನ್ನಿಡದೆ, ನಿರಪೇಕ್ಷನಾಗಿರುವನೋ, ಅವನು ಈ ಲೋಕದಲ್ಲಿರುವಾಗಲೇ ಬ್ರಹ್ಮತ್ವವನ್ನು ಹೊಂದಿದವನಾಗುವನು. ಪ್ರಕೃತಿಗುಣಗಳ ತತ್ವವನ್ನೂ, ಎಲ್ಲಾ ಪ್ರಾಣಿಗಳ ಮೂಲಕಾರಣವನ್ನೂ ತಿಳಿದು 'ನಾನು ನನ್ನ'ದೆಂಬ ಭಾವವನ್ನು ಬಿಟ್ಟವನು ಮುಕ್ತಿಯನ್ನು ಹೊಂದುವನು. ಇದರಲ್ಲಿ ಸಂದೇಹವಿಲ್ಲ. ಜೀವನಿಗೆ ಸಂಸಾರವೆಂಬ ಒಂದು ಮಹಾವೃಕ್ಷವುಂಟು. ಆ ವೃಕ್ಷವು ಅವ್ಯಕ್ತವೆಂಬ ಬೀಜದಿಂದ ಹುಟ್ಟಿದುದು. ಬುದ್ಧಿಯೇ ಅದಕ್ಕೆ ಸ್ಕಂಧವು! ಅಹಂಕಾರವೆಂಬುದೇ ಅದರ ಕೊಂಬೆಗಳು! ಇಂದ್ರಿಯಗಳೇ ಅಂಕುರಗಳು! ಮತ್ತು ಅದರ ಪೊಟ್ಟರೆಗಳು! ಆಕಾಶ ಮೊದಲಾದ ಮಹಾಭೂತಗಳೇ ಹೂವಿನ ಮೊಗ್ಗೆಗಳು. ಸ್ಥೂಲಕಾರ್ಯಗಳೇ ಅದರ ಉಪಶಾಖೆಗಳು! ಮನೋರಥಗಳೇ ಯಾವಾಗಲೂ ಹುಟ್ಟಿ ಬೀಳುತ್ತಿರುವ ಎಲೆಗಳು! ಕರ್ಮಗಳೇ ಅದರಲ್ಲಿ ಯಾವಾಗಲೂ ಬಿಡುತ್ತಿರುವ ಪುಷ್ಪಗಳು! ಶುಭಾಶುಭಗಳೇ ಅದರ ಫಲಗಳು! ಎಲ್ಲಾ ಪ್ರಾಣಿಗಳ ಜೀವನಕ್ಕೂ ಕಾರಣವಾದ ಮತ್ತು ಸನಾತನವಾದ ಆ ವೃಕ್ಷಕ್ಕೆ ಬ್ರಹ್ಮವೇ ಮೂಲಬೀಜವು! ಈ ಅಂಶವನ್ನು ತಿಳಿದು, ಉತ್ತಮಜ್ಞಾನವೆಂಬ ಕತ್ತಿಯಿಂದ ಆ ಮರವನ್ನು ಕಡಿದರೆ, ಅಮರತ್ವವನ್ನು ಹೊಂದಿ, ಜನನಮರಣಗಳನ್ನು ಜಯಿಸುವರು. ಭೂತಭವಿಷ್ಯದ್ವರ್ತಮಾನಗಳೆನಿಸಿದ ಭೂಮಿ ಮೊದಲಾದವುಗಳ ಮತ್ತು ಧರ್ಮಾರ್ಥಕಾಮಗಳ ನಿಶ್ಚಯವನ್ನು ತಿಳಿಸತಕ್ಕುದಾಗಿಯೂ, ಸಿದ್ಧಸಮೂಹದಿಂದ ತಿಳಿಯಲ್ಪಟ್ಟುದಾಗಿಯೂ, ಪೂರ್ವಕಲ್ಪದಲ್ಲಿದ್ದುದಾಗಿಯೂ, ಸನಾತನವೂ, ಉತ್ತಮವೂ ಆದ ಸ್ಥಾನವನ್ನು ನಿನಗೆ ಈಗ ಹೇಳುವೆನು. ಈ ಲೋಕದಲ್ಲಿ ವಿದ್ವಾಂಸರು ಅದನ್ನು ತಿಳಿದೇ ಸಿದ್ಧಿಯನ್ನು ಹೊಂದುವರು. ಪೂರ್ವದಲ್ಲಿ ಮಹರ್ಷಿಗಳು ಅನ್ಯೋನ್ಯವಾಗಿ ಮೋಕ್ಷಧರ್ಮವನ್ನು ವಿಚಾರಿಸಿ ತಿಳಿಯಬೇಕೆಂಬ ಉದ್ದೇಶದಿಂದ, ಎಲ್ಲಾ ಮಾರ್ಗಗಳನ್ನೂ ಹುಡುಕಿ, ಎಲ್ಲಾ ಕರ್ಮಗಳನ್ನೂ ಮಾಡಿ ಬೇಸರಗೊಂಡು, ಕೊನೆಗೆ ಬ್ರಹ್ಮಸಭೆಗೆ ಬಂದರು. ಪ್ರಜಾಪತಿ,

ಭರದ್ವಾಜನು, ಗೌತಮನು, ಭಾರ್ಗವನು, ವಸಿಷ್ಠನು, ಕಶ್ಯಪನು, ವಿಶ್ವಾಮಿತ್ರನು, ಅತ್ರಿಮುನಿ, ಈ ಬ್ರಹ್ಮರ್ಷಿಗಳೆಲ್ಲರೂ ತಮ್ಮೊಳಗೆ ಕಲೆತು ಆಲೋಚಿಸಿ, ಕೊನೆಗೆ ತಮ್ಮಲ್ಲಿ ವಯಸ್ಸು ಕಳೆದು ಮುದುಕನಾದ ಅಂಗೀರಸನೆಂಬ ಋಷಿಯನ್ನು ಮುಂದಿಟ್ಟುಕೊಂಡು ಬ್ರಹ್ಮದೇವನನ್ನು ಕಂಡರು. ಆಗ ಸಭೆಯಲ್ಲಿ ಸುಖಾಸೀನನಾಗಿದ್ದ ಆ ಬ್ರಹ್ಮನಿಗೆ ಮಹರ್ಷಿಗಳೆಲ್ಲರೂ ನಮಸ್ಕರಿಸಿ, ವಿನಯದಿಂದ ಮೋಕ್ಷಧರ್ಮವಿಷಯವಾಗಿ ಈ ಮುಂದೆ ಹೇಳುವ ಪ್ರಶ್ನೆಗಳನ್ನು ಕೇಳತೊಡಗಿದರು. “ದೇವಾ! ಯಾವ ರೀತಿಯ ಕರ್ಮವನ್ನು ಮಾಡಿದರೆ ನಮಗೆ ಶುಭಕರವಾಗುವುದು? ಪಾಪದಿಂದ ಬಿಡುಗಡೆಹೊಂದುವ ಮಾರ್ಗವೇನು? ನಮಗೆ ಮೋಕ್ಷಸಾಧನವಾದ ದಾರಿಯಾವುದು? ಸತ್ಯವಾವುದು? ಪಾಪವಾವುದು? ಮನುಷ್ಯರು ಹೊಂದಬಹುದಾದ ದಕ್ಷಿಣೋತ್ತರಗಳೆಂಬ ಎರಡುಬಗೆಯ ಕರ್ಮಮಾರ್ಗಗಳಾವುವು? ಪ್ರಾಣಿಗಳಿಗೆ ನರಕವೂ, ಮೋಕ್ಷವೂ ಹೇಗೆ ಬರುವುವು? ಜನನಮರಣಗಳೆಂದರೇನು?” ಎಂದು ಕೇಳಿದರು. ಅದಕ್ಕಾ ಬ್ರಹ್ಮನು ಅವರಿಗೆ ಹೇಳಿದ ಉತ್ತರವನ್ನೇ ನಿನಗೆ ಹೇಳುವೆನು ಕೇಳು. ಬ್ರಹ್ಮನು ಆ ಋಷಿಗಳನ್ನು ಕುರಿತು ‘ಎಲೈ ಮಹರ್ಷಿಗಳೇ! ಅವ್ಯಕ್ತ ಮೊದಲಾದ ಭೂತಗಳೂ, ಸ್ಥಾವರಗಳೂ, ಜಂಗಮಗಳೂ ಸತ್ಯವೆನಿಸಿದ ಆ ಬ್ರಹ್ಮನಿಂದಲೇ ಉಂಟಾದುವು. ಅವು ಕರ್ಮದಿಂದಲೇ ಜೀವಿಸಿರುವುವು. ಜೀವನವೆಂಬುದು ಆ ಕರ್ಮಾನುಭವವೇ! ಹಿಂದೆ ಹೇಳಿದ ಚರಾಚರ ಪ್ರಪಂಚವೆಲ್ಲಾ ಕೊನೆಗೆ ಆ ತನ್ನ ಕಾರಣದಲ್ಲಿ ಲಯಿಸಿ, ಅಲ್ಲಿಯೇ ಆ ಕಾರಣದೊಡನೆ ಅಡಗಿರುವುದು. ಸತ್ಯವೂ, ಶಾಶ್ವತವೂ ಆದ ಆತ್ಮವೇ ಗುಣಗಳೊಡನೆ ಸೇರಿದುದಾಗಿ ಐದು ಲಕ್ಷಣಗಳಿಂದ ಕಾಣುತ್ತಿರುವುದು. ಈಶ್ವರನು ಸತ್ಯವು, ಧರ್ಮವು ಸತ್ಯವು, ಜೀವನು ಸತ್ಯವು, ಸತ್ಯದಿಂದುಂಟಾಗತಕ್ಕ ಆಕಾಶಾದಿ ಭೂತಗಳೂ ಸತ್ಯವು. ಭೂತಮಯವಾದ ಪ್ರಪಂಚವೂ ಸತ್ಯವು. ಆದಕಾರಣದಿಂದ ಬ್ರಹ್ಮಜ್ಞರು ಯಾವಾಗಲೂ ಯೋಗವನ್ನೇ ಮುಖ್ಯಗತಿಯಾಗಿ ಹಿಡಿದು, ಕೋಪತಾಪಗಳನ್ನು ಬಿಟ್ಟು, ಜಿತೇಂದ್ರಿಯರಾಗಿ, ಧರ್ಮಕ್ಕೆ ಸೇತುವೆಯಂತಿರುವ ಆ ಸತ್ಯವನ್ನೇ ಆಶ್ರಯಿಸಿರುವರು. ಅನ್ಯೋನ್ಯವಾಗಿ ಒಬ್ಬರಿಗೊಬ್ಬರಿಗೆ ಅಡಗಿದವರೂ, ವಿದ್ಯಾವಂತರೂ, ಧರ್ಮಕ್ಕೆ

ಆಧಾರಕರೂ, ಶಾಶ್ವತರೂ, ಲೋಕವನ್ನು ಪಡೆಯತಕ್ಕವರೂ ಆದ ಆ ಮಹಾತ್ಮರನ್ನು ಕುರಿತು ನಾನು ಹೇಳುವೆನು. ವಿದ್ವಾಂಸರು ಧರ್ಮಾರ್ಥ ಕಾಮಗಳಿಗೆ ಸಾಧಕವಾದ ನಾಲ್ಕು ವಿದ್ಯೆಗಳನ್ನೂ, ನಾಲ್ಕು ವರ್ಣಗಳ ನ್ನೂ, ನಾಲ್ಕು ಆಶ್ರಮಗಳನ್ನೂ, ನಾಲ್ಕು ಪಾದಗಳುಳ್ಳ ಧರ್ಮ ವನ್ನೂ ನಿತ್ಯವೆಂದು ಹೇಳುವರು. ಎಲೈ ಬ್ರಾಹ್ಮಣರೇ! ಶುಭವನ್ನೂ, ಕ್ಷೇಮವನ್ನೂ ಕೊಡತಕ್ಕುದಾಗಿ, ಬ್ರಹ್ಮಭಾವವನ್ನು ಹೊಂದುವುವು ದಕ್ಕೆ ಅವಶ್ಯಕಾರಣವೂ, ಪೂರ್ವದಿಂದಲೂ ವಿದ್ವಾಂಸರಿಂದ ಅನುಸರಿ ಸಲ್ಪಟ್ಟುದೂ ಆದ ಮಾರ್ಗವನ್ನು ನಿಮಗೆ ನಾನು ಹೇಳುವೆನು. ಬೇರೊ ಬ್ಬರಿಂದ ತಿಳಿಯಲಸಾಧ್ಯವಾದ ಪರಮಪದವನ್ನು ಕುರಿತ ಮಾರ್ಗವನ್ನು ನೀವು ನನ್ನಿಂದ ಪೂರ್ಣವಾಗಿ ತಿಳಿದುಕೊಳ್ಳಬಹುದು. ಈ ಲೋಕದಲ್ಲಿ ಬ್ರಹ್ಮಚರ್ಯವನ್ನು ಮೊದಲನೆಯ ಆಶ್ರಮವನ್ನಾಗಿ ಹೇಳುವರು. ಗೃಹ ಸ್ಥಾಶ್ರಮವು ಎರಡನೆಯದು. ವಾನಪ್ರಸ್ಥವು ಅದಕ್ಕೆ ಮೇಲಿನ ಉತ್ತಮ ವಾದ ಆಶ್ರಮವು. ಸನ್ಯಾಸಾಶ್ರಮವು ಅದಕ್ಕಿಂತಲೂ ಮೇಲೆನಿಸಿದ ಉತ್ತಮ ವಾದ ಸ್ಥಾನವು. ಈ ಸನ್ಯಾಸದಲ್ಲಿ ಆತ್ಮಸಾಕ್ಷಾತ್ಕಾರವುಂಟಾಗದವರಿಗೆ ತೇಜಸ್ಸು, ಆಕಾಶ, ಸೂರ್ಯ, ವಾಯು, ಇಂದ್ರ, ಪ್ರಜಾಪತಿ, ಇವರನ್ನು ತಿಳಿಯಲು ಸಾಧ್ಯವಿಲ್ಲ. ಮೊದಲು ಅದಕ್ಕೆ ಉಪಾಯವನ್ನು ಹೇಳು ವೆನು. ಅದನ್ನು ತಿಳಿದುಕೊಳ್ಳಿರಿ. ದ್ವಿಜರೆನಿಸಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರೂ ವಾನಪ್ರಸ್ಥದಲ್ಲಿ ಅರಣ್ಯದಲ್ಲಿ ವಾಸ ಮಾಡುತ್ತ, ಹಣ್ಣುಗಡ್ಡೆಗಳನ್ನೂ, ವಾಯುವನ್ನೂ ಭಕ್ಷಿಸುತ್ತ, ಜೀವ ಧಾರಣೆಯನ್ನು ಮಾಡಬೇಕೆಂಬುದು ವಿಧಿ. ಗೃಹಸ್ಥಾಶ್ರಮವೆಂಬುದು ಎಲ್ಲಾ ವರ್ಣದವರಿಗೂ ಶ್ರೇಯಸ್ಕರವಾದುದು. ವಿದ್ವಾಂಸರು ಧರ್ಮ ವೆಂಬುದು ಶ್ರದ್ಧೆಯನ್ನೇ ಮುಖ್ಯಲಕ್ಷಣವಾಗಿ ಉಳ್ಳುದೆಂದು ಹೇಳುವರು. ನೈಷ್ಠಿಕಬ್ರಹ್ಮಚಾರಿಯಾಗಿದ್ದರೂ, ಸನ್ಯಾಸಿಯಾಗಿದ್ದರೂ, ವೈರಾಗ್ಯದಿಂದಿ ದ್ದರೆ ಬ್ರಹ್ಮವನ್ನು ಕಾಣಬಹುದು. ಧೀಮಂತರಾದ ವಿದ್ವಾಂಸರಿಂದ ಕರ್ಮಲಬ್ಧವಾಗಿ ಧರ್ಮಕ್ಕೆ ಆಧಾರಗಳೆನಿಸಿದ ದೇವಯಾನವೆಂಬ ಮಾರ್ಗ ವನ್ನು ಹೊಂದುವುದಕ್ಕೆ ಬೇಕಾದ ಉಪಾಯಗಳನ್ನು ಈಗ ತಿಳಿಸಿದೆನು. ದೃಢವ್ರತವುಳ್ಳ ಯಾವನು ಇವುಗಳಲ್ಲಿ ಒಂದು ಧರ್ಮವನ್ನು ಮುಖ್ಯ

ವಾಗಿ ಹಿಡಿದು, ಅನುಷ್ಠಿಸುವನೋ ಅವನು ಸ್ವಲ್ಪಕಾಲದಲ್ಲಿಯೇ ಪ್ರಾಣಿಗಳ ಉತ್ಪತ್ತಿವಿನಾಶಗಳನ್ನು ಕಾಣಬಲ್ಲನು. ಎಲೈ ಮಹರ್ಷಿಗಳೇ! ಇನ್ನು ಬುದ್ಧಿಗೆ ವಿಷಯಗಳಾದ ಮತ್ತು ಬೇರೆಬೇರೆ ವಿಭಾಗಗಳುಳ್ಳ ತತ್ವಗಳನ್ನು ನಿಮಗೆ ತಿಳಿಸುವೆನು. ಮಹತ್ತು, ಅವ್ಯಕ್ತ, ಅಹಂಕಾರ, ಹನ್ನೊಂದು ಇಂದ್ರಿಯಗಳು, ಐದು ಮಹಾಭೂತಗಳು, ಐದು ಭೂತಗುಣಗಳು, (ಎಂದರೆ ಶಬ್ದ ಮೊದಲಾದ ವಿಶೇಷಗುಣಗಳು) ಇವಿಷ್ಟೂ ಸೇರಿ ಚತುರ್ವಿಂಶತಿತತ್ವಗಳೆಂದು ವೇದಗಳಲ್ಲಿ ಹೇಳಲ್ಪಟ್ಟಿವೆ. ಅವುಗಳನ್ನೇ ನಿಮಗೆ ತಿಳಿಸಿದೆನು. ಈ ಎಲ್ಲಾ ತತ್ವಗಳ ಉತ್ಪತ್ತಿವಿನಾಶಗಳನ್ನು ತಿಳಿದವನಿಗೆ, ಯಾವ ಭೂತಗಳಲ್ಲಿಯೂ ಮೋಹವೆಂಬುದು ಹುಟ್ಟಲಾರದು. ಯಾವನು ಎಲ್ಲಾ ತತ್ವಗಳನ್ನೂ, ಎಲ್ಲಾ ಗುಣಗಳನ್ನೂ, ಎಲ್ಲಾ ದೇವತೆಗಳನ್ನೂ ಯಥಾಸ್ಥಿತವಾಗಿ ತಿಳಿಯುವನೋ, ಅವನು ಸಮಸ್ತ ಪಾಪಗಳನ್ನೂ ನೀಗಿ, ಬಂಧನದಿಂದ ಮುಕ್ತನಾಗಿ ಶುದ್ಧವಾದ ಪುಣ್ಯಲೋಕಗಳನ್ನೆಲ್ಲ ಪಡೆಯುವನು.

ಇದು ಮೂವತ್ತಾರನೆಯ ಅಧ್ಯಾಯವು.

---

## ಬ್ರಹ್ಮದೇವನು ಕಶ್ಯಪಾದಿಗಳಿಗೆ ತಮೋಗುಣದ ಕಾರ್ಯಗಳನ್ನು ಹೇಳಿದುದು.

ಎಲೈ ಮಹರ್ಷಿಗಳೇ! ಮೇಲ್ಕಂಡ ಸತ್ವ ರಜಸ್ತಮಸ್ಸುಗಳೆಂಬ ಮೂರು ಗುಣಗಳನ್ನೂ ಸಮಾನವಾಗಿ ಉಳ್ಳುದು ಅವ್ಯಕ್ತವೆಂದು ಹೇಳಲ್ಪಡುವುದು. ಆ ಅವ್ಯಕ್ತವು ಎಲ್ಲೆಲ್ಲಿಯೂ ವ್ಯಾಪಿಸಿ, ನಾಶರಹಿತವಾಗಿ, ನಿರ್ವ್ಯಾಪಾರವಾಗಿರುವುದು. ಆ ಅವ್ಯಕ್ತವೇ ಬದಲಾವಣೆಯನ್ನು ಹೊಂದಿ ಪಂಚಭೂತಾತ್ಮಕವೂ, ನವದ್ವಾರವುಳ್ಳುದೂ ಆದ ಶರೀರವಾಗುವುದು. ಹನ್ನೊಂದು ಇಂದ್ರಿಯಗಳುಳ್ಳುದಾಗಿ, ಮನಸ್ಸಿನಿಂದ ವಿಷಯಗಳನ್ನರಿಯತಕ್ಕುದಾಗಿ, ಬುದ್ಧಿಯನ್ನೇ ತನಗೆ ನಿಯಾಮಕನನ್ನಾಗಿ ಹೊಂದಿರುವ ಈ ಶರೀರವು, ಇಂದ್ರಿಯಗಳಲ್ಲಿ ಪ್ರಧಾನವೂ, ಮತ್ತು ಹನ್ನೊಂದನೆಯದೂ ಆದ ಮನಸ್ಸಿನಿಂದಲೇ ಏರ್ಪಡುವುದು. ಈ ಮನಸ್ಸೆಂಬ

ನದಿಯಲ್ಲಿ ಹಿಂಸಾಸಂಬಂಧವಿಲ್ಲದ ಧರ್ಮಪ್ರವೃತ್ತಿ, ಹಿಂಸಾಪ್ರಧಾನ ಧರ್ಮದಲ್ಲಿ ಪ್ರವೃತ್ತಿ, ಹಿಂಸಾಮಿಶ್ರಣವಾದ ಧರ್ಮದಲ್ಲಿ ಪ್ರವೃತ್ತಿ, ಎಂಬ ಮೂರು ಪ್ರವಾಹಶಾಖೆಗಳುಂಟು. ಈ ಪ್ರವಾಹಶಾಖೆಗಳನ್ನೇ ಮೇಲೆ ಮೇಲೆ ವೃದ್ಧಿಗೊಳಿಸತಕ್ಕ ತ್ರೈಗುಣ್ಯವಾಸನೆಯೆಂಬ ಮೂರು ಬಗೆಯ ಕಾಲುವೆಗಳು ಯಾವಾಗಲೂ ಪ್ರವಹಿಸುತ್ತಿರುವುವು. ಸತ್ವ, ರಜಸ್ಸು, ತಮಸ್ಸು, ಎಂಬಿವು ಮೂರೂ ಗುಣಗಳೆಂದು ಕರೆಯಲ್ಪಡುವುವು. ಈ ಮೂರುಗುಣಗಳೂ ಒಂದರೊಡನೊಂದು ಕಲೆತಿರುವುವು. ಒಂದಕ್ಕೊಂದು ಪೋಷಕವಾಗಿರುವುವು. ಒಂದಕ್ಕೊಂದು ಆಧಾರವಾಗಿರುವುವು. ಒಂದನ್ನೊಂದು ಅನುಸರಿಸುವುವು. ಒಂದರೊಡನೊಂದು ಮಿಶ್ರವಾಗಿಯೇ ಇರುವುವು. ಪಂಚಮಹಾಭೂತಗಳೂ ಈ ಮೂರು ಗುಣಗಳಿಂದಲೇ ಏರ್ಪಟ್ಟಿವೆ. ಇವುಗಳಲ್ಲಿ ಸತ್ವವು ಅಧಿಕವಾದಾಗ ತಮಸ್ಸನ್ನು ಅಡಗಿಸುವುದು. ರಜಸ್ಸು ಅಧಿಕವಾದಾಗ ಸತ್ವವನ್ನು ನಾಶಮಾಡುವುದು. ಸತ್ವವು ಹೆಚ್ಚಿದಾಗ ರಜಸ್ಸು ಅಡಗಿಹೋಗುವುದು. ತಮಸ್ಸು ಹೆಚ್ಚಿದಾಗ ಸತ್ವವನ್ನು ಅಡಗಿಸುವುದು. ಯಾವಾಗ ತಮಸ್ಸು ತಗ್ಗುವುದೋ ಆಗ ರಜಸ್ಸು ತಲೆಯೆತ್ತುವುದು. ರಜಸ್ಸು ತಗ್ಗಿದಾಗ ಸತ್ವವು ಮೇಲೇರುವುದು.

ಓ ಮಹರ್ಷಿಗಳೇ! ತಮಸ್ಸನ್ನು ಅಂಧಕಾರವನ್ನಾಗಿಯೂ, ಬೇರೆ ಎರಡು ಗುಣಗಳೊಡನೆ ಸೇರಿದ್ದಾಗ ತ್ರಿಗುಣಾತ್ಮಕವಾಗಿ ಅದೇ ಮೋಹವೆಂಬ ಹೆಸರುಳ್ಳದನ್ನಾಗಿಯೂ ತಿಳಿಯಬೇಕು. ಇದು ಅಧರ್ಮಲಕ್ಷಣವಾಗಿ ಪಾಪಕರ್ಮಗಳಲ್ಲಿಯೇ ಪ್ರವೃತ್ತಿಯನ್ನುಂಟುಮಾಡತಕ್ಕುದು. ತಮಸ್ಸಿನ ರೂಪವು ಮಿಶ್ರಿತವಾಗಿಯೂ ಕಾಣುವುದು. ರಜಸ್ಸನ್ನು ಪ್ರಕೃತಿಸ್ವರೂಪವೆಂದು ಹೇಳುವರು. ಅದು ಎಲ್ಲಾ ಪ್ರಾಣಿಗಳಲ್ಲಿಯೂ ಪ್ರವೃತ್ತಿಯನ್ನೇ ಲಕ್ಷಣವಾಗಿ ಉಳ್ಳದು. ಪ್ರಕಾಶ, ಸೌಮ್ಯತೆ, ಶ್ರದ್ಧೆ, ಇವು ಸತ್ವಗುಣದ ಲಕ್ಷಣಗಳು. ಈ ಮೂರು ಗುಣಗಳ ಕಾರ್ಯಸ್ವರೂಪಗಳನ್ನೂ ಅವುಗಳ ಕಾರಣಗಳೊಡನೆ ಸಂಗ್ರಹವಾಗಿಯೂ, ವಿಸ್ತಾರವಾಗಿಯೂ ಹೇಳುವೆನು ಕೇಳಿರಿ! ಮೋಹ, ಅಜ್ಞಾನ, ತ್ಯಾಗಮಾಡದಿರುವುದು, ಕರ್ಮಗಳನ್ನು ನಿಶ್ಚಯಿಸದಿರುವುದು, ನಿದ್ರೆ, ಗರ್ವ, ಭಯ,

ಆಶೆ, ಶೋಕ, ಪುಣ್ಯಕಾರ್ಯವನ್ನು ನಿಂದಿಸುವುದು, ವಿಸ್ಮೃತಿ, ಸದ್ಬುದ್ಧಿಯಿಲ್ಲದಿರುವುದು, ನಾಸ್ತಿಕ್ಯ, ಕೆಟ್ಟ ನಡತೆ, ಯುಕ್ತಾಯುಕ್ತಗಳನ್ನರಿಯದಿರುವುದು, ಇಂದ್ರಿಯಗಳ ತತ್ವಗಳನ್ನರಿಯದಿರುವುದು, ಕೀಳುಜಾತಿಯ ವೃತ್ತಿಯನ್ನೂ, ಗುಣಗಳನ್ನೂ ಕೈಕೊಳ್ಳುವುದು, ಒಂದು ಕೆಲಸವನ್ನು ಮಾಡಲಾರದೆ ಅದನ್ನು ಮಾಡುವಂತೆ ಗರ್ವಪಡುವುದು, ಅಜ್ಞಾನವನ್ನೇ ಜ್ಞಾನವನ್ನಾಗಿ ತಿಳಿಯುವುದು, ಮೈತ್ರಿಯಿಲ್ಲದಿರುವುದು, ದುರಾಲೋಚನೆ, ಅಶ್ರದ್ಧೆ, ಮೌಢ್ಯ, ಋಜುತ್ವವಿಲ್ಲದಿರುವುದು, ಒಳ್ಳೆಯ ಜ್ಞಾನವಿಲ್ಲದಿರುವುದು, ಪಾಪಕಾರ್ಯಪ್ರವೃತ್ತಿ, ಸೋಮಾರಿತನ ಮುಂತಾದುವುಗಳಿಂದ ಕಾರ್ಯೋತ್ಸಾಹವಿಲ್ಲದಿರುವುದು, ದೈವಭಕ್ತಿಯಿಲ್ಲದಿರುವುದು, ಇಂದ್ರಿಯಗಳನ್ನು ಜಯಿಸದಿರುವುದು, ನೀಚಕಾರ್ಯಪ್ರವೃತ್ತಿ, ಇವೆಲ್ಲಾ ತಮೋಗುಣದಿಂದುಂಟಾಗತಕ್ಕ ಕಾರ್ಯಗಳೆಂದು ಹೇಳುವರು. ಇದರಂತೆಯೇ ಇನ್ನೂ ನಿಷಿದ್ಧವಾದ ಮನೋಭಾವಗಳೆಲ್ಲ ತಮೋಗುಣಕಾರ್ಯಗಳೇ! ಯಾವಾಗಲೂ ಪರನಿಂದೆ, ದೇವಬ್ರಾಹ್ಮಣರಲ್ಲಿ ವಿರೋಧಬುದ್ಧಿ, ಮದ, ಮೋಹ, ಮಾತ್ಸರ್ಯ, ತಾಳ್ಮೆಯಿಲ್ಲದಿರುವುದು, ಕೋಪ, ವ್ಯರ್ಥಕಾರ್ಯಾರಂಭಗಳು, ವ್ಯರ್ಥವಾದ ದಾನಗಳು, ವ್ಯರ್ಥವಾದ ಭೋಜನಾದಿಗಳು, ಹೆಚ್ಚು ಮಾತಾಡುವುದು, ಅಸೂಯೆ, ಅಶ್ರದ್ಧೆ, ಇವೆಲ್ಲಾ ತಮೋಗುಣದ ಕಾರ್ಯಗಳೇ! ಲೋಕದಲ್ಲಿ ಇಂತಹ ಇನ್ನೂ ಬೇರೆಬೇರೆ ಪಾಪಕಾರ್ಯಗಳಲ್ಲಿ ಪ್ರವರ್ತಿಸುತ್ತ, ಶಾಸ್ತ್ರಮರ್ಯಾದೆಗಳನ್ನು ಮೀರಿ ನಡೆಯತಕ್ಕವರೆಲ್ಲರನ್ನೂ ತಾಮಸಜನಗಳೆಂದೇ ತಿಳಿಯಬೇಕು. ಇಂತಹ ತಾಮಸಗುಣವುಳ್ಳವರು ಹುಟ್ಟುವ ಸ್ಥಾನಗಳನ್ನೂ ತಿಳಿಸುವೆನು ಕೇಳಿರಿ! ಇಂತಹ ಪಾಪಕಾರ್ಯವನ್ನು ಮಾಡಿ, ದೇಹಾವಸಾನದಲ್ಲಿ ಅವಾಕ್, ತಿರ್ಯಕ್ ಮುಂತಾದ ಬೇರೆಬೇರೆ ನರಕಗಳಲ್ಲಿ ಬಿದ್ದಮೇಲೆ, ತಿರುಗಿ ಭೂಮಿಯಲ್ಲಿ ಸ್ಥಾವರಗಳಾಗಿಯೂ, ಪಶುಗಳಾಗಿಯೂ, ವಾಹನಗಳಾಗಿಯೂ, ಮಾಂಸಾಹಾರಿ ಜಂತುಗಳಾಗಿಯೂ, ಜನ್ಮವನ್ನೆತ್ತುವರು. ಸರ್ಪಗಳು, ಕ್ರಿಮಿಕೀಟಗಳು, ಪಕ್ಷಿಗಳು, ಜಲಚರಪಕ್ಷಿಗಳು, ಚತುಷ್ಪಾದಗಳು, ಹುಚ್ಚರು, ಕಿವುಡರು, ಮೂಗರು, ಕೆಟ್ಟರೋಗವುಳ್ಳವರು ಇವರೆಲ್ಲರೂ ತಾಮಸಜನ್ಮವುಳ್ಳವರೇ. ಪಾಪಕಾರ್ಯ

ಪ್ರವೃತ್ತರಾದ ಇವರು ತಮ್ಮತಮ್ಮ ಕೆಟ್ಟನಡತೆಗಳಿಗೆ ಗುರುತಾಗಿ, ತಮಸ್ಸಿನಲ್ಲಿ ಮುಳುಗಿ ಅಂತಹ ಜನ್ಮಗಳನ್ನೆತ್ತುವರು. ಹೀಗೆ ಅಜ್ಞಾನದಲ್ಲಿ ಮುಳುಗಿ ತಾಮಸರೆನಿಸಿಕೊಂಡ ಇಂತವರೆಲ್ಲರೂ ಅವಾಕ್ಸ್ರೋತಸ್ಸುಗಳೆಂದು (ಹೀನಗತಿಯನ್ನು ಹೊಂದಿಸತಕ್ಕ ಚಿತ್ತವೃತ್ತಿಯುಳ್ಳವರೆಂದು) ಕರೆಯಲ್ಪಡುವರು. ಎಲೈ ದೇವತೆಗಳಿರಾ! ಇಂತವರಿಗೆ ಮುಂದೆ ಸದ್ಗತಿಯೇನೂ ಇಲ್ಲವೆ? ಅವರು ಹೀಗೆಂಯೇ ಪಾಪಯೋನಿಗಳಲ್ಲಿಯೇ ನರಳುತ್ತಿರಬೇಕೆ? ಎಂದು ನೀವು ಶಂಕಿಸಬಾರದು! ಅವರು ಪುಣ್ಯವನ್ನು ಸಂಪಾದಿಸುವುದಕ್ಕೂ, ಉತ್ತಮಗತಿಯನ್ನು ಹೊಂದುವುದಕ್ಕೂ, ಪುಣ್ಯಲೋಕಗಳಲ್ಲಿ ಸುಖಿಸುವುದಕ್ಕೂ ಮಾರ್ಗವೇನೆಂಬುದನ್ನು ತಿಳಿಸುವೆನು ಕೇಳಿರಿ. ಇದನ್ನೂ ವೇದವೇ ವಿಧಿಸಿರುವುದು. ಹೇಗೆಂದರೆ, ನೀಚಜನ್ಮದಲ್ಲಿ ಹುಟ್ಟಿ, ಕಷ್ಟವನ್ನನುಭವಿಸುತ್ತಿರುವವರು, ಸ್ವಕರ್ಮನಿರತರೂ, ಶ್ರೇಯಃಕಾಮಿಗಳೂ ಆದ ಬ್ರಾಹ್ಮಣರ ಕರ್ಮಗಳಲ್ಲಿ ಸಂಬಂಧಪಟ್ಟರೆ, ಆ ಸಂಸ್ಕಾರಬಲದಿಂದ ಮುಂದೆ ಉತ್ತಮಜನ್ಮವನ್ನು ಪಡೆದು, ಆಮೇಲೆ ತಾವೇ ಪುಣ್ಯಕರ್ಮಗಳಲ್ಲಿ ಪ್ರವರ್ತಿಸಿ, ಕೊನೆಗೆ ಸ್ವರ್ಗದಲ್ಲಿ ದೇವತೆಗಳ ಸಾಲೋಕ್ಯವನ್ನು ಪಡೆಯುವರೆಂದು ವೇದದಲ್ಲಿ ಹೇಳಿದೆ. ಇದರಿಂದ ಹೀನಜನ್ಮದಲ್ಲಿ ಜನಿಸಿದವರು ಕೊನೆಗೆ ಸ್ವಕರ್ಮಗಳಲ್ಲಿ ಎಚ್ಚರಿಕೆಗೊಂಡು, ತಿರುಗಿ ಉತ್ತಮಜನ್ಮದಲ್ಲಿ ಮನುಷ್ಯರಾಗಿ ಹುಟ್ಟುವರು. ಆದರೆ ಇಂತವರಿಗೆ ಒಂದೇ ಕಾಲದಲ್ಲಿ ಅತ್ಯುತ್ತಮಜನ್ಮವು ಲಭಿಸಲಾರದು. ಮುಂದಿನ ಜನ್ಮಗಳಲ್ಲಿ ಕ್ರಮವಾಗಿ ಚಂಡಾಲರು, ಮೂಕರು, ತಿಕ್ಕಲುಳ್ಳವರು, ಹೀಗೆ ಮೇಲೆ ಮೇಲಿನ ಉತ್ತಮಜನ್ಮಗಳನ್ನು ಪಡೆಯುತ್ತ, ಶೂದ್ರಾದಿ ಜನ್ಮಗಳನ್ನೆಲ್ಲ ಕಳೆದಮೇಲೆ, ಉತ್ತಮವರ್ಣದಲ್ಲಿ ಹುಟ್ಟುವರು. ತಮೋಗುಣಪ್ರವಾಹದ ಮಧ್ಯದಲ್ಲಿ ಕೋಪಾದಿ ದುರ್ಗುಣಗಳೆಲ್ಲ ಅಂತವರನ್ನು ಕೆಡಿಸುವುದಕ್ಕೆ ಬರುವುವು. ಕಾಮ ಮೊದಲಾದ ವಿಷಯಾಸಕ್ತಿಯೆಲ್ಲ ಮಹಾಮೋಹವೆಂದೇ ಎಣಿಸಲ್ಪಡುವುದು. ಋಷಿಗಳು, ಜ್ಞಾನಿಗಳು, ವೇದವಿತ್ತುಗಳು, ದೇವತೆಗಳು, ಇವರೆಲ್ಲರೂ ಕೂಡ ಸುಖಾಭಿಲಾಷೆಯಿಂದ ಈ ಮೋಹದಲ್ಲಿ ಬೀಳುವುದುಂಟು. ಇದರಲ್ಲಿ ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರವೆಂಬ ಪರ್ಯಾಯಭೇದಗಳುಂಟು.

ಅಂಧತಾಮಿಸ್ರವೆಂಬುದು ಮರಣವೆಂದೂ, ತಾಮಿಸ್ರವೆಂಬುದು ಕ್ರೋಧವೆಂದೂ ಹೇಳಲ್ಪಡುವುದು. ಜನ್ಮದಿಂದಲೂ, ವರ್ಣದಿಂದಲೂ, ಗುಣದಿಂದಲೂ ಗುರ್ತಿಸಲ್ಪಡುವ ಈ ತಮೋಗುಣದ ಲಕ್ಷಣಗಳನ್ನೆಲ್ಲ ನಿಮಗೆ ಯಥಾವತ್ತಾಗಿ ತಿಳಿಸಿದೆನು. ಆದರೆ, ಇದನ್ನೆಲ್ಲ ಚೆನ್ನಾಗಿ ತಿಳಿಯಬಲ್ಲವರೂ, ವಿಮರ್ಶಿಸಬಲ್ಲರೂ ವಿರಳರೇ! ತತ್ವವನ್ನು ತಿಳಿಯದೆ ಅತತ್ವವನ್ನೇ ತತ್ವವನ್ನಾಗಿ ಭಾವಿಸುವುದೂ ತಮೋಗುಣದ ಲಕ್ಷಣವೇ. ಎಲೈ ದೇವತೆಗಳಿರಾ! ನಿಮಗೆ ಹಲವು ಬಗೆಯ ತಮೋಗುಣಗಳನ್ನೆಲ್ಲ ಹೇಳಿದೆನು. ಆ ತಮಸ್ಸಿನಲ್ಲಿಯೇ ಕಂಡುಬರುವ ನೀಚೋಚ್ಚಭೇದಗಳನ್ನೂ ತಿಳಿಸಿದೆನು. ಈ ಗುಣಗಳ ಸ್ವರೂಪವನ್ನು ತಿಳಿದವನುಕೂಡ ಆ ತಮೋಗುಣಗಳಿಂದ ಬಿಡಲ್ಪಡುವನು.

ಇದು ಮೂವತ್ತೇಳನೆಯ ಅಧ್ಯಾಯವು.

---

## { ಬ್ರಹ್ಮನು ಮಹರ್ಷಿಗಳಿಗೆ ರಜೋಗುಣದ ಕಾರ್ಯಗಳನ್ನು ವಿವರಿಸಿದುದು. }

"ಓ ಮಹರ್ಷಿಗಳೇ! ಇನ್ನು ನಿಮಗೆ ರಜೋಗುಣದ ಸ್ವರೂಪವನ್ನೂ, ಅದರ ಕಾರ್ಯಗಳನ್ನೂ ಯಥಾವತ್ತಾಗಿ ತಿಳಿಸುವೆನು ಕೇಳಿರಿ. ಸಂತಾಪ, ರೂಪ, ಶ್ರಮ, ಸುಖ, ದುಃಖ, ಶೀತೋಷ್ಣಗಳು, ಐಶ್ವರ್ಯ, ಕಲಹ, ಸಿದ್ಧಿ, ಯುಕ್ತಿವಾದ, ಜಿಗುಪ್ಸೆ, ತಾಳ್ಮೆ, ಬಲ, ಶೌರ್ಯ, ಮದ, ಕೋಪ, ದಣಿವು, ಅಸೂಯೆ, ಆಸೆ, ಚಾಡಿಹೇಳುವುದು, ಜಗಳವಾಡುವುದು, ಮಮತೆ, ರಕ್ಷಣೆ, ಕೊಲೆ, ಬಂಧನ, ಕಷ್ಟ, ಕ್ರಯವಿಕ್ರಯಗಳು, 'ಕಡಿ, ಕೊಲ್ಲು, ಇರಿ, ತಿವಿ,' ಎಂದು ಇತರರಿಗೆ ಮರ್ಮಭೇದಕವಾಗಿ ಮಾತಾಡುವುದು, ಕ್ರೂರವಾಗಿಯೂ, ಗಟ್ಟಿಯಾಗಿಯೂ ಕೂಗಿ ಮಾತಾಡುವುದು, ಪರಸ್ವತ್ತಿಗೆ ಆಸೆಪಡುವುದು, ಲೋಕವಿಚಾರವಾದ ಚಿಂತೆ, ತನ್ನ ಸ್ವಂತವಿಷಯವಾದ ಚಿಂತೆ, ಮತ್ಸರ, ಇತರರನ್ನು ಅವಮತಿಸಿ ಮಾತನಾಡುವುದು, ವ್ಯರ್ಥವಾದ ಶಾಸ್ತ್ರಾಭ್ಯಾಸಗಳು, ಸುಳ್ಳಾಡುವುದು, ವಿತಂಡವಾದಗಳು, ನಿಂದೆ, ಸ್ತೋತ್ರ, ಮುಖಸ್ತುತಿ, ಆತ್ಮಸ್ತುತಿ, ಇತರರನ್ನು ಬೆದ

ರಿಸುವುದು, ಇತರರ ಪರಿಚರ್ಯೆ, ಶುಶ್ರೂಷೆ, ಸೇವೆ, ತೃಷ್ಣೆ, ಇತರರ ಅನುಸರಣೆ, ವ್ಯವಹಾರದಲ್ಲಿ ತಂತ್ರಗಳು, ಅನೀತಿ, ಪ್ರವಾದ, ಅಪವಾದ, ಇತರರು ಹೇಳಿದುದನ್ನೆಲ್ಲ ನಂಬುವುದು, ಹೀಗೆಯೇ ಲೋಕದಲ್ಲಿ ಬೇರೆ ಬೇರೆಯಾಗಿ ಗಂಡಸರು, ಹೆಂಗಸರು, ಇತರ ಭೂತಗಳು, ದ್ರವ್ಯಗಳು, ಗೃಹಾದಿ ಪರಿಕರಗಳು, ಇವುಗಳನ್ನು ಕುರಿತು ಹುಟ್ಟತಕ್ಕ ಮನೋವಿಚಾರ ಗಳು, ಮನೋವ್ಯಾಕುಲತೆ, ಅವಿಶ್ವಾಸ, ಫಲಾಪೇಕ್ಷೆಯಿಂದ 'ತನಗೆ ಯಾವಾ ಗಲೂ ಎಲ್ಲರಿಗಿಂತ ಪ್ರಾಧಾನ್ಯವೂ, ಕೋರಿಕೆಗಳೂ ಲಭಿಸಲಿ ' ಎಂದು ವ್ರತ ಗಳನ್ನೂ, ನಿಯಮಗಳನ್ನೂ, ಸ್ವಾಹಾಕಾರ, ನಮಸ್ಕಾರ, ಸ್ವಧಾಕಾರ, ವಷಟ್ಕಾರಾದಿ ಕ್ರಿಯೆಗಳನ್ನೂ ನಡೆಸುವುದು, ಹಾಗೆಯೇ ಫಲೋದ್ದೇಶ ದಿಂದ ಯಾಗಮಾಡುವುದು, ಯಾಗ ಮಾಡಿಸುವುದು, ಅಧ್ಯಯನಮಾಡು ವುದು, ಅಧ್ಯಯನ ಮಾಡಿಸುವುದು, ದಾನಪ್ರತಿಗ್ರಹಗಳು, ಪ್ರಾಯಶ್ಚಿತ್ತ ಗಳು, ಮಂಗಳಕಾರ್ಯಗಳು ಇವನ್ನೆಲ್ಲ ನಡೆಸುವುದು, ಇದೆಲ್ಲ ರಜೋಗುಣ ಕಾರ್ಯಗಳೇ. ಮತ್ತು ' ಇದು ತನಗೆ ಲಭಿಸಬೇಕು! ಇದು ತನಗೆ ಲಭಿ ಸಬೇಕು ' ಎಂಬ ರಜೋಗುಣಜನ್ಯವಾದ ಸ್ನೇಹವೂ, ಹಾಗೆಯೇ ದ್ರೋಹ, ಮಾಯೆ, ವಂಚನೆ, ಅಹಂಕಾರ, ಹಿಂಸೆ, ಚೌರ್ಯ, ಜಿಗುಪ್ಸೆ, ಮನಸ್ಸಿನ ಪರಿತಾಪ, ವಿಶೇಷವಾಗಿ ಜಾಗರಣೆ, ಡಂಭ, ದರ್ಪ, ರಾಗ, (ನಿಜವಲ್ಲದ) ಭಕ್ತಿ, ಪ್ರೀತಿ, ಇತರರನ್ನು ಮೆಚ್ಚಿಸುವುದು, ಜೂಜು, ಜನವಾದ, ಮಿತಿಮೀರಿದ ಸಂತೋಷ, ಸ್ತ್ರೀಯರಿಂದ ಏರ್ಪಟ್ಟ ಸಂಬಂಧ ಗಳನ್ನು ಕೊಂಡಾಡುವುದು, ನೃತ್ತ ಗೀತ ವಾದ್ಯಗಳನ್ನು ಅನುಭವಿಸಿ ಆನಂದಿಸುವುದು, ಇವೆಲ್ಲಾ ರಜೋಗುಣದ ಕಾರ್ಯಗಳೆಂದೇ ಹೇಳ ಲ್ಪಡುವುದು. ಇಂತಹ ರಜೋಗುಣವುಳ್ಳವರು ಭೂಮಿಯಲ್ಲಿ ಕಳೆದು ಹೋದ, ತತ್ಕಾಲದಲ್ಲಿರುವ, ಮತ್ತು ಮುಂದೆ ಬರಬಹುದಾದ ವಿಷಯ ಗಳನ್ನೇ ಚಿಂತಿಸುತ್ತ, ಧರ್ಮಾರ್ಥ ಕಾಮಗಳೆಂಬ ಮೂರು ಪುರುಷಾರ್ಥ ಗಳಲ್ಲಿಯೇ ನಿತ್ಯಾಸಕ್ತರಾಗಿರುವರು. ಇಂತವರು ಇಷ್ಟಬಂದಂತೆ ನಡೆ ಯುತ್ತ, ಇಷ್ಟವಸ್ತುಗಳನ್ನೆಲ್ಲ ಅನುಭವಿಸುತ್ತ, ನಿತ್ಯಸಂತೋಷಪಡುತ್ತಿರು ವರು. ರಜೋಗುಣವುಳ್ಳ ಇವರು ಅರ್ವಾಕ್ಸ್ರೋತಸ್ಸುಗಳೆಂದು ಹೇಳಲ್ಪ ಡುವರು. (ಅರ್ವಾಕ್ಸ್ರೋತಸ್ಸುಗಳೆಂದರೆ ಭೂಮಿಗೂ, ಸ್ವರ್ಗಕ್ಕೂ ನಡುವೆ

ಇರುವುದರಲ್ಲಿ ಮನೋವೃತ್ತಿಯುಳ್ಳವರು.) ಇವರು ಈ ಲೋಕದಲ್ಲಿ ತಿರುಗಿತಿರುಗಿ ಹುಟ್ಟಿ, ಸುಖಸಂತೋಷಗಳನ್ನು ಅನುಭವಿಸುತ್ತ, ಪದೇಪದೇ ಮುಂದಿನ ಜನ್ಮದಲ್ಲಿಯೂ, ಅದೇತರದ ಸುಖಭೋಗಗಳನ್ನೇ ಅಭಿಲಷಿಸ ತಕ್ಕವರಾಗಿರುವರು. ಅವರು ದಾನಪ್ರತಿಗ್ರಹಾದಿಗಳನ್ನೂ, ಹೋಮ ತರ್ಪಣಾದಿಗಳನ್ನೂ ನಡೆಸುತ್ತಿರುವುದೂ ಈ ಉದ್ದೇಶದಿಂದಲೇ.

ಎಲೈ ಮಹರ್ಷಿಗಳಿರಾ! ರಜೋಗುಣದ ಸ್ವರೂಪವನ್ನೂ, ಕಾರ್ಯಗಳನ್ನೂ ನಿಮಗೆ ಯಥಾವತ್ತಾಗಿ ತಿಳಿಸಿದೆನು ಈ ಗುಣದ ತತ್ವವನ್ನು ತಿಳಿದವನೂಕೂಡ, ಎಲ್ಲಾ ಗುಣಗಳಿಂದ ಮುಕ್ತನಾಗಿ ಉತ್ತಮಪದವಿಯನ್ನು ಹೊಂದುವನು.

ಇದು ಮೂವತ್ತೆಂಟನೆಯ ಅಧ್ಯಾಯವು.

---

{ ಬ್ರಹ್ಮನು ಮಹರ್ಷಿಗಳಿಗೆ ಸತ್ವಗುಣದ ಕಾರ್ಯಗಳನ್ನು ತಿಳಿಸಿದುದು. }

"ಓ ಮಹರ್ಷಿಗಳೇ! ಇನ್ನು ಸತ್ವಗುಣದ ಪ್ರಭಾವವನ್ನು ಕೇಳಿರಿ. ಈ ಗುಣವು ಲೋಕದಲ್ಲಿ ಎಲ್ಲಾ ಪ್ರಾಣಿಗಳ ಶ್ರೇಯಸ್ಸಿಗೂ ಕಾರಣವಾದುದು. ಇದು ಸಾಧುಗಳಿಗೆ ಅತ್ಯವಶ್ಯಕವಾದ ಧರ್ಮವೆನಿಸುವುದು. ನಿರ್ದುಷ್ಟವಾದುದು. ಈ ಉತ್ತಮವಾದ ಮೂರನೆಯ ಗುಣದ ಲಕ್ಷಣಗಳನ್ನು ತಿಳಿಸುವೆನು. ಆನಂದ, ಪ್ರೀತಿ, ಉತ್ಸಾಹ, ಪ್ರಕಾಶ, ಸುಖ, ದೈನ್ಯವಿಲ್ಲದಿರುವುದು, ಆತುರವಿಲ್ಲದಿರುವುದು, ಸಂತೋಷ, ಶ್ರದ್ಧೆ ತಾಳ್ಮೆ, ಧೈರ್ಯ, ಅಹಿಂಸೆ, ಸಮಬುದ್ಧಿ, ಸತ್ಯ, ಋಜುತ್ವ, ಕೋಪವಿಲ್ಲದಿರುವುದು, ಅಸೂಯೆಯಿಲ್ಲದಿರುವುದು, ಶುಚಿತ್ವ, ಸಾಮರ್ಥ್ಯ, ಪರಾಕ್ರಮ, ಇವೆಲ್ಲ ಸತ್ವಗುಣದ ಕಾರ್ಯಗಳು. ಆತ್ಮವಿಷಯಕವಲ್ಲದ ಇತರಜ್ಞಾನವೂ, ಪ್ರವರ್ತನೆಯೂ, ಸೇವೆಯೂ, ಶ್ರಮವೂ ಇವೆಲ್ಲವೂ ವ್ಯರ್ಥವೆಂದೇ ತಿಳಿದು, ಯೋಗಿಗಳ ಧರ್ಮವನ್ನು ಅನುಷ್ಠಿಸುವವನು ಸಾತ್ವಿಕನೆನಿಸುವನು. ಅಂತಹ ಸಾತ್ವಿಕನು ಶಾಶ್ವತವಾದ ಪದವಿಯನ್ನು ಹೊಂದುವನು. ಅಹಂಕಾರ ಮಮಕಾರಗಳಿಲ್ಲದೆ, ಯಾವ

ಕೋರಿಕೆಗಳನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ ಸರ್ವತ್ರ ಸಮಭಾವವುಳ್ಳವ ನಾಗಿ, ಕಾಮುಕ್ಕೀಡಾಗದಿರುವುದೇ ಸತ್ಪುರುಷರ ಸನಾತನ ಧರ್ಮವು. ಇದೂ ಸತ್ವಗುಣದ ಲಕ್ಷಣವೇ! ಶಾಸ್ತ್ರಗಳಲ್ಲಿ ನಂಬಿಕೆ ಅಕಾರ್ಯಗ ಳಲ್ಲಿ ಲಜ್ಜೆ, ಸಹನಶಕ್ತಿ, ತ್ಯಾಗ, ಚಟುವಟಿಕೆ, ಕ್ರೌರ್ಯವಿಲ್ಲದಿರು ವುದು, ಮೋಹವಿಲ್ಲದಿರುವುದು, ಭೂತದಯೆ, ಚಾಡಿಹೇಳುವ ಸ್ವಭಾವ ವಿಲ್ಲದಿರುವುದು, ಗರ್ವವಿಲ್ಲದಿರುವುದು, ತೃಪ್ತಿ, ವಿನಯ, ಸತ್ಕಾರ್ಯ ಪ್ರವೃತ್ತಿ, ಮೋಕ್ಷಮಾರ್ಗಗಳನ್ನು ನಿಷ್ಕಪಟವಾಗಿ ಅನುವರ್ತಿಸುವುದು, ಮನಃಶುದ್ಧಿ, ವಿಷಯಸುಖಗಳಲ್ಲಿ ವಿಮುಖನಾಗಿರುವುದು, ಬ್ರಹ್ಮಚರ್ಯ ಆಶಾತ್ಯಾಗ, ಧರ್ಮಕ್ಕೆ ವಿರುದ್ಧವಾಗಿ ನಡೆಯದಿರುವುದು, ಇವೆಲ್ಲ ಸಾತ್ವಿಕನ ಗುಣಗಳು. ದಾನ, ಯಜನ, ಅಧ್ಯಯನ, ವ್ರತ, ಪ್ರತಿ ಗ್ರಹ, ಧರ್ಮ, ತಪಸ್ಸು ಇವೆಲ್ಲ ವ್ಯರ್ಥವೇ ಎಂಬ ಜ್ಞಾನದಿಂದ ಅದರಲ್ಲಿ ಸ್ವಪ್ರಯೋಜನವನ್ನು ಕೋರದೆ, ಭಗವತ್ಪ್ರೀತ್ಯರ್ಥವಾಗಿಯೇ ಮಾಡತಕ್ಕವರು ಸತ್ವಗುಣವುಳ್ಳವರು. ವೇದಗಳಿಗೆ ಉತ್ಪತ್ತಿಕಾರಣನಾದ ಪರಬ್ರಹ್ಮನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿದ ಧೀರರೂ, ಬ್ರಹ್ಮಜ್ಞಾ ನಿಗಳೂ ಸಾತ್ವಿಕರೆನಿಸುವರು. ರಾಜಸತಾಮಸಗಳೆನಿಸಿದ ಎಲ್ಲಾ ಕರ್ಮ ಗಳನ್ನೂ ತ್ಯಜಿಸಿ, ಶೋಕ, ಜರಾ, ಮರಣಾದಿಗಳನ್ನು ಜಯಿಸಿದವರೂ ಸಾತ್ವಿಕರೆನಿಸುವರು. ಅವರು ತಾವೇ ದಿವ್ಯಶಕ್ತಿಯನ್ನು ಹೊಂದಿ, ಅದರಿಂದ ತಮಗೆ ಬೇಕಾದ ಶರೀರಗಳನ್ನು ಕಲ್ಪಿಸಿಕೊಳ್ಳಬಲ್ಲರು. ಅಂತಹ ಮಹಾ ತ್ಮರು ದೇವತೆಗಳಂತೆ ಅಣಿಮೆ, ಮಹಿಮೆ, ಲಘುತ್ವ, ವಶಿತ್ವ, ಈಶಿತ್ವ ಮೊದಲಾದ ಸಿದ್ಧಿಗಳನ್ನೆಲ್ಲ ಹೊಂದಬಲ್ಲರು. ಇಂತಹ ಸತ್ವಗುಣವುಳ್ಳ ವರು, ಊರ್ಧ್ವರೇತಸ್ಸುಗಳೆಂದೂ (ಉತ್ತಮಗತಿಯನ್ನು ಹೊಂದಲು ಯೋ ಗ್ಯವಾದ ಚಿತ್ತವೃತ್ತಿಯುಳ್ಳವರು) ವೈಕಾರಿಕದೇವರೆಂದೂ, ಎಣಿಸಲ್ಪಡು ವರು. ಇವರು ತಮತಮಗೆ ತೋರಿದಾಗ, ಬೇಕಾದ ಭೋಗಗಳನ್ನು ಅನು ಭವಿಸುವುದಕ್ಕಾಗಿ ಆಯಾ ಲೋಕಕ್ಕೆ ತಮ್ಮ ಸ್ವಶಕ್ತಿಯಿಂದಲೇ ಹೋಗಿ, ತಾವು ಅವನ್ನೆಲ್ಲಾ ಅನುಭವಿಸಿ, ಇತರರಿಗೂ ಅಂತಹ ವರಗಳನ್ನು ಕೊಡ ಲು ಸಮರ್ಥರಾಗುವರು. ಸತ್ವಗುಣದ ಕಾರ್ಯಗಳನ್ನು ನಿಮಗೆ ತಿಳಿಸಿ ದೆನು. ಈ ಗುಣದ ಸ್ವರೂಪವನ್ನು ಯಥಾವತ್ತಾಗಿ ತಿಳಿದುಕೊಂಡ

ವನು, ತನ್ನ ಇಷ್ಟಾರ್ಥಗಳನ್ನೆಲ್ಲಾ ಪಡೆಯುವನು. ಈಗ ನಾನು ವಿಶೇಷಿಸಿ ಹೇಳಿದ ಈ ಗುಣದ ಲಕ್ಷಣಗಳನ್ನು ತಿಳಿದ ಮನುಷ್ಯನು, ಅದರಿಂದುಂಟಾದ ಫಲಗಳನ್ನನುಭವಿಸಿದರೂ, ಆ ಗುಣಗಳೊಡಗೂಡನೆ ತನಗೆ ಸಂಬಂಧವಿಲ್ಲದಂತಿರುವನು.

ಇದು ಮೂವತ್ತೊಂಭತ್ತನೆಯ ಅಧ್ಯಾಯವು

{ಬ್ರಹ್ಮನು ಮಹರ್ಷಿಗಳಿಗೆ ಈ ಮೂರು ಗುಣಗಳಿಗಿರುವ ಅನ್ಯೋನ್ಯ ಸಂಬಂಧವನ್ನು ತಿಳಿಸಿದುದು.}

ಮಹರ್ಷಿಗಳಿರಾ! ಕೇಳಿರಿ! ಮೇಲೆ ಹೇಳಿದ ಮೂರು ಗುಣಗಳನ್ನೂ ಬೇರೆಬೇರೆಯಾಗಿ ಬಿಡಿಸಿ ಹೇಳುವುದು ಸಾಧ್ಯವಲ್ಲ. ಪ್ರಾಯಕವಾಗಿ ಈ ಮೂರು ಗುಣಗಳೂ ಸೇರಿದಂತೆಯೇ ಕಾಣುತ್ತಿರುವುವು. ಈ ಮೂರು ಗುಣಗಳೂ ಒಂದನ್ನೊಂದು ಹೊಂದಿಕೊಂಡೇ ಇರುವುವು. ಸತ್ವವಿದ್ದಷ್ಟೇ ತಮಸ್ಸೂ ಇರುವುದು. ತಮಸ್ಸೂ, ಸತ್ವವೂ ಎಷ್ಟಿರುವುದೋ, ರಜಸ್ಸೂ ಅಷ್ಟೇ ಇರುವುದು. ಒಂದಕ್ಕೊಂದಕ್ಕೆ ಏನೂ ಕಡಿಮೆಯಾದುದಲ್ಲ. ಇವು ಒಂದಕ್ಕೊಂದು ಸೇರಿಯೇ ಕೆಲಸಮಾಡುವುವು. ಹೀಗೆ ಒಂದಾಗಿ ಸೇರಿರುವ ಈ ಗುಣಗಳು, ಯಾವುದಾದರೂ ಕಾರಣಗಳಿಂದಲೋ, ಅಥವಾ ಕಾರಣವಿಲ್ಲದೆಯೋ ಪ್ರತ್ಯೇಕವಾಗಿಯೂ ಕೆಲಸಮಾಡುವುವು. ಈ ಗುಣಗಳು ಒಂದನ್ನೊಂದು ಅನುಸರಿಸಿಕೊಂಡು ಸಮಷ್ಟಿಯಲ್ಲಿಯೂ, ಕೆಲವು ವೇಳೆ ಒಂದಕ್ಕೊಂದು ಹೆಚ್ಚುಕಡಿಮೆಯುಳ್ಳದಾಗಿಯೂ ತೋರುವುದುಂಟು. ಆ ಕ್ರಮಗಳನ್ನೂ ತಿಳಿಸುವೆನು ಕೇಳಿರಿ. ತಿರ್ಯಗ್ಜಂತುಗಳಲ್ಲಿ ಸಹಜವಾಗಿರುವ ತಮಸ್ಸು ಯಾವಾಗ ತಲೆಯೆತ್ತುವುದೋ, ಆಗ ರಜಸ್ಸು ಕಡಿಮೆಯಾಗಿಯೂ, ಸತ್ವವು ಅದಕ್ಕಿಂತಲೂ ಬಹಳ ಕಡಿಮೆಯಾಗಿಯೂ ಇದ್ದಹಾಗೆ ತಿಳಿದುಕೊಳ್ಳಬೇಕು. ಮಧ್ಯಸ್ರೋತಸ್ಸೆಂದು ಕರೆಯಲ್ಪಡುವ ರಜಸ್ಸು ಯಾವಾಗ ಹೆಚ್ಚುವುದೋ, ಆಗ ತಮಸ್ಸು ಸ್ವಲ್ಪವಾಗಿಯೂ, ಸತ್ವವು ಅದಕ್ಕಿಂತಲೂ ಸ್ವಲ್ಪವಾಗಿಯೂ ಇರುವುದೆಂದು ತಿಳಿದುಕೊಳ್ಳಬಹುದು. ಊರ್ಧ್ವಸ್ರೋತಸ್ಸೆಂಬ ಸತ್ವ

ಗುಣವು ಹೆಚ್ಚಿದಾಗ, ತಮಸ್ಸು ಕಡಿಮೆಯಾಗಿಯೂ, ರಜಸ್ಸು ಇನ್ನೂ ಬಹಳ ಕಡಿಮೆಯಾಗಿಯೂ ಇರುವುದನ್ನು ಕಾಣಬಹುದು. ಸತ್ವವು ವೈಕಾರಿಕಾಹಂಕಾರಸಂಬಂಧವುಳ್ಳುದು, ಇಂದ್ರಿಯಗಳಿಗೆ ವಿಷಯಗಳನ್ನು ಪ್ರಕಾಶಗೊಳಿಸತಕ್ಕುದೂ ಆದೇ. ಸತ್ವ ಗುಣಕ್ಕಿಂತಲೂ ಮೇಲಾದ ಧರ್ಮಹೇತುವು ಬೇರೆ ಯಾವುದೂ ಇಲ್ಲ. ಸತ್ವಗುಣವುಳ್ಳವರು ಎಲ್ಲಕ್ಕಿಂತಲೂಮೇಲಾದ ಗತಿಯನ್ನು ಹೊಂದುವರು. ರಜೋಗುಣವುಳ್ಳವರು ನಡುತರದ ಗತಿಯಲ್ಲಿ ನಿಲ್ಲುವರು. ತಮೋಗುಣವುಳ್ಳವರು ಕೇವಲನೀಚಗತಿಯನ್ನು ಹೊಂದುವರು. ಸತ್ವರಜಸ್ತಮಸ್ಸೆಂಬ ಈ ಮೂರು ಗುಣಗಳೂ ಕ್ರಮವಾಗಿ, ಬ್ರಾಹ್ಮಣ ಕ್ಷತ್ರಿಯ ಶೂದ್ರರಲ್ಲಿ ವಿಶೇಷವಾಗಿ ತೋರುವುವು. ಈ ಮೂರುವರ್ಣಗಳಲ್ಲಿಯೂ ಮೂರು ಗುಣಗಳನ್ನೂ ಕಾಣಬಹುದು. ಆದರೆ, ಇವುಗಳಲ್ಲಿ ಒಂದು ಗುಣಕ್ಕೆ ಆಶ್ರಯವಾದ ವರ್ಣದವರಲ್ಲಿ, ಮತ್ತೆರಡು ಗುಣಗಳು ಸ್ವಲ್ಪಮಾತ್ರವಾದರೂ ಇಲ್ಲದೆ ಹೋಗದು. ಈ ಕಾರಣದಿಂದ ಅವು ಮೂರೂ ಸೇರಿಯೇ ಇರುವುವೆಂದು ತಿಳಿಯಬೇಕು. ಈ ರಜಸ್ಸತ್ವ ತಮೋಗುಣಗಳು ಬೇರೆಬೇರೆಯಾಗಿ ಕಾಣುವುದನ್ನೂ ನಾವು ನೋಡಬಹುದು. ಸೂರ್ಯನು ಉದಯಿಸುವುದನ್ನು ಕಂಡಾಗ, ನೀಚವೃತ್ತಿಯುಳ್ಳ ಕಳ್ಳರಿಗೆ ಮನಸ್ಸಿನಲ್ಲಿ ಭೀತಿ ಹುಟ್ಟುವುದು. ದಾರಿನಡೆಯುವವರಿಗೆ ಬಿಸಿಲಿನ ಕಾವಿನಿಂದ ಹೆಚ್ಚು ತಾಪವು ಏರುತ್ತಬರುವುದು. ಸೂರ್ಯನು ಸತ್ವಗುಣವುಳ್ಳವನೆಂಬೇ ಪ್ರಸಿದ್ಧಿಯುಂಟು. ಚೋರರಿಗಾದರೋ ಅವನು ತಮೋಗುಣವುಳ್ಳವನಾಗಿ ಕಾಣುವನು. ಪ್ರಯಾಣಿಕರಲ್ಲಿ ಅವನಿಂದುಂಟಾಗತಕ್ಕ ತಾಪವು ರಜೋಗುಣದ ಲಕ್ಷಣವಾಗಿರುವುದು. ಸೂರ್ಯನ ಪ್ರಕಾಶವು ಸತ್ವಗುಣದ ಲಕ್ಷಣವು! ಅವನಿಂದುಂಟಾಗತಕ್ಕ ಸಂತಾಪವು ರಜಸ್ಸಿನ ಕಾರ್ಯವು. ಅವನಿಗೆ ಪರ್ವಕಾಲಗಳಲ್ಲಿ ಉಂಟಾಗತಕ್ಕ ಗ್ರಹಬಾಧೆಯು ತಮಸ್ಸಿನ ಕಾರ್ಯವು. ಹೀಗೆಯೆ ಎಲ್ಲಾ ತೇಜಸ್ಸುಗಳಲ್ಲಿಯೂ ಮೂರುಗುಣಗಳೂ ಇರುವುವು. ಆ ಗುಣಗಳು ಅಲ್ಲಲ್ಲಿ ಪರ್ಯಾಯಭೇದದಿಂದಲೂ ಕಾಣುವುವು. ಸ್ಥಾವರಗಳಲ್ಲಿ ತಮಸ್ಸು ಹೆಚ್ಚಾಗಿರುವುದು. ಆ ಸ್ಥಾವರಗಳಲ್ಲಿರುವ ತಿರ್ಯಗ್ಭಾವವೇ ತಮೋಗುಣದ ಮುಖ್ಯಲಕ್ಷಣವು. ಅವುಗಳಲ್ಲಿ, ಅಂದ, ರುಚಿ

ಮೊದಲಾದ ರಾಜಸಗುಣಗಳು ತಲೆದೋರುವುವು. ಅವುಗಳಲ್ಲಿ ಸ್ನೇಹ ವೆಂಬ ಪ್ರಕಾಶಗುಣವು ಇರುವುದರಿಂದ, ಸತ್ವಗುಣವೂ ಕಾಣುವುದು ಇದೇ ರೀತಿಯಾಗಿ ಹಗಲು, ರಾತ್ರಿ, ಮಾಸಗಳು, ಪಕ್ಷಗಳು, ವರ್ಷ ಗಳು, ಋತುಗಳು, ಕಾಲಸಂಧಿಗಳು, ಇವೆಲ್ಲ ಗುಣಭೇದಗಳಿಂದ ಮೂರು ವಿಧವಾಗಿ ತೋರುವುವು. ಹೀಗೆಯೇ ದಾನಗಳೂ ಮೂರು ವಿಧವಾದುವು. ಯಜ್ಞವೂ ಮೂರು ವಿಧವಾಗಿವೆ! ಲೋಕಗಳೂ, ದೇವತೆಗಳೂ, ವಿದ್ಯೆಗಳೂ, ಗತಿಗಳೂ ಮೂರು ಬಗೆಯಾದುವುಗಳು. ಭೂತಭವಿಷ್ಯ ದ್ವರ್ತಮಾನಗಳು, ಧರ್ಮಾರ್ಥ ಕಾಮಗಳು, ಪ್ರಾಣಾಪಾನೋದಾನಗ ಳೆಂಬಿವೆಲ್ಲ ಮೂರು ಗುಣಗಳುಳ್ಳವುಗಳಾಗಿವೆ. ಇವು ಅಲ್ಲಲ್ಲಿ ಆಯಾ ರೀತಿಯನ್ನನುಸರಿಸಿ ವರ್ತಿಸುವುವು. ಈ ಲೋಕದಲ್ಲಿರುವ ಎಲ್ಲಾ ವಸ್ತುಗಳಲ್ಲಿಯೂ ಈ ಮೂರು ಗುಣಗಳೂ ಕಾಣುವುವು. ಈ ಮೂರು ಗುಣಗಳು ಸಮಾಸ್ಥಿತಿಯಲ್ಲಿ ಅವ್ಯಕ್ತವೆನಿಸುವುವು. ಈ ಮೂರು ಗುಣಗಳ ಸೃಷ್ಟಿಯೂ ಅನಾದಿಯಾದುದು. ತಮಸ್ಸು, ಶಿವ, ಧಾಮ, ರಜಸ್ಸು, ಸನಾ ತನ, ಯೋಗಿ, ಪ್ರಕೃತಿ, ವಿಕಾರ, ಪ್ರಳಯ, ಪ್ರಧಾನ, ಪ್ರಭವ, ಅಪ್ಯಯ, ಅನುದ್ರಿಕ್ತ, ಅನ್ಯೂನ, ಅಕಂಪ, ಅಚಲ, ಧ್ರುವ, ಸತ್, ಅಸತ್, ತ್ರೈಗುಣ್ಯ, ಇವೆಲ್ಲಾ ಅವ್ಯಕ್ತದ ನಾಮಭೇದಗಳೇ! ಆತ್ಮ ಸ್ವರೂಪ ವನ್ನರಿಯುವವರು ಈ ಅವ್ಯಕ್ತದ ಹೆಸರುಗಳನ್ನು ತಿಳಿದಿರಬೇಕು. ಅವ್ಯ ಕ್ತದ ಎಲ್ಲಾ ಹೆಸರುಗಳನ್ನೂ, ಗುಣಗಳನ್ನೂ, ಗತಿಗಳನ್ನೂ ಯಥಾಸ್ಥಿತ ವಾಗಿ ಬಲ್ಲವನು, ದೇಹಾಭಿಮಾನವಿಲ್ಲದೆ, ತತ್ವಗಳ ಭೇದಾಭೇದಗಳನ್ನು ತಿಳಿದವನಾಗಿ, ಸಮಸ್ತಗುಣಗಳಿಂದ ಮುಕ್ತನಾಗುವನು

ಇದು ನಾಲ್ವತ್ತನೆಯ ಅಧ್ಯಾಯವು.

---

{ಬ್ರಹ್ಮನು ಮಹರ್ಷಿಗಳಿಗೆ ಮಹತ್ತು ಮತ್ತು ಅಹಂಕಾರಗ ಳೆಂಬ ತತ್ವಗಳನ್ನು ತಿಳಿಸಿದುದು.}

ಓ ಮಹರ್ಷಿಗಳಿರಾ! ಅವ್ಯಕ್ತದಿಂದ ಮೊಟ್ಟಮೊದಲು ಬುದ್ಧಿವಿ ಶೇಷದಿಂದ ಕೂಡಿದ ಮಹತ್ತೆಂಬ ತತ್ವವುಂಟಾಯಿತು. ಈ ಮಹತ್ತ

ತ್ವವೆಂಬುದೇ ಎಲ್ಲಾ ಗುಣಗಳ ಕಾರ್ಯಗಳಿಂದ ಕೂಡಿದ ಮೊಟ್ಟಮೊದಲನೆಯ ಸೃಷ್ಟಿಯೆಂದು ಹೇಳಲ್ಪಟ್ಟಿದೆ. ಈ ಮಹತ್ತತ್ವಕ್ಕೆ ಮಹಾತ್ಮಾ, ಮತಿ, ವಿಷ್ಣು' ಜಿಷ್ಣು, ಶಂಭು, ವೀರ್ಯವಂತ, ಬುದ್ಧಿ, ಪ್ರಜ್ಞೆ, ಉಪಲಬ್ಧಿ, ಖ್ಯಾತಿ, ಧೃತಿ, ಸ್ಮೃತಿ ಎಂಬ ಒಂದೇ ಅರ್ಥವುಳ್ಳ ಬೇರೆ ಬೇರೆ ವ್ಯವಹಾರಗಳುಂಟು. ಈ ತತ್ವವನ್ನು ತಿಳಿದ ಜ್ಞಾನಿಗೆ ಮೋಹವುಂಟಾಗದು! ಈ ಮಹತ್ತತ್ವಕ್ಕೆ ಸರ್ವತೋಮುಖವಾದ ಕೈಕಾಲುಗಳು, ಎಲ್ಲಾ ಕಡೆಯೂ ಕಣ್ಣುಗಳು, ಸರ್ವತೋಮುಖವಾದ ತಲೆಗಳು, ಎಲ್ಲಾ ಕಡೆಯೂ ಮುಖಗಳು, ಎಲ್ಲಾ ಕಡೆಯೂ ಕಿವಿಗಳು! ಇದು ಲೋಕವಲ್ಲಿ ಸಮಸ್ತವನ್ನೂ ವ್ಯಾಪಿಸಿಕೊಂಡಿರುವುದು. ಎಲ್ಲರ ಹೃದಯದಲ್ಲಿಯೂ ನೆಲೆಗೊಂಡಿರುವ ಮಹಾಮಹಿಮೆಯುಳ್ಳ ಪುರುಷನೂ ಅದೇ! ಅಣಿಮೆ, ಲಘಿಮೆ, ಪ್ರಾಪ್ತಿ, ಈಶಾನ, ಜ್ಯೋತಿ, ಅವ್ಯಯವೆಂದು ಕರೆಯಲ್ಪಡುವುದೂ ಅದೇ! ಆ ತತ್ವವು ಒಳ್ಳೇ ಧೀಮಂತರಾದ ಜ್ಞಾನಿಗಳಿಗೆಮಾತ್ರ ಗೋಚರವಾಗತಕ್ಕುದು. ಒಳ್ಳೇ ಭಕ್ತಿಯುಳ್ಳವರೂ, ಸದಾ ಯೋಗವನ್ನು ಹಿಡಿದವರೂ, ಸತ್ಯಸಂಧರೂ, ಜಿತೇಂದ್ರಿಯರೂ, ಜ್ಞಾನಿಗಳೂ, ಆಶೆಯನ್ನು ತೊರೆದಿರತಕ್ಕವರೂ, ಕಾಮಕ್ರೋಧಗಳನ್ನು ಜಯಿಸಿ ತಿಳಿವಾದ ಮನಸ್ಸುಳ್ಳವರೂ, ಧೀರರೂ, ಅಹಂಕಾರ ಮಮಕಾರಗಳನ್ನು ತೊರೆದವರೂ ಅದನ್ನು ಹೊಂದುವರು. ಮಹತ್ತತ್ವವೆಂದು ಕರೆಯಲ್ಪಡುವ ಮಹಾತ್ಮನ ರೀತಿಯನ್ನು ತಿಳಿದವರು ಅವನನ್ನೇ ಹೊಂದುವರು. ಪೃಥಿವಿ, ವಾಯು, ಆಕಾಶ, ಜಲ, ತೇಜಸ್ಸು ಎಂಬ ಈ ಪಂಚ ಮಹಾಭೂತಗಳೂ ಮಹತ್ತತ್ವದಿಂದ ಜನಿಸಿದ ಅಹಂಕಾರ ತತ್ವದಿಂದ ಉಂಟಾದುವು. ಸಮಸ್ತ ಪ್ರಾಣಿಗಳೂ ಆ ಪಂಚಮಹಾಭೂತಗಳ ಮತ್ತು ಆ ಭೂತಗುಣಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ ಸಂಯೋಗದಿಂದ ಉಂಟಾದುವು. ಓ ಮಹರ್ಷಿಗಳೇ! ಈ ಮಹಾಭೂತಗಳಿಂದೇರ್ಪಟ್ಟ ಶರೀರಗಳಿಗೆಲ್ಲ, ನಾಶಕರವಾದ ಪ್ರಳಯಕಾಲವು ಬಂದಾಗ, ಆ ಪ್ರಾಣಿಗಳಿಗೆಲ್ಲಾ ಮಹತ್ತಾದ ಭಯವು ಏರ್ಪಡುವುದು. ಅಂತಹ ಸ್ಥಿತಿಯಲ್ಲಿಯೂ, ಮಹಾತ್ಮನೆಂದು ಕರೆಯುಡುವ ಮಹತ್ತತ್ವವೊಂದೇ ಕಲಗದಿರುವುದು. ಆದಿ ಸೃಷ್ಟಿಯಲ್ಲಿ

ಸರ್ವಲೋಕೇಶ್ವರನಾದ ನಾರಾಯಣನೊಬ್ಬನೇ ತನಗೆ ತಾನೇ ಆ ರೂಪವನ್ನೆತ್ತಿರುವನು. ಎಲ್ಲರ ಹೃದಯಗುಹೆಯಲ್ಲಿಯೂ ನೆಲಸಿರುವ ಸರ್ವನಿಯಾಮಕನೂ, ಸರ್ವೋತ್ತಮನೂ, ಪುರಾಣಪುರುಷನೂ ವಿಶ್ವ ಸ್ವರೂಪಿಯೂ, ಸುವರ್ಣಮಯನೂ, ಜ್ಞಾನಿಗಳಿಗೆ ಮುಖ್ಯಗತಿಯೂ ಆದ ಪರಮಾತ್ಮನ ಈ ಸ್ವರೂಪನ್ನು ಯಾವನು ತಿಳಿಯುವನೋ, ಅವನು ತನ್ನ ಬುದ್ಧಿಗೂ ಸಿಲುಕದ ಮೇಲಾದ ನೆಲೆಯಲ್ಲಿ ನಿಲ್ಲುವನು. ಆ ಮಹ ತ್ತತ್ವದಿಂದ ಮೊದಲು ಉತ್ಪನ್ನವಾದುದು ಅಹಂಕಾರವೆಂಬ ತತ್ವವು. ಆ ಅಹಂಕಾವು ಮೊದಲು ಉತ್ಪನ್ನವಾಗುವಾಗ "ನಾನು" ಎಂಬ ಭಾವದಿಂದಲೇ ಉಂಟಾದುದರಿಂದ ಅದಕ್ಕೆ ಅಹಂಕಾರವೆಂಬ ಹೆಸರು ಉಂಟಾಯಿತು. ಇದು ಸೃಷ್ಟಿಯಲ್ಲಿ ಎರಡನೆಯದು. ಈ ಅಹಂಕಾರವೇ ಪಂಚಭೂತಗಳಿಗೆ ಉತ್ಪತ್ತಿಸ್ಥಾನವಾದುದರಿಂದ, ಭೂತಾದಿಯೆಂದೂ, ಮಹತ್ತತ್ವದಿಂದಾದ ವಿಕಾರದಿಂದ ಉಂಟಾದುದಕ್ಕಾಗಿ ವೈಕಾರಿಕವೆಂದೂ ಕರೆಯಲ್ಪಡುವುದು. ಇದಕ್ಕೆ ತೈಜಸವೆಂದೂ, ಚೇತನೆಯೆಂದೂ, ಪ್ರಜಾ ಸೃಷ್ಟಿಗೆ ಕಾರಣವಾದ ಪ್ರಜಾಪತಿಯೆಂದೂ ಹೆಸರುಗಳುಂಟು. ಇಂದ್ರಿಯ ಗಳಿಗೂ, ಮನಸ್ಸಿಗೂ, ಇದೇ ಉತ್ಪತ್ತಿಸ್ಥಾನವು. ಮೂರು ಲೋಕವೂ ಇದರಿಂದಲೇ ಉಂಟಾಗುವುದು. ಇವೆಲ್ಲಾ "ಅಹಂ (ನಾನು)" ಎಂಬ ಅಭಿಮಾನಕ್ಕೆ ಆಸ್ಪದವಾಗಿ ಆ ಹೆಸರಿನಿಂದಲೇ ಕರೆಯಲ್ಪಡುವುದು. ಆತ್ಮಜ್ಞಾನದಿಂದ ತೃಪ್ತರಾಗಿ, ಮನಸ್ಸನ್ನು ಜಯಿಸಿ, ಅಧ್ಯಯನ ಯಾಗಾ ದಿಗಳಲ್ಲಿ ಸಿದ್ಧಿಹೊಂದಿದ ಮುನಿಗಳಿಗೆ ಲಭಿಸತಕ್ಕ ಸನಾತನವಾದ ಲೋಕ ವೇ ಇದು. ಅನಿರುದ್ಧನೆಂದೂ ಇದಕ್ಕೆ ಹೆಸರುಂಟು. ಅಹಂಕಾರದಿಂದ ಶಬ್ದಾದಿಗುಣಗಳನ್ನು ಅನುಭವಿಸಲು ಅಪೇಕ್ಷಿಸುವ ಮನುಷ್ಯನಿಗಾಗಿ, ಭೂತಾದಿಯೆನಿಸುವ ತಾಮಸಾಹಂಕಾರವು ಹೀಗೆ ಆಕಾಶಾದಿಭೂತಗಳ ನ್ನುಂಟುಮಾಡಿದುದರಿಂದ, ಅದಕ್ಕೆ ಭೂತಕೃತ್ತೆಂದೂ ಹೆಸರು. ವೈಕಾರಿ ಕಾಹಂಕಾರವು ಇಂದ್ರಿಯಗಳನ್ನು ದರ್ಶನಾದಿಕ್ರಿಯೆಗಳಲ್ಲಿ ಪ್ರೇರಿಸುವುದು. ತೈಜಸಾಹಂಕಾರವು ತನ್ನ ತೇಜಸ್ಸಿನಿಂದ ಹತ್ತು ಇಂದ್ರಿಯಗಳನ್ನೂ, ಪ್ರಾಣಗಳನ್ನೂ ಸೃಷ್ಟಿಸಿ, ಲೋಕವನ್ನು ಸಂತೋಷಗೊಳಿಸುವುದು.

ಇದು ನಾಲ್ವತ್ತೊಂದನೆಯ ಅಧ್ಯಾಯವು.

ಬ್ರಹ್ಮನು ಅಹಂಕಾರತತ್ವದಿಂದ ಪಂಚಭೂತ ಮೊದಲಾದುವುಗಳ ಸೃಷ್ಟಿಯನ್ನು ಕುರಿತು ಮಹರ್ಷಿಗಳಿಗೆ ಹೇಳಿದುದು.

ಓ ಮಹರ್ಷಿಗಳೇ! ತಾಮಸಾಹಂಕಾರದಿಂದ ಪೃಥಿವಿ, ವಾಯು, ಆಕಾಶ, ನೀರು, ತೇಜಸ್ಸು, ಎಂಬೀ ಪಂಚಮಹಾಭೂತಗಳೂ ಉಂಟಾದುವು. ಈ ಮಹಾಭೂತಗಳಲ್ಲಿರುವ ರೂಪ, ಶಬ್ದ, ಸ್ಪರ್ಶ, ರಸ, ಗಂಧ, ಗಳೆಂಬ ಗುಣಗಳಿಗಾಗಿಯೇ ಪ್ರಾಣಿಗಳು ಮೋಹಗೊಳ್ಳುವುವು. ಈ ಪಂಚಮಹಾಭೂತಗಳಿಂದ ಏರ್ಪಟ್ಟ ಶರೀರಗಳಿಗೆ ನಾಶವುಂಟಾಗುವಾಗಲೂ, ಪ್ರಳಯವು ಸಮೀಪಿಸಿದಾಗಲೂ, ಪ್ರಾಣಿಗಳಿಗೆಲ್ಲ ಮಹಾಭಯವುಂಟಾಗುವುದು. ಯಾವ ಭೂತವು ಬೇರೆ ಯಾವ ಭೂತದಿಂದ ಉಂಟಾಯಿತೋ, ಅದು ಲಯಕಾಲದಲ್ಲಿ ತನ್ನ ಉತ್ಪತ್ತಿಕಾರಣವಾದ ಆ ಭೂತದಲ್ಲಿಯೇ ಲಯಹೊಂದುವುದು. ಭೂತಗಳು ಒಂದರಿಂದೊಂದು ಕ್ರಮವಾಗಿ ಉಂಟಾದಹಾಗೆಯೇ ಕೊನೆಯಿಂದ ಅನುಲೋಮವಾಗಿ ಒಂದರಲ್ಲಿ ಒಂದು ಲಯಹೊಂದುವುದು. ಸ್ಥಾವರಜಂಗಮರೂಪವಾದ ಎಲ್ಲಾ ಭೂತಗಳೂ ಲಯಿಸಿಹೋದಾಗಲೂ ಜನ್ಮಾಂತರಸ್ಮರಣವುಳ್ಳ ಜ್ಞಾನಿಗಳಿಗೆ ಲಯವಿಲ್ಲ. ಮನಸ್ಸಿನೊಡನೆ ಕಲೆತು ಸೂಕ್ಷ್ಮವಾಗಿರುವ ಶಬ್ದ ಸ್ಪರ್ಶ ರೂಪ ರಸ ಗಂಧಗಳೂ, ಅವುಗಳನ್ನು ಗ್ರಹಿಸತಕ್ಕ ಕ್ರಿಯೆಗಳೂ ನಿತ್ಯವಾಗಿಯೇ ಇರುವುವು. ಸ್ಥೂಲವಾದ ಅವುಗಳೇ ಅನಿತ್ಯವೆನಿಸುವುವು. ಸ್ಥೂಲಶರೀರಗಳೆಲ್ಲವೂ ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳದೆಸೆಯಿಂದ, ಪಂಚಭೂತಗಳ ಸೇರುವೆಯಿಂದ ಆಗಿರುವುವು. ಈ ಕಾರಣದಿಂದ ಇವು ಅನಿತ್ಯವಾಗಿಯೂ, ಒಂದಕ್ಕೊಂದು ವಿಶೇಷವೇನೂ ಇಲ್ಲದವುಗಳಾಗಿಯೂ, ನಿಸ್ಸಾರಗಳಾಗಿಯೂ ಇದ್ದು ಹೋಗಿಬಿಡುವುವು. ಆ ಶರೀರಗಳು ರಕ್ತಮಾಂಸಗಳ ಸಮುದಾಯವಾಗಿ, ಒಂದರ ಬಲವನ್ನು ಹಿಡಿದು ಮತ್ತೊಂದು ಜೀವಿಸುವುವು. ಹಸಿವು ಮೊದಲಾದುವುಗಳ ಬಾಧೆಗಳಿಂದ ಪೀಡಿಸಲ್ಪಡುವ ಆ ಶರೀರವು ಆತ್ಮಕ್ಕಿಂತ ಬೇರೆಯಾಗಿ, ಕಾರ್ಪಣ್ಯಜೀವನದಿಂದ ಸ್ವಲ್ಪಕಾಲಕ್ಕಿದ್ದು ಹೋಗುವುವು. ಈ ಶರೀರದಲ್ಲಿ ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನಗಳೆಂಬ ಐದು ವಾಯುಗಳು ಆತ್ಮನೊಡನೆ ನೆಲೆಗೊಂಡಿರು

ವುವು. ಆ ಐದು ಪ್ರಾಣಗಳೊಡನೆ ಮನಸ್ಸು, ವಾಕ್ಕು, ಬುದ್ಧಿಯೆಂಬಿವು ಮೂರೂ ಸೇರಿ ಈ ಎಂಟರ ಸಮುದಾಯವೇ ಭೂತಪ್ರಪಂಚವೆನಿಸುವುದು ಅವೆಂಟೂ ಜೀವನಿಗೆ ಮೋಕ್ಷದವರೆಗೂ ಅನುಸರಿಸಿಬರುವ ಸೂಕ್ಷ್ಮಶರೀರ ವಾಗಿದೆ. ಯಾವನಿಗೆ ತ್ವಕ್ಕು, ಘ್ರಾಣ, ನೇತ್ರ, ಶ್ರೋತ್ರ, ನಾಲಗೆ, ವಾಕ್ಕು, ಇವು ತನ್ನ ಸ್ವಾಧೀನವಾಗಿದ್ದು, ಮನಸ್ಸು ಪರಿಶುದ್ಧವಾಗಿಯೂ, ಬುದ್ಧಿಯು ಬ್ರಹ್ಮವನ್ನು ಬಿಟ್ಟು ಅನ್ಯಾಸಕ್ತವಾಗದೆಯೂ ಇರುವುವೋ, ಅವನು ಎಲ್ಲಕ್ಕಿಂತಲೂ ಮೇಲೆನಿಸಿದ ಶುಭಕರವಾದ ಬ್ರಹ್ಮವನ್ನು ಸೇರುವನು. ಈ ಮೇಲೆ ಹೇಳಿದುವೆಂಟೂ ಅಗ್ನಿಗಳಾಗಿ ಅವನ ಅಹಂ ಕಾರಗಳನ್ನು ಸದಾ ದಹಿಸುತ್ತಿರುವುವು. ಬ್ರಹ್ಮವನ್ನು ಸೇರಿದ ಆತ್ಮನಿಗೆ ತಿರುಗಿ ಪುನರ್ಜನ್ಮವಿಲ್ಲ. ಅಹಂಕಾರಜನ್ಯಗಳೆನಿಸಿದ ಹನ್ನೊಂದು ಇಂದ್ರಿ ಯಗಳಲ್ಲಿ ಕಿವಿ, ಚರ್ಮ, ನಾಲಗೆ, ಕಣ್ಣು, ಮೂಗು ಎಂಬಿವು ಜ್ಞಾನೇಂದ್ರಿಯಗಳೆನಿಸುವುವು. ಕೈ, ಕಾಲು, ಪಾಯು, ಲಿಂಗ, ವಾಕ್ಕು, ಎಂಬಿವು ಕರ್ಮೇಂದ್ರಿಯಗಳೆನಿಸುವುವು. ಮನಸ್ಸೆಂಬುದು ಹನ್ನೊಂದ ನೆಯ ಇಂದ್ರಿಯವು. ಯೋಗಿಯು ಈ ಇಂದ್ರಿಯಗಳನ್ನು ಮೊದಲು ಅಡಗಿಸಬೇಕು. ಆಗಲೇ ಅವನಿಗೆ ಬ್ರಹ್ಮಸ್ವರೂಪವು ಪ್ರಕಾಶಿಸುವುದು. ಮೇಲೆ ಹೇಳಿದ ಕಿವಿ ಮೊದಲಾದುವೈದೂ ಬುದ್ಧಿಯ ಸಂಬಂಧವು ಳ್ಳುವು. ಕೈ, ಕಾಲು ಮೊದಲಾದ ಪಂಚೇಂದ್ರಿಯಗಳೂ ಕಾರ್ಯದಲ್ಲಿ ಮಾತ್ರ ಪ್ರವರ್ತಿಸತಕ್ಕುವು. ಈ ಜ್ಞಾನೇಂದ್ರಿಯ ಕರ್ಮೇಂದ್ರಿಯಗ ಳೆರಡೂ ಮನಸ್ಸನ್ನು ಅನುಸರಿಸುವುವು. ಬುದ್ಧಿಯೆಂಬುದು ಹನ್ನೆರಡನೆ ಯದು. ಇವುಗಳ ತತ್ವವನ್ನು ತಿಳಿದುಕೊಂಡ ಪಂಡಿತರು ಕೃತಕೃತ್ಯ ರೆನಿಸುವರು. ಪ್ರಾಣಿಗಳಿಗೆ ನಿವಾಸಸ್ಥಾನಗಳು, ಭೂಮಿ, ನೀರು, ಆಕಾಶ ವೆಂಬಿವು ಮೂರೇ! ಪ್ರಾಣಿಗಳ ಉತ್ಪತ್ತಿಯು ನಾಲ್ಕು ವಿಧವಾದುದು. ಅವುಗಳಿಗೆ ಅಂಡಜ, ಉದ್ಬಿಜ್ಜ, ಸ್ವೇದಜ, ಜರಾಯುಜಗಳೆಂದು ಹೆಸರು. ಆಕಾಶದಲ್ಲಿ ಸಂಚರಿಸುವ ಪಕ್ಷಿಗಳೂ, ಸರ್ಪ ಮೊದಲಾದುವೂ ಮೊಟ್ಟೆಗಳಿಂದ ಹುಟ್ಟುವುದರಿಂದ, ಅವು ಅಂಡಜಗಳೆನಿಸುವುವು. ಕ್ರಿಮಿ ಗಳು ಸ್ವೇದಜಗಳೆನಿಸುವುವು. ಈ ಕ್ರಿಮಿಗಳ ಜನ್ಮವು ಕೇವಲ ಹೀನ ವಾದುದೆಂದು ಹೇಳಲ್ಪಡುವುದು. ಭೂಮಿಯನ್ನು ಭೇದಿಸಿಕೊಂಡು

ಬರತಕ್ಕ ಜೀವಗಳು, ಎಂದರೆ, ಮರ, ಗಿಡ, ಬಳ್ಳಿ ಮೊದಲಾದುವು ಉದ್ಭಿಜ್ಜಗಳೆನಿಸುವುವು. ದ್ವಿಪಾದಗಳೂ, ಚತುಷ್ಪಾದಗಳೂ, ಇನ್ನೂ ಹಲವು ತಿರ್ಯಗ್ಜಾತಿಗಳೂ ಜರಾಯುಜಗಳೆಂದು ಕರೆಯಲ್ಪಡುವುವು. ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ತಪಸ್ಸು, ಮತ್ತು ಪುಣ್ಯಕರ್ಮಗಳು ಎಂಬ ಎರಡು ಬಗೆಯ ಮಾರ್ಗಗಳುಂಟು. ಅವುಗಳಲ್ಲಿ ಕರ್ಮವೆಂಬುದು ಹಲವು ಶಾಖೆಯಾಗಿರುವುದು. ಯಾಗಗಳೂ, ದಾನಗಳೂ, ಕರ್ಮಭಾಗದಲ್ಲಿ ಸೇರುವುವು. ವೇದಾಧ್ಯಯನವೂಕೂಡ ಪುಣ್ಯಕರ್ಮವೆಂದೇ ಹಿರಿಯರ ಹೇಳಿಕೆ. ಈ ಪುಣ್ಯಕರ್ಮವಿಚಾರಗಳನ್ನು ಯಾವನು ಯಥಾವತ್ತಾಗಿ ತಿಳಿಯುವನೋ, ಅವನು ಎಲ್ಲಾ ಪಾಪಗಳಿಂದ ಬಿಡುಗಡೆಹೊಂದಿ ಮುಕ್ತನಾಗುವನೆಂದು ತಿಳಿಯಿರಿ.

ಎಲೈ ಮಹರ್ಷಿಗಳೇ ! ಇನ್ನು ಇಂದ್ರಿಯಗಳ ವಿಚಾರವನ್ನು ಹೇಳುವೆನು ಕೇಳಿರಿ. ಆಕಾಶವು ಮೊದಲನೆಯ ಭೂತವು. ಶ್ರೋತ್ರೇಂದ್ರಿಯವು ಅದಕ್ಕೆ ಅಧ್ಯಾತ್ಮವೆಂದೂ, ಶಬ್ದವು ಅಧಿಭೂತವೆಂದೂ, ದಿಕ್ಕು ಅಧಿದೈವತವೆಂದೂ ಹೇಳಲ್ಪಡುವುದು. ವಾಯುವು ಆಕಾಶದಿಂದ ಹುಟ್ಟಿದ ಎರಡನೆಯ ಭೂತವು. ಇದಕ್ಕೆ ತ್ವಗಿಂದ್ರಿಯವು ಅಧ್ಯಾತ್ಮವು. ಸ್ಪರ್ಶವು ಅಧಿಭೂತವು. ಮಿಂಚು ಅಧಿದೈವತವು. ತೇಜಸ್ಸೆಂಬುದು ಮೂರನೆಯ ಭೂತವು. ಇದಕ್ಕೆ ನೇತ್ರವು ಅಧ್ಯಾತ್ಮವು, ರೂಪವು ಅಧಿಭೂತವು, ಸೂರ್ಯನು ಅಧಿದೈವತವು. ಜಲವೆಂಬುದು ನಾಲ್ಕನೆಯ ಭೂತವು, ಇದರಲ್ಲಿ ನಾಲಗೆಯು ಅಧ್ಯಾತ್ಮವೆಂದೂ, ರಸವು ಅಧಿಭೂತವೆಂದೂ, ಚಂದ್ರನು ಅಧಿದೈವತವೆಂದೂ ಹೇಳಲ್ಪಡುವನು. ಪೃಥಿವಿಯು ಐದನೆಯ ಭೂತವು. ಇದರಲ್ಲಿ ಘ್ರಾಣವು ಅಧ್ಯಾತ್ಮವೆಂದೂ, ಗಂಧವು ಅಧಿಭೂತವೆಂದೂ, ವಾಯುವು ಅಧಿದೈವತವೆಂದೂ ಹೇಳಲ್ಪಟ್ಟದೆ. ಹೀಗೆ ಈ ಪಂಚಭೂತಗಳಲ್ಲಿ ನಾಲ್ಕುಬಗೆಯ ವಿಧಿಗಳು ಹೇಳಲ್ಪಟ್ಟವೆ. ಇನ್ನು ಮೂರುಬಗೆಯುಳ್ಳ ಕರ್ಮೇಂದ್ರಿಯಗಳ ವಿವರನ್ನು ತಿಳಿಸುವೆನು. ಪಾದವೆಂಬ ಕರ್ಮೇಂದ್ರಿಯವು ಅಧ್ಯಾತ್ಮವೆನಿಸುವುದು. ನಡೆಯೇ ಅಧಿಭೂತವು. ವಿಷ್ಣುವೇ ಅಲ್ಲಿ ಅಧಿದೈವತವು. ಹಾಗೆಯೇ ಪಾಯುವೆಂಬುದು ಅಧ್ಯಾ

ತ್ಮವು. ಇದರ ಮಾರ್ಗವಾಗಿಯೇ ಅಪಾನವು ಅಧೋಮುಖವಾಗಿ ಹೋಗುವುದರಿಂದ, ಇದರಲ್ಲಿ ವಿಸರ್ಜನಕಾರ್ಯವೇ ಅಧಿಭೂತವು, ಮಿತ್ರನು ಅಧಿದೈವತವು. ಜನನೇಂದ್ರಿಯವು ಅಧ್ಯಾತ್ಮವು. ಶುಕ್ರವು (ವೀರ್ಯವು) ಅಧಿಭೂತವು. ಪ್ರಜಾಪತಿಯೇ ಅಧಿದೈವತವು. ಆಮೇಲೆ ಕೈಗಳು ಅಧ್ಯಾತ್ಮವು, ಕಾರ್ಯವೇ ಅಧಿಭೂತವು, ಇಂದ್ರನು ಅಧಿದೈವತವು. ವಾಕ್ಕು ಅಧ್ಯಾತ್ಮವು, ನುಡಿಯು ಅಧಿಭೂತವು, ಅಗ್ನಿಯು ಅಧಿದೈವತವು. ಹೀಗೆ ಪಂಚಭೂತಗಳಿಂದ ಏರ್ಪಟ್ಟ ಶರೀರವನ್ನು ಕರ್ಮದಲ್ಲಿ ಪ್ರೇರಿಸತಕ್ಕ ಮನಸ್ಸು ಅಧ್ಯಾತ್ಮವು, ಅದರ ಸಂಕಲ್ಪವು ಅಧಿಭೂತವು, ಚಂದ್ರನು ಅಧಿದೈವತವು. ಎಲ್ಲರ ಸಂಸಾರಬಂಧಕ್ಕೂ ಕಾರಣವಾದ ಅಹಂಕಾರವೇ ಅಧ್ಯಾತ್ಮವು, ಅಭಿಮಾನವೇ ಅಧಿಭೂತವು, ಅದಕ್ಕೆ ರುದ್ರನು ಅಧಿದೇವತೆ, ಷಡಿಂದ್ರಿಯಗಳನ್ನೂ ನಿಯಮಿಸತಕ್ಕ ಬುದ್ಧಿಯನ್ನು ಅಧ್ಯಾತ್ಮವೆಂದು ಹೇಳುವರು. ಜ್ಞಾನವೇ ಅಧಿಭೂತವು. ಅಹಸ್ಸೆಂಬುದು ಅದಕ್ಕೆ ಅಧಿದೈವತವು. ಓ ಪ್ರಾಜ್ಞರೇ! ನಿಮಗೆ ಹೇಳಿದ ಈ ಅಧ್ಯಾತ್ಮವಿದ್ಯೆಯನ್ನು ಜ್ಞಾನಿಗಳು ಚೆನ್ನಾಗಿ ತಿಳಿದಿರುವರು. ಇಂದ್ರಿಯಗಳು, ಇಂದ್ರಿಯಗಳಿಗೆ ಗೋಚರವಾಗುವ ವಿಷಯಗಳು, ಪಂಚಮಹಾಭೂತಗಳು, ಇವುಗಳನ್ನೆಲ್ಲ ಒಂದಾಗಿಸೇರಿಸಿ ಮನಸ್ಸಿನಲ್ಲಿ ಅಡಗಿಸಬೇಕು. ಈ ಎಲ್ಲಾ ರೂಪದಿಂದಿರುವ ಮನಸ್ಸು ಬ್ರಹ್ಮನಲ್ಲಿ ಲಯಿಸಿದರೆ, ಮನುಷ್ಯರಿಗೆ ಮುಂದೆ ಈ ಪ್ರಪಂಚದಲ್ಲಿ ಜನಿಸುವುದರಿಂದ ಲಭಿಸುವ ಸುಖವಾವುದೂ ಬೇಕಾಗಿರುವುದಿಲ್ಲ. ಬ್ರಹ್ಮಜ್ಞಾನದಿಂದ ಕೂಡಿದ ಬುದ್ಧಿಯುಳ್ಳ ವಿದ್ವಾಂಸರಿಗೆ, ಆ ಬ್ರಹ್ಮಜ್ಞಾನದಿಂದ ಉಂಟಾಗುವ ಸುಖವೊಂದೇ ಸುಖವೆನಿಸುವುದು. ಓ ಮುನೀಶ್ವರರೇ! ಇನ್ನು ನಾನು ಸುಲಭೋಪಾಯದಿಂದಲಾಗಲಿ, ಕಠಿನೋಪಾಯದಿಂದಲಾಗಲಿ, ಮನಸ್ಸನ್ನು ಪರಿಪಕ್ವಮಾಡುವ ಮಂಗಳಕರವಾದ ನಿವೃತ್ತಿಮಾರ್ಗವನ್ನು ತಿಳಿಸುವೆನು ಕೇಳಿರಿ. ಎಲ್ಲಾ ಪ್ರಾಣಿಗಳೂ ಅನುಷ್ಠಿಸಬಹುದಾದ ಧರ್ಮವಿದು. ಈ ನಿವೃತ್ತಿಧರ್ಮವು ಹೆಮ್ಮೆಗೆ ಕಾರಣವಾದ ಪಾಂಡಿತ್ಯ ಮೊದಲಾದ ಗುಣಗಳನ್ನೇ ಅವಗುಣಗಳನ್ನಾಗಿ ತೋರಿಸುವುದು, ಅಭಿಮಾನವನ್ನು ಬಿಡಿಸುವುದು, ಏಕಾಂತವಾಸಕ್ಕೆ ಪ್ರೋತ್ಸಾಹವನ್ನು ಕೊಡುವುದು, ಭೇದಬುದ್ಧಿಯನ್ನು ನೀಗಿಸುವುದು, ಬ್ರಹ್ಮಜ್ಞಾನಿ

ಗಳಿಗೆ ಯೋಗ್ಯವಾದ ಈ ಮಾರ್ಗವನ್ನೇ ಎಲ್ಲಾ ಸುಖಗಳನ್ನೊಳಕೊಂಡ ಆತ್ಯಂತಿಕಸುಖವೆಂದೇ ಹೇಳುವರು. ಆಮೆಯು ತನ್ನ ಎಲ್ಲಾ ಅವಯವಗಳನ್ನೂ ಉಡುಗಿಸಿಟ್ಟುಕೊಳ್ಳುವಂತೆ, ಎಲ್ಲಾ ಕರ್ಮಗಳನ್ನೂ ಉಡುಗಿಸಿಕೊಂಡು, ಪಾಪರಹಿತನಾಗಿ, ಸರ್ವಸಂಗದಿಂದ ಮುಕ್ತನಾದ ಮನುಷ್ಯನು ಯಾವಾಗಲೂ ಸುಖಿಯೇ! ಕಾಮವನ್ನಡಗಿಸಿ, ಆಸೆಯನ್ನು ತೊರೆದು, ಸರ್ವಸುಹೃತ್ತೆನಿಸಿ ಇರುವವನೇ ಬ್ರಹ್ಮಸಾರೂಪ್ಯವನ್ನು ಹೊಂದಲು ಅರ್ಹನು. ವಿಷಯಗಳಲ್ಲಿ ಪ್ರವರ್ತಿಸದಂತೆ ಎಲ್ಲಾ ಇಂದ್ರಿಯಗಳನ್ನೂ ಅಡಗಿಸುವುದರಿಂದ, ಎಲ್ಲಾ ಲೋಕಸುಖಗಳಲ್ಲಿಯೂ ವಿರಕ್ತನಾದ ಮುನಿಯಲ್ಲಿ ಅಧ್ಯಾತ್ಮವೆಂಬ (ಆತ್ಮಜ್ಞಾನವೆಂಬ ಅಗ್ನಿಯು) ಚೆನ್ನಾಗಿ ಜ್ವಲಿಸುವುದು. ಸೌದೆಗಳನ್ನೊಡ್ಡಿದ ಬೆಂಕಿಯು ಹೇಗೆ ಪ್ರಕಾಶದಿಂದ ಉರಿಯುವುದೋ, ಹಾಗೆ ಇಂದ್ರಿಯನಿರೋಧದಿಂದ ಜ್ವಲಿಸುವ ಅಗ್ನಿಯು ಆತ್ಮಸ್ವರೂಪವನ್ನು ಚೆನ್ನಾಗಿ ಪ್ರಕಾಶಗೊಳಿಸುವುದು. ಪ್ರಸನ್ನಮನಸ್ಸುಳ್ಳ ಯೋಗಿಯು ಯಾವಾಗ ತನ್ನ ಹೃದಯದಲ್ಲಿಯೇ ಸಮಸ್ತಪ್ರಾಣಿಗಳಿಗೂ ಸಮವೆನಿಸಿದ ಆತ್ಮವನ್ನು ನೋಡುವನೋ, ಆಗ ಅವನು ಸೂಕ್ಷ್ಮಕ್ಕಿಂತಲೂ ಸೂಕ್ಷ್ಮವಾದ, ತನಗಿಂತಲೂ ಮೇಲಿಲ್ಲದ ಸ್ವಯಂಪ್ರಕಾಶವೆನಿಸಿದ ಜ್ಯೋತಿಯನ್ನು ಹೊಂದುವನು. ಶರೀರವೆಂಬುದು ತೇಜಸ್ಸು, ಅಪ್ಪು, ವಾಯು, ಭೂಮಿ, ಆಕಾಶವೆಂಬೀ ಐದು ಭೂತಗಳನ್ನೇ ಕ್ರಮವಾಗಿ ರೂಪ, ಉದರ, ತ್ವಕ್ಕು, ಘ್ರಾಣ, ಕಿವಿಯೆಂಬ ವಿಷಯಗ್ರಹಣಸಾಧನಗಳನ್ನಾಗಿ ಹೊಂದಿರುವುದು. ಆ ಶರೀರವು ರೋಗ ಶೋಕಾದಿಗಳಿಂದ ತುಂಬಿದುದು. ಪಂಚೇಂದ್ರಿಯಗಳಿಗೆ ನೆಲೆಯಾದುದು. ಪಂಚಭೂತಗಳಿಂದೇರ್ಪಟ್ಟುದು. ಒಂಭತ್ತು ದ್ವಾರಗಳಿಂದ ಕೂಡಿ, ಆತ್ಮ, ಪರಮಾತ್ಮರೆಂಬ ಎರಡು ದೇವತೆಗಳಿಗೆ ಆಶ್ರಯವಾದುದು. ಕೇವಲ ಕಶ್ಮಲವಾಗಿ, ನೋಡುವುದಕ್ಕೂ ಅಸಹ್ಯವಾಗಿರುವುದು. ಮೂರು ಗುಣಗಳಿಂದಲೂ, ಸಪ್ತಧಾತುಗಳಿಂದಲೂ ಕೂಡಿದುದು. ಯಾವಾಗಲೂ ಅನ್ನಾದಿಗಳ ಲಾಭದಲ್ಲಿಯೇ ಅತ್ಯಾಸಕ್ತಿಯುಳ್ಳುದು. ಜಡವಾದುದು. ಈ ಪ್ರಾಣಿಲೋಕದಲ್ಲಿ ಯಾವಾಗಲೂ ಆಧಿ ವ್ಯಾಧಿಗಳಿಂದ ಪೀಡಿತವಾಗಿ, ಮುಂದೆ ನಡೆಸುವುದಕ್ಕೂ ಕಷ್ಟವಾಗಿ, ಬುದ್ಧಿಯನ್ನೇ ಆಶ್ರಯಿಸಿ ಬದುಕಬೇಕಾಗಿರುವ ಆ ಶರೀರವೇ

ಕಾಲಚಕ್ರರೂಪವಾಗಿ ಸುತ್ತಿಸುತ್ತಿ ಬರುತ್ತಿರುವುದು. ಭಯಂಕರವಾದ ಅಗಾಧಸಮುದ್ರದಂತಿದ್ದು, ಮೋಹವೆಂಬ ಹೆಸರಿನಿಂದ ಕರೆಯಲ್ಪಡುವ ಈ ಶರೀರವೇ ಕಾರಣವಾಗಿದ್ದುಕೊಂಡು, ಪ್ರಪಂಚದ ಉತ್ಪತ್ತಿ ಲಯಗಳನ್ನೂ, ಪ್ರಾಣಿಗಳಿಗೆ ನಿದ್ರಾಮೋಹಗಳನ್ನೂ ಉಂಟುಮಾಡುತ್ತಿರುವುದು. ಇಂದ್ರಿಯಗಳನ್ನು ಯಾವನು ಅಡಗಿಸಬಲ್ಲನೋ, ಅವನು ಕಾಮ, ಕ್ರೋಧ, ಲೋಭ, ದ್ರೋಹ, ಭಯ, ಅಸತ್ಯವೆಂಬ ದೋಷಗಳನೆಲ್ಲ ನೀಗಿಸಬಲ್ಲನು. ಮೂರು ಗುಣಗಳಿಂದ ಕೂಡಿದ ಪಂಚಭೂತಾತ್ಮಕವಾದ ಈ ಶರೀರವನ್ನು ಗೆದ್ದವನಿಗೇ ಆಕಾಶದಲ್ಲಿ ಉತ್ತಮವಾದ ಶಾಶ್ವತ ಸ್ಥಾನವು ಗೋಚರಿಸುವುದು. ಪಂಚೇಂದ್ರಿಯಗಳೆಂಬ ಅಗಾಧವಾದ ಐದು ತೀರಗಳಿಂದಲೂ, ಮನಸ್ಸೆಂಬ ನಿರರ್ಗಳವಾದ ಮತ್ತು ಭಯಂಕರವಾದ ಪ್ರವಾಹದಿಂದಲೂ, ಮೋಹವೆಂಬ ಮಡುವಿನಿಂದಲೂ ದುಸ್ತರವಾದ ಈ ಶರೀರವೆಂಬ ನದಿಯನ್ನು ದಾಟಬೇಕು. ಕಾಮ ಕ್ರೋಧಗಳನ್ನು ಜಯಿಸಿದವನು ಸಮಸ್ತ ದೋಷಗಳಿಂದ ಮುಕ್ತನಾಗಿ ಪರಬ್ರಹ್ಮವನ್ನು ಕಾಣುವನು. ಆ ಜ್ಞಾನಿಯು ಮನಸ್ಸನ್ನು ತನ್ನಲ್ಲಿತಾನೇ ಅಡಗಿಸಿ, ತನ್ನೊಳಗೂ, ಇತರ ಪ್ರಾಣಿಗಳೊಳಗೂ ಸಮವಾಗಿ ಆತ್ಮವನ್ನು ಕಾಣಬಲ್ಲನು. ಒಂದೇ ವಿಧವಾಗಿಯೂ, ಅನೇಕ ವಿಧವಾಗಿಯೂ ತೋರುವ ಆತ್ಮಸ್ವರೂಪವನ್ನು ಕಾಣುವನು. ಒಂದೇ ದೀಪದಿಂದ ಅನೇಕ ದೀಪಗಳು ಉಂಟಾಗುವಂತೆ, ಸಂಕಲ್ಪದಿಂದ ಅನೇಕ ಶರೀರಗಳುಂಟಾಗುವುದನ್ನೂ ನೋಡುವನು. “ಆ ಅಂತರಾತ್ಮನೇ ವಿಷ್ಣು! ಅವನೇ ಮಿತ್ರನು! ವರುಣನೂ, ಅಗ್ನಿಯೂ, ಪ್ರಜಾಧಿಪತಿಯೂ, ಧಾತೃ ವಿಧಾತೃಗಳೂ ಅವನೇ! ಅವನೇ ಪ್ರಭು! ಅವನು ಸರ್ವತೋಮುಖವುಳ್ಳವನು! ಸರ್ವಪ್ರಾಣಿಗಳಿಗೂ ಹೃದಯವಾಗಿ, ಮಹಾಮಹಿಮೆಯಿಂದ ಪ್ರಕಾಶಿಸತಕ್ಕವನು.” ಎಂಬೀ ವಿಷಯವನ್ನೆಲ್ಲ ಆ ಜ್ಞಾನಿಯು ಸಾಕ್ಷಾತ್ಕರಿಸುವನು. ಬ್ರಾಹ್ಮಣರೂ, ದೇವಾಸುರ, ಯಕ್ಷ, ರಾಕ್ಷಸ, ಪಿಶಾಚರೂ, ಪಿತೃಗಳೂ, ಪನ್ನಗರೂ, ಎಲ್ಲಾ ಭೂತಗಣಗಳೂ, ಮಹರ್ಷಿಗಳೂ, ಯಾವನನ್ನು ಸ್ತುತಿಸುವುವೋ, ಅವನು ಹೃದಯದಲ್ಲಿರುವುದನ್ನು ಜ್ಞಾನಿಗಳು ಕಾಣಬಲ್ಲರು.

ಇದು ನಾಲ್ವತ್ತೆರಡನೆಯ ಅಧ್ಯಾಯವು.

ಬ್ರಹ್ಮನು ಮಹರ್ಷಿಗಳನ್ನು ಕುರಿತು ಕ್ಷತ್ರಿಯರಿಗೆ ರಜೋ
ಗುಣವು ಮುಖ್ಯವೆಂದೂ, ಅವರು ಸತ್ವಪ್ರಧಾನರಾದ
ಬ್ರಾಹ್ಮಣರನ್ನು ಕಾಪಾಡಬೇಕಾದುದು ಕರ್ತವ್ಯ
ವೆಂದೂ ತಿಳಿಸಿ, ಆಯಾ ವರ್ಗದಲ್ಲಿ ಉತ್ತಮ
ವಾದುದನ್ನೂ, ಅಹಿಂಸಾದಿ ಧರ್ಮಗಳನ್ನೂ
ತಿಳಿಸಿದುದು.

ಓ ಮಹರ್ಷಿಗಳೇ! ಕೇಳಿರಿ. ಮನುಷ್ಯರಲ್ಲಿ ರಜೋಗುಣವನ್ನೇ ಪ್ರಧಾನವಾಗಿ ಉಳ್ಳ ಕ್ಷತ್ರಿಯನೇ ಮೇಲೆನಿಸಿ ಎಲ್ಲರನ್ನೂ ಪಾಲಿಸತಕ್ಕ ರಾಜನೆನಿಸುವನು. ಹಾಗೆಯೇ ವಾಹನಗಳಿಗೆ ಆನೆಯೂ, ಕಾಡುಮೃಗ ಗಳಿಗೆಲ್ಲ ಸಿಂಹವೂ, ಪಶುಗಳಿಗೆ ಆಡೂ, ಬಿಲವಾಸಿಗಳಿಗೆ ಸರ್ಪವೂ, ಗೋಜಾತಿಗಳಿಗೆ ವೃಷಭವೂ, ಸ್ತ್ರೀಯರಿಗೆ ಪುರುಷನೂ, ರಾಜರೆನಿಸು ವುವು. ಆಲ,ನೇರಳೆ, ಅರಳಿ, ಬೂರಗ, ಶಿಂಶುಕ, ಮೇಷಶೃಂಗ, ಬಿದುರು, ಇವೆಲ್ಲಾ ವೃಕ್ಷರಾಜಗಳು. ಹಿಮವಾನ್, ಪಾರಿಯಾತ್ರ, ಸಹ್ಯ, ವಿಂಧ್ಯ, ತ್ರಿಕೂಟ, ಶ್ವೇತ, ನೀಲ, ಭಾಸ, ರಾಷ್ಟ್ರವಂತ, ಭೃಶಸ್ಕಂಧ, ಮಹೇಂದ್ರ, ಮಾಲ್ಯವಂತ, ಇವೆಲ್ಲ ಪರ್ವತರಾಜಗಳು. ಗಣಗಳಿಗೆ ಮರುತ್ತುಗಳೂ, ಗ್ರಹಗಳಿಗೆ ಸೂರ್ಯನೂ, ನಕ್ಷತ್ರಗಳಿಗೆ ಚಂದ್ರನೂ, ಪಿತೃಗಳಿಗೆ ಯಮ ನೂ, ನದಿಗಳಿಗೆ ಸಮುದ್ರನೂ, ಜಲಗಳಿಗೆ ವರುಣನೂ, ದೇವತೆಗಳಿಗೆ ಇಂದ್ರನೂ, ಉಷ್ಣಗಳಿಗೆ ಸೂರ್ಯನೂ, ತಾರೆಗಳಿಗೆ ಚಂದ್ರನೂ, ಭೂತ ಗಳಿಗೆ ಅಗ್ನಿಯೂ, ಬ್ರಾಹ್ಮಣರಿಗೆ ಬೃಹಸ್ಪತಿಯೂ, ಓಷಧಿಗಳಿಗೆ ಸೋಮ ನೂ, ಬಲಾಢ್ಯರಿಗೆ ವಿಷ್ಣುವೂ, ರೂಪಗಳಿಗೆ ತ್ವಷ್ಟನೂ, ಪಶುಗಳಿಗೆ ಶಿವನೂ, ದಕ್ಷಿಣೆಗಳಿಗೆ ಯಜ್ಞವೂ, ವೇದಗಳಿಗೆ ಋಕ್ಕೂ, ದಿಕ್ಕುಗಳಿಗೆ ಉತ್ತರವೂ, ವಿಪ್ರರಿಗೆ ಸೋಮನೂ, ಸಮಸ್ತ ರತ್ನಗಳಿಗೂ ಕುಬೇರ ನೂ, ದೇವತೆಗಳಿಗೆ ಪುರಂದರನೂ, ಪ್ರಧಾನವಾಗಿ ಆಯಾವರ್ಗದಲ್ಲಿ ರಾಜರೆನಿಸುವರು. ಸೃಷ್ಟಿಯು ಪಂಚಭೂತಗಳನ್ನು ಅಧಿಪತಿಯಾಗಿ ಉಳ್ಳದು. ಪ್ರಜೆಗಳಿಗೆಲ್ಲ ಪ್ರಜಾಧಿಪತಿಯೇ ಪ್ರಭು. ಬ್ರಹ್ಮಸ್ವರೂಪಿ ಯಾದ ನಾನು ಎಲ್ಲಾ ಭೂತಗಳಿಗೂ ಪ್ರಧಾನನು. ನನಗಿಂತಲೂ, ವಿಷ್ಣುವಿಗಿಂತಲೂ ಮೇಲೆನಿಸಿದ ಭೂತವು ಪ್ರಪಂಚದಲ್ಲಿಲ್ಲ. ಬ್ರಹ್ಮಾ

ತ್ಮಕನಾದ ವಿಷ್ಣುವೇ ರಾಜರೆಲ್ಲರಿಗೂ ಅಧಿರಾಜನು. ಎಲ್ಲರಿಗೂ ಮೇಲೆನಿಸಿದ ಅವನೇ ಸರ್ವೇಶ್ವರನೆಂಬುದನ್ನು ಬಲ್ಲೆವು. ಅವನೇ ವಿಭು! ಅವನೇ ಪ್ರಜಾಧಿಪತಿ! ದೇವ ದಾನವ ಗಂಧರ್ವ ಯಕ್ಷ ಕಿನ್ನರ ನಾಗ ಪನ್ನಗರಿಗೆಲ್ಲ ಆತನೇ ಈಶ್ವರನು. ದೇವತೆಗಳಿಂದ ಅನುಸರಿಸಲ್ಪಟ್ಟ ಎಲ್ಲಾ ಸ್ತ್ರೀಯರಿಗೂ, ಮಹಾದೇವಿಯೆನಿಸಿದ ಪಾರ್ವತಿಯೇ ಪ್ರಭುವೆಂದು ಹೇಳುವರು. ಆ ಪಾರ್ವತಿಯೇ ಸ್ತ್ರೀಯರಲ್ಲಿ ಮೇಲೆನಿಸಿದವಳು. ಸಮಸ್ತ ಮಂಗಳಗಳನ್ನೂ ಉಂಟುಮಾಡತಕ್ಕವಳು. ಸಂತೋಷಗಳಲ್ಲಿ ಧನಲಾಭದಿಂದ ಉಂಟಾಗತಕ್ಕ ಸಂತೋಷವೇ ಮೇಲಾದುದು. ಸ್ತ್ರೀಯರಲ್ಲಿ ಅಪ್ಸರಸ್ಸುಗಳು ಮೇಲೆನಿಸಿರುವರು. ರಾಜರು ಯಾವಾಗಲೂ ಧರ್ಮಶ್ರದ್ಧೆಯುಳ್ಳವರು. ಬ್ರಾಹ್ಮಣರು ಧರ್ಮಕ್ಕೆ ಸೇತುವೆಗಳಾಗಿರುವರು. ಆದುದರಿಂದ ರಾಜನಾದವನು ಬ್ರಾಹ್ಮಣರ ರಕ್ಷಣೆಗಾಗಿ ಸರ್ವವಿಧದಿಂದಲೂ ಪ್ರಯತ್ನಿಸಬೇಕು. ಯಾವ ರಾಜನ ದೇಶದಲ್ಲಿ ಸಾಧುಗಳು ಹಿಂಸೆಗೆ ಗುರಿಯಾಗುವರೋ, ಅಂತಹ ರಾಜರು ಸ್ವಧರ್ಮಗಳನ್ನೆಲ್ಲ ಬಿಟ್ಟವರೆನಿಸಿ, ದೇಹಾವಸಾನದಲ್ಲಿಯೂ ಅಧೋಗತಿಯನ್ನೇ ಹೊಂದುವರು. ಯಾವ ರಾಜರ ದೇಶದಲ್ಲಿ ಸಾಧುಗಳು ಚೆನ್ನಾಗಿ ರಕ್ಷಿಸಲ್ಪಡುವರೋ, ಅಂತವರು ಮಹಾತ್ಮರೆನಿಸಿ ಇಹಪರಗಳೆರಡರಲ್ಲಿಯೂ ಆನಂದಿಸುವರು.

ಓ ಮಹರ್ಷಿಗಳೇ! ಇನ್ನು ಧರ್ಮದ ಲಕ್ಷಣಗಳನ್ನು ಹೇಳುವೆನು. ಕೇಳಿರಿ. ಅಹಿಂಸೆಯೇ ಧರ್ಮಕ್ಕೆ ಮುಖ್ಯಲಕ್ಷಣವು. ಅಧರ್ಮದ ಲಕ್ಷಣವು ಹಿಂಸೆಯೆನಿಸುವುದು. ಇದರಂತೆಯೇ ಪ್ರಕಾಶವೇ ದೇವತೆಗಳಿಗೆ ಲಕ್ಷಣವು. ಕರ್ಮವು ಮನುಷ್ಯರ ಲಕ್ಷಣವು. ಆಕಾಶಕ್ಕೆ ಶಬ್ದವೂ, ವಾಯುವಿಗೆ ಸ್ಪರ್ಶವೂ, ತೇಜಸ್ಸುಗಳಿಗೆ ರೂಪವೂ, ಜಲಕ್ಕೆ ರಸವೂ, ಸಮಸ್ತ ಭೂತಗಳನ್ನೂ ಧರಿಸತಕ್ಕ ಭೂಮಿಗೆ ಗಂಧವೂ ಲಕ್ಷಣಗಳೆನಿಸಿವೆ. ಸ್ವರ ವ್ಯಂಜನಗಳ ಸಂಸ್ಕಾರಗಳುಳ್ಳ ವಾಕ್ಕು ಶಬ್ದಲಕ್ಷಣವುಳ್ಳುದು. ಮನಸ್ಸಿನ ಲಕ್ಷಣವು ಚಿಂತೆ. ಚಿಂತೆಗೆ ಬುದ್ಧಿಯೇ ಲಕ್ಷಣವೆನಿಸಿರುವುದು. ಮನಸ್ಸಿನಿಂದ ಯೋಚಿಸಿದ ವಿಷಯಗಳನ್ನು ಮನುಷ್ಯನು ಬುದ್ಧಿಯಿಂದ ನಿರ್ಧರಿಸುವನು. ಬುದ್ಧಿಯು ವ್ಯವಸಾಯದಿಂದ ಗುರ್ತಿಸಲ್ಪಡುವುದು.

ಮನಸ್ಸಿಗೆ ಧ್ಯಾನವು ಲಕ್ಷಣವು. ಸಾಧುವಿಗೆ ಅವ್ಯಕ್ತತ್ವವೇ ಲಕ್ಷಣವು. ಯೋಗವು ಪ್ರವೃತ್ತಿಯೇ ಲಕ್ಷಣವಾಗಿ ಉಳ್ಳುದು. ಜ್ಞಾನಕ್ಕೆ ಸನ್ಯಾಸವೇ ಲಕ್ಷಣವು. ಆದುದರಿಂದ ಬುದ್ಧಿವಂತನಾದವನು ಜ್ಞಾನವನ್ನು ಮುಂದಿಟ್ಟುಕೊಂಡೇ ಸನ್ಯಾಸವನ್ನು ಅವಲಂಬಿಸಬೇಕು. ಜ್ಞಾನಯುಕ್ತನಾದ ಸನ್ಯಾಸಿಯೇ ಉತ್ತಮಗತಿಯನ್ನು ಹೊಂದುವನು. ಜ್ಞಾನವುಳ್ಳ ಸನ್ಯಾಸಿಯು ಸುಖದುಃಖದ ದ್ವಂದ್ವಗಳನ್ನೂ, ಮೋಹವನ್ನೂ, ಜರಾಮರಣಗಳನ್ನೂ ಜಯಿಸಿ, ಉತ್ತಮಗತಿಯನ್ನು ಹೊಂದುವನು. ಓ ಮಹರ್ಷಿಗಳೇ! ನಿಮಗೆ ಭೂತಗಳು, ಇಂದ್ರಿಯಗಳು ಮೊದಲಾದುವುಗಳ ಸ್ವರೂಪವನ್ನೂ, ಧರ್ಮಲಕ್ಷಣಗಳನ್ನೂ, ಅವುಗಳ ಅನ್ಯೋನ್ಯಸಂಬಂಧವನ್ನೂ ತಿಳಿಸಿದೆನು. ಇನ್ನು ಅವುಗಳನ್ನು ಗ್ರಹಿಸತಕ್ಕ ಸಾಧನಗಳನ್ನು ಕುರಿತು ಹೇಳುವೆನು. ಪೃಥ್ವಿಯ ಗುಣವಾದ ಗಂಧವು ಘ್ರಾಣದಿಂದ ಗ್ರಹಿಸಲ್ಪಡುವುದು. ವಾಯುದೇವತೆಯು ಘ್ರಾಣದಲ್ಲಿದ್ದುಕೊಂಡು, ಆ ವಿಷಯವನ್ನು ಗ್ರಹಿಸುವ ಕಾರ್ಯದಲ್ಲಿ ಸಹಕರಿಸುವುದು. ಹೀಗೆಯೇ ಜಲದ ಸಾರವಾದ ರಸವು ನಾಲಗೆಯಿಂದ ಗ್ರಹಿಸಲ್ಪಡುವುದು. ಚಂದ್ರನು ನಾಲಗೆಯಲ್ಲಿದ್ದುಕೊಂಡು ಆ ರಸಗ್ರಹಣಕ್ಕೆ ಸಹಾಯಕನಾಗುವನು. ತೇಜಸ್ಸಿನ ಗುಣವಾದ ರೂಪವನ್ನು ನೇತ್ರವು ಗ್ರಹಿಸುವುದು. ಸೂರ್ಯನು ನೇತ್ರದಲ್ಲಿದ್ದುಕೊಂಡು ಆ ಕಾರ್ಯಕ್ಕೆ ಸಹಾಯಕನಾಗುವನು. ವಾಯುವು ತ್ವಕ್ಕಿನಲ್ಲಿದ್ದುಕೊಂಡು ಸ್ಪರ್ಶಜ್ಞಾನವನ್ನು ತಿಳಿಯುವುದಕ್ಕೆ ಸಹಾಯಕವಾಗುವುದು. ದಿಗ್ದೇವತೆಗಳು ಕಿವಿಯಲ್ಲಿದ್ದುಕೊಂಡು ಶಬ್ದವನ್ನು ಗ್ರಹಿಸುವ ವಿಷಯದಲ್ಲಿ ಆ ಶ್ರೋತ್ರೇಂದ್ರಿಯಕ್ಕೆ ಸಹಾಯವಾಡುವರು. ಮನಸ್ಸಿನ ಗುಣವಾದ ಚಿಂತೆಯು ಪ್ರಜ್ಞೆಯಿಂದ ಗ್ರಹಿಸಲ್ಪಡುವುದು. ಜೀವನು ಹೃದಯದಲ್ಲಿದ್ದುಕೊಂಡು ಈ ಜ್ಞಾನವಿಷಯದಲ್ಲಿ ಮನಸ್ಸಿಗೆ ಸಹಕರಿಸುವುದು. ಬುದ್ಧಿಯು ನಿಶ್ಚಯದಿಂದಲೂ, ಮಹತ್ತತ್ವವು ತನ್ನ ಸ್ವರೂಪವಾದ ಜ್ಞಾನದಿಂದಲೂ ಗ್ರಹಿಸಲ್ಪಡುವುದು. ನಿಶ್ಚಯಜ್ಞಾನದಿಂದ ವ್ಯಕ್ತವೆನಿಸಿದ್ದರೂ ಸ್ವಭಾವದಲ್ಲಿ ಅವ್ಯಕ್ತವೇ. ಕ್ಷೇತ್ರಜ್ಞನು ಲಿಂಗಭೇದದಿಂದ ತಿಳಿಯಲಸಾಧ್ಯರು. ನಿತ್ಯನು. ಸ್ವಭಾವದಲ್ಲಿ ನಿರ್ಗುಣನು. ಆದುದರಿಂದ ಕ್ಷೇತ್ರಜ್ಞನು (ಜೀವನು) ಕೇವಲ ಜ್ಞಾನ

ಸ್ವರೂಪನು. ಮತ್ತು ಲಿಂಗವಿಲ್ಲದವನು. ಅವ್ಯಕ್ತನೆಂದು ಕರೆಯಲ್ಪಡುವ ಕ್ಷೇತ್ರವನ್ನೂ, ಗುಣಗಳ ಉತ್ಪತ್ತಿ ನಾಶವನ್ನೂ ಆತ್ಮನು ಯಾವಾಗಲೂ ಒಳಗೇ ಅಡಗಿದ್ದು ನೋಡುವನು. ಬುದ್ಧಿಯಲ್ಲಿ ತಿಳಿಯುವನು. ಕೇಳುತ್ತಲೂ ಇರುವನು. ಪುರುಷನು ಆ ಕ್ಷೇತ್ರವನ್ನು ತಿಳಿಯಬಲ್ಲವನಾದುದರಿಂದಲೇ ಕ್ಷೇತ್ರಜ್ಞನೆಂದು ಕರೆಯಲ್ಪಡುವನು. ಆ ಕ್ಷೇತ್ರಜ್ಞನು ತನ್ನ ಶರೀರವೆಂಬ ಕ್ಷೇತ್ರದ ಸ್ಥಿತಿಯನ್ನು ಚೆನ್ನಾಗಿ ತಿಳಿಯಬಲ್ಲನು. ಅದು ಆದಿ ಮಧ್ಯಾಂತಗಳುಳ್ಳುದಾಗಿ, ಸೃಷ್ಟಿಸಲ್ಪಡತಕ್ಕುದೂ, ಚೈತನ್ಯವಿಲ್ಲದುದೂ, ಗುಣಗಳಿಂದ ಏರ್ಪಟ್ಟುದೂ ಆಗಿದೆ ಎಂಬುದನ್ನು ಅವನು ತಿಳಿಯುವನು. ಆಗಾಗ ಸೃಷ್ಟಿಸಲ್ಪಡುವ ಗುಣಗಳು ಆ ಆತ್ಮನನ್ನು ಅರಿಯಲಾರವು. ಅನುಭಾವ್ಯಗಳಾದ ಆ ಗುಣಗಳಿಗಿಂತಲೂ ಮೇಲೆನಿಸಿದ ಸತ್ಯಸ್ವರೂಪವಾದ ಬ್ರಹ್ಮವನ್ನು ಕ್ಷೇತ್ರಜ್ಞನೊಬ್ಬನೇ ತಿಳಿಯಬಲ್ಲನು. ಆದುದರಿಂದ ಈ ಲೋಕದಲ್ಲಿ ತತ್ವಜ್ಞನು ಪ್ರಕೃತಿಗುಣಗಳನ್ನೂ, ಅದನ್ನು ತಿಳಿಸತಕ್ಕ ಬುದ್ಧಿಯನ್ನೂ ತ್ಯಜಿಸಿ, ಕೊನೆಗೆ ಪರಮಾತ್ಮನನ್ನು ಹೊಂದುವನು. ಕ್ಷೇತ್ರಜ್ಞನು ದ್ವಂದ್ವರಹಿತನು. ನಮಸ್ಕಾರ ಸ್ವಧಾಕಾರಗಳೊಂದೂ ಇಲ್ಲದವನು. ಅಚಲನು. ಆಶ್ರಯರಹಿತನು. ಅವನೇ ಉತ್ತಮನಾದ ವಿಭುವೆನಿಸುವನು.

ಇದು ನಾಲ್ವತ್ತಮೂರನೆಯ ಅಧ್ಯಾಯವು.

ಬ್ರಹ್ಮನು ಮಹರ್ಷಿಗಳಿಗೆ ಆಯಾ ಜಾತಿಯಲ್ಲಿ ಮೇಲಾದುವುಗಳನ್ನು ತಿಳಿಸಿ, ಜ್ಞಾನವು ನಾಶವಿಲ್ಲದುದೆಂದೂ, ಅದೇ ಎಲ್ಲಾ ವಿಧದಿಂದಲೂ ಶ್ರೇಯಸ್ಸಾಧನವೆಂದೂ ತಿಳಿಸಿದುದು.

ಓ ಮಹರ್ಷಿಗಳೇ! ಇನ್ನು ನಿಮಗೆ ನಾನು ಆದಿ ಮಧ್ಯಾಂತಗಳುಳ್ಳುದಾಗಿಯೂ, ಸಾಧಿಸುವುದಕ್ಕೆ ಬೇರೆಬೇರೆ ಮಾರ್ಗಗಳುಳ್ಳುದಾಗಿಯೂ, ನಾಮರೂಪಾದಿ ಲಕ್ಷಣಗಳಿಂದ ಕೂಡಿದುದಾಗಿಯೂ ಇರುವ ಅನಿತ್ಯವೆನಿಸಿದ ಕೆಲವನ್ನೆಲ್ಲ ತಿಳಿಸುವೆನು ಕೇಳಿರಿ. ಕಾಲದಲ್ಲಿ ಹಗಲು

ಮೊದಲನೆಯದು. ಅದರಿಂದಾಚೆಗೆ ರಾತ್ರಿಯೆಂಬ ಕಾಲಪರಿಣಾಮವು. ಮಾಸಗಳು ಶುಕ್ಲಪಕ್ಷದಿಂದ ಆರಂಭಿಸಿ ಕೃಷ್ಣಪಕ್ಷದಲ್ಲಿ ಮುಗಿಯುವುವು. ನಕ್ಷತ್ರಗಳು ಶ್ರವಣವೇ ಆದಿಯಾಗಿ ಉಳ್ಳುವು. ಋತುಗಳು ಶಿಶಿರಋತುವನ್ನೇ ಆದಿಯಾಗಿ ಉಳ್ಳುವು. ಭೂಮಿಯು ಗಂಧಗಳಿಗೆ ಆದಿಯೆನಿಸುವುದು. ಜಲವು ರಸಗಳಿಗೂ, ಅಗ್ನಿಯು ರೂಪಗಳಿಗೂ, ವಾಯುವು ಸ್ಪರ್ಶಗಳಿಗೂ, ಆಕಾಶವು ಶಬ್ದಗಳಿಗೂ, ಆದಿಯೆನಿಸುವುವು. ಗಂಧಾದಿ ಗುಣಗಳಿಗೆ ಮಹಾಭೂತಗಳೇ ಆದಿಯೆನಿಸುವುವು. ಇನ್ನು ಭೂತಗಳಲ್ಲಿ ಪ್ರಧಾನವೂ, ಆದಿಯೂ ಆದುದನ್ನು ತಿಳಿಸುವೆನು. ತೇಜಸ್ಸುಗಳಿಗೆಲ್ಲ ಸೂರ್ಯನು ಪ್ರಧಾನನು. ಅಗ್ನಿಯು ಭೂತಗಳಿಗೆ ಪ್ರಧಾನವೆನಿಸುವುದು. ವಿದ್ಯೆಗಳಿಗೆಲ್ಲ ಸಾವಿತ್ರಿಯೇ ಆದಿಯು. ದೇವತೆಗಳಿಗೆಲ್ಲ ಬ್ರಹ್ಮನು ಆದಿ. ಹಾಗೆಯೇ ವೇದಗಳಿಗೆಲ್ಲ ಓಂಕಾರವೂ, ವಾಕ್ಕುಗಳಿಗೆ ಪ್ರಾಣವೂ, ಛಂದಸ್ಸುಗಳಿಗೆ ಗಾಯಿತ್ರಿಯೂ ಮೊದಲನೆಯದೆನಿಸಿದೆ. ಪ್ರಜೆಗಳಿಗೆ ಸೃಷ್ಟಿಕಾಲವೇ ಆದಿ. ಚತುಷ್ಪಾದಿಗಳಿಗೆ ಗೋವುಗಳೂ, ಮನುಷ್ಯರಿಗೆ ಬ್ರಾಹ್ಮಣರೂ, ಪಕ್ಷಿಗಳಿಗೆ ಶ್ಯೇನವೂ (ಗಿಡುಗವೂ) ಆದಿಯೆನಿಸುವುದು. ಯಜ್ಞಗಳಿಗೆ ಉತ್ತಮವಾದ ಹವಿಸ್ಸೂ, ಹರಿಯುವ ಜಂತುಗಳಿಗೆ ಸರ್ಪವೂ, ಓಷಧಿಗಳಲ್ಲಿ ಯವವೂ, ಎಲ್ಲಾ ಭಕ್ಷ್ಯಭೋಜ್ಯಗಳಲ್ಲಿ ಅನ್ನವೂ ಪ್ರಧಾನವೆನಿಸಿವೆ. ಕುಡಿಯತಕ್ಕ ಎಲ್ಲಾ ದ್ರವವಸ್ತುಗಳಿಗೆ ನೀರೂ, ಸ್ಥಾವರಗಳಾದ ಎಲ್ಲಾ ವೃಕ್ಷಗಳಲ್ಲಿ ಪ್ಲಕ್ಷವೂ (ಅರಳಿ) ಆದಿಯೆನಿಸಿದುದು. ಎಲ್ಲಾ ಪ್ರಜಾಧಿಪತಿಗಳಿಗೆ ನಾನೇ ಆದಿಯು. ಅಚಿಂತ್ಯಪ್ರಭಾವವುಳ್ಳವನೂ, ತನ್ನಿಂದತಾನೇ ಆವಿರ್ಭವಿಸತಕ್ಕವನೂ ಆದ ವಿಷ್ಣುವು ನನಗಿಂತಲೂ ಆದಿಯೆನಿಸುವನು. ಪರ್ವತಗಳಿಗೆಲ್ಲ ಮಹಾಮೇರುವು ಆದಿಯೆನಿಸಿದೆ. ದಿಕ್ಕು ವಿದಿಕ್ಕುಗಳಲ್ಲಿ ಪೂರ್ವದಿಕ್ಕು ಪ್ರಧಾನವೆನಿಸಿದೆ. ನದಿಗಳಲ್ಲಿ ಗಂಗೆಯೇ ಆದಿಯಾಗಿ ಎಲ್ಲಕ್ಕಿಂತಲೂ ಮೇಲೆನಿಸಿದೆ. ಹಾಗೆಯೇ ಜಲಾಶಯಗಳಿಗೆ ಸಮುದ್ರವು ಆದಿಯೆನಿಯೆನಿಸಿದೆ. ದೇವ, ದಾನವ, ಭೂತ ಪಿಶಾಚ, ರಾಕ್ಷಸ ಪನ್ನಗ, ಯಕ್ಷ ಮಾನವರಿಗೆಲ್ಲ ಈಶ್ವರನೇ ಆದಿಯೆನಿಸಿ ಪ್ರಭುವಾಗಿರುವನು. ಸಮಸ್ತ ಜಗತ್ತಿಗೂ ಪರಬ್ರಹ್ಮಸ್ವರೂಪನೂ, ಮಹಾಮಹಿಮೆಯುಳ್ಳವನೂ ಆದ ವಿಷ್ಣುವೇ ಆದಿಪುರು-

ಷನು. ತ್ರೈಲೋಕ್ಯದಲ್ಲಿ ಅವನಿಗಿಂತಲೂ ಮೇಲಾದುದೊಂದೂ ಇಲ್ಲ. ಎಲ್ಲಾ ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಮೇಲಾದುದು. ಲೋಕಗಳಿಗೆಲ್ಲ ಅವ್ಯಕ್ತವೇ ಆದಿ. ಪ್ರಪಂಚಕ್ಕೆ ಅಂತವೂ ಅದೇ. ಹಗಲಿಗೆ ಸೂರ್ಯಾಸ್ತಮಯವೇ ಅಂತವು. ಸೂರ್ಯೋದಯವೇ ರಾತ್ರಿಗೆ ಅಂತವು. ಯಾವಾಗಲೂ ಸುಖಕ್ಕೆ ದುಃಖವೂ, ದುಃಖಕ್ಕೆ ಸುಖವೂ ಅಂತವೆನಿಸಿವೆ. ಸೇರುವೆಗಳೆಲ್ಲಾ ಅಗಲಿಕೆಯನ್ನೇ ಅಂತವಾಗಿ ಉಳ್ಳುವು. ಉನ್ನತಿಗಳೆಲ್ಲ ಅಧೋಗತಿಯಲ್ಲಿಯೇ ಮುಗಿಯುವುವು. ಅಭಿವೃದ್ಧಿಯು ಕ್ಷಯದಲ್ಲಿ ಮುಗಿಯುವುದು. ಜೀವಿತಕ್ಕೆ ಮರಣವೇ ಕೊನೆ. ಮಾಡಿದುದೆಲ್ಲ ವಿನಾಶದಲ್ಲಿಯೇ ಮುಗಿಯುವುದು. ಹುಟ್ಟಿದವನಿಗೆ ಸಾವು ನಿಶ್ಚಯವು. ಈ ಲೋಕದಲ್ಲಿ ಸ್ಥಾವರ ಜಂಗಮಗಳಲ್ಲಿ ಯಾವುದೂ ಶಾಶ್ವತವಲ್ಲ. ಯಾಗ, ದಾನ, ತಪಸ್ಸು, ಅಧ್ಯಯನ, ವ್ರತ, ನಿಯಮಾದಿಗಳೆಲ್ಲ ಕೊನೆಗೆ ನಾಶಹೊಂದತಕ್ಕವುಗಳೇ. ಜ್ಞಾನವೊಂದಕ್ಕೆ ಮಾತ್ರ ಎಂದಿಗೂ ನಾಶವಿಲ್ಲ. ಆದುದರಿಂದ ಶಾಂತಾತ್ಮನಾಗಿ, ಇಂದ್ರಿಯಗಳನ್ನು ಜಯಿಸಿ, ಅಹಂಕಾರ ಮಮಕಾರಗಳನ್ನು ಬಿಟ್ಟವನು ಶುದ್ಧವಾದ ಜ್ಞಾನದಿಂದಲೇ ಸಮಸ್ತ ಪಾಪಗಳಿಂದ ಮುಕ್ತನಾಗಿ ಆತ್ಯಂತಿಕ ಸುಖವನ್ನು ಹೊಂದುವನು.

ಇದು ನಾಲ್ವತ್ತುನಾಲ್ಕನೆಯ ಅಧ್ಯಾಯವು.

---

{ ಬ್ರಹ್ಮನು ಮಹರ್ಷಿಗಳಿಗೆ ಶರೀರವನ್ನು ಕಾಲಚಕ್ರಕ್ಕೆ ಸಮಾನವೆಂದೂ, ಗೃಹಸ್ಥಾಶ್ರಮವು ಸರ್ವಶ್ರೇಯಸ್ಸಿಗೆ ಸಾಧಕವೆಂದೂ ತಿಳಿಸಿದುದು. }

ಆಗ ಬ್ರಹ್ಮನು “ಓ ಮಹರ್ಷಿಗಳಿರಾ! ಶರೀರವೆಂಬುದು ಕಾಲಚಕ್ರಕ್ಕೆ ಸಮಾನವಾದುದು. ಈ ಚಕ್ರಕ್ಕೆ ಬುದ್ಧಿಯೇ ಬಲವು. ಮನಸ್ಸೇ ಇದಕ್ಕೆ ಆಧಾರಸ್ತಂಭದಂತಿರುವುದು. ಇಂದ್ರಿಯಸಮೂಹಗಳೇ ಇದರ ಕಟ್ಟು. ಪಂಚಮಹಾಭೂತಗಳೇ ಇದರ ಅಂಗಗಳು! ನಿಮೇಷವೇ ಇದರ ಪರಿಧಿ. ಇದು ಜರಾಶೋಕಗಳಿಂದಲೂ, ವ್ಯಾಧಿ ವ್ಯಸನಗಳಿಂದಲೂ ತುಂಬಿದುದು. ದೇಶ ಕಾಲಗಳನ್ನನುಸರಿಸಿ ನಡೆಯತಕ್ಕುದು. ದುಡಿತವೂ, ಅಲೆ

ದಾಟವೂ ಅದರ ಧ್ವನಿಗಳು. ರಾತ್ರಿ ಹಗಲುಗಳೇ ಅದನ್ನು ಮುಂದು ವರಿಸತಕ್ಕ ಸಾಧನಗಳು. ಶೀತೋಷ್ಣಗಳೇ ಅದರ ಸುತ್ತಿನ ವಲಯ ಗಳು. ಸುಖ ದುಃಖಗಳೇ ಅದರ ಜೋಡಣೆಗಳು! ಹಸಿವು ಬಾಯಾರಿಕೆ ಗಳು ಅದರ ಒಳಗೀಲುಗಳು! ಬಿಸಿಲು ನೆಳಲುಗಳೇ ಕೊರೆಯತಕ್ಕ ಉಳಿ ಗಳು! ಎವೆ ಮುಚ್ಚಿ ತೆರೆಯುವುದೇ ಅದರ ಕುಲುಕಾಟಗಳು! ಅದು ಯಾವಾಗಲೂ ಸುತ್ತುತ್ತಲೇ ಇರುವುದು. ಅದು ಅಚೇತನವು. ಮಾಸ ಪಕ್ಷಗಳಿಂದ ಅಳೆಯಲ್ಪಡತಕ್ಕುದು. ಸಮಸ್ಥಿತಿಯಿಲ್ಲದುದು. ಊರ್ಧ್ವಾ ಧೋ ಮಧ್ಯಮಗಳೆಂಬ ಎಲ್ಲಾ ಲೋಕಗಳಲ್ಲಿಯೂ ಗತಿಯುಳ್ಳುದು. ತಮೋಗುಣವೆಂಬ ಕೆಸರಿನಿಂದ ಅಂಟಿದುದು. ರಜೋಗುಣವೇಗದಿಂದ ನಡೆಯತಕ್ಕುದು. ಸತ್ವಗುಣವೆಂಬ ಅಲಂಕಾರಗಳಿಂದ ಬೆಳಗುವುದು. ಗುಣಸಮೂಹವೇ ಅದರ ಬಳೆ! ವಿರಕ್ತಿಯೆಂಬ ನಿರ್ಭಯವಾದ ಮಾರ್ಗ ವುಳ್ಳುದು. ಶೋಕ ಮರಣಗಳೇ ಅದರ ಹೊರಳುವಿಕೆಗಳು! ಕರ್ಮ ಗಳೇ ಅದರ ನಿರ್ಮಾಣಕಾರಣಗಳು. ಆಶೆಯೇ ಅದರ ಉದ್ದ ಮತ್ತು ಅಗಲಗಳು. ಲೋಭ ತೃಷ್ಣೆಗಳೆಂಬ ಹಳ್ಳತಿಟ್ಟುಗಳಲ್ಲಿ ಅಲೆದಾಡತ ಕ್ಕುದು. ವಿಚಿತ್ರಜ್ಞಾನದಿಂದ ಉತ್ಪನ್ನವಾದುದು. ಭಯ ಮೋಹಾದಿ ಗಳಿಂದ ಸುತ್ತಲೂ ಆವರಿಸಲ್ಪಟ್ಟಿರುವುದು. ಅದು ಎಲ್ಲಾ ಭೂತ (ಪ್ರಾಣಿ) ಗಳಿಗೂ ಮೋಹಕರವೆನಿಸಿರುವುದು. ಆನಂದವನ್ನೂ, ಪ್ರೀತಿಯನ್ನೂ ತೋರಿಸತಕ್ಕುದು. ಕಾಮಕ್ರೋಧಗಳೆಂಬ ಸಲಕರಣೆಯುಳ್ಳುದು. ಮಹ ತ್ತತ್ವದಿಂದ ಆರಂಭಿಸಿ, ವಿಶೇಷದ (ಸ್ಥೂಲಪಿಂಡದ) ವರೆಗೆ ಹೋಗ ತಕ್ಕುದು. ಅವ್ಯಕ್ತವಾದುದು. ಕೊನೆಯಿಲ್ಲದ ಸಂಸಾರಕ್ಕೆ ಕಾರಣವಾ ದದು. ಮನೋವೇಗವುಳ್ಳುದು. ಇಂತಹ ಕಾಲ (ಶರೀರ) ಚಕ್ರವು ವಿರಾ ಮವಿಲ್ಲದೆ ಹರಿಯುತ್ತಲೇ ಇರುವುದು. ಸುಖ, ದುಃಖ, ಮಾನಾವಮಾನ, ಮೊದಲಾದ ದ್ವಂದ್ವಗಳಿಗೆಡೆಯಾಗಿ, ಅಚೇತನವೆನಿಸಿದ ಈ ಚಕ್ರವೇ ಲೋಕವನ್ನು ಸೃಷ್ಟಿಸುವುದು. ಇದೇ ಲೋಕವನ್ನು ಉಪಸಂಹಾರ ಮಾಡುವುದು. ಅದೇ ಎಚ್ಚರಗೊಳಿಸುವುದು. ಅದೇ ಲೋಕವನ್ನು ಮಲಗಿಸುವುದು. ಯಾವ ಮನುಷ್ಯನು ಶರೀರವೆಂಬೀ ಕಾಲಚಕ್ರದ ಪ್ರವೃತ್ತಿ ನಿವೃತ್ತಿ ಕಾರಣಗಳೆರಡನ್ನೂ ನಿಜವಾಗಿ ತಿಳಿಯಬಲ್ಲನೋ,

ಅಂತವನು ಪ್ರಾಣಿಗಳಲ್ಲಿ ಯಾವಾಗಲೂ ಮೋಹವನ್ನು ಹೊಂದಲಾರನು. ಅಂತವನು ಮುನಿಯೆನಿಸಿ, ಎಲ್ಲಾ ಸಂಗಗಳನ್ನು ನೀಗಿ, ಎಲ್ಲಾ ಕಷ್ಟಗಳನ್ನೂ, ಎಲ್ಲಾ ದ್ವಂದ್ವಗಳನ್ನೂ ದಾಟಿ, ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದಿದವನಾಗಿ ಉತ್ತಮಗತಿಯನ್ನು ಹೊಂದುವನು. ಲೋಕದಲ್ಲಿ ಗೃಹಸ್ಥ, ಬ್ರಹ್ಮಚಾರಿ, ವಾನಪ್ರಸ್ಥ, ಸನ್ಯಾಸಗಳೆಂಬ ನಾಲ್ಕು ಆಶ್ರಮಗಳು ಹೇಳಲ್ಪಟ್ಟಿವೆ. ಇವೆಲ್ಲವೂ ಗೃಹಸ್ಥಾಶ್ರಮವನ್ನೇ ಆಧಾರವನ್ನಾಗಿ ಹೊಂದಿವೆ. ಈ ಮೇಲೆಹೇಳಿದ ಚತುರಾಶ್ರಮಗಳಲ್ಲಿ ಯಾವುದಾದರೂ ಒಂದನ್ನು ದೃಢವಾಗಿ ಹಿಡಿದು ಕೊನೆಮುಟ್ಟಿಸುವುದು ಶ್ರೇಯಸ್ಕರವು. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು ಕ್ರಮವಾಗಿ ಜಾತಕರ್ಮಾದಿಸಂಸ್ಕಾರಗಳಿಂದ ಶುದ್ಧನಾಗಿ ವ್ರತಗಳನ್ನು ನಡೆಸಿ, ವೇದಗಳನ್ನೋದಿದ ಮೇಲೆ ಸಮಾವರ್ತನವೆಂಬ ಕರ್ಮವನ್ನು ನಡೆಸಿಕೊಳ್ಳಬೇಕು. ಆಮೇಲೆ ಗೃಹಸ್ಥಾಶ್ರಮವನ್ನು ಹಿಡಿದು, ತನ್ನ ಪತ್ನಿಯಲ್ಲಿ ಪ್ರೀತಿಯುಳ್ಳವನಾಗಿ, ಶಿಷ್ಟಾಚಾರವನ್ನು ಹಿಡಿದು, ಇಂದ್ರಿಯಗಳನ್ನಡಗಿಸಿ, ಶ್ರದ್ಧೆಯಿಂದ ಪಂಚಮಹಾಯಜ್ಞಗಳನ್ನು ನಡೆಸಬೇಕು. ದೇವತೆಗಳಿಗೂ, ಅತಿಥಿಗಳಿಗೂ ಸಮರ್ಪಿಸಿ ಮಿಕ್ಕುದನ್ನೇ ಭುಜಿಸಬೇಕು. ವೇದಗಳಲ್ಲಿ ಹೇಳಲ್ಪಟ್ಟ ಕರ್ಮಗಳಲ್ಲಿ ನಿರತನಾಗಿ ತನ್ನ ಶಕ್ತಿಗೆ ತಕ್ಕಂತೆಯೂ, ಶಾಸ್ತ್ರಸಮ್ಮತವಾಗಿಯೂ ದಾನಮಾಡಬೇಕು. ಕೈ, ಕಾಲು, ಕಣ್ಣು, ಮಾತು, ಶರೀರ, ಇವುಗಳ ವಿಷಯವಾದ ಯಾವ ಚಾಪಲ್ಯಕ್ಕೂ ಒಳಗಾಗಬಾರದು. ಇದೇ ಶಿಷ್ಟನಾದವನ ಲಕ್ಷಣವು. ಯಾವಾಗಲೂ ಯಜ್ಞೋಪವೀತವನ್ನೂ, ಶುದ್ಧವಾದ ವಸ್ತ್ರವನ್ನೂ ಧರಿಸಿದವನಾಗಿ, ಶುದ್ಧವ್ರತಗಳನ್ನು ನಡೆಸುತ್ತ, ಮನೋನಿಗ್ರಹದಿಂದಲೂ, ದಾನದಿಂದಲೂ ಶುದ್ಧನಾಗಿರಬೇಕು. ಯಾವಾಗಲೂ ಸಜ್ಜನರೊಡನೆ ವಾಸಿಸಬೇಕು. ಶಿಶ್ನವನ್ನೂ, ತನ್ನ ಉದರವನ್ನೂ ಜಯಿಸಿ, ಪ್ರಾಣಿಗಳಲ್ಲಿ ಕನಿಕರಗೊಂಡಿರಬೇಕು. ಬಿದಿರಿನ ದಂಡವನ್ನೂ, ಜಲಪೂರ್ಣವಾದ ಕಮಂಡಲುವನ್ನೂ ಧರಿಸಿರಬೇಕು. ಆಚಮನಕ್ಕಾಗಿ ಒಂದು, ಶೌಚಕ್ಕಾಗಿ ಒಂದು, ಕಾಲನ್ನು ತೊಳೆಯುವುದಕ್ಕಾಗಿ ಒಂದು, ಹೀಗೆ ಮೂರು ಕಮಂಡಲುಗಳನ್ನು ಯಾವಾಗಲೂ ಇಟ್ಟಿರಬೇಕು. ತಾನು ವೇದಗಳನ್ನೋದಿ ಅದನ್ನು ಇತರರಿಗೂ ಓದಿಸ

ಬೇಕು. ತಾನು ಯಾಗಮಾಡುತ್ತ ಇತರರಿಂದಲೂ ಮಾಡಿಸಬೇಕು. ಇತರರಿಂದ ತಾನು ದಾನವನ್ನು ತೆಗೆದು ತನ್ನಲ್ಲಿಗೆ ಬಂದವರಿಗೆ ದಾನಮಾಡಬೇಕು. ಹೀಗೆ ಆರು ವಿಧವಾದ ಕರ್ಮಗಳುಂಟು. ಬ್ರಾಹ್ಮಣನಿಗೆ ಆ ಆರು ಕರ್ಮಗಳಲ್ಲಿ ಮೂರು ಕರ್ಮಗಳು ಎಂದರೆ, (ಯಾಗ ಮಾಡಿಸುವುದು, ವೇದಗಳನ್ನು ಹೇಳಿಕೊಡುವುದು, ಶುದ್ಧವಾದ ಕಡೆಯಿಂದ ಪ್ರತಿಗ್ರಹವನ್ನು ಮಾಡುವುದು) ಮುಖ್ಯವು. ಇದು ಹೊರತು ಬೇರೆ ಮೂರು ಕರ್ಮಗಳೂ ಬ್ರಾಹ್ಮಣನಿಗೆ ಧರ್ಮಯುಕ್ತಗಳೇ ಆಗಿವೆ ಈ ಷಟ್ಕರ್ಮಗಳನ್ನೂ ಎಚ್ಚರಿಕೆಯಿಂದ ನಡೆಸುತ್ತ, ಮನಸ್ಸನ್ನು ನಿಗ್ರಹಿಸಿ, ಎಲ್ಲಾ ಭೂತಗಳಲ್ಲಿಯೂ ದಯೆಯನ್ನೂ, ಸ್ನೇಹವನ್ನೂ ತೋರಿಸುತ್ತ, ಸರ್ವಸಮನಾಗಿ ಮಿತಭಾಷಿಯಾಗಿ ಇರಬೇಕಾದುದು ಬ್ರಾಹ್ಮಣನ ಧರ್ಮವು. ಹೀಗೆ ಶುದ್ಧನಾದ ಬ್ರಾಹ್ಮಣನು ಗೃಹಸ್ಥಧರ್ಮದಿಂದಲೇ ಸ್ವರ್ಗವನ್ನು ಜಯಿಸಬಹುದು.

ಇದು ನಾಲ್ವತ್ತೈದನೆಯ ಅಧ್ಯಾಯವು.



{ ಬ್ರಹ್ಮನು ಮಹರ್ಷಿಗಳಿಗೆ ಬ್ರಹ್ಮಚರ್ಯ, ವಾನಪ್ರಸ್ಥಾಶ್ರಮ ಧರ್ಮಗಳನ್ನೂ, ಅವುಗಳ ಫಲವನ್ನೂ ತಿಳಿಸಿದುದು. }

ಎಲೈ ಮಹರ್ಷಿಗಳಿರಾ! ಇನ್ನು ಬ್ರಹ್ಮಚರ್ಯಾಶ್ರಮದ ಧರ್ಮವನ್ನು ಹೇಳುವೆನು ಕೇಳಿರಿ. ಬ್ರಹ್ಮಚಾರಿಯಾದ ಬ್ರಾಹ್ಮಣನು ತನ್ನ ಶಕ್ತಿಗೆ ತಕ್ಕಂತೆ ಅಧ್ಯಯನಮಾಡುತ್ತ, ತನ್ನ ಆಶ್ರಮಧರ್ಮದಲ್ಲಿ ದೃಢವಾಗಿ ನೆಲೆಗೊಂಡು, ಎಲ್ಲಾ ಇಂದ್ರಿಯಗಳನ್ನೂ ಅಡಗಿಸಿ, ವಿದ್ಯೆಗಳನ್ನು ಕಲಿಯಬೇಕು. ಮೌನಿಯಂತೆ ಮಿತಭಾಷಿಯಾಗಿರಬೇಕು. ಗುರುವಿಗೆ ಸಮ್ಮತವಾಗಿಯೂ, ಹಿತವಾಗಿಯೂ ಇರುವ ಕಾರ್ಯವನ್ನೇ ನಡೆಸುತ್ತ, ಸತ್ಯ ಧರ್ಮಗಳನ್ನು ಪ್ರಧಾನವಾಗಿ ಹಿಡಿಯಬೇಕು. ಶುಚಿಯಾಗಿರಬೇಕು. ಗುರುವಿನಿಂದ ಅನುಮತಿಸಲ್ಪಟ್ಟ ಅನ್ನವನ್ನೂ, ಹವಿಸ್ಸನ್ನೂ, ಭಕ್ಷ್ಯಗಳನ್ನೂ ಭುಜಿಸಬೇಕು. ತನಗೆ ಯೋಗ್ಯವಾದ ಸ್ಥಳದಲ್ಲಿಯೂ, ಆಸನದಲ್ಲಿಯೂ ಇರಬೇಕಲ್ಲದೆ ಮೀರಿಹೋಗಬಾರದು.

ಯಾವಾಗಲೂ ಎಚ್ಚರಿಕೆಯಿಂದಿರಬೇಕು. ಉಭಯಕಾಲಗಳಲ್ಲಿಯೂ ಸಮಿದಾಧಾನವೆಂಬ ಹೋಮಕಾರ್ಯವನ್ನು ನಡೆಸುತ್ತ, ಬಿಲ್ವದಂಡವನ್ನೋ, ಪಲಾಶದಂಡವನ್ನೋ ಸದಾ ಧರಿಸಿರಬೇಕು. ಬ್ರಹ್ಮಚಾರಿಯು ನಾರುಮಡಿಯನ್ನೋ, ಕೃಷ್ಣಾಜಿನವನ್ನೋ, ಹತ್ತಿಯಬಟ್ಟೆಯನ್ನೋ, ಕಾಷಾಯವನ್ನೋ ಧರಿಸಬೇಕು. ನಡುವಿಗೆ ಮೌಂಜಿಯನ್ನು ಸುತ್ತಿ, ಜಟಾಧಾರಿಯಾಗಿ, ನಿತ್ಯಸ್ನಾನಮಾಡುತ್ತ, ಅಧ್ಯಯನವನ್ನೂ, ತನಗೆ ವಿಹಿತವಾದ ವ್ರತಗಳನ್ನೂ ನಡೆಸುತ್ತಿರಬೇಕು. ಶುದ್ಧಜಲದಿಂದ ದೇವತೆಗಳಿಗೆ ತಪ್ಪದೆ ತರ್ಪಣಗಳನ್ನು ನಡೆಸುತ್ತ ಬರಬೇಕು. ಹೀಗೆ ಎಚ್ಚರಿಕೆಯಿಂದ ನಡೆದುಕೊಂಡು, ಊರ್ಧ್ವರೇತಸ್ಸಾಗಿರುವ ಬ್ರಹ್ಮಚಾರಿಯು ಸದ್ಗತಿಯನ್ನು ಹೊಂದುವನು. ಅವನು ಉತ್ತಮಗತಿಯನ್ನು ಹೊಂದಿದಮೇಲೆ ತಿರುಗಿ ಜನ್ಮವನ್ನೆತ್ತಲಾರನು. ಎಲ್ಲಾ ಸಂಸ್ಕಾರಗಳಿಂದ ಸಂಸ್ಕರಿಸಲ್ಪಟ್ಟು, ಬ್ರಹ್ಮಚರ್ಯವನ್ನು ಅನುಷ್ಠಿಸಿದ ಬ್ರಾಹ್ಮಣನು, ಕೊನೆಗೆ ವಾನಪ್ರಸ್ಥದಲ್ಲಿ ಗ್ರಾಮಗಳನ್ನು ಬಿಟ್ಟು ಹೊರಗೆ ವನದಲ್ಲಿಯೇ ವಸಿಸುತ್ತ ಸರ್ವಸಂಗಪರಿತ್ಯಾಗಮಾಡಿದ ಮುನಿಯಂತಿರಬೇಕು. ನಾರುಬಟ್ಟೆಯನ್ನೂ, ಕೃಷ್ಣಾಜಿನವನ್ನೂ ಧರಿಸಿ ಉಭಯಸಂಧ್ಯಾಕಾಲಗಳಲ್ಲಿಯೂ ಸ್ನಾನಮಾಡಬೇಕು. ಗ್ರಾಮಗಳಲ್ಲಿ ಪ್ರವೇಶಿಸಬಾರದು. ತನ್ನಲ್ಲಿಗೆ ಬಂದ ಅತಿಥಿಗಳನ್ನು ಪೂಜಿಸಬೇಕು. ತನ್ನ ಊಟಕ್ಕಾಗಿ ಉತ್ತಮವಸ್ತುಗಳನ್ನು ಬಯಸದೆ, ಆಗಾಗ ಸಿಕ್ಕಿದ ಹಣ್ಣು, ಕಾಯಿ, ಗಡ್ಡೆ, ಗೆಣಸು, ಎಲೆ, ನವಣೆ ಮುಂತಾದುವುಗಳಿಂದ ದೇಹಧಾರಣೆಯನ್ನು ಮಾಡಬೇಕು. ನೀರು, ಗಾಳಿ ಮುಂತಾಗಿ ವನದಲ್ಲಿ ಸಿಕ್ಕುವ ವಸ್ತುಗಳನ್ನೇ ತನಗೆ ಆಧಾರವನ್ನಾಗಿ ಮಾಡಿಕೊಳ್ಳಬೇಕು. ಮಾತಿನಲ್ಲಿ ಮಿತವಿರಬೇಕು. ತನ್ನ ದೀಕ್ಷಾವ್ರತಕ್ಕನುಸಾರವಾಗಿ ಭೋಜನಗಳನ್ನು ಮಾಡಬೇಕು. ತನ್ನಲ್ಲಿಗೆ ಬಂದ ಅತಿಥಿಗಳಿಗೆ ಫಲಮೂಲಾದಿಗಳನ್ನು ಕೊಟ್ಟು ತೃಪ್ತಿಗೊಳಿಸಬೇಕು. ತಾನು ಭುಜಿಸುವುದನ್ನು ಮೊದಲು ಅತಿಥಿಗಳಿಗೆ ಕೊಡಬೇಕು. ಆಮೇಲೆ ತಾನು ಮೌನದಿಂದ ಭುಜಿಸಬೇಕು. ಮನಸ್ಸು ಕದಲದೆ, ಮಿತಭೋಜಿಯಾಗಿ, ಜಿತೇಂದ್ರಿಯನಾಗಿ, ದೇವಪೂಜಕನಾಗಿ, ಸರ್ವಭೂತಸ್ನೇಹಪರನಾಗಿ, ಯಾವಾಗಲೂ ತಾಳ್ಮೆಯುಳ್ಳವನಾಗಿರಬೇಕು. ತಲೆಕೂದಲನ್ನೂ, ಮೀಸೆ

ಯನ್ನೂ ತೆಗೆಸದೆ, ಹೋಮ, ವೇದಾಧ್ಯಯನಗಳನ್ನು ತಪ್ಪದೆ ನಡೆಸುತ್ತ ಸತ್ಯಧರ್ಮಗಳನ್ನೇ ಮುಖ್ಯವಾಗಿ ಹಿಡಿದು ಯಾವಾಗಲೂ ಶರೀರಾಭಿಮಾನವನ್ನು ತೊರೆದು ವನವಾಸಿಯಾಗಿರಬೇಕು. ಇಂತಹ ವಿಧಿಗಳಿಂದ ವಾನಪ್ರಸ್ಥಾಶ್ರಮವನ್ನು ಹಿಡಿದವನು ಸ್ವರ್ಗವನ್ನು ಜಯಿಸುವನು. ಬ್ರಹ್ಮಚಾರಿಯಾಗಿದ್ದರೂ, ಗೃಹಸ್ಥನಾಗಿದ್ದರೂ, ವಾನಪ್ರಸ್ಥನಾಗಿದ್ದರೂ, ಮೋಕ್ಷವನ್ನು ಬಯಸುವವನು ಉತ್ತಮವಾದ ಸ್ವಧರ್ಮಗಳನ್ನು ತಪ್ಪದೆ ಅನುಷ್ಠಿಸಬೇಕು. ಸಮಸ್ತ ಪ್ರಾಣಿಗಳಿಗೂ, ಅಭಯವನ್ನು ಕೊಡತಕ್ಕವನಾಗಿ, ಫಲಾಪೇಕ್ಷೆಯಿಲ್ಲದ ಕರ್ಮವನ್ನು ನಡೆಸಬೇಕು. ಸಮಸ್ತ ಭೂತಗಳಿಗೂ ಹಿತವನ್ನೇ ಬಯಸುತ್ತ, ಇಂದ್ರಿಯಗಳನ್ನಡಗಿಸಿ, ಮುನಿಯಾಗಿರಬೇಕು. ಉದ್ದೇಶವಿಲ್ಲದೆಯೂ, ಅಯಾಚಿತವಾಗಿಯೂ, ತಾನಾಗಿ ಲಭಿಸಬಹುದಾದ ಭಿಕ್ಷೆಗಾಗಿ ಬೆಳಗ್ಗೆ ಸಂಚಾರಮಾಡಿಬರಬೇಕು. ಭಿಕ್ಷೆಗಾಗಿ ಹೋಗತಕ್ಕವನು, ಜನರ ಮನೆಗಳಲ್ಲಿ ಅಡಿಗೆಮನೆಯ ಹೊಗೆಯೆಲ್ಲವೂ ಅಡಗಿ, ಎಲ್ಲರೂ ಊಟಮಾಡಿ, ಪಾತ್ರೆಗಳ ಶಬ್ದವೆಲ್ಲ ನಿಂತಸಮಯವನ್ನು ನೋಡಿದಮೇಲೆ ಭಿಕ್ಷೆಗೆ ಹೋಗಬೇಕು. ಸಿಕ್ಕಿದುದರಲ್ಲಿ ಸಂತೋಷಪಡಬೇಕು. ಏನೂ ಸಿಕ್ಕದಿದ್ದಾಗ ದುಃಖಿಸಬಾರದು. ತನಗೆ ಬೇಕಾದುದಕ್ಕಿಂತಲೂ ಹೆಚ್ಚಾಗಿ ಭಿಕ್ಷೆಯನ್ನು ತೆಗೆಯಬಾರದು. ತನ್ನ ಪ್ರಾಣಧಾರಣೆಗೆ ಬೇಕಾದುದನ್ನೇ ಪಡೆಯುತ್ತ, ತನ್ನ ಪ್ರಾಣಯಾತ್ರೆಯ ಕಾಲವನ್ನು ಇದಿರುನೋಡುತ್ತ ಮನೋನಿಗ್ರಹದಿಂದಿರಬೇಕು. ಅಲ್ಪಲಾಭವನ್ನೂ ಅಪೇಕ್ಷಿಸಬಾರದು. ಇತರರ ಸತ್ಕಾರಕ್ಕೆ ಆಸೆಪಟ್ಟು ಭುಜಿಸಬಾರದು. ತನ್ನನ್ನು ಬಹಳವಾಗಿ ಪೂಜಿಸಿ ಕೊಡತಕ್ಕ ಭಿಕ್ಷೆಗೆ ಜಿಗುಪ್ಸೆಪಡಬೇಕೇಹೊರತು ಅದಕ್ಕಾಗಿ ಹಿಗ್ಗಬಾರದು. ಭೋಜನಕಾಲದಲ್ಲಿ ಕಹಿ, ಒಗರು, ಕಾರ, ಮುಂತಾದುವುಗಳನ್ನು ಗಮನಿಸಬಾರದು. ಮಧುರ ಪದಾರ್ಥಗಳ ರುಚಿಯನ್ನೂ ಅನುಭವಿಸಬಾರದು. ಪ್ರಾಣಧಾರಣೆಗೆ ಬೇಕಾದಷ್ಟನ್ನೇ ಭುಜಿಸಬೇಕು. ಇತರ ಪ್ರಾಣಿಗಳಿಗೆ ಹಿಂಸೆಯಿಲ್ಲದಂತೆ ತನ್ನ ಜೀವನವನ್ನು ನಡೆಸಬೇಕು. ಭಿಕ್ಷುವು ಭಿಕ್ಷೆಯಿಂದ ಬಂದ ಅನ್ನವನ್ನು ಹೊರತು ಬೇರೆ ವಿಧವಾದ ಆಹಾರವನ್ನು ಭುಜಿಸಬಾರದು. ತಾನು ನಡೆಸತಕ್ಕ ಧರ್ಮವನ್ನು ಹೊರಪಡಿಸಬಾರದು. ನಿರ್ಜನವಾದ ಮನೆ

ಯಲ್ಲಿಯೋ, ಕಾಡಿನಲ್ಲಿಯೋ, ಮರದಡಿಯಲ್ಲಿಯೋ, ನದೀತೀರದಲ್ಲಿಯೋ ಪರ್ವತ ಗುಹೆಗಳಲ್ಲಿಯೋ ವಾಸಿಸುತ್ತ ನಿರ್ಜನಸ್ಥಳದಲ್ಲಿಯೇ ಸಂಚಾರಕ್ಕೆ ಹೊರಡಬೇಕು. ಸನ್ಯಾಸಿಯು ಬೇಸಗೆಯ ಕಾಲಗಳಲ್ಲಿ ಒಂದು ರಾತ್ರಿಗೆಮೇಲೆ ಒಂದೂರಿನಲ್ಲಿ ನಿಲ್ಲಬಾರದು. ಮಳೆಗಾಲದಲ್ಲಿ ಒಂದೇ ಸ್ಥಳದಲ್ಲಿರಬೇಕು. ಸೂರ್ಯನಿಂದ ದಾರಿತೋರಿಸಲ್ಪಟ್ಟವನಾಗಿ ಹುಳುವಿನಂತೆ ನೆಲದಮೇಲೆ ಸಂಚರಿಸಬೇಕು. ಪ್ರಾಣಿಹಿಂಸೆಯಾಗದಂತೆ ನೆಲವನ್ನು ಗಮನಿಸುತ್ತ ನಡೆಯಬೇಕು. ಯಾವುದನ್ನೂ ಸಂಗ್ರಹಿಸಿಡಬಾರದು. ಯಾರಲ್ಲಿಯೂ ಸಂದೇಹಿಸಬಾರದು. ಶುದ್ಧಜಲದಿಂದ ಸ್ನಾನಾಚಮನಾದಿಕರ್ಮಗಳನ್ನು ಮಾಡಬೇಕು. ಪಾತ್ರದಲ್ಲಿ ಎತ್ತಿದ ತೀರ್ಥದಿಂದಲೇ ಆಚಮನವನ್ನು ಮಾಡಬೇಕು. ಅಹಿಂಸೆ, ಬ್ರಹ್ಮಚರ್ಯೆ, ಸತ್ಯ, ನಿಷ್ಕಾಪಟ್ಯ, ಕೋಪಾಸೂಯೆಗಳಿಲ್ಲದಿರುವುದು, ಮನೋನಿಗ್ರಹ, ಚಾಡಿ ಹೇಳದಿರುವುದು, ಈ ಎಂಟು ವ್ರತಗಳನ್ನೂ ಹಿಡಿದು, ಇಂದ್ರಿಯಗಳನ್ನಡಗಿಸಿ ವರ್ತಿಸಬೇಕು. ಪಾಪಬುದ್ಧಿಗೂ, ವಂಚನೆಗೂ, ಅಧರ್ಮಗಳಿಗೂ ಈಡಾಗದ ನಡತೆಯನ್ನೇ ಅನುಸರಿಸಬೇಕು. ಆಸೆಯನ್ನು ಬಿಟ್ಟು, ತನಗೆ ಲಭಿಸಿದ ಆಹಾರವನ್ನುಮಾತ್ರ ಭುಜಿಸಬೇಕು. ಶರೀರವನ್ನೂ, ಪ್ರಾಣಗಳನ್ನೂ ಧರಿಸುವಷ್ಟಕ್ಕೆಮಾತ್ರವೇ ಧರ್ಮರೀತಿಯಿಂದ ಲಭಿಸಿದುದನ್ನು ಭುಜಿಸಬೇಕು. ತನ್ನ ಮನಸ್ಸಿನ ದಾರಿಗೆ ತಾನು ಹೋಗಬಾರದು. ಅನ್ನವಸ್ತ್ರಗಳನ್ನು ಹೊರತು ಬೇರೆ ಯಾವುದನ್ನೂ ತೆಗೆದುಕೊಳ್ಳಲೇ ಬಾರದು. ತನ್ನ ಪ್ರಾಣಧಾರಣೆಗೆ ಬೇಕಾದಷ್ಟನ್ನು ತೆಗೆದುಕೊಳ್ಳಬೇಕೇ ಹೊರತು ಹೆಚ್ಚಾಗಿ ಸಿಕ್ಕಿದರೂ ತೆಗೆದುಕೊಳ್ಳಬಾರದು. ಇತರರಿಂದ ಹೆಚ್ಚಾಗಿ ಸ್ವೀಕರಿಸಲೂ ಬಾರದು. ಕೊಡಲೂ ಬಾರದು. ಪ್ರಾಣಿಗಳಲ್ಲಿ ದಯೆಯಿಂದ ಹಂಚಿಕೊಡಬೇಕು. ಪರಸ್ವತ್ತನ್ನು ಗ್ರಹಿಸಬಾರದು. ತನಗಾಗಿ ಮತ್ತೊಬ್ಬರಿಂದಲೂ ಯಾಚನೆಮಾಡಿಸಬಾರದು. ತಾನು ಯಾವ ವಿಷಯವನ್ನಾದರೂ ಅನುಭವಿಸಿದಾಗಲೂ ತಿರುಗಿ ಅದಕ್ಕೆ ಆಸೆಪಡಬಾರದು. ಹಣ್ಣು, ಕಾಯಿ, ಹೂವು, ಬೇರೆ ಅಲ್ಪಾಹಾರಗಳು, ಕೊನೆಗೆ ಮಣ್ಣು, ನೀರು ಮುಂತಾದುವನ್ನಾದರೂ ಬೇರೆ ಯಾರಿಗೂ ಸ್ವತಂತ್ರವಲ್ಲದುದನ್ನು, ತನಗಾಗಿ ಉಪಯೋಗಿಸಬಹುದು.

ಶಿಲ್ಪಾದಿಕಾರ್ಯಗಳಿಂದ ಜೀವನಮಾಡಬಾರದು. ಎರಡಾವರ್ತಿ ಭೋಜನವನ್ನಪೇಕ್ಷಿಸಬಾರದು. ಯಾರಲ್ಲಿಯೂ ದ್ವೇಷಿಸಬಾರದು. ಯಾರಿಗೂ ಉಪದೇಶಿಸಬಾರದು. ನಿಸ್ಸಹಾಯನಾಗಿರಬೇಕು. ಶ್ರದ್ಧೆಯಿಂದಲೂ, ಶುದ್ಧವಾಗಿಯೂ ಇತರರು ಕೊಟ್ಟುದನ್ನು ಭುಜಿಸಬೇಕು. ಭಿಕ್ಷೆಯನ್ನು ಪಡೆಯಲು ಕಾರಣವಾದ ತಂತ್ರಗಳನ್ನು ನಡೆಸಬಾರದು. ಫಲಾಪೇಕ್ಷೆಯಿಲ್ಲದ ಕಾರ್ಯಗಳಲ್ಲಿಯೇ ಇದ್ದು, ಸಂಗರಹಿತನಾಗಿ, ಯಾರೊಡನೆಯೂ (ಯಾವ ಪ್ರಾಣಿಗಳೊಡನೆಯೂ) ಸೇರದಂತಿರಬೇಕು. ಫಲಾಪೇಕ್ಷೆಯಿಂದಾಗಲಿ, ಹಿಂಸಾಪೂರ್ವಕವಾಗಿಯಾಗಲಿ ಇರತಕ್ಕ ಕರ್ಮಗಳನ್ನು ಮಾಡಲೂ ಬಾರದು. ಮಾಡಿಸಲೂ ಬಾರದು. ಲೋಕಸಂಗ್ರಹಕಾರಣವಾದ ಕಾರ್ಯಗಳನ್ನೂ ನಡೆಸಬಾರದು. ಎಲ್ಲಾ ಕೋರಿಕೆಗಳನ್ನೂ, ಎಲ್ಲಾ ಸಂಬಂಧವನ್ನೂ ಬಿಟ್ಟಿರಬೇಕು. ಎಲ್ಲಾ ಚರಾಚರಪ್ರಾಣಿಗಳಲ್ಲಿಯೂ ಸಮಬುದ್ಧಿಯಿಂದಿರಬೇಕು. ತನ್ನಿಂದ ಬೇರೆ ಯಾರಿಗೂ ಭಯವಿರಬಾರದು. ತಾನೂ ಯಾರಿಗೂ ಭಯಪಡಬಾರದು. ಎಲ್ಲಾ ಪ್ರಾಣಿಗಳ ನಂಬಿಕೆಗೂ ಪಾತ್ರನಾಗಿರಬೇಕು. ಇಂತವನೇ ಮೋಕ್ಷಜ್ಞರಲ್ಲಿ ಮೇಲೆನಿಸುವನು. ಇಂತವನು ಮುಂದೆ ಬರುವುದನ್ನು ಕುರಿತು ಚಿಂತಿಸಬಾರದು. ಕಳೆದುಹೋದುದಕ್ಕಾಗಿ ಕಳವಳಿಸಬಾರದು. ಈಗ ನಡೆಯುವುದನ್ನು ಕುರಿತು ಉದಾಸೀನನಾಗಿರಬೇಕು. ಎಚ್ಚರಿಕೆಯಿಂದ ತನ್ನ ಕಾಲವನ್ನು ಇದಿರುನೋಡುತ್ತಿರಬೇಕು. ಮನೋವಾಕ್ಕಾಯಗಳಿಂದಲೂ ಇತರರನ್ನು ದೂಷಿಸಬಾರದು. ಪ್ರತ್ಯಕ್ಷದಲ್ಲಿಯೇ ಆಗಲಿ, ಪರೋಕ್ಷದಲ್ಲಿಯೇ ಆಗಲಿ ಕೇಡನ್ನು ಮಾಡಬಾರದು. ಆಮೆಯು ತನ್ನ ಎಲ್ಲಾ ಅವಯವಗಳನ್ನೂ ಉಡುಗಿಸಿಟ್ಟುಕೊಳ್ಳುವಂತೆ, ಇಂದ್ರಿಯಗಳನ್ನೂ, ಮನಸ್ಸನ್ನೂ, ಬುದ್ಧಿಯನ್ನೂ, ಎಲ್ಲಾ ವಿಷಯಗಳಿಂದ ಅಡಗಿಸಿಟ್ಟುಕೊಂಡು ಆಶಾರಹಿತನಾಗಿರಬೇಕು. ತತ್ವವನ್ನು ತಿಳಿದವನಾಗಿ, ಎಲ್ಲಾ ದ್ವಂದ್ವಗಳನ್ನೂ, ಅಹಂಕಾರ, ಮಮಕಾರ, ಯೋಗಕ್ಷೇಮಗಳನ್ನೂ, ನಮಸ್ಕಾರ, ಸ್ವಾಹಾಕಾರಾದಿ ಕರ್ಮಗಳನ್ನೂ ತೊರೆದವನಾಗಿರಬೇಕು. ಧೀರನಾಗಿ, ನಿರಪೇಕ್ಷನಾಗಿ, ನಿರ್ಗುಣನಾಗಿ, ಶಾಂತನಾಗಿ, ನಿರಾಶ್ರಯನಾಗಿ, ಆತ್ಮವೊಂದರಲ್ಲಿಯೇ ನಿರತನಾಗಿರುವವನು ಸಂಸಾರದಿಂದ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ. ಆತ್ಮಕ್ಕೆ ಕೈ, ಕಾಲು,

ಬೆನ್ನು, ತಲೆ, ಹೊಟ್ಟೆ, ಮುಂತಾದ ಅವಯುವಭೇದಗಳೇನೂ ಇಲ್ಲ. ಅದು ಒಂದೇತರದ ಗುಣವೂ, ಕರ್ಮವೂ ಉಳ್ಳುದು. ಶರೀರಕ್ಕಿಂತಲೂ ಪ್ರತ್ಯೇಕವಾಗಿಯೂ, ಶುದ್ಧವಾಗಿಯೂ, ಸ್ಥಿರವಾಗಿಯೂ, ಶಬ್ದ, ರೂಪ, ರಸ, ಗಂಧ, ಸ್ಪರ್ಶಗಳಿಲ್ಲದೆಯೂ ಇರತಕ್ಕುದು. ಅದಕ್ಕೆ ಯಾವುದರ ಸಂಬಂಧವೂ ಇಲ್ಲ. ಬಾಲ್ಯ ಯೌವನಾದಿ ದಶಾಭೇದಗಳಿಲ್ಲ. ಮಾಂಸ ಸಂಬಂಧವಿಲ್ಲ. ಅದಕ್ಕೆ ಚಿಂತಾವ್ಯಾಕುಲಗಳಿಲ್ಲ. ಅದು ಅವ್ಯಯುವೆನಿಸಿರುವುದು. ಒಂದು ಮನೆಯೊಳಗಿದ್ದರೂ ಪ್ರಪಂಚದೊಳಗಿನ ಎಲ್ಲಾ ಪ್ರಾಣಿಗಳಲ್ಲಿಯೂ ವ್ಯಾಪಿಸಿರತಕ್ಕುದು. ಇಂತಹ ಆತ್ಮದ ತತ್ವವನ್ನು ತಿಳಿದವರಿಗೆ ಮರಣವೆಂಬುದೇ ಇಲ್ಲ. ಬುದ್ಧಿಯಾಗಲಿ, ಇಂದ್ರಿಯಗಳಾಗಲಿ, ದೇವತೆಗಳಾಗಲಿ, ವೇದಗಳಾಗಲಿ, ಯಜ್ಞ ದಾನ ತಪೋವ್ರತಗಳಾಗಲಿ, ಆ ಆತ್ಮಕ್ಕೆ ಸಂಬಂಧಿಸುವುದಿಲ್ಲ. ಜ್ಞಾನಿಗಳಿಗೆ ಮಾತ್ರವೇ ಗಮ್ಯವಾದ ಆ ಆತ್ಮಸ್ವರೂಪವನ್ನು ತಿಳಿಸತಕ್ಕ ಲಕ್ಷಣಗಳಾವುವೂ ಇಲ್ಲ. ಆದುದರಿಂದ ಹೀಗೆ ಲಕ್ಷಣವಿಲ್ಲದ ಆತ್ಮದ ಧರ್ಮವನ್ನು ತಿಳಿದವನು, ಅದಕ್ಕೆ ಬೇಕಾದ ಧರ್ಮವನ್ನೇ ಅನುಷ್ಠಿಸಬೇಕು. ರಹಸ್ಯವಾದ ಧರ್ಮವನ್ನು ಹಿಡಿದು ಶಾಸ್ತ್ರಜ್ಞಾನಕ್ಕೆ ತಕ್ಕ ಮಾರ್ಗವನ್ನು ಅನುಷ್ಠಿಸಬೇಕು. ಧರ್ಮವನ್ನು ದೂಷಿಸಬಾರದು. ತಾನು ಜ್ಞಾನಿಯಾಗಿದ್ದರೂ ನೋಡುವವರಿಗೆ ಹಾಸ್ಯಾಸ್ಪದನಾದ ಮೂಢನಂತೆ ನಡೆಯುತ್ತ, ವಿನೀತನಾಗಿ, ಸಾಧುಗಳ ಆಚಾರವನ್ನು ಅನುಸರಿಸಿ ನಡೆಯಬೇಕು. ಇಂತಹ ನಡತೆಯುಳ್ಳವನೇ ಮೇಲಾದ ಮುನಿಯೆನಿಸುವನು. ಇಂದ್ರಿಯಗಳು, ಇಂದ್ರಿಯಗಳಿಗೆ ಬೇಕಾದ ವಿಷಯಗಳು, ಪಂಚಮಹಾಭೂತಗಳು, ಮನಸ್ಸು, ಬುದ್ಧಿ, ಅಹಂಕಾರ, ಅವ್ಯಕ್ತ, ಪುರುಷನು, ಇವುಗಳ ತತ್ವಗಳನ್ನೆಲ್ಲ ಚೆನ್ನಾಗಿ ತಿಳಿದು ನಿಶ್ಚಯಬುದ್ಧಿಯುಳ್ಳವನು ಸಮಸ್ತಬಂಧನಗಳಿಂದ ಮುಕ್ತನಾಗಿ ಸದ್ಗತಿಯನ್ನು ಹೊಂದುವನು. ಇವೆಲ್ಲವನ್ನೂ ತಿಳಿದ ತತ್ವಜ್ಞನು ತನ್ನ ಅಂತ್ಯಕಾಲದಲ್ಲಿ ಏಕಾಂತವಾಸದಲ್ಲಿದ್ದುಕೊಂಡು ಪರಮಾತ್ಮಧ್ಯಾನವನ್ನು ಮಾಡುತ್ತಿರಬೇಕು. ಅದರಮೇಲೆ ಅವನು ಮುಕ್ತನಾಗುವನು. ಆಕಾಶದಲ್ಲಿ ಸಂಚರಿಸುವ ವಾಯುವಿನಂತೆ ಎಲ್ಲಾ ಸಂಗಗಳಿಂದಲೂ ಬಿಡ

ಲ್ಪಟ್ಟು, ಅನ್ನಮಯ ಮೊದಲಾದ ಕೋಶಗಳನ್ನು ನಿಗ್ರಹಿಸಿ, ನಿರಾತಂಕ ನಾಗಿ ಉತ್ತಮಪದವನ್ನು ಹೊಂದುವನು.

ಇದು ನಾಲ್ವತ್ತಾರನೆಯ ಅಧ್ಯಾಯವು.

ಬ್ರಹ್ಮನು ಮಹರ್ಷಿಗಳಿಗೆ ಸನ್ಯಾಸ, ಜ್ಞಾನ, ತಪಸ್ಸು ಇವು ಮೂರೂ ಮೋಕ್ಷಸಾಧನಗಳೆಂಬುದನ್ನು ತಿಳಿಸಿದುದು.

ಓ ಮಹರ್ಷಿಗಳೇ! ತತ್ವಜ್ಞರಾದ ಹಿರಿಯರು ಸನ್ಯಾಸವನ್ನೇ ತಪಸ್ಸೆಂದು ಹೇಳುವರು. ವೇದಜ್ಞರಾದ ಬ್ರಾಹ್ಮಣರು ವೇದವನ್ನೇ ಪರಬ್ರಹ್ಮವೆಂದು ತಿಳಿಯುವರು. ಶುದ್ಧಾತ್ಮರೂ, ರಜೋಗುಣವನ್ನು ಮುಟ್ಟದವರೂ, ಪಾಪರಹಿತರೂ ಆದ ವಿದ್ವಾಂಸರು ದುರ್ಜ್ಞೇಯಸ್ವರೂಪವುಳ್ಳುದೂ, ಅಚಿಂತ್ಯವೂ, ನಿತ್ಯವೂ, ವೇದವೇದ್ಯವೂ, ನಿರ್ದ್ವಂದ್ವವೂ, ನಿರ್ಗುಣವೂ ಆದ ಸರ್ವೋತ್ತಮವಾದ ಆ ಪರಬ್ರಹ್ಮವನ್ನು ಜ್ಞಾನದಿಂದಲೂ ತಪಸ್ಸಿನಿಂದಲೂ ಕಾಣುವರು. ಸನ್ಯಾಸದಲ್ಲಿ ನೆಲೆಗೊಂಡವರೂ, ಬ್ರಹ್ಮಜ್ಞಾನಿಗಳೂ, ತಪಸ್ಸಿನಿಂದಲೇ ಮೋಕ್ಷಸಾಧಕವಾದ ಮಾರ್ಗವನ್ನು ಹಿಡಿದು ಪರಮೇಶ್ವರನನ್ನು ಹೊಂದುವರು. ತಪಸ್ಸೇ ಬ್ರಹ್ಮಸ್ವರೂಪವನ್ನು ತೋರಿಸತಕ್ಕ ದೀಪವೆಂದೂ, ಸದಾಚಾರವು ಧರ್ಮಕ್ಕೆ ಸಾಧಕವೆಂದೂ ಹೇಳುವರು. ಜ್ಞಾನವನ್ನು ಉತ್ತಮಸಾಧನವನ್ನಾಗಿಯೂ, ಸನ್ಯಾಸವನ್ನು ಉತ್ತಮತಪಸ್ಸನ್ನಾಗಿಯೂ ತಿಳಿದುಕೊಳ್ಳಬೇಕು. ತತ್ವಗಳನ್ನೆಲ್ಲ ನಿಶ್ಚಯಜ್ಞಾನದಿಂದ ತಿಳಿದು, ನಿರಾಬಾಧವಾದ ಜ್ಞಾನಸ್ವರೂಪಿಯೂ, ಎಲ್ಲಾ ಪ್ರಾಣಿಗಳ ಅಂತರಾತ್ಮನೂ ಆದ ಆ ಪರಮಾತ್ಮಸ್ವರೂಪವನ್ನು ತನ್ನಲ್ಲಿಯೇ ಕಾಣಬಲ್ಲವನು ಸರ್ವಜ್ಞನೆಂದೇ ಎಣಿಸಲ್ಪಡುವನು. ಯಾವನು ಸಂಯೋಗ ವಿಯೋಗಗಳನ್ನೂ, ಏಕತ್ವ ನಾನಾತ್ವಗಳನ್ನೂ, ತತ್ವಜ್ಞಾನದಿಂದ ಸಮವಾಗಿ ಭಾವಿಸುವನೋ ಅವನು ದುಃಖದಿಂದ ಮುಕ್ತನಾಗುವನು. ಯಾವುದನ್ನೂ ಕೋರದೆ, ಯಾವುದನ್ನೂ ಅವಮತಿಸದೆ, ಇರುವವನು ಈ ಲೋಕದಲ್ಲಿರುವಾಗಲೇ ಬ್ರಹ್ಮಸ್ವರೂಪವನ್ನು ಹೊಂದಿದವನಾಗುವನು. ಪ್ರಕೃತಿಗುಣಗಳ ತತ್ವವನ್ನೂ, ಎಲ್ಲಾ ಭೂತಗಳ ಸೃಷ್ಟಿಕ್ರಮ

ವನ್ನೂ ತಿಳಿದು, ಅಹಂಕಾರ ಮಮಕಾರಗಳನ್ನು ತೊರೆದವನು, ಈ ಲೋಕದಲ್ಲಿಯೇ ಮುಕ್ತನೆಂಬುದರಲ್ಲಿ ಸಂದೇಹವಿಲ್ಲ. ದ್ವಂದ್ವಗಳನ್ನೆಲ್ಲ ತೊರೆದು, ನಮಸ್ಕಾರ ಸ್ವಧಾಕಾರಗಳನ್ನೂ ಬಿಟ್ಟವನು, ನಿರ್ಗುಣವೂ, ನಿತ್ಯವೂ, ನಿರ್ದ್ವಂದ್ವವೂ ಆದ ಆ ಬ್ರಹ್ಮವನ್ನು ತನ್ನ ಶಾಂತಿಗುಣದಿಂದಲೇ ಹೊಂದುವನು. ಪಾಪ ಪುಣ್ಯ ಕರ್ಮಗಳನ್ನೆಲ್ಲ ಬಿಟ್ಟು, ಸತ್ಯಾನೃತಗಳೆರಡನ್ನೂ ತೊರೆದವನು ಮೋಕ್ಷಕ್ಕೆ ಭಾಗಿಯಾಗುವನು. ಓ ಮಹರ್ಷಿಗಳಿರಾ! ಪ್ರಪಂಚವೆಂಬುದು ಬ್ರಹ್ಮಮಯವಾದ ಅನಾದಿಯಾದ ಒಂದು ವೃಕ್ಷವು. ಮಾಯೆಯೇ (ಪ್ರಕೃತಿಯೇ) ಇದರ ಬೀಜವು. ಬುದ್ಧಿಯೇ ಇದರ ಅಡಿಮರವು. ಮಹದಹಂಕಾರತತ್ವಗಳೆರಡೂ ಚಿಗುರುಗಳು. ಇಂದ್ರಿಯಗಳೇ ಇದರ ಪೊಟ್ಟರೆಗಳು. ಮಹಾಭೂತಗಳೇ ಇದರ ದೊಡ್ಡ ಶಾಖೆಗಳು. ಭೇದಜ್ಞಾನವೇ ಇದರ ಉಪಶಾಖೆಗಳು. ಶುಭಾಶುಭಗಳೇ ಇದರಲ್ಲಿ ಯಾವಾಗಲೂ ಬಿಡುತ್ತಿರುವ ಫಲಪುಷ್ಪಗಳು. ಸಮಸ್ತಪ್ರಾಣಿಗಳಿಗೂ ಇದು ಜೀವನಾಶ್ರಯವೆನಿಸಿರುವುದು. ತತ್ವಜ್ಞಾನವೆಂಬ ಕತ್ತಿಯಿಂದ ಆ ಮರವನ್ನು ಸೀಳಿ ಒಡೆದು ನೋಡತಕ್ಕವನೇ ವಿದ್ವಾಂಸನೆನಿಸುವನು. ಜನ್ಮ ಮೃತ್ಯು ಜರೆಗಳನ್ನುಂಟುಮಾಡುವ ಸಂಗರೂಪವಾದ ಪಾಶಗಳನ್ನು ಹರಿದು, ಅಹಂಕಾರ ಮಮಕಾರಗಳನ್ನು ಬಿಟ್ಟವನು ಮುಕ್ತನೆನಿಸುವನು. ಈ ಮೇಲೆ ಹೇಳಿದ ಮರದಲ್ಲಿ (ಜೀವೇಶ್ವರರೆಂಬ) ಎರಡು ಪಕ್ಷಿಗಳು ಅಡಗಿರುವುವು. ಇವುಗಳಿಗಿಂತಲೂ ಮೇಲೆನಿಸಿ ಬೇರೆಯಾಗಿ ಯಾವನಿರುವನೋ ಅವನೇ ಚೈತನ್ಯವುಳ್ಳವನೆಂದು ಕರೆಯಲ್ಪಡುವನು. ಚೇತನದಂತೆ ಕಾಣಿಸಿದರೂ ಅಚೇತನದಂತಿರುವವನೂ, ಉಪಾಧಿ ಭೇದಗಳಿಂದ ಬಿಡಲ್ಪಟ್ಟವನೂ, ಬುದ್ಧಿಗಿಂತಲೂ ಮೇಲಾದ ಚೈತನ್ಯವನ್ನು ಉಂಟುಮಾಡತಕ್ಕವನೂ, ಅಂತರಾತ್ಮನೂ, ಕ್ಷೇತ್ರಜ್ಞನೂ, ಎಲ್ಲಾ ಬುದ್ಧಿಗಳಿಗೂ ಸಾಕ್ಷಿಯೂ, ಆದ ಜೀವನು ತ್ರಿಗುಣಗಳನ್ನೂ ದಾಟಿದಾಗ, ಎಲ್ಲಾ ಪಾಪಗಳಿಂದ ಬಿಡಲ್ಪಡುತ್ತ, ಮುಕ್ತನೆನಿಸುವನು.

ಇದು ನಾಲ್ವತ್ತೇಳನೆಯ ಅಧ್ಯಾಯವು.



ಬ್ರಹ್ಮನು ಮಹರ್ಷಿಗಳಿಗೆ *ಯೋಗಿಗಳಲ್ಲಿರುವ ನಾಲ್ಕು ಬಗೆಗಳನ್ನೂ, ಮೋಕ್ಷಾರ್ಥಿಗಳಿಗೆ ತಿಳಿಯಬೇಕಾದ ವಿಷಯಗಳನ್ನೂ ತಿಳಿಸಿದುದು.

ಓ ಮಹರ್ಷಿಗಳಿರಾ! ಕೆಲವರು (ಪ್ರಪಂಚವೆಂಬ) ಆ ವೃಕ್ಷವನ್ನು ಬ್ರಹ್ಮಮಯವೆನ್ನುವರು. ಕೆಲವರು ಬ್ರಹ್ಮವನ್ನು ವನದಂತೆ ಹೇಳುವರು. ಕೆಲವರು ಬ್ರಹ್ಮವನ್ನು ಅವ್ಯಕ್ತವೆನ್ನುವರು. ಕೆಲವರು ಬ್ರಹ್ಮವನ್ನು ನಿರ್ದುಷ್ಟವಾದ ಪರವಸ್ತುವೆನ್ನುವರು. ಈ ಪ್ರಪಂಚವೆಲ್ಲ ಅವ್ಯಕ್ತದಿಂದುಂಟಾಗಿ, ಅದರಲ್ಲಿಯೇ ಲಯಹೊಂದುವುದೆಂದೂ ಹೇಳುವರು. ಯಾವನು ಮರಣಕಾಲದಲ್ಲಿ ಉಸಿರುಬಿಡುವಷ್ಟು ಹೊತ್ತಾದರೂ ಆ ಪರಮಾತ್ಮನನ್ನು ಧ್ಯಾನಮಾಡಿ, ಅವನೊಡನೆ ತನಗೆ ತಾದಾತ್ಮ್ಯವನ್ನು ನೆನೆಸುವನೋ, ಅವನು ಮೋಕ್ಷಕ್ಕೆ ಯೋಗ್ಯನು. ಯಾವ ಕಾಲದೇಶಗಳಲ್ಲಿಯೇ ಆಗಲಿ ಒಂದು ನಿಮಿಷಮಾತ್ರವಾದರೂ ಚಿತ್ತವನ್ನು ಪರಮಾತ್ಮನಲ್ಲಿ ಸೇರಿಸಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾದವನು ಮಹಾಜ್ಞಾನಿಗಳಿಗೆ ಲಭಿಸತಕ್ಕ ಅಕ್ಷಯವಾದ ಮೋಕ್ಷವನ್ನು ಹೊಂದುವನು. §ಎಂಟು, ಹತ್ತು, ಅಥವಾ ಹನ್ನೆರಡು ಅಂಗಗಳುಳ್ಳ ಯೋಗಗಳಿಂದ ಅಡಿಗಡಿಗೆ ಪ್ರಾಣಗಳನ್ನಡಗಿಸಿಡುವವನು, ಇಪ್ಪತ್ತುನಾಲ್ಕನೆಯದಾದ ಅವ್ಯಕ್ತಕ್ಕಿಂತಲೂ ಮೇಲೆನಿಸಿದ ಪುರುಷನನ್ನು ಹೊಂದುವನು. ಇಂತಹ ಶುದ್ಧಸತ್ವಗುಣವುಳ್ಳವನಿಗೆ ಕೋರಿಕೆಗಳೆಲ್ಲಾ ತಾನಾಗಿ ಕೈಗೂಡುವುವು. ಅವ್ಯಕ್ತದಿಂದ ಸತ್ವಗುಣವು ಪ್ರಬಲವಾದಾಗ ಅಮೃತತ್ವವನ್ನು ಹೊಂದಲು ಅರ್ಹನಾಗುವನು. ಜ್ಞಾನಿಗಳು ಸತ್ವಕ್ಕಿಂತಲೂ ಮೇಲಾದುದಿಲ್ಲವೆಂದು

---

* ಎಂಟೆಂದರೆ ಅಷ್ಟಾಂಗಯೋಗಗಳು. ಯುಕ್ತಿ ವೈರಾಗ್ಯಗಳೆರಡೂ ಸೇರಿ ಹತ್ತು. ಅಷ್ಟಾಂಗಯೋಗಗಳೊಡನೆ, ಮೈತ್ರಿ, ಕರುಣೆ, ಮುದಿತೆ, ಉಪೇಕ್ಷೆ, ಇವು ನಾಲ್ಕೂ ಸೇರಿ ಹನ್ನೆರಡು ಎಂದು ತಿಳಿಯಬೇಕು.

§ ಬ್ರಹ್ಮವೇ ಪ್ರಪಂಚವಾಗುವುದೆಂದು ಕೆಲವರು. ಪ್ರಪಂಚವೇ ಬ್ರಹ್ಮರೂಪದಲ್ಲಿ ತೋರುವುದೆಂದು ಬೇರೆ ಕೆಲವರು. ಪ್ರಪಂಚವೆಲ್ಲ ಪ್ರಕೃತಿಯಿಂದುತ್ಪನ್ನವಾಗಿ, ಅಲ್ಲಿಯೇ ಲಯಿಸುವುದೆಂದು ಕೆಲವರು (ಸಾಂಖ್ಯರು). ಹೀಗೆ ಮತಭೇದಗಳುಂಟೆಂದು ಗ್ರಹಿಸಬೇಕು.

ಹೇಳುವರು. ಮನುಷ್ಯನಲ್ಲಿ ಸತ್ವಗುಣವಿರುವುದನ್ನು ಅನುಮಾನದಿಂದ ತಿಳಿಯಬಹುದು. ಆ ಗುಣವಿದ್ದವನನ್ನು ಸತ್ವಹೀನನೆಂದು ತಿಳಿಯಲು ಸಾಧ್ಯವಿಲ್ಲ. ತಾಳ್ಮೆ, ಧೈರ್ಯ, ಅಹಿಂಸೆ, ಸಮಬುದ್ಧಿ, ಸತ್ಯ, ಋಜುತ್ವ, ಜ್ಞಾನ, ತ್ಯಾಗ, ಸನ್ಯಾಸ, ಇವೆಲ್ಲ ಸತ್ವಗುಣದ ಕಾರ್ಯಗಳು. ಈ ಗುಣಗಳಿಂದಲೇ ವಿದ್ವಾಂಸರು ಸತ್ವಗುಣವುಳ್ಳವನೆಂಬುದನ್ನು ಅನುಮಾನಿಸಿ ತಿಳಿಯುವರು. ಜ್ಞಾನದಲ್ಲಿ ನೆಲೆಗೊಂಡ ಕೆಲವು ವಿದ್ವಾಂಸರು, ಸತ್ವಕ್ಕೂ, ಪುರುಷನಿಗೂ ಏಕೀಭಾವವುಂಟೆಂಬುದರಲ್ಲಿ ವಿಚಾರವೇ ಇಲ್ಲವೆನ್ನುವರು. ಇನ್ನು ಕೆಲವರು ಆ ಐಕ್ಯವು ಉಪಪನ್ನವಲ್ಲವೆಂದೂ, ಸತ್ವವು ಪ್ರತ್ಯೇಕ ಪದಾರ್ಥವಾಗಿ ಸಹಜವಾಗಿರತಕ್ಕುದೆಂದೂ ನಿರ್ವಿವಾದವಾಗಿ ಹೇಳುವರು. ಹೀಗೆಯೇ ಪುರುಷನಿಗೂ, ಸತ್ವಕ್ಕೂ ಏಕತ್ವ ನಾನಾತ್ವಗಳೆರಡೂ ನಿರೂಪಿಸಲ್ಪಡುವುವು. ಇದಕ್ಕೆ ವಿದ್ವಾಂಸರ ಯುಕ್ತಿಕಲ್ಪನೆಯೂ ಉಚಿತವಾಗಿದೆ. ಅತ್ತಿಯ ಹಣ್ಣಿಗೂ, ಅದರೊಳಗಿನ ಸೊಳ್ಳೆಗಳಿಗೂ ಹೇಗೆ ಏಕೀಭಾವವೂ, ಭಿನ್ನಭಾವವೂ ತೋರುವುದೋ ಹಾಗೆಯೇ ಇದನ್ನು ನಿದರ್ಶಿಸುವರು. ಪುರುಷನಿಗೂ, ಸತ್ವಕ್ಕೂ ಇರುವ ಸೇರುವಿಕೆಯನ್ನು ಮೀನು ನೀರಿನಲ್ಲಿರುವುದಕ್ಕೂ, ಜಲಬಿಂದುವು ತಾವರೆಯೆಲೆಯಲ್ಲಿರುವುದಕ್ಕೂ ಸಮಾನವೆನ್ನುವರು" ಎಂದನು.

ಓ ಶಿಷ್ಯಾ! ಹೀಗೆ ಬ್ರಹ್ಮನು ಹೇಳಿದ ತತ್ವಾರ್ಥಗಳನ್ನೆಲ್ಲ ಆಮಹರ್ಷಿಗಳು ಚೆನ್ನಾಗಿ ಮನಸ್ಸಿಗೆ ತಂದುಕೊಂಡು, ಬೇರೆ ಕೆಲವು ಸಂಶಯಗಳನ್ನು ಪರಿಹರಿಸುವುದಕ್ಕಾಗಿ ತಿರುಗಿ ಬ್ರಹ್ಮನನ್ನು ಕೇಳುವರು.

ಇದು ನಾಲ್ವತ್ತೆಂಟನೆಯ ಅಧ್ಯಾಯವು.

ಧರ್ಮವಿಷಯದಲ್ಲಿ ಕಂಡುಬರುವ ನಾನಾಬಗೆಯ ವಿರುದ್ಧವಾದಗಳನ್ನು ಕುರಿತು ಮಹರ್ಷಿಗಳು ಬ್ರಹ್ಮನಲ್ಲಿ ತಮ್ಮ ಸಂಶಯನಿವಾರಣಾರ್ಥವಾಗಿ ಪ್ರಾರ್ಥಿಸಿದುದು.

ಮಹರ್ಷಿಗಳು ಬ್ರಹ್ಮನನ್ನು ಕುರಿತು "ದೇವಾ! ಈ ಲೋಕದಲ್ಲಿ ನಮಗೆ ಅವಶ್ಯವಾಗಿ ಅನುಷ್ಠಿಸಬೇಕಾದ ಧರ್ಮವಾವುದೆಂದು ತಿಳಿಯು

ಲಿಲ್ಲ. ಧರ್ಮದ ಗತಿಯು ನಾನಾವಿಧವಾಗಿ, ಒಂದಕ್ಕೊಂದು ವಿರುದ್ಧವಾಗಿಯೂ ತೋರುತ್ತಿರುವುದು. ಕೆಲವರು ದೇಹವು ಹೋದಮೇಲೆಯೂ ಆತ್ಮವಿರುವುದೆಂದು ಹೇಳುವರು. ಕೆಲವರು ಹಾಗಲ್ಲವೆನ್ನುವರು. ಕೆಲವರು ಎಲ್ಲವನ್ನೂ ಸಂಶಯಾಸ್ಪದವನ್ನಾಗಿಯೇ ಹೇಳುವರು. ಕೆಲವರು ನಿಸ್ಸಂಶಯವೆಂದು ನಿರ್ಧರಿಸುವರು. ಕೆಲವರು ನಿತ್ಯವೆಂದೂ, ಕೆಲವರು ಅನಿತ್ಯವೆಂದೂ ಹೇಳುವರು. ಒಂದೇ ವಸ್ತುವನ್ನು ಕೆಲವರು ಉಂಟೆನ್ನುವರು. ಕೆಲವರು ಇಲ್ಲವೆನ್ನುವರು. ಕೆಲವರು ಜೀವ ಬ್ರಹ್ಮ ಜಡವೆಂಬ ಮೂರು ತತ್ವಗಳೆಂದೂ, ಕೆಲವರು ಪ್ರಕೃತಿಪುರುಷರೆಂಬ ಎರಡೇ ತತ್ವಗಳೆಂದೂ, ಕೆಲವರು ಎಲ್ಲವೂ ಒಂದೇ ಎಂದೂ, ಕೆಲವರು ಅನ್ಯೋನ್ಯಭಿನ್ನವೆಂದೂ ಹೇಳುವರು. ಬ್ರಹ್ಮಜ್ಞರೂ, ತತ್ವಜ್ಞಾನಿಗಳೂ ಆದ ಕೆಲವರು ಬ್ರಹ್ಮವೊಂದೇ ಎಲ್ಲವೂ ಆಗಿದೆಯೆನ್ನುವರು. ಕೆಲವರು ಕರ್ಮಗಳು ಬೇರೆ ಬೇರೆಯಾಗಿರುವುದೇ ಶರೀರಭೇದಕ್ಕೆ ಕಾರಣವೆನ್ನುವರು. ಇನ್ನು ಕೆಲವರು ಇನ್ನೂ ಅನೇಕ ಕಾರಣಗಳುಂಟೆನ್ನುವರು. ಕೆಲವರು ದೇಶಕಾಲಗಳೆರಡನ್ನೂ ಕಾರಣವೆನ್ನುವರು. ಕೆಲವರು ಹಾಗಲ್ಲವೆನ್ನುವರು. ಕೆಲವರು ಜಡೆಯನ್ನೂ, ನಾರುಮಡಿಯನ್ನೂ ಧರಿಸುವರು. ಕೆಲವರು ತಲೆಯನ್ನು ಸಂಪೂರ್ಣವಾಗಿ ಮುಂಡನಮಾಡಿ, ಮೈಮೇಲೆ ಬಟ್ಟೆಯಿಲ್ಲದೆ ತಿರುಗುತ್ತ ಅದೇ ತಮಗೆ ಧರ್ಮವೆಂದೂ ಹೇಳುವರು. ಕೆಲವರು ನೈಷ್ಠಿಕಬ್ರಹ್ಮಚರ್ಯವನ್ನೂ, ಮತ್ತೆ ಕೆಲವರು ಗೃಹಸ್ಥಾಶ್ರಮವನ್ನೂ ಆದರಿಸುವರು. ತತ್ವಜ್ಞರಾದ ಕೆಲವು ಬ್ರಹ್ಮಜ್ಞಾನಿಗಳು ಕೇವಲ ಧ್ಯಾನದಲ್ಲಿ ನೆಲೆಗೊಂಡಿರುವರು. ಕೆಲವರು ಆಹಾರವನ್ನು ಭುಜಿಸುವರು. ಕೆಲವರು ಉಪವಾಸವಿರುವರು. ಕೆಲವರು ಕರ್ಮಗಳನ್ನು ಹೊಗಳುವರು. ಕೆಲವರು ಶಾಂತಿಯನ್ನು ಹೊಗಳುವರು. ಕೆಲವರು ಮೋಕ್ಷವೇ ಉತ್ತಮಸುಖವೆನ್ನುವರು. ಇನ್ನು ಕೆಲವರು ಇಹಲೋಕದ ಭೋಗಗಳನ್ನೇ ಹೊಗಳುವರು. ಕೆಲವರು ಧನವನ್ನು ಬಯಸುವರು. ಕೆಲವರು ಏನೂ ಇಲ್ಲದಿರುವುದೇ ಮೇಲೆನ್ನುವರು. ಕೆಲವರು ಧ್ಯಾನ ಮೊದಲಾದ ಸಾಧನಗಳನ್ನು ಅನುಷ್ಠಿಸುತ್ತಿದ್ದು ಕೊನೆಗೆ ಅವನ್ನೆಲ್ಲ ಅಪಲಪಿಸುವರು. ಅಹಿಂಸೆಯನ್ನೇ ಕೆಲವರು ಮುಖ್ಯವ್ರತವೆನ್ನುವರು. ಕೆಲವರು ಹಿಂಸಾರೂಪವಾದ ಕರ್ಮ

ಗಳನ್ನು ಮಾಡುವರು. ಕೆಲವರು ಪುಣ್ಯಕ್ಕೂ, ಯಶಸ್ಸಿಗೂ ಪ್ರಯತ್ನಿಸ ಬೇಕೆನ್ನುವರು. ಕೆಲವರು ಅವೊಂದೂ ಪ್ರಯೋಜನಕಾರಿಯಲ್ಲವೆನ್ನುವರು. ಕೆಲವರು ಸತ್ಕಾರ್ಯಗಳನ್ನು ನಡೆಸುವರು. ಬೇರೆ ಕೆಲವರು ಆ ಕಾರ್ಯಗಳಿಂದ ಫಲವುಂಟೋ, ಇಲ್ಲವೋ ಎಂದು ಸಂದೇಹಿಸುವರು. ಕೆಲವರು ದುಃಖನಿವೃತ್ತಿಗಾಗಿಯೂ, ಕೆಲವರು ಸುಖಪ್ರಾಪ್ತಿಗಾಗಿಯೂ, ಕೆಲವರು ಯಾವ ಫಲಾಪೇಕ್ಷೆಯೂ ಇಲ್ಲದೆಯೂ ಕರ್ಮವಾಡಬೇಕೆನ್ನುವರು. ಕೆಲವು ಬ್ರಾಹ್ಮಣರು, ಯಜ್ಞಗಳನ್ನೂ, ಕೆಲವರು ದಾನಗಳನ್ನೂ, ಕೆಲವರು ವೇದಾಧ್ಯಯನವನ್ನೂ, ಕೆಲವರು ತಪಸ್ಸನ್ನೂ ಹೊಗಳುವರು. ಕೆಲವರು ಜ್ಞಾನವು ಸನ್ಯಾಸದಿಂದ ಉಂಟಾಗುವುದೆಂದು, ಹೇಳುವರು. ಕೆಲವರು ಅದು ಸಹಜಸ್ವಭಾವವೆನ್ನುವರು. ಕೆಲವರು ಎಲ್ಲವನ್ನೂ ಹೊಗಳುವರು. ಕೆಲವರು ಎಲ್ಲವನ್ನೂ ಇಲ್ಲವೆಂದೇ ಹೇಳುವರು. ಹೀಗೆ ಧರ್ಮವೆಂಬುದು ಪರಸ್ಪರ ವಿರುದ್ಧವಾಗಿ, ನಾನಾತರದಲ್ಲಿ ಹೇಳಲ್ಪಟ್ಟಿರುವುದರಿಂದ, ಇವುಗಳಲ್ಲಿ ಯಾವುದು ಶ್ರೇಯಸ್ಕರವೆಂಬ ನಿಶ್ಚಯವು ನಮಗೆ ಏರ್ಪಡಲಿಲ್ಲ. ಜನಗಳು ತಮತಮಗೆ ತೋರಿದಂತೆ ‘ ಇದೇ ಶ್ರೇಯಸ್ಸು ! ಅದೇ ಶ್ರೇಯಸ್ಸು ’ ಎಂದು ನಾನಾವಿಧವಾದ ದಾರಿಯನ್ನು ಹೊಗಳುತ್ತಿರುವರು. ತಮತಮಗೆ ತೋರಿದ ಧರ್ಮದಲ್ಲಿ ಅತ್ಯಾಸಕ್ತರಾಗಿರುವದು. ಇದರಿಂದ ನಮಗೆ ಬುದ್ಧಿಯು ಸ್ಥಿರವಾಗಿ ನಿಲ್ಲದೆ, ಮನಸ್ಸು ವಿಧವಿಧವಾಗಿ ಓಡುತ್ತಿರುವುದು. ಆದುದರಿಂದ ಯಾವುದು ಶ್ರೇಯಸ್ಸೆಂಬುದನ್ನು ನಿನ್ನಿಂದಲೇ ನಾವು ನಿರ್ಧರಿಸಿ ತಿಳಿಯಬೇಕಾಗಿದೆ. ಇದರ ರಹಸ್ಯವನ್ನು ನಮಗೆ ತಿಳಿಸಬೇಕು. ಸತ್ವಕ್ಕೂ, ಕ್ಷೇತ್ರಜ್ಞನಿಗೂ ಸಂಬಂಧವು ಯಾವ ಕಾರಣದಿಂದ ಏರ್ಪಟ್ಟಿತು ? ” ಎಂದರು. ಆಗ ಬ್ರಹ್ಮನು ಆ ಮಹರ್ಷಿಗಳಿಗೆ ಆ ತತ್ವವನ್ನು ಯಥಾವತ್ತಾಗಿ ತಿಳಿಸಲಾರಂಭಿಸಿದನು.

ಇದು ನಾಲ್ವತ್ತೊಂಭತ್ತನೆಯ ಅಧ್ಯಾಯವು.



ಬ್ರಹ್ಮನು ಮಹರ್ಷಿಗಳಿಗೆ ಧರ್ಮವನ್ನು ನಿರೂಪಿಸಿ, ಅದರಿಂದ ಸಹಕರಿಸಲ್ಪಟ್ಟ ಜ್ಞಾನವೇ ಮೋಕ್ಷಸಾಧನವೆಂಬುದನ್ನೂ, ಕ್ಷೇತ್ರ ಕ್ಷೇತ್ರಜ್ಞರಿಗೆ ಇರುವ ಸಂಬಂಧವನ್ನೂ, ಪಂಚ ಭೂತಗಳ ಗುಣಗಳನ್ನೂ ತಿಳಿಸಿದುದು.

ಆಗ ಬ್ರಹ್ಮನು 'ಓ ಸಾಧುಗಳಿರಾ! ಇದೋ! ನಿಮ್ಮ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವೆನು. ಗುರುವು ಶಿಷ್ಯನಿಗೆ ಉಪದೇಶಿಸಿದ ಧರ್ಮವನ್ನೇ ನಿಮಗೆ ತಿಳಿಸುವೆನು. ಸಾವಧಾನವಾಗಿ ಕೇಳಿ ಮನನಮಾಡಿರಿ. ಯಾವ ಪ್ರಾಣಿಗಳಿಗೂ ಹಿಂಸೆಮಾಡದಿರುವುದೇ ಉತ್ತಮ ಧರ್ಮವೆಂದು ಹೇಳಲ್ಪಡುವುದು. ಇದು ಯಾರಿಗೂ ನಿರ್ಭಯವಾದ ಧರ್ಮವು. ಎಲ್ಲಕ್ಕಿಂತಲೂ ಉತ್ತಮವಾದುದು. ಧರ್ಮಕ್ಕೆ ಇದೇ ಮುಖ್ಯಲಕ್ಷಣವು. ತತ್ವಜ್ಞರಾದ ವೃದ್ಧರು ಜ್ಞಾನವೇ ಮೋಕ್ಷಸಾಧಕವೆನ್ನುವರು. ಶುದ್ಧಜ್ಞಾನದಿಂದ ಸಮಸ್ತ ಪಾಪಗಳೂ ಬಿಟ್ಟುಹೋಗುವುವು. ಇದೊಂದೂ ಇಲ್ಲದೆ ಹಿಂಸಾಪರರಾಗಿ, ನಾಸ್ತಿಕ್ಯದಲ್ಲಿ ಪ್ರವರ್ತಿಸಿ, ಲೋಭ ಮೋಹದಿಂದ ಕೂಡಿದವರು ನರಕದಲ್ಲಿ ಬೀಳುವರು. ಹಾಗಿಲ್ಲದೆ ಫಲೋದ್ದೇಶದಿಂದ ಯಾರು ಯಾಗಾದಿ ಸತ್ಕರ್ಮಗಳನ್ನು ಮಾಡುವರೋ, ಅವರು ಈ ಲೋಕದಲ್ಲಿ ತಿರುಗಿತಿರುಗಿ ಹುಟ್ಟುತ್ತ, ಅನೇಕ ಭೋಗಗಳನ್ನು ಅನುಭವಿಸುತ್ತಿರುವರು. ಯಾರು ಫಲಾಪೇಕ್ಷೆಯಿಲ್ಲದೆ ಶ್ರದ್ಧೆಯಿಂದ ಕರ್ಮಗಳನ್ನು ನಡೆಸುವರೋ ಅವರೇ ತತ್ವವನ್ನು ತಿಳಿದವರು.

ಎಲೈ ಮಹರ್ಷಿಗಳೇ! ಇನ್ನು ಸತ್ವಕ್ಕೂ, ಕ್ಷೇತ್ರಜ್ಞನಿಗೂ ಇರುವ ಸಂಬಂಧವನ್ನೂ, ವಿಯೋಗವನ್ನೂ ಕುರಿತು ಹೇಳುವೆನು. ಸತ್ವಕ್ಕೂ, ಕ್ಷೇತ್ರಜ್ಞನಿಗೂ ಇರುವ ಸಂಬಂಧವು, ವಿಷಯಕ್ಕೂ ವಿಷಯಿಗೂ ಇರುವ ಸಂಬಂಧವೆನಿಸುವುದು. ಸತ್ವವೆಂಬುದು ವಿಷಯವು. ಪುರುಷನು ವಿಷಯಿಯೆನಿಸುವನು. ಅತ್ತಿಯ ಹಣ್ಣಿಗೂ, ಅದರೊಳಗಿನ ಹುಳಗಳಿಗೂ ಇರುವ ಸಂಬಂಧದಂತೆ ಇದು ಉದಾಹರಿಸಲ್ಪಟ್ಟಿರುವುದು. ಅಚೇತನವೆನಿಸಿದ ಸತ್ವವು ಅತ್ತಿಯ ಹಣ್ಣಿನಂತಿದ್ದು, ತನ್ನನ್ನು ಭುಜಿಸುವವನನ್ನು ತಾನು ತಿಳಿಯಲಾರದು. ಯಾವನು ಆ ಹಣ್ಣಿನೊಳಗಿನ ಹುಳುವಿನಂತೆ ಭುಜಿಸುವವನನ್ನೂ, ಭುಜಿಸಲ್ಪಡುವುದನ್ನೂ ತಿಳಿಯಬಲ್ಲನೋ, ಅವನೇ ಕ್ಷೇತ್ರ

ಜ್ಞನು. ಸತ್ವವೆಂಬುದು ಅನಿತ್ಯವಾದುದು. ದ್ವಂದ್ವದಿಂದ ಕೂಡಿದುದು. ಕ್ಷೇತ್ರಜ್ಞನಾದರೋ ದ್ವಂದ್ವವಿಲ್ಲದವನು. ಅಂಶವಿಲ್ಲದವನು. ನಿತ್ಯನು! ನಿರ್ಗುಣಸ್ವರೂಪನು! ಅವನು ತಾನು ಸದಾ ಸಮನಾಗಿ ಅದರ ಚಿಹ್ನೆಗಳನ್ನು ಮಾತ್ರ ಅನುಸರಿಸುತ್ತ, ಎಲ್ಲಾ ಕಡೆಯೂ ನೆಲೆಗೊಂಡಿರುವನು. ತಾವರೆಯೆಲೆಯು ನೀರನ್ನು ಹೇಗೋ ಹಾಗೆ ಸತ್ವದೊಡನೆ ಅವನು ಸಂಬಂಧಿಸುವುದಿಲ್ಲ. ಎಲ್ಲಾ ಗುಣಗಳಿಂದ ಕೂಡಿದ್ದರೂ ಅವುಗಳಿಂದ ನಿರ್ಲಿಪ್ತನಾಗಿರುವನು. ಆದರೂ ಸತ್ವವೂ, ಆ ಪುರುಷನೂ ಸೇರಿ ಒಂದೇ ದ್ರವ್ಯದಂತಿರುವುದು. ಸತ್ವವೆಂಬುದು ಒಬ್ಬ ಪುರುಷನಲ್ಲಿ, ಒಂದು ದ್ರವ್ಯಕ್ಕೂ, ಒಬ್ಬ ಕರ್ತೃವಿಗೂ ಇರುವ ಸಂಬಂಧದಂತೆ ಇರುವುದು. ಒಬ್ಬನು ಕತ್ತಲೆಯಲ್ಲಿ ಒಂದು ದೀಪವನ್ನು ಹಿಡಿದುಕೊಂಡುಹೋಗುವಹಾಗೆ ಪುರುಷನು ಸತ್ವಗುಣವೆಂಬ ದೀಪದೊಡನೆ ಮುಂದುವರಿಯುವನು. ಎಣ್ಣೆ ಬತ್ತಿಗಳೆರಡೂ ಇರುವವರೆಗೆ ದೀಪವು ಉರಿಯುತ್ತಿದ್ದು, ಅವು ತೀರಿದೊಡನೆ ಆ ಪ್ರಕಾಶವು ಹೋಗುವಂತೆಯೇ, ವ್ಯಕ್ತವಾದ ಸತ್ವಗುಣವು ಬತ್ತಿಯಾಗಿಯೂ ಪುರುಷನು ಎಣ್ಣೆಯಾಗಿಯೂ ಉದಾಹರಿಸಲ್ಪಡುವುವು. ಮತ್ತೊಂದು ವಿಷಯವನ್ನು ಹೇಳುವೆನು. ಚೆನ್ನಾಗಿ ಅವಧರಿಸಿರಿ. ಕೆಟ್ಟಬುದ್ಧಿಯುಳ್ಳವನು ಸಾವಿರ ಮಾರ್ಗಗಳಿಂದಲೂ ಸರಿಯಾದ ಬುದ್ಧಿಯನ್ನು ಹೊಂದಲಾರನು. ಬುದ್ಧಿಯುಳ್ಳವನು ನಾಲ್ಕನೆಯ ಒಂದು ಅಂಶದಿಂದಲಾದರೂ ಅದರಿಂದ ಸುಖವನ್ನು ಪಡೆಯುವನು. ಹೀಗೆ ಧರ್ಮಸಂಪಾದನೆಗೆ ಬೇಕಾದ ಮಾರ್ಗವನ್ನು ಉಪಾಯದಿಂದ ತಿಳಿದುಕೊಳ್ಳಬೇಕು. ಆ ಉಪಾಯವನ್ನು ತಿಳಿದ ಮೇಧಾವಿಯೇ ಆತ್ಯಂತಿಕಸುಖವನ್ನು ಪಡೆಯುವನು. ಪಾಥೇಯವಿಲ್ಲದೆ (ಪ್ರಯಾಣದ ಬುತ್ತಿ) ಪ್ರಯಾಣಕ್ಕೆ ಹೊರಟವನು, ಆಗಾಗ ಎಷ್ಟೋ ಕಷ್ಟಪಡುವನು. ಕೊನೆಗೆ ಮಾರ್ಗಮಧ್ಯದಲ್ಲಿ ಸಾಯುವುದೂ ಉಂಟು. ಅದರಂತೆಯೇ ಕರ್ಮಗಳಿಗನುಸಾರವಾಗಿ ಫಲಾಫಲಗಳೂ ನಡೆಯುವುವು. ಪುರುಷನಿಗೆ ಶ್ರೇಯಸ್ಸೆಂಬುದು ಅವನ ಪುಣ್ಯಪಾಪಗಳಿಂದಲೇ ನಿರ್ಧರಿಸಲ್ಪಡುವುದು. ತತ್ವಜ್ಞಾನವಿಲ್ಲದವನ ಗತಿಯನ್ನು, ಒಬ್ಬ ಮನುಷ್ಯನು ಹಿಂದೆ ಎಂದೂ ಕಾಣದ ದೀರ್ಘಕಾಲದ ಪ್ರಯಾಣಮಾರ್ಗವನ್ನು ಕಾಲುನಡೆಯಿಂದಲೇ ನಡೆಸುವುದಕ್ಕೆ ಹೋಲಿಸ

ಮಧುರ, ಆಮ್ಲ, ಕಟು, ನಿರ್ಹಾರಿ, ಸಂಹತ, ಸ್ನಿಗ್ಧ, ರೂಕ್ಷ, ವಿಶದಗಳೆಂದು ಗಂಧದಲ್ಲಿ ಹತ್ತು ಬಗೆ. ಶಬ್ದ, ಸ್ಪರ್ಶ, ರೂಪ, ರಸಗಳೆಂಬಿವು ಜಲದಲ್ಲಿರುವ ಗುಣಗಳು. ಜಲದ ಮುಖ್ಯಗುಣವೆನಿಸಿದ ರಸದಲ್ಲಿಯೂ ಹಲವು ಭೇದಗಳವೆ. ಹುಳಿ, ಸೀ, ಕಾರ, ಒಗಚು, ಕಹಿ, ಉಪ್ಪು, ಎಂಬೀ ಆರು ವಿಧಗಳುಂಟು. ಶಬ್ದ ಸ್ಪರ್ಶ ರೂಪಗಳು ಮೂರೂ ತೇಜಸ್ಸಿನ ಗುಣಗಳು. ಅವುಗಳಲ್ಲಿ ರೂಪವು ಅದರ ಪ್ರಧಾನಗುಣವೆನಿಸಿದೆ. ಆ ರೂಪದಲ್ಲಿಯೂ ಹಲವು ವಿಧಗಳುಂಟು. ಶುಕ್ಲ, ಕೃಷ್ಣ, ಪೀತ, ನೀಲ, ರಕ್ತ, ಅರುಣಗಳೆಂಬ ಆರು ವರ್ಣಗುಣಗಳೂ, ಹ್ರಸ್ವ, ದೀರ್ಘ, ಕೃಶ, ಸ್ಥೂಲ, ಚತುರಶ್ರ, ವರ್ತುಲಗಳೆಂಬ ಆರು ಆಕೃತಿಭೇದಗಳೂ ಸೇರಿ, ರೂಪದಲ್ಲಿ ಹನ್ನೆರಡು ವಿಧಗಳು. ವಾಯುವಿನಲ್ಲಿ ಶಬ್ದ ಸ್ಪರ್ಶಗಳೆಂಬ ಎರಡು ಗುಣಗಳಿವೆ. ಸ್ಪರ್ಶವು ವಾಯುವಿನ ಮುಖ್ಯ ಗುಣವು. ಆ ಸ್ಪರ್ಶದಲ್ಲಿ ಶೀತ, ಉಷ್ಣ, ಸುಖ, ದುಃಖ, ಮೃದು, ಕಠಿನ, ನುಣುಪು, ಒರಟು, ಜಿಡ್ಡು, ಪಿಚ್ಛಿಲ, ದಾರುಣ, ಮೃದು, ಎಂಬ ಹನ್ನೆರಡು ಬಗೆಗಳುಂಟು. ಆಕಾಶಕ್ಕೆ ಶಬ್ದವೆಂಬ ಒಂದೇ ಗುಣವೆಂದು ತತ್ವದರ್ಶಿಗಳು ಹೇಳುವರು. ಆ ಶಬ್ದಕ್ಕೂ ಹಲವು ಗುಣಭೇದಗಳುಂಟು. ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದಗಳೆಂಬ ಏಳು ಸ್ವರಭೇದಗಳೂ, ಇಷ್ಟ, ಅನಿಷ್ಟ, ಸಂಹತ, ಪ್ರತಿಭಾನಗಳೆಂಬ ಇತರ ಭೇದಗಳೂ ಇವೆ. ಪಂಚಭೂತಗಳಲ್ಲಿ ಆಕಾಶವೇ ಮೇಲಾದುದು. ಅಹಂಕಾರವು ಅದಕ್ಕೂ ಮೇಲಾದುದು. ಅಹಂಕಾರಕ್ಕಿಂತಲೂ ಮೇಲೆನಿಸಿದುದು ಬುದ್ಧಿ! ಬುದ್ಧಿಗಿಂತಲೂ ಮೇಲಾದುದು ಆತ್ಮವು. ಆತ್ಮನಿಗಿಂತಲೂ ಅವ್ಯಕ್ತವು ಮೇಲಾದುದು. ಅವ್ಯಕ್ತಕ್ಕಿಂತಲೂ ಮೇಲಾದವನು ಪರಮಪುರುಷನು. ಪ್ರಾಣಿಗಳ ಹಾನಿ ವೃದ್ಧಿಗಳನ್ನೂ, ಕರ್ಮಗಳ ಗತಿಯನ್ನೂ ತಿಳಿದವನೂ, ಎಲ್ಲಾ ಪ್ರಾಣಿಗಳಿಗೆ ಅಂತರಾತ್ಮನೂ ಆದ ಆ ಪರಮಪುರುಷನನ್ನು ಹೊಂದಿದವನು ಶಾಶ್ವತವಾದ ನೆಲೆಯನ್ನು ಹೊಂದುವನು.

ಇದು ಐವತ್ತನೆಯ ಅಧ್ಯಾಯವು.



{ ಕೃಷ್ಣನು ತತ್ತ್ವೋಪದೇಶವನ್ನು ಮುಗಿಸಿ, ದ್ವಾರಕೆಗೆ ಹೊರಡಲಪೇಕ್ಷಿಸಿದುದು. ಅರ್ಜುನನು ಧರ್ಮರಾಜನಿಂದ ಅನುಮತಿಪಡೆದು ಹೋಗುವಂತೆ ಹೇಳಿದುದು. }

ಈ ಪಂಚಭೂತಗಳಿಗೂ ಮನಸ್ಸೇ ನಿಯಾಮಕವು. ಭೂತಗಳ ಸೃಷ್ಟಿ ಸಂಹಾರಗಳಿಗೂ ಮನವೇ ಕಾರಣವು. ಮನಸ್ಸು ಯಾವಾಗಲೂ ಮಹಾಭೂತಗಳಿಗೆ ಅಧಿಷ್ಠಾತೃವಾಗಿಯೂ, ಅದೇ ಜೀವನಾಗಿಯೂ ಇರುವುದು, (ಅದರ) ಮೇಲ್ಮೆಯನ್ನು ಬುದ್ಧಿಯು ತಿಳಿಸುವುದು. ಸಾರಥಿಯು ಒಳ್ಳೇ ಕುದುರೆಗಳನ್ನು ನಡೆಸುವಂತೆ, ಮನಸ್ಸು ಇಂದ್ರಿಯಗಳನ್ನು ನಡೆಸುವುದು. ಯಾವಾಗಲೂ ಕ್ಷೇತ್ರಜ್ಞನಲ್ಲಿ ಇಂದ್ರಿಯಗಳೂ, ಮನಸ್ಸೂ ಬುದ್ಧಿಯೂ ಸೇರಿರುವುವು. ಶರೀರಾಭಿಮಾನಿಯಾದ ಜೀವನು (ಇಂದ್ರಿಯಗಳೆಂಬ) ದೊಡ್ಡ ಕುದುರೆಗಳಿಂದ ಕೂಡಿ, ಬುದ್ಧಿಯೆಂಬ ಸಾರಥಿಯಿಂದ ನಡೆಸಲ್ಪಡುವ (ಶರೀರವೆಂಬ) ರಥದಲ್ಲಿ ಕುಳಿತು, ನಾನಾಕಡೆಗೆ ಅಲೆಯುವನು. ಇಂದ್ರಿಯಗಳೆಂಬ ಕುದುರೆಗಳಿಂದಲೂ, ಮನಸ್ಸೆಂಬ ಸಾರಥಿಯಿಂದಲೂ, ಬುದ್ಧಿಯೆಂಬ ಚಾಟಿಯಿಂದಲೂ ಕೂಡಿದ (ಶರೀರವೆಂಬ) ರಥವು, ಮಹತ್ತಾಗಿಯೂ, ಬ್ರಹ್ಮಮಯವಾಗಿಯೂ, ಇರುವುದೆಂದು ಯಾವ ಪ್ರಾಜ್ಞನು ತಿಳಿಯುವನೋ, ಆತನು ಯಾವ ಸ್ಥಿತಿಯಲ್ಲಿಯೂ ಮೋಹಕ್ಕೀಡಾಗುವುದಿಲ್ಲ. ಅವ್ಯಕ್ತದಿಂದಾರಂಭಿಸಿ, ವಿಶೇಷದವರೆಗಿನ ಚರಾಚರಗಳಿಂದ ತುಂಬಿ, ಸೂರ್ಯ ಚಂದ್ರರ ಕಾಂತಿಯಿಂದ ಬೆಳಗುತ್ತ, ಗ್ರಹನಕ್ಷತ್ರಗಳಿಂದಲೂ, ನದಿಗಳ ಮತ್ತು ಪರ್ವತಗಳ ಸಮುದಾಯಗಳಿಂದಲೂ ಎಲ್ಲಾ ಕಡೆಗಳಲ್ಲಿಯೂ ಅಲಂಕೃತವಾಗಿ, ವಿವಿಧಜಲಾಶಯಗಳಿಂದ ಕೂಡಿ, ಎಲ್ಲಾ ಪ್ರಾಣಿಗಳಿಗೆ ಜೀವನಾಧಾರವೂ, ಆದ ಬ್ರಹ್ಮಾತ್ಮಕವಾದ ವನದಲ್ಲಿ ಕ್ಷೇತ್ರಜ್ಞನು ಸಂಚರಿಸುತ್ತಿರುವನು. ಆತ್ಮವು ನಿತ್ಯವಾದುದು. ಲೋಕದಲ್ಲಿರುವ ಸ್ಥಾವರ ಜಂಗಮಗಳಾದ ಪ್ರಾಣಿಗಳೆಲ್ಲ ಮೊದಲು ಸಾಯುವುವು. ಆಮೇಲೆ ಭೂತಗಣಗಳು ಲಯಿಸುವುವು. ಇದೇ ಪಂಚಭೂತಗಳ ಉಚ್ಛ್ರಾಯದಶೆ. ದೇವತೆಗಳು, ಗಂಧರ್ವರು, ಮನುಷ್ಯರು, ಪಿಶಾಚರು, ಅಸುರರು, ರಾಕ್ಷಸರು, ಇವರೆಲ್ಲರೂ ಸ್ವಭಾವದಿಂದಲೇ ಹುಟ್ಟುವರು. ಇವರು (ಯಾಗಾದಿ) ಕರ್ಮಗಳಿಂದಲೂ,

ಬ್ರಹ್ಮ ಮೊದಲಾದ ಕಾರಣಗಳಿಂದಲೂ ಉಂಟಾಗುವವರಲ್ಲ. ಈ ಲೋಕದಲ್ಲಿ ಎಲ್ಲವನ್ನೂ ಪಡೆಯುವ ಸೃಷ್ಟಿಕರ್ತರಾದ ಮರೀಚಿ ಮೊದಲಾದ ಬ್ರಾಹ್ಮಣರೂ ಸೃಷ್ಟಿಕಾರ್ಯಕ್ಕಾಗಿ ಅಡಿಗಡಿಗೆ ಜನಿಸುವರು. ಪಂಚಮಹಾಭೂತಗಳಿಂದ ಜನಿಸಿದ ಇವರು, ಸಮುದ್ರದಲ್ಲಿ ಹುಟ್ಟಿದ ಅಲೆಗಳು ಸಮುದ್ರದಲ್ಲಿಯೇ ಅಡಗುವಂತೆ, ಆ ಭೂತಗಳಲ್ಲಿಯೇ ಕ್ಲ್ಪಪ್ತ ಕಾಲದಲ್ಲಿ ಲಯಿಸುವರು. ಲೋಕಗಳನ್ನು ಪಡೆಯುವ ಈ ಭೂತಗಳಿಗಿಂತಲೂ ಮಹಾಭೂತಗಳು ಮೇಲಾದುವು. ಮುಕ್ತನು ಈ ಪಂಚಮಹಾಭೂತಗಳಿಗಿಂತಲೂ ಉತ್ತಮವಾದ ಗತಿಯನ್ನು ಪಡೆಯುವನು. ಸೃಷ್ಟಿಕರ್ತನಾದ ಬ್ರಹ್ಮನು ಇವೆಲ್ಲವನ್ನೂ ತಪಸ್ಸಿನಿಂದಲೇ ಸೃಷ್ಟಿಸಿದನು. ಹಾಗೆಯೇ ಋಷಿಗಳೂ ತಪಸ್ಸಿನಿಂದ ದೇವತೆಗಳನ್ನು ಸೇರಿದರು. ಸಂಕಲ್ಪಕ್ರಮದಿಂದ ಗಡ್ಡೆ ಗೆಣಸುಗಳನ್ನು ತಿನ್ನುತ್ತ ಸಮಾಧಿಯುಳ್ಳ ಸಿದ್ಧರೂ, ತಮ್ಮ ತಪೋಬಲದಿಂದಲೇ ಮೂರು ಲೋಕಗಳನ್ನೂ ಕಾಣಬಲ್ಲರು. ವ್ಯಾಧಿನಿವಾರಕವಾದ ಔಷಧಗಳೂ, ನಾನಾವಿದ್ಯೆಗಳೂ ತಪಸ್ಸಿನಿಂದಲೇ ಸಿದ್ಧಿಸುವುವು. ತಪಸ್ಸೇ ಮುಖ್ಯಸಾಧನವು. ದುಸ್ಸಾಧ್ಯವೂ, ದುರವಗಾಹವೂ, ನಿರಾಕರಿಸಲು ಅಥವಾ ನಿವಾರಿಸಲಸಾಧ್ಯವೂ ಆದುವನ್ನೆಲ್ಲ ತಪಸ್ಸಿನಿಂದ ಸಾಧಿಸಬಹುದು. ತಪೋಬಲವನ್ನು ಯಾರೂ ಮೀರಲಾರರು. ಮದ್ಯಪಾನ, ಬ್ರಹ್ಮಹತ್ಯೆ, ಸ್ತೇಯ, (ಕಳ್ಳತನ) ಭ್ರೂಣಹತ್ಯೆ, ಗುರುದಾರಪರಿಗ್ರಹವೆಂಬೀ ಪಂಚಮಹಾಪಾತಕಗಳಿಗೂ ತಪಸ್ಸಿನಿಂದಲೇ ವಿಮೋಚನೆಯುಂಟು. ಮನುಷ್ಯರಿಗೂ, ಪಿತೃಗಳಿಗೂ, ದೇವತೆಗಳಿಗೂ, ಪಶು ಮೃಗಾದಿಗಳಿಗೂ, ಪಕ್ಷಿಗಳಿಗೂ, ಇತರ ಸ್ಥಾವರಜಂಗಮಗಳಾದ ಪ್ರಾಣಿಗಳಿಗೂ ತಪಸ್ಸೇ ಪ್ರಧಾನವು. ಎಲ್ಲರೂ ತಪಸ್ಸಿನಿಂದಲೇ ಸಿದ್ಧಿ ಹೊಂದುವರು. ದೇವತೆಗಳುಕೂಡ ತಪಸ್ಸಿನಿಂದಲೇ ಮಹಾಭಾಗ್ಯಗಳನ್ನು ಪಡೆದು ಸ್ವರ್ಗವನ್ನು ಸೇರಿರುವರು. ಫಲಾಪೇಕ್ಷೆಯನ್ನಿಟ್ಟು ಅಹಂಕಾರದಿಂದ ಮೇಲೆಮೇಲೆ ಕರ್ಮಗಳನ್ನು ಮಾಡಿದವರು ಬ್ರಹ್ಮದೇವನ ಸಮೀಪದಲ್ಲಿ ಸೇರಿರುವರು. ಅಹಂಕಾರ ಮಮಕಾರಗಳನ್ನು ಬಿಟ್ಟು, ಶುದ್ಧವಾದ ಧ್ಯಾನಯೋಗವನ್ನು ಹಿಡಿದವರು, ಅದಕ್ಕೂ ಮೇಲಾದ ಉತ್ತಮ ಲೋಕವನ್ನು ಪಡೆಯುವರು. ಯಾವಾಗಲೂ ಆ ಜ್ಞಾನಯೋಗ

ವನ್ನು ಹಿಡಿದು, ನಿರ್ಮಲಬುದ್ಧಿಯುಳ್ಳವರೂ, ಆತ್ಮಜ್ಞರೂ ಆದ ಪುರುಷರು ಸರ್ವಸುಖಸಂಚಯರೂಪವಾದ ಅವ್ಯಕ್ತ (ಪೂರ್ಣಾನಂದ) ವನ್ನು ಪಡೆಯುವರು. ಆ ಅವ್ಯಕ್ತದಿಂದಲೇ ಉಂಟಾದವನು, ರಜಸ್ತಮೋಗುಣಗಳಿಂದ ಬಿಡುಗಡೆ ಹೊಂದಿ, ಕೇವಲ ಸತ್ವವನ್ನೇ ಹಿಡಿದು, ತಿರುಗಿ ಆ ಅವ್ಯಕ್ತದಲ್ಲಿಯೇ ಸೇರುವನು. ಎಲ್ಲಾ ಪಾಪಗಳಿಂದಲೂ ವಿಮೋಚನೆ ಹೊಂದಿದವನೂ, ಶುದ್ಧನೂ, ಸಕಲವನ್ನೂ ಬಿಟ್ಟವನೂ, ಕ್ಷೇತ್ರಜ್ಞನೆನಿಸುವನು. ಇದನ್ನು ತಿಳಿದಾತನೇ ವೇದವಿತ್ತೆನಿಸುವನು. ಮುನಿಯಾದವನು ಮನಸ್ಸನ್ನು ಸಂಕಲ್ಪಗಳಿಂದ ತಿರುಗಿಸಿ ಜಿತೇಂದ್ರಿಯನಾಗಿರಬೇಕು. ಹಾಗಿಲ್ಲದೆ, ಯಾವನು ಯಾವುದನ್ನು ಧ್ಯಾನಮಾಡುವನೋ (ಆತನು) ಅದರಂತೆಯೇ ಆಗುವನು. ಇದು ಸನಾತನ ರಹಸ್ಯವು. ಅವ್ಯಕ್ತದಿಂದಾರಂಭಿಸಿ ವಿಶೇಷದವರೆಗೂ ಇರುವುದೆಲ್ಲ ಅವಿದ್ಯೆಯಿಂದೇರ್ಪಟ್ಟುದೆಂದೇ ಹೇಳಲ್ಪಟ್ಟಿದೆ. ಇದೇರೀತಿಯಲ್ಲಿ ಜ್ಞಾನವೂ ಗುಣಗಳಿಂದೇರ್ಪಡುವುದು. 'ಮಮ' ಎಂಬ ಎರಡು ಅಕ್ಷರಗಳು ಸಂಸಾರಕ್ಕೆ ಕಾರಣವು. 'ನ ಮಮ' (ನನ್ನದಲ್ಲ) ಎಂಬ ಮೂರು ಅಕ್ಷರಗಳು ಶಾಶ್ವತವಾದ ಬ್ರಹ್ಮವನ್ನು ಪಡೆಯಲು ಕಾರಣವು. ಬುದ್ಧಿಪರಿಪಾಕವಿಲ್ಲದ ಕೆಲವರು ಕರ್ಮಗಳನ್ನು ಕೊಂಡಾಡುವುದುಂಟು. ಮಹಾತ್ಮರಾದ ಹಿರಿಯರಾದರೋ ಕರ್ಮವನ್ನು ಆದರಿಸುವುದಿಲ್ಲ. ಜೀವನು ಕರ್ಮದಿಂದಲೇ (ಪಂಚಮಹಾಭೂತಗಳೊಡನೆ ಹನ್ನೊಂದು ವಿಕಾರಗಳೆಂಬ) ಷೋಡಶಕಲಾಸ್ವರೂಪದಿಂದ ಕೂಡಿದ ಶರೀರದೊಡನೆ ಹುಟ್ಟುವನು. ಹೀಗೆ ಕರ್ಮಗಳಿಂದ ಪಡೆಯಲ್ಪಟ್ಟ ಶರೀರವುಳ್ಳವನಾಗಿ, ದೇವತೆಗಳೇ ಮೊದಲಾದವರಿಗೆ ನೈವೇದ್ಯಮಾಡಿ ಮಿಕ್ಕ ಅಮೃತಾನ್ನವನ್ನು ಭುಜಿಸುವ ಪುರುಷನಿಗಾದರೂ ಕೊನೆಗೆ ಆತ್ಮಜ್ಞಾನವೇ ಉಪಾದೆಯವು. ಆದುದರಿಂದ ತಮ್ಮ ಕೊನೆಯ ಧ್ಯೇಯವೇನೆಂದು ತಿಳಿದವರು ಕರ್ಮಗಳಲ್ಲಿ ಆಸೆಪಡುವುದಿಲ್ಲ. ಪುರುಷನು ವಿದ್ಯಾಮಯನೇಹೊರತು ಕರ್ಮಮಯನು. ಆತ್ಮನಿಗೆ ಮರಣವಿಲ್ಲ. ಆತನು ನಿತ್ಯನು. ತಿಳಿಯಲಸಾಧ್ಯನು. ಯಾವಾಗಲೂ ಕ್ಷಯವಿಲ್ಲದವನು. ಚಿತ್ತವನ್ನು ವಶೀಕರಿಸಿಟ್ಟುಕೊಳ್ಳಬಲ್ಲವನು. ಆತನು ಯಾವುದರಲ್ಲಿಯೂ ಸಂಬಂಧಪಟ್ಟವನ್ನ. ಆತನನ್ನು ಬೇರೆ ಯಾವ ಪ್ರಮಾಣಗಳಿಂದಲೂ ತಿಳಿಯಲು ಸಾಧ್ಯ

ವಲ್ಲ. ಅವನನ್ನುಸೃಷ್ಟಿಸಲೂ ಸಾಧ್ಯವಲ್ಲ. ಈ ಆತ್ಮವಿಷಯವಾದ ಜ್ಞಾನವನ್ನು ಯಾವನು ಪಡೆಯುವನೋ, ಆತನು ಮುಂದೆ ತಿಳಿಸುವ ಉಪಾಯಗಳಿಂದ, ಅರಿಯಲಸಾಧ್ಯನೂ, ಮರಣವಿಲ್ಲದವನೂ ಆಗುವನು. (ಮೈತ್ರಿಯೇ ಮೊದಲಾದ) ಎಲ್ಲಾ ಸಂಸ್ಕಾರಗಳನ್ನೂ, (ಚಿತ್ತಕ್ಕೆ) ಅನುಕೂಲವಾಗಿ ಮಾಡಿಕೊಂಡು, ಚಿತ್ತವನ್ನು ಹೃದಯದಲ್ಲಿ ಅಡಗಿಸಿಟ್ಟುಕೊಂಡಿರುವವನು, ಶುಭವೂ, ಮಹಾಶ್ರೇಷ್ಠವೂ ಆದ ಆ ಬ್ರಹ್ಮವನ್ನು ತಿಳಿಯುವನು. ಚಿತ್ತವು ಶುದ್ಧವಾದಮೇಲೆ ಶಾಂತಿಯನ್ನು ಪಡೆಯುವನು. ಸ್ವಪ್ನದಲ್ಲಿ ಹೇಗೋ ಹಾಗೆ ಶರೀರಸಂಬಂಧವನ್ನು ಮರೆತಿರುವುದೇ ಚಿತ್ತಶುದ್ಧಿಗೆ ಲಕ್ಷಣವು. ಈ ಚಿತ್ತನೈರ್ಮಲ್ಯವೇ ಜ್ಞಾನದಲ್ಲಿ ನೆಲೆಗೊಂಡ ಮುಕ್ತರಿಗೆ ಲಕ್ಷಣವು. ಅವರು ರೂಪವ್ಯತ್ಯಾಸಗಳಿಂದಾಗುವ ಹಿಂದುಮುಂದಿನ ಎಲ್ಲಾ ಪದಾರ್ಥಗಳನ್ನೂ ನೋಡಬಲ್ಲರು. ಇದು ವಿರಕ್ತರ ರೀತಿ! ಇದೇ ಸನಾತನ ಧರ್ಮವು. ಇದೇ ಜ್ಞಾನಿಗಳಿಗೆ ಸಾಧಕವಾದ ಉತ್ತಮಮಾರ್ಗವು. ಎಲ್ಲಾ ಪ್ರಾಣಿಗಳ ವಿಷಯದಲ್ಲಿಯೂ ಸಮಬುದ್ಧಿಯುಳ್ಳವನೂ, ವೈರಾಗ್ಯವುಳ್ಳವನೂ, ಆಶಾರಹಿತನೂ ಆದವನೇ ಈ ಗತಿಯನ್ನು ಪಡೆಯಲು ಯೋಗ್ಯನು. ಓ ಬ್ರಹ್ಮರ್ಷಿಗಳೇ! ನಾನು ಇವೆಲ್ಲವನ್ನೂ ನಿಮಗೆ ತಿಳಿಸಿದೆನು. ನೀವೂ ಎಚ್ಚರತಪ್ಪದೆ ಈ ರೀತಿಯಲ್ಲಿ ನಡೆದರೆ, ಸಿದ್ಧಿಹೊಂದುವಿರಿ'' ಎಂದನು. ಬ್ರಹ್ಮನಿಂದ ಈ ಉಪದೇಶವನ್ನು ಕೇಳಿದ ಆ ಮುನಿಶ್ರೇಷ್ಠರು ಹಾಗೆಯೇ ಆಚರಿಸಿ ಉತ್ತಮಲೋಕವನ್ನು ಸೇರಿದರು. ಓ ಭಾಗ್ಯಶಾಲೀ! ನೀನೂ ನನ್ನಿಂದ ಕೇಳಿದ ಈ ಬ್ರಹ್ಮವಾಕ್ಯದಂತೆ ಆಚರಿಸು. ಆದರಿಂದ ನಿನಗೆ ಸಿದ್ಧಿಯುಂಟಾಗುವುದು'' ಎಂದನು. ಓ ಕುಂತೀಪುತ್ರಾ! ಆಮೇಲೆ ಆ ಶಿಷ್ಯನೂ ಅದರಂತೆಯೇ ಆಚರಿಸಿ ಮೋಕ್ಷವನ್ನು ಪಡೆದನು. ಅದರಿಂದ ಕೃತಕೃತ್ಯನಾದ ಆ ಶಿಷ್ಯನು ದುಃಖಲೇಶವಿಲ್ಲದ ಉತ್ತಮಸ್ಥಾನವನ್ನು ಪಡೆದನು'' ಎಂದನು. ಆಗ ಅರ್ಜುನನು ''ಓ ಜನಾರ್ದನಾ! ಆ ಗುರುವೆಂಬವನಾರು? ಆತನ ಶಿಷ್ಯನು ಯಾರು? ಇವುಗಳನ್ನು ನಾನು ತಿಳಿಯಬಹುದಾದರೆ ತಿಳಿಸು'' ಎಂದನು. ಅದಕ್ಕೆ ಕೃಷ್ಣನು 'ಓ ಮಹಾಬಾಹೂ! ನಾನೇ ಗುರು! ನನ್ನ ಮನಸ್ಸೇ ಶಿಷ್ಯನು! ನನಗೆ ನಿನ್ನಲ್ಲಿರುವ ವಿಶ್ವಾಸದಿಂದ ಈ ರಹಸ್ಯವನ್ನು ನಿನಗೆ

ತಿಳಿಸಿದೆನು. ಓ ದೃಢವ್ರತಾ! ನಿನಗೆ ನನ್ನಲ್ಲಿ ದೃಢವಾದ ಸಂತತಪ್ರೀತಿಯಿರುವುದು ನಿಜವಾದರೆ, ನೀನು ಆತ್ಮವಿಷಯಕವಾದ ಈ ಧರ್ಮವನ್ನು ಕೇಳಿ ಕ್ರಮವಾಗಿ ಅನುಷ್ಠಿಸು! ಅದರಿಂದ ನಿನ್ನ ಪಾಪಗಳೆಲ್ಲವೂ ನೀಗಿ, ನೀನು ಶುದ್ಧವಾದ ಮೋಕ್ಷವನ್ನು ಪಡೆಯುವೆ. ಹಿಂದೆ ಯುದ್ಧಕ್ಕೆ ಮೊದಲು ನಾನು ನಿನಗೆ ತಿಳಿಸಿದುದೂ ಇದೇ! ನೀನು ಇದನ್ನು ಮನಸ್ಸಿನಲ್ಲಿಡು. ಓ ಫಲ್ಗುಣಾ! ನಾನು ನನ್ನ ತಂದೆಯನ್ನು ನೋಡಿ ಬಹಳ ದಿನಗಳಾದುವು. ನೀನು ಅನುಮತಿಯನ್ನು ಕೊಟ್ಟರೆ ನಾನು ಹೋಗಿ ಆತನ ದರ್ಶನಮಾಡಲಪೇಕ್ಷಿಸುವೆನು' ಎಂದನು. ಆಗ ಅರ್ಜುನನು 'ಓ ಲೋಕೇಶ್ವರಾ! ನಿನ್ನ ಇಷ್ಟದಂತೆ ಮಾಡು. ನಮ್ಮನ್ನು ರಕ್ಷಿಸುತ್ತಿರು. ಲೋಕನಾಥಾ! ನಾರಾಯಣಾ! ಪರಂತಪಾ! ನಿನಗೆ ನಮಸ್ಕಾರವು. ನನ್ನ ಮನಸ್ಸು ಶುದ್ಧವಲ್ಲದುದರಿಂದ, ನಾನು ತಪಸ್ಸಿಗೆ ಅರ್ಹನಲ್ಲ. ನನ್ನ ಕರ್ಮವೂ ಅಜ್ಞಾನದಿಂದ ಕೆಟ್ಟಿರುವುದು. ನನ್ನ ಧನವೂ ನಿರ್ದುಷ್ಟವಲ್ಲದುದರಿಂದ, ದಾನವೂ ನಿಷ್ಫಲವಾಗಿರುವುದು. ಆದುದರಿಂದ ಕಲಿಯುಗದಲ್ಲಿ (ನಿನ್ನ) ನಾಮವನ್ನು ಧ್ಯಾನಿಸಬೇಕು. ಓ ವಾಸುದೇವಾ! ನಿನಗೆ ನಮಸ್ಕಾರವು. ನೀನು ದ್ವಾರಕೆಗೆ ಹೋಗುವುದಾದರೆ, ಮೊದಲು ನಾವು ಹಸ್ತಿನಾಪುರಕ್ಕೆ ಹೋಗುವೆವು. ಅಲ್ಲಿ ನೀನು ಪ್ರಭುವಾದ ಧರ್ಮರಾಜನನ್ನು ಕಂಡು, ಅವನ ಅನುಮತಿಯನ್ನು ಪಡೆದು ನಿನ್ನ ನಗರಕ್ಕೆ ಹೊರಡಬಹುದು' ಎಂದನು. ಇದು ಐವತ್ತೊಂದನೆಯ ಅಧ್ಯಾಯವು.

---

ಕೃಷ್ಣಾರ್ಜುನರು ಹಸ್ತಿನಾಪುರಕ್ಕೆ ಹೋಗುವಾಗ ದಾರಿಯಲ್ಲಿ ಅರ್ಜುನನು ಕೃಷ್ಣನ ಮಹಿಮೆಯನ್ನು ಕೊಂಡಾಡಿದುದು. ಕೃಷ್ಣಾರ್ಜುನರಿಬ್ಬರೂ ಪಟ್ಟಣದಲ್ಲಿ ಧೃತರಾಷ್ಟ್ರಾದಿಗಳಿಗೆ ನಮಸ್ಕರಿಸಿದಮೇಲೆ, ಕೃಷ್ಣನು ಯುಧಿಷ್ಠಿರನ ಅನುಮತಿಪಡೆದು, ಸುಭದ್ರೆ ಮತ್ತು ಸಾತ್ಯಕಿ ಇವರೊಡನೆ ದ್ವಾರಕೆಗೆ ಹೊರಟುದು.

ಆಮೇಲೆ ಕೃಷ್ಣನು ಸಾರಥಿಯಾದ ದಾರುಕನನ್ನು ಕುರಿತು 'ರಥವನ್ನು ಸಿದ್ಧಪಡಿಸು' ಎನಲು, ಒಡನೆ ಸಾರಥಿಯು 'ರಥವು ಸಿದ್ಧವಾ

ಗಿದೆ ' ಎಂದನು. ಹಾಗೆಯೇ ಅರ್ಜುನನು ಸೈನಿಕರನ್ನು ಕುರಿತು ' ನೀವೆಲ್ಲರೂ ಸಿದ್ಧರಾಗಿರಿ. ಹಸ್ತಿನಾಪುರಕ್ಕೆ ಹೋಗುವೆವು ' ಎಂದು ಆಜ್ಞೆ ಮಾಡಿದನು. ಒಡನೆಯೇ ಸೈನಿಕರೆಲ್ಲರೂ ತಾವು ಸಿದ್ಧರಾಗಿರುವುದಾಗಿ ತಿಳಿಸಿದರು. ಆಮೇಲೆ ಕೃಷ್ಣಾರ್ಜುನರಿಬ್ಬರೂ ರಥದಲ್ಲಿ ಕುಳಿತು, ಅನೇಕ ವಿಚಿತ್ರ ಕಥೆಗಳನ್ನು ಹೇಳುತ್ತ ಪ್ರಯಾಣ ಮಾಡಿದರು. ಆಗ ಅರ್ಜುನನು ಕೃಷ್ಣನನ್ನು ಕುರಿತು " ಓ ವೃಷ್ಣಿಕುಲತಿಲಕಾ! ಯುಧಿಷ್ಠಿರನು ನಿನ್ನ ಅನುಗ್ರಹದಿಂದ ಶತ್ರುಗಳನ್ನೆಲ್ಲ ಕೊಂದು ಜಯಶೀಲನಾಗಿ ತಿರುಗಿ ರಾಜ್ಯವನ್ನು ಪಡೆದನು. ಪಾಂಡವರಾದ ನಮಗೆ ನೀನೇ ರಕ್ಷಕನು. ನಾವು ನಿನ್ನ ಸಹಾಯವೆಂಬ ತೆಪ್ಪದಿಂದ ಕೌರವಸಮುದ್ರವನ್ನು ದಾಟಿದೆವು. ಭಕ್ತರೂ, (ನಿನ್ನನ್ನು) ಆಶ್ರಯಿಸಿದವರೂ ಆದ ನಮ್ಮನ್ನು ಇಹಪರಗಳೆರಡರಲ್ಲಿಯೂ ನೀನೇ ಕಾಪಾಡತಕ್ಕವನು. ವಿಶ್ವಕರ್ತಾ! ನಿನಗೆ ನಮಸ್ಕಾರವು. ವಿಶ್ವಾತ್ಮಾ! ನಿನಗೆ ವಂದನವು! ವಿಶ್ವಸತ್ತಮಾ! ನಿನಗೆ ಪ್ರಣಾಮವು. ನೀನು ಎಷ್ಟುಮಟ್ಟಿಗೆ ನನ್ನನ್ನು ವಾತ್ಸಲ್ಯದಿಂದ ನೋಡುತ್ತಿರುವೆಂಗೋ, ಹಾಗೆಯೇ ನಾನೂ ನಿನ್ನನ್ನು ಭಕ್ತಿಯಿಂದ ಭಾವಿಸುವೆನು. ಮಧುಸೂದನಾ! ಪವಿತ್ರವಾದ ಅಗ್ನಿಯೂ ನಿನ್ನ ತೇಜಸ್ಸಿನಿಂದಲೇ ಉಂಟಾದವನು. ನಿನ್ನ ಇಚ್ಛೆಯೆಲ್ಲವೂ ಕೇವಲ ಲೀಲಾಮಯವು. ಭೂವ್ಯೋಮಾಕಾಶಗಳು ನಿನ್ನ ಮಾಯೆ! ಸ್ಥಾವರಜಂಗಮಸ್ವರೂಪಗಳಾದ ಈ ಲೋಕವೆಲ್ಲವೂ ನಿನ್ನಲ್ಲಿಯೇ ಅಡಗಿರುವುವು. ನಾಲ್ಕು ಬಗೆಯ ಪ್ರಾಣಿಗಳ ಸಮೂಹವನ್ನೂ, ಭೂಮ್ಯಂತರಿಕ್ಷಗಳನ್ನೂ, ಸ್ಥಾವರಜಂಗಮಗಳನ್ನೂ ಪಡೆದವನೂ ನೀನೇ! ನಿನ್ನ ನಗೆಯೇ ಬೆಳ್ದಿಂಗಳು! ನಿನ್ನ ಪ್ರಾಣವೇ ಯಾವಾಗಲೂ ಸಂಚರಿಸುತ್ತಿರುವ ವಾಯು! ನಿನ್ನ ಕೋಪವೇ ಮೃತ್ಯು! ನಿನ್ನ ಅನುಗ್ರಹದಲ್ಲಿಯೇ ಪದ್ಮಹಸ್ತೆಯಾದ ಮತ್ತು ನಿನಗೆ ನಿತ್ಯಾನಪಾಯಿನಿಯಾದ ಶ್ರೀದೇವಿಯು ವಾಸಮಾಡುವಳು. ರತಿ, ತುಷ್ಟಿ, ಧೈರ್ಯ, ತಾಳ್ಮೆ, ಬುದ್ಧಿ, ಕಾಂತಿ, ಮತ್ತು ಸಕಲಚರಾಚರಗಳೂ ನಿನ್ನಲ್ಲಿಯೇ ನೆಲಸಿವೆ. ನೀಲಮೇಘಶ್ಯಾಮಾ! ಪ್ರಳಯಕಾಲದಲ್ಲಿ ಸಂಹಾರಮಾಡುವವನೂ ನೀನೇ! ನಿನ್ನ ಗುಣಗಳನ್ನೂ, ನಿನ್ನ ದಿವ್ಯಸ್ವರೂಪವನ್ನೂ ವರ್ಣಿಸಲು ನನ್ನಿಂದ ಸಾಧ್ಯವಲ್ಲ. ಓ ಪುಂಡರೀ

ಕೃಷ್ಣಾ ! ನಿನಗೆ ನಮಸ್ಕಾರವು. ನಾರದ, ದೇವಲ, ವ್ಯಾಸ, ಭೀಷ್ಮಾದಿಗಳಿಂದ ನಾನು ನಿನ್ನ ಮಹಿಮೆಯನ್ನು ತಿಳಿದೆನು. ಸಕಲವೂ ನಿನ್ನಲ್ಲಿ ನೆಲೆಗೊಂಡಿರುವುವು. ನೀನೊಬ್ಬನೇ ಸರ್ವಲೋಕೇಶ್ವರನು. ಓ ಜನಾರ್ದನಾ ! ನೀನು ಅನುಗ್ರಹಪೂರ್ವಕವಾಗಿ ತಿಳಿಸಿದುದೆಲ್ಲವನ್ನೂ ನಾನು ಪೂರ್ಣವಾಗಿ ಅನುಷ್ಠಿಸುವೆನು. ನನಗೆ ಪ್ರಿಯವನ್ನುಂಡುಮಾಡುವ ಅಭಿಲಾಷೆಯಿಂದಲೇ ನೀನು ಅತ್ಯಾಶ್ಚರ್ಯಕಾರ್ಯಗಳನ್ನು ನಡೆಸಿದೆ. ದುರ್ಯೋಧನನನ್ನು ಯುದ್ಧದಲ್ಲಿ ಕೊಂದವನೂ ನೀನೇ! ಮೊದಲೇ ನಿನ್ನಿಂದ ದಗ್ಧವಾದ ಆ ಕೌರವಸೈನ್ಯವನ್ನು ನಾನು ಯುದ್ಧದಲ್ಲಿ ಜಯಿಸಿದೆನೆಂಬುದು ನೆಪಮಾತ್ರವು! ನಿನ್ನ ಸಹಾಯದಿಂದಲೇ ಅಲ್ಲಿ ನಾನು ಜಯಶೀಲನಾದೆನು. ದುರ್ಯೋಧನನನ್ನೂ, ಕರ್ಣನನ್ನೂ, ಪಾಪಿಯಾದ ಸೈಂಧವನನ್ನೂ, ಭೂರಿಶ್ರವಸ್ಸನ್ನೂ, ಕೊಲ್ಲಲು ತಕ್ಕ ಉಪಾಯಗಳನ್ನು ನಾವು ತಿಳಿದುದೂ ನಿನ್ನ ಬುದ್ಧಿಶಕ್ತಿಯಿಂದಲೇ ! ಆದುದರಿಂದ ಕೃಷ್ಣಾ ! ನೀನೇ ಆಲೋಚಿಸಿ ಮುಂದೆ ನಮಗೆ ಯಾವುದು ಒಳ್ಳೆಯದೋ ಅದರಂತೆ ನಡೆಸು. ನನ್ನಮೇಲಿನ ವಿಶ್ವಾಸದಿಂದ ನೀನು ಹೇಗೆ ತಿಳಿಸುವೆಯೋ ಅದರಂತೆ ನಡೆಯುವೆನು. ಈ ವಿಷಯದಲ್ಲಿ ನನಗೊಂದೂ ತೋರುವುದಿಲ್ಲ. ಓ ಧರ್ಮಜ್ಞಾ ! ನಾನು ಯುಧಿಷ್ಠಿರನ ಬಳಿಗೆ ಹೋಗಿ ನೀನು ಹೊರಡಬೇಕೆಂದಿರುವ ವಿಷಯವನ್ನು ತಿಳಿಸುವೆನು. ಆಮೇಲೆ ನೀನು ದ್ವಾರಕೆಗೆ ಹೊರಡಬಹುದು. ನೀನು ಶೀಘ್ರದಲ್ಲಿಯೇ ಹೋಗಿ, ನಮ್ಮ ಮಾವನಾದ ವಸುದೇವನನ್ನೂ, ಶೂರನಾದ ಬಲರಾಮನನ್ನೂ, ಇನ್ನೂ ಇತರ ವೃಷ್ಣಿಕುಲಶ್ರೇಷ್ಠರನ್ನೂ ನೋಡು' ಎಂದನು. ಹೀಗೆ ಅವರಿಬ್ಬರೂ ಸಂಭಾಷಿಸುತ್ತ, ಹಸ್ತಿನಾಪುರವನ್ನು ಪ್ರವೇಶಿಸಿ, ಇಂದ್ರಗೃಹಕ್ಕೆ ಸಮಾನವಾದ ಧೃತರಾಷ್ಟ್ರನ ಮನೆಗೆ ಹೋದರು. ಅಲ್ಲಿ ಧೃತರಾಷ್ಟ್ರರಾಜನನ್ನೂ, ವಿದುರನನ್ನೂ, ಯುಧಿಷ್ಠಿರ, ಭೀಮಸೇನ, ನಕುಲ, ಸಹದೇವರನ್ನೂ ಕಂಡರು. ಧೃತರಾಷ್ಟ್ರನ ಸಮೀಪದಲ್ಲಿ ಅಜೇಯನಾದ ಯುಯುತ್ಸುವೂ ಕುಳಿತಿದ್ದನು. ಗಾಂಧಾರಿ, ಕುಂತಿ, ದ್ರೌಪದಿ, ಸುಭದ್ರೆ, ಭಾರತವೀರರ ಪತ್ನಿಯರು, ಮತ್ತು ಗಾಂಧಾರಿಯ ಸಖಿಯರು, ಮುಂತಾದ ಸ್ತ್ರೀಯರೆಲ್ಲರೂ ಅಲ್ಲಿದ್ದರು. ಕೃಷ್ಣಾರ್ಜುನರಿಬ್ಬರೂ ಧೃತರಾಷ್ಟ್ರರಾ

ಜನ ಸಮೀಪಕ್ಕೆ ಹೋಗಿ, ತಮ್ಮ ನಾಮಧೇಯಗಳನ್ನು ತಿಳಿಸುತ್ತ, ಆತನ ಪಾದಗಳನ್ನು ಮುಟ್ಟಿ ನಮಸ್ಕರಿಸಿದರು. ಹಾಗೆಯೇ ಗಾಂಧಾರಿಗೂ, ಕುಂತಿಗೂ, ಧರ್ಮರಾಜನಿಗೂ, ಭೀಮಸೇನನಿಗೂ ಕ್ರಮವಾಗಿ ನಮಸ್ಕರಿಸಿದರು. ಆಮೇಲೆ ವಿದುರನ ಕೈಗಳನ್ನು ಹಿಡಿದು, ಆತನ ಕ್ಷೇಮಲಾಭಗಳನ್ನು ವಿಚಾರಿಸಿ, ಯುಯುತ್ಸುವನ್ನು ಪ್ರೀತಿಯಿಂದ ಆಲಿಂಗಿಸಿದರು. ಆಮೇಲೆ ಧೃತರಾಷ್ಟ್ರನ ಸಮೀಪದಲ್ಲಿ ಕುಳಿತರು. ಸಾಯಂಕಾಲವಾಗಲು, ಧೃತರಾಷ್ಟ್ರನು ಕೃಷ್ಣನನ್ನೂ, ಇತರ ಕುರುಕುಲಶ್ರೇಷ್ಠರನ್ನೂ ಮನೆಗೆ ಕಳುಹಿಸಿಕೊಟ್ಟನು. ಎಲ್ಲರೂ ತಮ್ಮತಮ್ಮ ಮನೆಗಳಿಗೆ ಹೋದರು. ಕೃಷ್ಣನುಮಾತ್ರ ಅರ್ಜುನನ ಗೃಹಕ್ಕೆ ಹೋದನು. ಅಲ್ಲಿ ತನ್ನ ಇಷ್ಟಾನುಸಾರವಾಗಿ ಸಕಲ ಸತ್ಕಾರಗಳನ್ನೂ ಸ್ವೀಕರಿಸಿ ಮಲಗಿದ್ದನು. ಬೆಳಗಿನ ಜಾವದಲ್ಲಿ ಕೃಷ್ಣಾರ್ಜುನರಿಬ್ಬರೂ ಎದ್ದು ಪ್ರಾತಃಕಾಲದ ಕರ್ಮಗಳನ್ನು ಮುಗಿಸಿಕೊಂಡು, ಧರ್ಮರಾಜನು ತನ್ನ ಮಂತ್ರಿಗಳೊಡನೆ ವಾಸಮಾಡುತ್ತಿದ್ದ ಗೃಹಕ್ಕೆ ಹೋದರು. ಅಶ್ವಿನೀದೇವತೆಗಳು ಇಂದ್ರನನ್ನು ಕಾಣುವಂತೆ ಧರ್ಮರಾಜನನ್ನು ಕಂಡು ಅವನ ಸಮೀಪದಲ್ಲಿ ಕುಳಿತರು. ಧರ್ಮರಾಜನು ಅವರಿಬ್ಬರೂ ತನ್ನಲ್ಲಿ ಮಾತನಾಡುವ ಅಭಿಪ್ರಾಯದಿಂದಿರುವುದನ್ನು ತಿಳಿದು, 'ಓ ವೀರರೇ! ನೀವು ಏನನ್ನೋ ಕೇಳಲು ಕುತೂಹಲವುಳ್ಳವರಾಗಿರುವಿರೆಂದು ತೋರುವುದು. ಅದೇನು ತಿಳಿಸಿರಿ? ನಿಮ್ಮ ಕೋರಿಕೆಯಂತೆ ನಡೆಯುವೆನು. ನೀವು ಆಲೋಚಿಸಬೇಕಾದುದಿಲ್ಲ' ಎಂದನು. ಆಗ ಅರ್ಜುನನು ನಮ್ರತೆಯಿಂದ ಧರ್ಮರಾಜನನ್ನು ಕುರಿತು 'ಅಣ್ಣಾ! ವಾಸುದೇವನು ನಮ್ಮಲ್ಲಿಗೆ ಬಂದು ಬಹಳ ದಿನಗಳಾದುವು. ನಿನ್ನ ಅನುಮತಿಯನ್ನು ಪಡೆದು ಹೋಗಿ ತನ್ನ ತಂದೆಯನ್ನು ನೋಡಲಪೇಕ್ಷಿಸುವನು. ನಿನಗೆ ಅಭ್ಯಂತರವಿಲ್ಲದಿದ್ದರೆ ಈತನನ್ನು ಅನುಮತಿಸು. ಈತನು ದ್ವಾರಕೆಗೆ ಹೊರಡಲಿ' ಎಂದನು. ಆಗ ಯುಧಿಷ್ಠಿರನು 'ಓ ಪುಂಡರೀಕಾಕ್ಷಾ! ನಿನಗೆ ಮಂಗಳವಾಗಲಿ! ಪ್ರಭೂ! ನೀನು ತಂದೆಯ ದರ್ಶನಕ್ಕಾಗಿ ಹೊರಡಬಹುದು. ನೀನು ದ್ವಾರಕೆಗೆ ಹೊರಡುವುದು ನನಗೂ ಸಮ್ಮತವೇ! ನೀನು ನಮ್ಮ ಮಾವನಾದ ವಸುದೇವನನ್ನೂ, ದೇವಕೀದೇವಿಯನ್ನೂ ನೋಡಿ ಬಹಳ ದಿನಗಳಾದುದೂ ನಿಜವು. ಈಗ

ಲೇ ನೀನು ವಸುದೇವ ಬಲರಾಮರ ಬಳಿಗೆ ಹೋಗಿ, ನನ್ನ ಮಾತಿನಿಂದ ಅವರನ್ನು ತಕ್ಕ ರೀತಿಯಲ್ಲಿ ಸಮಾಧಾನಪಡಿಸು. ನೀನು ಅಲ್ಲಿಗೆ ಹೋದರೂ ನನ್ನನ್ನೂ, ನನ್ನ ತಮ್ಮಂದಿರಾದ ಭೀಮಸೇನಾರ್ಜುನ ನಕುಲಸಹದೇವರನ್ನೂ ಯಾವಾಗಲೂ ಸ್ಮರಣೆಯಲ್ಲಿಡಬೇಕು. ಓ ಮಹಾಬಾಹೋ! ನೀನು ಆನರ್ತದೇಶದ ಜನಗಳನ್ನೂ, ನಿನ್ನ ತಂದೆಯನ್ನೂ, ಇತರ ವೃಷ್ಣಿಕುಲದವರನ್ನೂ ನೋಡಿದಮೇಲೆ, ತಿರುಗಿ ನಮ್ಮ ಅಶ್ವಮೇಧಯಾಗಕ್ಕೆ ಬರಬೇಕು. ನೀನು ಇಲ್ಲಿಂದ ಹೊರಡುವಾಗ ನಿನಗೆ ಬೇಕಾದ ಹಲವು ಬಗೆಯ ರತ್ನಗಳನ್ನೂ, ಧನಗಳನ್ನೂ, ಇತರ ವಸ್ತುಗಳನ್ನೂ ತೆಗೆಸಿಕೊಂಡು ಹೊರಡು. ಓ ವೀರಾ! ನಿನ್ನ ಅನುಗ್ರಹದಿಂದಲೇ ಈ ಭೂಮಿಯೆಲ್ಲ ನನ್ನ ವಶವಾಯಿತು. ನಮ್ಮ ಶತ್ರುಗಳೂ ಹತರಾದರು. ಸಂಸಾರವನದಲ್ಲಿ ಜ್ವಲಿಸುವ ಪಾಪಾಗ್ನಿಯನ್ನು ನಂದಿಸುವ ಮಹಾಮೇಘವು ನೀನೇ. ನಿನ್ನ ಭಕ್ತರಿಗೆ ಸ್ವರ್ಗ ಮೋಕ್ಷಗಳಲ್ಲಿ ಯಾವುದನ್ನು ಪಡೆಯುವುದೂ ದುಸ್ತರವಲ್ಲ' ಎಂದನು. ಆಗ ಕೃಷ್ಣನು 'ಓ ರಾಜಾಧಿರಾಜಾ! ಈಗ ಧನರತ್ನಸಹಿತವಾದ ಸಮಸ್ತ ಭೂಮಿಯೂ ನಿನ್ನದೇ. ನನ್ನ ಮನೆಯಲ್ಲಿರುವ ದ್ರವ್ಯಗಳಿಗೂ ಈಗ ನೀನೇ ಒಡೆಯನು' ಎಂದನು. ಆಮೇಲೆ ಧರ್ಮರಾಜನು ವೀರನಾದ ಕೃಷ್ಣನನ್ನು ಪೂಜಿಸಿದನು. ಆಮೇಲೆ ಕೃಷ್ಣನು ತನ್ನ ಅತ್ತೆಯಾದ ಕುಂತಿಗೆ ವಂದಿಸಿ, ಅವಳಿಂದಲೂ ಸತ್ಕಾರಗಳನ್ನು ಸ್ವೀಕರಿಸಿ ಆಕೆಗೆ ಪ್ರದಕ್ಷಿಣಮಾಡಿದನು. ಕುಂತಿಯ ಮತ್ತು ವಿದುರಾದಿಗಳ ಸತ್ಕಾರವನ್ನು ಕೈಕೊಂಡು, ತನ್ನ ದಿವ್ಯರಥದಮೇಲೇರಿ ಹಸ್ತಿನಾಪುರದಿಂದ ಪ್ರಯಾಣಹೊರಟನು. ಯುಧಿಷ್ಠಿರನ ಮತ್ತು ಕುಂತಿಯ ಅನುಮತಿಪಡೆದು, ಸುಭದ್ರೆಯನ್ನೂ ರಥದಮೇಲೇರಿಸಿಕೊಂಡು, ಪಟ್ಟಣದ ಜನಗಳಿಂದ ಪರಿವೃತನಾಗಿ ಹೊರಟನು. ಆಗ ಹನುಮದ್ಧ್ವಜವುಳ್ಳ ರಥದಲ್ಲಿ ಕುಳಿತ ಅರ್ಜುನನೂ, ಸಾತ್ಯಕಿಯೂ, ನಕುಲಸಹದೇವರೂ, ದೀರ್ಘದರ್ಶಿಯಾದ ವಿದುರನೂ, ದಿಗ್ಗಜಬಲವುಳ್ಳ ಭೀಮಸೇನನೂ ಆತನನ್ನು ಹಿಂಬಾಲಿಸಿದರು. (ಸ್ವಲ್ಪದೂರ ಹೋದಮೇಲೆ) ಕೃಷ್ಣನು ಆ ಕೌರವವಂಶಸ್ಥರನ್ನೂ, ವಿದುರನನ್ನೂ ಹಿಂತಿರುಗಿಸಿ, ದಾರುಕನನ್ನು ನೋಡಿ 'ಇನ್ನು ವೇಗದಿಂದ ಕುದುರೆಗಳನ್ನೋ

ಡಿಸು ” ಎಂದು ಹೇಳಿ ಸಾತ್ಯಕಿಯೊಡಗೂಡಿ, ಇಂದ್ರನು ಶತ್ರುಜಯವಾದ ಮೇಲೆ ಸ್ವರ್ಗಕ್ಕೆ ಹೊರಡುವಂತೆ ದ್ವಾರಕೆಗೆ ಹೊರಟನು.

ಇದು ಐವತ್ತೆರಡನೆಯ ಅಧ್ಯಾಯವು.

---

ಕೃಷ್ಣನು ದ್ವಾರಕೆಗೆ ಹೊರಡುವಾಗ ಉದಂಕನು ಆತನನ್ನು ಕಂಡುದು. ಕೌರವನಾಶಕಾಲದಲ್ಲಿ ತಾನು ಉದಾಸೀನನಾಗಿದ್ದುದಕ್ಕಾಗಿ ತನಗೆ ಶಾಪಕೊಡಲು ಯತ್ನಿಸಿದ ಉದಂಕನಿಗೆ ಕೃಷ್ಣನು ತನ್ನ ನಿಜವನ್ನು ತಿಳಿಸಿದುದು.

ಆಗ ಭರತಕುಲಶ್ರೇಷ್ಠರೆಲ್ಲರೂ ಅಲ್ಲಿ ಕೃಷ್ಣನನ್ನು ಆಲಿಂಗನಮಾಡಿಕೊಂಡು ಹಿಂತಿರುಗಿದರು. ಅರ್ಜುನನು ಕೃಷ್ಣನನ್ನು ಅಡಿಗಡಿಗೆ ಆಲಿಂಗಿಸಿಕೊಳ್ಳುತ್ತ, ಕಣ್ಣಿಗೆ ಕಾಣುವವರೆಗೂ ಆತನನ್ನೇ ತಿರುಗಿತಿರುಗಿ ನೋಡುತ್ತಿದ್ದು, ಕೊನೆಗೆ ಆ ಕೃಷ್ಣನಲ್ಲಿ ನಟ್ಟ ಕಣ್ಣುಗಳನ್ನು ಬಹಳ ಪ್ರಯಾಸದಿಂದ ತಿರುಗಿಸಿದನು. ಶ್ರೀಕೃಷ್ಣನೂ ಅದೇ ರೀತಿಯಲ್ಲಿ ಆತನನ್ನು ನೋಡುತ್ತಿದ್ದನು. ಅವರ ಪ್ರಯಾಣಕಾಲದಲ್ಲಿ ಹಲವು ಶಕುನಗಳು ಕಾಣಿಸಿದುವು. ಇವರ ಮುಂಭಾಗದಲ್ಲಿ ಗಾಳಿಯು ತನ್ನ ವೇಗದಿಂದ ಅವರ ರಥಮಾರ್ಗದಲ್ಲಿ ಕಲ್ಲು, ಕೆಸರು, ಮುಳ್ಳು, ಮುಂತಾದುವೇನೂ ಸಿಕ್ಕದಂತೆ ದೂರಕ್ಕೆ ಹಾರಿಸುತ್ತಿತ್ತು. ಆಕಾಶದಿಂದ ಇಂದ್ರನು ಸುಗಂಧಶೀತಲವಾದ ಜಲವನ್ನೂ, ದಿವ್ಯ ಪುಷ್ಪಗಳನ್ನೂ, ದಾರಿಯುದ್ದಕ್ಕೂ ಕೃಷ್ಣನಿದಿರಿಗೆ ಸುರಿಸುತ್ತಿದ್ದನು. ಕೃಷ್ಣನು ಸಮವಾಗಿರುವ ಆ ಮರಳುಕಾಡುಗಳಲ್ಲಿ ಹೋಗುವಾಗ, ಮುನಿಶ್ರೇಷ್ಠನೂ, ತಪಸ್ಸಿದ್ಧಿಯಿಂದ ಲೋಕಪ್ರಸಿದ್ಧನೂ ಆದ ಉದಂಕಮಹರ್ಷಿಯನ್ನು ಕಂಡನು. ಕೃಷ್ಣನು ಆತನನ್ನು ಪೂಜಿಸಿ, ತಾನೂ ಆತನಿಂದ ಪೂಜಿತನಾಗಿ, ಕ್ಷೇಮಲಾಭಗಳನ್ನು ವಿಚಾರಿಸಿದನು. ಆಮೇಲೆ ಉದಂಕನು ಕೃಷ್ಣನನ್ನು ಹೀಗೆಂದು ಪ್ರಶ್ನೆಮಾಡುವನು.

“ ಮಾಧವಾ! ನೀನು ಕೌರವ ಪಾಂಡವರ ಗೃಹಗಳಿಗೆ ಹೋಗಿ, ಅವರಿಬ್ಬರಿಗೂ ಸಹೋದರಸ್ನೇಹವು ಸ್ಥಿರವಾಗಿರುವಂತೆ ಮಾಡಲು ಯತ್ನಿ

ಸಿದೆಯಷ್ಟೆ? ಅದನ್ನು ನನಗೆ ವಿವರವಾಗಿ ತಿಳಿಸಬೇಕು. ವೀರರೂ, ಪರಸ್ಪರ ಸಂಬಂಧಿಗಳೂ, ಯಾವಾಗಲೂ ನಿನಗೆ ಪ್ರಿಯತಮರೂ ಆದ ಅವರಲ್ಲಿ ಸಮಾಧಾನವನ್ನು ಮಾಡಿಬಂದೆಯಷ್ಟೆ? ಪಂಚಪಾಂಡವರೂ, ಧೃತರಾಷ್ಟ್ರಪುತ್ರರೂ ಒಂದಾಗಿ ಸೇರಿ, ಸಮಾಧಾನದಿಂದ ನಿನ್ನೊಡನೆ ಇರುವಂತಾಯಿತಷ್ಟೆ? ನಿನ್ನಿಂದ ಕೌರವರು ಸಮಾಧಾನಹೊಂದಿದಮೇಲೆ ಪಾಂಡವರು ತಮ್ಮ ರಾಜ್ಯಕ್ಕೆ ಅಧಿಪತಿಗಳಾಗಿ ಸುಖದಿಂದಿರುವರಷ್ಟೆ? ನನಗೆ ನಿನ್ನಲ್ಲಿ ಯಾವ ಗೌರವಭಾವವಿದ್ದಿತೋ, ಅದನ್ನು ಈಗ ನೀನು ಆ ರಾಜರ ಸಂಧಿವಿಷಯದಲ್ಲಿ ಸಫಲಗೊಳಿಸಿದೆಯಷ್ಟೆ?" ಎಂದನು.

ಆಗ ಕೃಷ್ಣನು "ಓ ಪೂಜ್ಯಾ! ನಾನೇನೋ ಕೌರವರನ್ನು ಸಮಾಧಾನಪಡಿಸಲು ಯತ್ನಿಸಿದೆನು. ಆದರೆ, ಅದು ಸಾಧ್ಯವಾಗಲಿಲ್ಲ. ಆದುದರಿಂದ ಅವರೆಲ್ಲರೂ ತಮ್ಮ ಪುತ್ರ ಮಿತ್ರ ಬಂಧುಗಳೊಡನೆ ಮೃತರಾದರು. ಓ ಮಹಾತ್ಮಾ! ಕೇವಲ ಬುದ್ಧಿಬಲದಿಂದಾಗಲಿ, ದೇಹಬಲದಿಂದಾಗಲಿ ದೈವವಿಧಿಯನ್ನು ಮೀರಲು ಸಾಧ್ಯವಿಲ್ಲ. ಇವೆಲ್ಲವೂ ನಿನಗೂ ತಿಳಿದುದೇ. ನಾನೂ, ಭೀಷ್ಮನೂ, ವಿದುರನೂ ಹೇಳಿದ ಬುದ್ಧಿವಾದಗಳನ್ನು ಕೌರವರು ಕೇಳಲಿಲ್ಲ. ಆದರಿಂದ ಅವರು ಪರಸ್ಪರ ಯುದ್ಧ ಮಾಡಿ ಯಮಲೋಕಕ್ಕೆ ಹೋದರು. ಪಾಂಡವರ ಕಡೆಯಲ್ಲಿಯೂ ಅವರ ಮಿತ್ರರೂ, ಪುತ್ರರೂ ಹತರಾಗಿ, ಪಂಚಪಾಂಡವರುಮಾತ್ರ ಉಳಿದಿರುವರು" ಎಂದನು. ಅದನ್ನು ಕೇಳಿದೊಡನೆ ಉದಂಕನು ಕೋಪಗೊಂಡು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು 'ಕೃಷ್ಣಾ! ನಿನಗೆ ಸಮೀಪ ಸಂಬಂಧಿಗಳೂ, ಪ್ರಿಯರೂ ಆದ ಕೌರವರನ್ನು ಕಾಪಾಡಲು ನಿನಗೆ ಶಕ್ತಿಯಿದ್ದರೂ, ಕಾಪಾಡದಿದ್ದುದರಿಂದ ನಾನು ನಿಜವಾಗಿಯೂ ನಿನ್ನನ್ನು ಶಪಿಸದೆ ತೀರದು. ಓ ಮಧುಸೂದನಾ! ನೀನು ಅವರನ್ನು ಬಲಾತ್ಕಾರದಿಂದಲಾದರೂ ಯುದ್ಧದಿಂದ ನಿವಾರಿಸದಿದ್ದುದಕ್ಕಾಗಿ ನಿನ್ನಮೇಲೆ ನನಗೆ ಆಕ್ರೋಶವುಂಟಾಗಿದೆ. ನಿನ್ನನ್ನು ಶಪಿಸುವೆನು. ಕೃಷ್ಣಾ! ನೀನು ಶಕ್ತನಾಗಿದ್ದರೂ ಕಪಟಿಯಾಗಿದ್ದುಕೊಂಡು, ಅನ್ಯೋನ್ಯ ಯುದ್ಧಕ್ಕಾಗಿ ಯತ್ನಿಸಿದ ಕೌರವರನ್ನು ಉಪೇಕ್ಷಿಸಿದೆಯಲ್ಲವೆ?" ಎಂದನು. ಆಗ ಕೃಷ್ಣನು

" ಓ ಭೃಗುಕುಲಜಾತಾ! ನಾನು ಹೇಳುವುದನ್ನು ಕೇಳು! ಶಾಂತಚಿತ್ತನಾಗು! ನೀನು ತಪಸ್ವಿಯಲ್ಲವೆ? ಮೊದಲು ನನ್ನ ವೃತ್ತಾಂತವನ್ನು ಕೇಳು. ಅದನ್ನು ಕೇಳಿದಮೇಲೆ ಬೇಕಾದರೆ ಶಪಿಸು. ಮನುಷ್ಯರು ಅಲ್ಪವಾದ ತಪಸ್ಸಿನಿಂದ ನನ್ನನ್ನು ಶಪಿಸಲಾರರು. ಓ ತಪಸ್ವೀ! ಇದರಿಂದ ನೀನು ನಿನ್ನ ಅಲ್ಪಸ್ವಲ್ಪ ತಪಃಫಲವನ್ನೂ ಕಳೆದುಕೊಳ್ಳುವುದು ನನಗೆ ಸಮ್ಮತವಿಲ್ಲ. ನಿನ್ನ ತಪಃಪ್ರಭಾವವು ಜ್ವಲಿಸುವಂತಿರುವುದು. ನಿನ್ನಿಂದ ಗುರುಗಳೂ ಪ್ರೀತರಾಗಿರುವರು. ಓ ಬ್ರಾಹ್ಮಣೋತ್ತಮಾ! ನೀನು ಹುಟ್ಟಿದುದು ಮೊದಲು ಬ್ರಹ್ಮಚಾರಿಯಾಗಿರುವುದನ್ನೂ ನಾನು ಬಲ್ಲೆನು. ಪ್ರಯಾಸದಿಂದ ಆರ್ಜಿಸಿದ ಆ ನಿನ್ನ ತಪಃಫಲವನ್ನು ಕೆಡಿಸಿಕೊಳ್ಳುವುದು ನನಗೆ ಇಷ್ಟವಿಲ್ಲ" ಎಂದನು.

ಇದು ಐವತ್ತುಮೂರನೆಯ ಅಧ್ಯಾಯವು.

---

ಕೃಷ್ಣನು ಉದಂಕನಿಗೆ ತನ್ನ ಮಹಿಮೆಯನ್ನು ತಿಳಿಸಿ, ತನ್ನ ಮಾತನ್ನು ಕೇಳದುದರಿಂದಲೇ ದುರ್ಯೋಧನಾದಿಗಳು ನಾಶಹೊಂದಿದರೆಂದು ಹೇಳಿದುದು.

ಉದಂಕನು 'ಓ ಕೇಶವಾ! ಹಾಗಿದ್ದರೆ ನೀನು ಶ್ರೇಷ್ಠವಾದ ಆ ಆತ್ಮತತ್ವವನ್ನು ನನಗೆ ತಿಳಿಸು. ಅದನ್ನು ಕೇಳಿದಮೇಲೆ ನಾನು ನಿನಗೆ ಶುಭಾಶಂಸೆಯನ್ನು ಮಾಡುವೆನು. ಅಥವಾ ಶಾಪವನ್ನು ಕೊಡುವೆನು' ಎಂದನು. ಆಗ ಕೃಷ್ಣನು 'ಸತ್ವ ರಜಸ್ತಮೋಗುಣಗಳು ಮೂರೂ ನನ್ನನ್ನೇ ಆಶ್ರಯಿಸಿರುವುವು. ನಾನೇ ಬ್ರಹ್ಮ ವಿಷ್ಣು ಶಿವರೂಪದಿಂದ ಸೃಷ್ಟಿ, ಸ್ಥಿತಿ, ಲಯಕಾರ್ಯಗಳನ್ನು ಮಾಡುತ್ತಿರುವೆನು. ನಾನೇ ಒಂದು ಕಾಲದಲ್ಲಿ ತಮೋಗುಣವನ್ನು ಆಶ್ರಯಿಸಿ ರುದ್ರನಾಗುವೆನು. ಮತ್ತೊಂದು ವೇಳೆಯಲ್ಲಿ ಸತ್ವಗುಣವನ್ನಾಶ್ರಯಿಸಿ ವಿಷ್ಣುರೂಪನಾಗುವೆನು. ಇನ್ನೊಂದು ಸಮಯದಲ್ಲಿ ರಜೋಗುಣವನ್ನಾಶ್ರಯಿಸಿ ಬ್ರಹ್ಮರೂಪನಾಗುವೆನು. ಆದರೆ ಆ ಒಂದೊಂದು ರೂಪದಲ್ಲಿಯೂ ಆಯಾ ಗುಣಗಳಲ್ಲದೆ, ಮಿಕ್ಕ ಎರಡು ಗುಣಗಳೂ ಇರುವುವು. ನಾನೇ ಪ್ರಣವಸ್ವರೂಪಿಯಾಗಿದ್ದು, ಶಬ್ದ

ಮೊದಲಾದುವುಗಳನ್ನೂ, ತ್ರಿಗುಣಾತ್ಮಕನಾಗಿ ಸ್ಥಾವರಜಂಗಮುಗಳನ್ನೂ ವ್ಯಾಪಿಸಿರುವೆನು. ಓ ಬ್ರಾಹ್ಮಣಾ! ರುದ್ರ ವಸುಗಳೆಲ್ಲರೂ ನನ್ನಿಂದಲೇ ಉಂಟಾದರು. ಎಲ್ಲಾ ಪ್ರಾಣಿಗಳೂ ನನ್ನಲ್ಲಿರುವುವೆಂದೂ, ನಾನೂ ಎಲ್ಲಾ ಪ್ರಾಣಿಗಳಲ್ಲಿಯೂ ಇರುವೆನೆಂದೂ ತಿಳಿ. ಇದರಲ್ಲಿ ನಿನಗೆ ಸಂಶಯುವೇ ಬೇಡ! ಹಾಗೆಯೇ ಎಲ್ಲಾ ಅಸುರಸಮೂಹಗಳೂ, ಯಕ್ಷ ರಾಕ್ಷಸ ಗಂಧರ್ವೋರಗರೂ, ಅಪ್ಸರಸ್ಸುಗಳೂ ನನ್ನಿಂದಲೇ ಉಂಟಾದವರು. ಸದಸತ್ತುಗಳೂ, ವ್ಯಕ್ತಾವ್ಯಕ್ತಗಳೂ, ಕ್ಷರಾಕ್ಷರಗಳೂ ನನ್ನ ಸ್ವರೂಪಗಳೇ. ಓ ಮುನಿವರಾ! ಚತುರಾಶ್ರಮಗಳೂ, ವಿಧ್ಯುಕ್ತ ಧರ್ಮಗಳೂ, ವೈದಿಕ ಕರ್ಮಗಳೂ, ಇವೆಲ್ಲವೂ ನನ್ನ ಸ್ವರೂಪವೆಂದೇ ತಿಳಿ. ಸದಸದ್ರೂಪವಾದ ಈ ಜಗತ್ತೂ, ಸದಸತ್ತುಗಳಿಗಿಂತ ಉತ್ತಮವಾದ ಅವ್ಯಕ್ತವೂ ನಾನೇ. ದೇವದೇವನೂ, ಸನಾತನನೂ ಆದ ನನಗಿಂತಲೂ ಉತ್ತಮವಾದುದು ಬೇರೊಂದೂ ಇಲ್ಲ. ನಾನೇ ಓಂಕಾರದಿಂದುಂಟಾದ ವೇದಗಳೆಂದೂ, ನಾನೇ ಯಾಗಗಳೆಂದೂ, ದೇವತೆಗಳಿಗೆ ತೃಪ್ತಿಯುಂಟುಮಾಡುವ ಸೋಮವೆಂದೂ, ಚರುವೆಂದೂ, ಹೋಮವೆಂದೂ ತಿಳಿ. ನಾನೇ ಹೋತೃವೆಂದೂ, ಹವ್ಯವೆಂದೂ ತಿಳಿ. ಅಧ್ವರ್ಯುವೂ, ಕಲ್ಪವನ್ನು ಮಾಡಿದವನೂ, ಚೆನ್ನಾಗಿ ಸಂಸ್ಕರಿಸಲ್ಪಟ್ಟ ಹವಿಸ್ಸೂ ನಾನೇ! ದೊಡ್ಡ ಯಾಗಗಳಲ್ಲಿ ಉದ್ಗಾತನು ಸಾಮಘೋಷಗಳಿಂದ ನನ್ನನ್ನೇ ಸ್ತುತಿಸುವನು. ಓ ಬ್ರಾಹ್ಮಣೋತ್ತಮಾ! ಪ್ರಾಯಶ್ಚಿತ್ತಗಳಿಗಾಗಿ ಶಾಂತಿಸೂಕ್ತಗಳನ್ನೂ, ಮಂಗಳಸೂಕ್ತಗಳನ್ನೂ ಹೇಳುವವರು, ಸಕಲಕರ್ಮಸ್ವರೂಪಿಯಾದ ನನ್ನನ್ನೇ ಯಾವಾಗಲೂ ಸ್ತುತಿಸುವರು. ಧರ್ಮವೇ ನನ್ನ ಹಿರಿಯ ಮಗನೆಂದು ತಿಳಿ. ಭೂತದಯೆಯೆಂಬ ಧರ್ಮವು ನನ್ನ ಪ್ರಿಯತಮನಾದ ಮಾನಸಪುತ್ರನು. ನಾನು ಆ ಧರ್ಮವನ್ನನುಷ್ಠಿಸುವ, ಮತ್ತು ಅದನ್ನು ಬಿಟ್ಟ ಮನುಷ್ಯರೊಡನೆ ಅನೇಕಜನ್ಮಗಳಲ್ಲಿ ಸಂಚರಿಸುತ್ತಿರುವೆನು. ಲೋಕರಕ್ಷಣೆಗಾಗಿಯೂ, ಧರ್ಮಸ್ಥಾಪನೆಗಾಗಿಯೂ ಬೇರೆಬೇರೆ ವೇಷಗಳಿಂದಲೂ, ರೂಪಗಳಿಂದಲೂ ತ್ರಿಲೋಕಗಳಲ್ಲಿಯೂ ವಾಸಿಸುತ್ತಿರುವೆನು. ವಿಷ್ಣುವೂ, ಬ್ರಹ್ಮನೂ, ಇಂದ್ರನೂ, ಉತ್ಪತ್ತಿ ಲಯಸ್ಥಾನಗಳೂ ನಾನೇ. ಎಲ್ಲಾ ಭೂತವರ್ಗಗಳನ್ನೂ ಸೃಷ್ಟಿಸುವವನೂ, ಸಂಹ

ರಿಸುವವನನೂ ನಾನೇ ! ಅಚ್ಯುತನಾದ ನಾನು ಯುಗಯುಗಗಳಲ್ಲಿಯೂ ಪ್ರಜೆಗಳಿಗೆ ಹಿತವನ್ನುಂಟುಮಾಡುವ ಉದ್ದೇಶದಿಂದ, ಬೇರೆಬೇರೆ ರೂಪಗಳಲ್ಲಿ ಹುಟ್ಟಿ, ಅಧರ್ಮಮಾರ್ಗದಲ್ಲಿ ನಡೆಯುವವರೆಲ್ಲರಿಗೂ ಧರ್ಮವೆಂಬ ಅಣೆಕಟ್ಟನ್ನು ಕಟ್ಟುವೆನು. ಓ ಭೃಗುಕುಲಜಾತಾ ! ನಾನು ದೇವತೆಗಳಲ್ಲಿ ಹುಟ್ಟಿರುವಾಗ ಎಲ್ಲ ಕಾರ್ಯಗಳನ್ನೂ ದೇವತೆಗಳಂತೆಯೇ ಮಾಡುವೆನು. ನಾನು ಗಂಧರ್ವರಲ್ಲಿ ಹುಟ್ಟಿರುವಾಗ ಗಂಧರ್ವನಂತೆಯೂ, ನಾಗಕುಲದಲ್ಲಿ ಹುಟ್ಟಿದಾಗ ನಾಗನಂತೆಯೂ ಕಾರ್ಯಗಳನ್ನು ಮಾಡುವೆನು. ಯಕ್ಷರಾಕ್ಷಸಕುಲದಲ್ಲಿ ಅವತರಿಸಿದಾಗ ಅವರಂತೆಯೇ ನಡೆಯುವೆನು. ಈಗ ಮನುಷ್ಯಜನ್ಮವನ್ನು ಕೈಕೊಂಡ ನಾನು, ಕೌರವರಲ್ಲಿಗೆ ಹೋಗಿ ಭಿಕ್ಷುಕನಂತೆ ಬೇಡಿದೆನು. ಆಗಲೂ ಅವಿವೇಕಿಗಳಾದ ಅವರು ಬುದ್ಧಿಭ್ರಮೆಯಿಂದ ನನ್ನ ಮಾತನ್ನು ಕೇಳಲಿಲ್ಲ. ನಾನಾದರೋ, ಅವರಿಗೆ ದೊಡ್ಡ ಭಯವನ್ನು ಸೂಚಿಸಿ, ಭಯಪಡಿಸಿ ನೋಡಿದೆನು. ಕೋಪಗೊಂಡು ಅವರಿಗೆ ನನ್ನ ನಿಜಸ್ವರೂಪವನ್ನೂ ತೋರಿಸಿದೆನು. ಅಧರ್ಮಬುದ್ಧಿಯುಳ್ಳ ಅವರಿಗೆ ಮರಣಕಾಲವೂ ಸಮೀಪಿಸಿದ್ದುದರಿಂದ, ಧರ್ಮಕ್ಕನುಸಾರವಾಗಿ ಅವರು ಯುದ್ಧದಲ್ಲಿ ಕೊಲ್ಲಲ್ಪಟ್ಟು, ಸ್ವರ್ಗಸ್ಥರಾದರೆಂಬುದರಲ್ಲಿ ಸಂಶಯವಿಲ್ಲ. ಓ ಬ್ರಾಹ್ಮಣೋತ್ತಮಾ ! ಇದರಿಂದ ಪಾಂಡವರು ಲೋಕಪ್ರಸಿದ್ಧರಾದರು. ನೀನು ಕೇಳಿದುದೆಲ್ಲವನ್ನೂ ವಿವರಿಸಿರುವೆನು. ಇನ್ನು ನಿನ್ನ ಇಷ್ಟವು ' ಎಂದನು.

ಇದು ಐವತ್ತುನಾಲ್ಕನೆಯ ಅಧ್ಯಾಯವು.

---

ಕೃಷ್ಣನು ಉದಂಕನಿಗೆ ವಿಶ್ವರೂಪವನ್ನು ತೋರಿಸಿ, ಕೋರಿದೆಡೆಯಲ್ಲಿ ನೀರು ದೊರೆಯುವಂತೆ ವರವನ್ನು ಕೊಟ್ಟುದು. ಕೃಷ್ಣಾಜ್ಞೆಯಿಂದ ಅಮೃತವನ್ನು ಕೊಡುವುದಕ್ಕಾಗಿ ಚಂಡಾಲವೇಷದಿಂದ ಬಂದ ಇಂದ್ರನನ್ನು ಉದಂಕನು ನಿರಾಕರಿಸಿದುದು. ಕೃಷ್ಣನು ಉದಂಕನಿಗೆ ಇಂದ್ರನ ತಂತ್ರವನ್ನು ತಿಳಿಸಿದುದು.

ಉದಂಕನು “ ಓ ಜನಾರ್ದನಾ ! ನೀನೇ ಲೋಕದ ಸೃಷ್ಟಿಕರ್ತನೆಂಬುದನ್ನು ತಿಳಿದೆನು. ಆ ಜ್ಞಾನವೂ ನಿನ್ನ ಅನುಗ್ರಹವೆಂಬುದರಲ್ಲಿ

ಸಂದೇಹವಿಲ್ಲ. ಈಗ ನನ್ನ ಚಿತ್ತವು ಶುದ್ಧವಾಯಿತು. ಅದು ಈಗ ನಿನ್ನಲ್ಲಿಯೇ ಲಯಿಸಿರುವುದು. ನನ್ನ ಕೋಪವೂ ದೂರವಾಯಿತು. ನಾನು ನಿನ್ನ ಅನುಗ್ರಹವನ್ನು ಪಡೆಯಲು ಯೋಗ್ಯನಾಗಿರುವುದಾದರೆ, ನಿನ್ನ ವಿಶ್ವರೂಪವನ್ನು ನೋಡಲಪೇಕ್ಷಿಸುವೆನು. ಅದನ್ನು ತೋರಿಸಬೇಕು" ಎಂದನು.

ಆಗ ಕೃಷ್ಣನು ಸಂತೋಷಗೊಂಡು (ಹಿಂದೆ) ಧೀಮಂತನಾದ ಅರ್ಜುನನಿಗೆ ತೋರಿಸಿದ ಶಾಶ್ವತವಾದ ತನ್ನ ನಿಜಸ್ವರೂಪವನ್ನು ಉದಂಕನಿಗೆ ತೋರಿಸಿದನು. ಆ ಅದ್ಭುತರೂಪವನ್ನು ಕೇಳಬೇಕೇ? ನೀಡಿದ ಕೈಗಳು! ಸಹಸ್ರ ಸೂರ್ಯರಿಗೆ ಸಮಾನವಾದ ದಿವ್ಯತೇಜಸ್ಸು! ಜ್ವಲಿಸುವ ಅಗ್ನಿಯಂತೆ ಕಾಂತಿ! ಆಕಾಶವನ್ನೆಲ್ಲ ಪೂರ್ಣವಾಗಿ ವ್ಯಾಪಿಸಿರುವ ಅದ್ಭುತಾಕೃತಿ! ನಾನಾಕಡೆಯಲ್ಲ ಮುಖಗಳು! ಹೀಗೆ ಅತ್ಯಾಶ್ಚರ್ಯಕರವಾದ ಕೃಷ್ಣನ ವೈಷ್ಣವರೂಪವನ್ನು ನೋಡಿ ಆತನೇ ನಿಸ್ಸಂದೇಹವಾಗಿ ಪರಮಾತ್ಮನೆಂದು ತಿಳಿದು ಹೀಗೆ ಸ್ತುತಿಸುವನು. "ಓ ನಾರಾಯಣಾ! ನೀನು ಸರ್ವಾತ್ಮಕನು. ಪರಮಾತ್ಮನಾದ ನಿನಗೆ ನಮಸ್ಕಾರವು. ಪದ್ಮನಾಭಾ! ಪುಂಡರೀಕಾಕ್ಷಾ! ಮಾಧವಾ! ನಿನಗೆ ನಮಸ್ಕಾರವು. ಹಿರಣ್ಯಗರ್ಭರೂಪನೂ, ಸಂಸಾರಸಮುದ್ರದ ದಡವನ್ನು ಸೇರಿಸತಕ್ಕವನೂ, ಪುರಾಣಪುರುಷನೂ, ಶಾಂತರೂಪಿಯೂ, ಶ್ಯಾಮಲಾಂಗನೂ ಆದ ನಿನಗೆ ನಮಸ್ಕಾರವು. ಅಜ್ಞಾನವೆಂಬ ಕತ್ತಲೆಗೆ ಸೂರ್ಯನೂ, ಸಂಸಾರವ್ಯಾಧಿಗೆ ಔಷಧಸ್ವರೂಪಿಯೂ, ಸಂಸಾರಸಮುದ್ರಕ್ಕೆ ತಾರಕನೂ, ಆದ ನಿನಗೆ ನಮಸ್ಕಾರವು. ನನಗೆ ನೀನೇ ಗತಿ! ವೇದವೇದ್ಯನೂ, ವೇದಸ್ವರೂಪಿಯೂ, ವಾಸುದೇವನೂ, ನಿತ್ಯನೂ, ಭಕ್ತಪ್ರಿಯನೂ ಆದ ನಿನಗೆ ನಮಸ್ಕಾರವು. ದಯೆಯಿಟ್ಟು ನೀನು ನನ್ನನ್ನು ಈ ದುಃಖಮೋಹಗಳಿಂದ ದಾಟಿಸಬೇಕು. ಓ ಜನಾರ್ದನಾ! ಹಲವು ಪಾಪಕರ್ಮಗಳಿಗೊಳಗಾದ ನನ್ನನ್ನು ಕಾಪಾಡು. ಓ ಕರ್ಮಸ್ವರೂಪೀ! ಲೋಕಕಾರಣಾ! ನಿನಗೆ ನಮಸ್ಕಾರವು. ನಿನ್ನ ಪಾದಗಳೇ ಭೂಮಂಡಲವೆಲ್ಲವನ್ನೂ ವ್ಯಾಪಿಸಿವೆ! ಶಿರಸ್ಸು ಆಕಾಶವೆಲ್ಲವನ್ನೂ ವ್ಯಾಪಿಸಿದೆ. ಆಕಾಶಕ್ಕೂ, ಭೂಮಿಗೂ

ಮಧ್ಯದಲ್ಲಿರುವ ಪ್ರದೇಶವೆಲ್ಲವನ್ನೂ ನಿನ್ನ ಜಠರವು ಆವರಿಸಿದೆ. ಕೈಗಳು ದಿಕ್ಕುಗಳನ್ನೆಲ್ಲ ವ್ಯಾಪಿಸಿರುವುವು! ಈ ಸಕಲಪ್ರಪಂಚಗಳೂ ನೀನೇ! ನಿನ್ನ ಈ ದಿವ್ಯರೂಪವನ್ನು ಉಪಸಂಹರಿಸು! ನಿನ್ನನ್ನು ನಿನ್ನ ಸಹಜ ರೂಪದಲ್ಲಿ ನೋಡಲಪೇಕ್ಷಿಸುವೆನು'' ಎಂದನು. ಆಗ ಕೃಷ್ಣನು ಕೃಪೆಯಿಂದ ಉದಂಕನನ್ನು ಕುರಿತು 'ನಿನಗೆ ಬೇಕಾದ ವರವನ್ನು ಕೇಳು' ಎಂದನು. ಆಗ ಉದಂಕನು 'ಓ ಮಹಾದ್ಯುತೀ! ಎಲ್ಲಕ್ಕೂ ಉತ್ಪತ್ತಿಲಯಸ್ಥಾನವಾದ ಈ ನಿನ್ನ ದಿವ್ಯರೂಪವನ್ನು ನೋಡುವ ಭಾಗ್ಯವು ಲಭಿಸಿದುದೇ ನನಗೆ ಉತ್ತಮವಾದ ವರವಾಗಿದೆ' ಎಂದನು. ಕೃಷ್ಣನು 'ನೀನು ಈ ವಿಷಯದಲ್ಲಿ ಆಲೋಚಿಸಬೇಕಾದುದಿಲ್ಲ! ನೀನು ಕೇಳಲೇಬೇಕು. ನನ್ನ ದರ್ಶನವು ವ್ಯರ್ಥವಾಗಕೂಡದು' ಎಂದನು. ಅದಕ್ಕಾಉದಂಕನು 'ಓ ಪ್ರಭೂ! ಹಾಗಾದರೆ ನಾನು ಅಪೇಕ್ಷಿಸಿದ ಸ್ಥಳದಲ್ಲಿ ನೀರು ದೊರೆಯುವಂತಾಗಲಿ! ಸಾಮಾನ್ಯವಾಗಿ ಈ ಮರುಪ್ರದೇಶದಲ್ಲಿ ನೀರು ದೊರೆಯುವುದು ದುರ್ಲಭವಲ್ಲವೆ?' ಎಂದನು. ಆಗ ಕೃಷ್ಣನು ತನ್ನ ಕಾಂತಿಯನ್ನುಡುಗಿಸಿಕೊಂಡು ಉದಂಕನನ್ನು ಕುರಿತು 'ನಿನಗೆ ನೀರು ಬೇಕಾದ ಸ್ಥಳದಲ್ಲಿ ನನ್ನನ್ನು ಧ್ಯಾನಿಸು' ಎಂದು ಹೇಳಿ, ದ್ವಾರಕೆಗೆ ಹೋದನು. ಆಮೇಲೆ ಒಂದಾನೊಂದು ಸಮಯದಲ್ಲಿ ಉದಂಕನು ಒಂದು ಮರುಪ್ರದೇಶದಲ್ಲಿ ದಾಹಪೀಡಿತನಾಗಿ ನೀರನ್ನು ಹುಡುಕುತ್ತ ಅಲೆದಾಡಿದನು. ಎಲ್ಲಿಯೂ ನೀರು ಸಿಕ್ಕದಿರಲು ಕೃಷ್ಣನನ್ನು ಸ್ಮರಿಸಿದನು. ಒಡನೆಯೇ ಅಲ್ಲಿ ಆತನಿಗೆ ಒಬ್ಬ ಚಂಡಾಲನು ಕಾಣಿಸಿದನು. ಆತನಾದರೋ ಬಟ್ಟೆಯಿಲ್ಲದೆ ದಿಗಂಬರನಾಗಿರುವನು. ಕೊಳೆತುಂಬಿ ದುರ್ಗಂಧಹಿಡಿದ ಮೈಯಿಂದ ಮಹಾಭಯಂಕರನು! (ಸೊಂಟದಲ್ಲಿ) ಕತ್ತಿಯನ್ನು ಕಟ್ಟಿಕೊಂಡಿರುವನು. ಆತನ ಸುತ್ತಲೂ ನಾಯಿಗಳ ಗುಂಪು! ಕೈಯಲ್ಲಿ ಬಾಣಗಳನ್ನೂ, ಬಿಲ್ಲನ್ನೂ ಹಿಡಿದಿರುವನು. ಆಗ ಬ್ರಾಹ್ಮಣೋತ್ತಮನಾದ ಉದಂಕನು ಅವನ ಕಾಲಿನ ಸಮೀಪದಲ್ಲಿ ಒಂದು ಚರ್ಮದ ಚೀಲದಲ್ಲಿ ನೀರಿರುವುದನ್ನು ಕಂಡನು. ಆಗ ಚಂಡಾಲನು (ಕೃಷ್ಣನ ಆಜ್ಞೆಯನ್ನು) ನೆನೆಸಿಕೊಂಡು ನಗುತ್ತ, ಉದಂಕನನ್ನು ಕುರಿತು 'ಸ್ವಾಮೀ! ಇತ್ತ ಬರಬೇಕು. ನಾನು ನೀರನ್ನು ಕೊಡುವೆನು. ಸ್ವೀಕರಿಸಿರಿ! ದಾಹ

ಗೊಂಡ ನಿನ್ನಲ್ಲಿ ನನಗೆ ಮಹಾಕರುಣೆಯು ಹುಟ್ಟಿರುವುದು' ಎಂದನು. ಆಗ ಆ ಋಷಿಶ್ರೇಷ್ಠನು ಆ ನೀರನ್ನು ಸ್ವೀಕರಿಸಲಾರದೆ ಮನಸ್ಸಿನಲ್ಲಿ ಕೃಷ್ಣನನ್ನು ನಿಂದಿಸತೊಡಗಿದನು. ಚಂಡಾಲನಾದರೋ ಅಡಿಗಡಿಗೆ 'ನೀರನ್ನು ಕುಡಿಯಿರಿ' ಎಂದು ಹೇಳುತ್ತಲೇ ಇದ್ದನು. ಆದರೆ ಆ ಮುನಿಯು ಕೋಪದಿಂದಲೂ, ಚಿತ್ತಚಾಂಚಲ್ಯದಿಂದಲೂ ಆ ನೀರನ್ನು ಕುಡಿಯಲೇ ಇಲ್ಲ. ಆತನ ಮನೋನಿಶ್ಚಯವನ್ನು ಕಂಡು ಆ ಚಂಡಾಲನು ಅಲ್ಲಿದ್ದಂತೆಯೇ ತನ್ನ ನಾಯಿಗಳೊಡನೆ ಕಣ್ಮರೆಯಾದನು. ಅದನ್ನು ಕಂಡ ಉದಂಕನು ಮನೋವ್ಯಾಕುಲಗೊಂಡು, ಶತ್ರುನಾಶಕನಾದ ಕೃಷ್ಣನು ತನ್ನನ್ನು ವಂಚಿಸಿದನೆಂದು ತಿಳಿದನು. ಆಮೇಲೆ ಅದೇ ದಾರಿಯಲ್ಲಿ ದೀರ್ಘಬಾಹುವುಳ್ಳ ಕೃಷ್ಣನು ಶಂಖ ಚಕ್ರ ಗದಾಧಾರಿಯಾಗಿ ಉದಂಕನಿಗೆ ಕಾಣಿಸಿಕೊಂಡನು. ಆಗ ಉದಂಕನು ಆತನನ್ನು ಕುರಿತು 'ಓ ಪುರುಷೋತ್ತಮಾ! ಪ್ರಭೂ! ನೀನು ಬ್ರಾಹ್ಮಣೋತ್ತಮರಿಗೆ ಚಂಡಾಲನ ಚರ್ಮದ ಚೀಲದಲ್ಲಿರುವ ನೀರನ್ನು ಕುಡಿಸುವುದು ಯುಕ್ತವೆ?' ಎಂದನು. ಆಗ ಕೃಷ್ಣನು ಹಿತವಾಕ್ಯಗಳಿಂದ ಉದಂಕನನ್ನು ಸಮಾಧಾನಪಡಿಸುತ್ತ 'ಈಗ ಇಲ್ಲಿ ನಿನಗೆ ಯಾವ ರೂಪದ ನೀರನ್ನು ಕೊಡಲು ಸಾಧ್ಯವೋ ಆ ರೀತಿಯ ನೀರನ್ನು ಒದಗಿಸಿದೆನು. ಆದರೆ ಅದನ್ನು ನೀನು ತಿಳಿದುಕೊಳ್ಳಲಾರದೆ ಹೋದೆ! ನಾನು ನಿನಗಾಗಿ ವಜ್ರಪಾಣಿಯಾದ ಇಂದ್ರನನ್ನು ಕುರಿತು 'ಈ ಉದಂಕನಿಗೆ ನೀರಿನ ರೂಪದಿಂದ ಅಮೃತವನ್ನು ಕೊಡು' ಎಂದೆನು. ಆಗ ದೇವೇಂದ್ರನು ನನ್ನನ್ನು ಕುರಿತು ಮನುಷ್ಯನು ದೇವತೆಯಾಗಬಾರದು. ಆತನಿಗೆ ಬೇಕಾದರೆ ಬೇರೆ ವರಗಳನ್ನು ಕೊಡು' ಎಂದು ಹಲವು ಬಾರಿ ಹೇಳಿದನು. 'ಆತನಿಗೆ ಅಮೃತವನ್ನೇ ಕೊಡಬೇಕು' ಎಂದು ನಾನು ನಿರ್ಬಂಧಿಸಿದಾಗ ಅವನು, 'ಓ ಧೀಮಂತಾ! ಮಹಾತ್ಮನೂ, ಭೃಗುಕುಲೋತ್ತಮನೂ ಆದ ಉದಂಕನಿಗೆ, ಅವಶ್ಯವಾಗಿ ಅಮೃತವನ್ನು ಕೊಡಬೇಕೆಂದು ನೀನು ಆಜ್ಞಾಪಿಸುವುದಾದರೆ, ಚಂಡಾಲವೇಷದಿಂದ ಹೋಗಿ ಕೊಡುವೆನು. ಉದಂಕನು ಹಾಗೆ ಆ ಅಮೃತವನ್ನು ಸ್ವೀಕರಿಸುವುದಾದರೆ, ನಾನು ಆತನಿಗೆ ಅಮೃತವನ್ನೇ ಕೊಡುವೆನು. ಹಾಗಿಲ್ಲದೆ ಆತನು ನನ್ನನ್ನು ಅವಮಾನ

ಪಡಿಸುವುದಾದರೆ, ನಾನು ಹೇಗೂ ಕೊಡಲಾರೆನು' ಎಂದು ಹೇಳಿದನು. ಹೀಗೆ ಪ್ರತಿಜ್ಞೆ ಮಾಡಿದ ದೇವೇಂದ್ರನು, ಆ ರೂಪದಲ್ಲಿ ನಿನಗೆ ಅಮೃತವನ್ನು ಕೊಡುವುದಕ್ಕೆ ಬರಲು, ಆತನನ್ನು ಉಪೇಕ್ಷಿಸಿದುದು ನಿನ್ನ ದೊಡ್ಡ ತಪ್ಪು. ಇರಲಿ! ನೀನು ಅಪೇಕ್ಷಿಸುವುದನ್ನು ನಾನು ನಡೆಸಿ ಕೊಡುವೆನು. ನಿನಗೆ ನೀರಿನಲ್ಲಿರುವ ಅಪಾರವಾದ ಆಸೆಯನ್ನೂ ನಾನು ಸಾರ್ಥಕಪಡಿಸುವೆನು. ಓ ಬ್ರಾಹ್ಮಣಾ! ನಿನಗೆ ಯಾವ ದಿನಗಳಲ್ಲಿ ನೀರಿನಲ್ಲಿ ಅಪೇಕ್ಷೆಯುಂಟಾಗುವುದೋ, ಆ ದಿನಗಳಲ್ಲಿ ಮರುಭೂಮಿಯಲ್ಲಾದರೂ ನೀರಿನಿಂದ ತುಂಬಿದ ಮೇಘಗಳು ತಲೆದೋರುವುವು. ಅವು ನೀನು ಕೋರುವ ರುಚಿಕರವಾದ ಜಲವನ್ನು ಕೊಡುವುವು. ಆ ಮೇಘಗಳು ಉದಂಕಮೇಘಗಳೆಂದು ಪ್ರಸಿದ್ಧವಾಗುವುವು. ಈಗಲೂ ನೋಡು. ಆ ಮರುಭೂಮಿಯಲ್ಲಿ ಉದಂಕಮೇಘಗಳೇ ಮಳೆಸುರಿಸುತ್ತಿರುವುವು" ಎಂದನು. ಇದನ್ನು ಕೇಳಿ ಆ ಬ್ರಾಹ್ಮಣನಿಗೆ ಬಹಳ ಸಂತೋಷವಾಯಿತು.

ಇದು ಐವತ್ತೈದನೆಯ ಅಧ್ಯಾಯವು.

ಉದಂಕಚರಿತ್ರವು. ಗುರುವಾದ ಗೌತನುನು ಉದಂಕನ ಉಪಚಾರಗಳಿಂದ ತೃಪ್ತನಾಗಿ, ಆತನಿಗೆ ವಿದ್ಯಾಭ್ಯಾಸವು ಮುಗಿದಮೇಲೆಯೂ ಮನೆಗೆ ಹೋಗಲು ಅನುಮತಿಸದಿದ್ದುದು. ಉದಂಕನು ತನಗೆ ಮುಪ್ಪು ಬಂದುದನ್ನು ನೋಡಿ ವ್ಯಾಕುಲಗೊಂಡುದು. ಗೌತಮನು ಆತನಿಗೆ ತನ್ನ ಕನ್ಯೆಯನ್ನು ಕೊಡುವುದಾಗಿ ನಿಶ್ಚಯಿಸಿದುದು. ಉದಂಕನು ಗುರುಪತ್ನಿಯ ಕೋರಿಕೆಯಂತೆ ಕುಂಡಲಗಳನ್ನು ತರಲು ಸೌದಾಸನ ಬಳಿಗೆ ಹೋದುದು.

ಈ ನಡುವೆ ಜನಮೇಜಯನು "ಸಕಲ ಲೋಕಗಳಿಗೂ ಪ್ರಭುವಾದ ವಿಷ್ಣುವಿಗೇ ಶಾಪವನ್ನು ಕೊಡಲುದ್ದೇಶಿಸಿದ ಆ ಉದಂಕನ ತಪೋಮಹಿಮೆಯೆಂತಹದು?" ಎಂದು ಕೇಳಲು, ವೈಶಂಪಾಯನನು 'ಓ ಜನಮೇ

ಜಯಾ! ಉದಂಕನು ಮಹಾತಪಸ್ವಿ! ಅಧಿಕ ಗುರುಭಕ್ತಿಯುಳ್ಳವನು! ತೇಜಸ್ವಿ! ಆತನು ಬೇರೆ ಯಾವುದನ್ನೂ ಆದರಿಸಿದವನಲ್ಲ. ಬೇರೆ ಎಲ್ಲಾ ಋಷಿಕುಮಾರರಿಗೂ 'ಉದಂಕನಂತೆ ತಾವೂ ಗುರುಶುಶ್ರೂಷೆಮಾಡಬೇ' ಕೆಂಬ ಅಭಿಲಾಷೆ ಹುಟ್ಟಿತು. ಗುರುವಾದ ಗೌತಮುನಿಗೂ ತನ್ನ ಶಿಷ್ಯರೊ ಳೊಳಗೆಲ್ಲ ಉದಂಕನಲ್ಲಿ ಅಧಿಕಪ್ರೀತಿ ವಾತ್ಸಲ್ಯಗಳುಂಟಾದುವು. ಗೌತ ಮನಿಗೆ ಆ ಉದಂಕನ ಗುಣಗಳು, ಅವನ ಮನಶ್ಶುದ್ಧಿ, ಸಾಹಸಕಾರ್ಯ ಗಳು, ಮತ್ತು ಉಪಚಾರಗಳು, ಇವುಗಳಿಂದ ಪೂರ್ಣ ತೃಪ್ತಿಯುಂಟಾ ಯಿತು. ಆತನು ಬೇರೆ ಸಾವಿರಾರುಮಂದಿ ಶಿಷ್ಯರಿಗೆಲ್ಲ ಅವರವರ ಮನೆಗೆ ಹೋಗಲು ಅನುಮತಿಕೊಟ್ಟರೂ ಉದಂಕನಿಗೆ ಮಾತ್ರ ಅನುಮತಿ ಕೊಡ ಲಿಲ್ಲ. ಹೀಗೆಯೇ ಉದಂಕನಿಗೆ ವೃದ್ಧಾಪ್ಯವು ಪ್ರಾಪ್ತವಾಯಿತು. ಗುರು ಶುಶ್ರೂಷೆಯಲ್ಲಿ ಆಸಕ್ತನಾಗಿದ್ದ ಆತನಿಗೆ ಅದೂ ತಿಳಿಯಲಿಲ್ಲ. ಒಂದಾ ನೊಂದು ದಿವಸದಲ್ಲಿ ಆತನು ಕಾಡಿನಿಂದ ಒಂದು ದೊಡ್ಡ ಸೌದೆಹೊರೆ ಯನ್ನು ಹೊತ್ತುತಂದನು. ಅದರ ಭಾರದಿಂದ ಆಯಾಸಪಟ್ಟು ಹಸಿವು ಗೊಂಡಿದ್ದ ಆತನು, ಆ ಹೊರೆಯನ್ನು ಧೊಪ್ಪನೆ ಕೆಳಗೆ ಹಾಕಿದನು. ಆಗ ಆ ಸೌದೆಯಲ್ಲಿ ಬೆಳ್ಳಿಯಂತೆ ಮಿರುಗುತಿದ್ದ ಬಿಳೀ ತಲೆಕೂದಲೊಂದು ಅವನಿಗೆ ಕಾಣಿಸಿತು. ಹೊರೆಯ ಭಾರದಿಂದಲೂ, ಹಸಿವಿನಿಂದಲೂ, ಬಳ ಲಿದ್ದ ಆತನಿಗೆ, ಆಗ ತನ್ನ ವಯಸ್ಸಿನ ಸ್ಥಿತಿಯು ಗೋಚರವಾಗಿ, ದೀನ ಸ್ವರದಿಂದ ಅಳುವುದಕ್ಕಾರಂಭಿಸಿದನು. ಆ ಸಮಯದಲ್ಲಿ ಗುರುಪುತ್ರಿಯು ತನ್ನ ತಂದೆಯ ಅಭಿಪ್ರಾಯವನ್ನರಿತು, ತಲೆಬಗ್ಗಿಸಿಕೊಂಡು ಬಂದು ಆ ಉದಂಕನ ಕಣ್ಣೀರನ್ನು ತನ್ನ ಕೈಯಿಂದ ಒರೆಸಿದಳು. ಆಕೆಯು ಮಹಾ ರೂಪವತಿ! ತಾವರೆಯ ಹೂವಿನಂತೆ ಸುಂದರವಾದ ಮುಖವುಳ್ಳವಳು! ವಿಶಾಲನೇತ್ರಗಳುಳ್ಳ ಆಕೆಯು, ಆ ಉದಂಕನ ಕಣ್ಣುಗಳನ್ನೊರೆಸುವಾಗ, ಆಕೆಯ ಕೈಗಳು ಆ ಕಣ್ಣೀರಿನ ಉಷ್ಣದಿಂದ ಬೆಂದು ಬಿದ್ದುಹೋದುವು. ಆ ಕಣ್ಣೀರಿನ ಉಷ್ಣವನ್ನು ಭೂಮಿಯೂ ತಡೆಯಲಾರದೆ ಹೋಯಿತು. ಆಗ ಗೌತಮನು ಪ್ರೀತಿಪೂರ್ವಕವಾಗಿ ಉದಂಕನನ್ನು ಕುರಿತು 'ಅಪ್ಪಾ! ಉದಂಕಾ! ನಿನ್ನ ಮನಸ್ಸು ಇಷ್ಟು ದುಃಖಕ್ಕೊಳಗಾದುದೇತಕ್ಕೆ? ಓ ಬ್ರಹ್ಮರ್ಷೀ! ನಿನ್ನ ಅಭಿಪ್ರಾಯವನ್ನು ತಿಳಿಸು. ನಿಜವನ್ನು ತಿಳಿಯ

ಲಪೇಕ್ಷಿಸುವೆನು' ಎಂದನು. ಆಗ ಉದಂಕನು 'ನಾನು ನಿನಗೆ ಪ್ರಿಯ ಕಾರ್ಯಗಳನ್ನು ಮಾಡಬೇಕೆಂಬ ಕುತೂಹಲದಿಂದ ನಿನ್ನ ಬಳಿಯಲ್ಲಿರುತ್ತಿರುವೆನು. ನಿನ್ನಲ್ಲಿ ಭಕ್ತಿಯಿಂದ ನಿನ್ನ ಆಜ್ಞಾನುಸಾರಿಯಾಗಿ ನಡೆಯುತ್ತಿದ್ದ ನನಗೆ ಮುಪ್ಪು ಬಂದುದೂ ತಿಳಿಯಲೇ ಇಲ್ಲ. ನಾನು ಈ ಲೋಕದಲ್ಲಿ ಇದುವರೆಗೆ ಒಂದು ಸುಖವನ್ನೂ ಅರಿಯೆನು. ನೂರು ವರ್ಷಗಳಿಂದ ನಾನು ನಿನ್ನಲ್ಲಿ ವಾಸಿಸುತ್ತಿದ್ದರೂ, ನೀನು ನನಗೆ ಇಲ್ಲಿಂದ ಬಿಟ್ಟುಹೋಗಲು ಅನುಮತಿಸಲಿಲ್ಲ. ನನ್ನಿಂದಾಚೆಗೆ ನಿನ್ನಲ್ಲಿ ವಿದ್ಯಾಸಕ್ತಾಗಿ ಬಂದ ನೂರು ಸಾವಿರಮಂದಿ ಶಿಷ್ಯರಿಗೆಲ್ಲ ನೀನು ಅನುಮತಿಯನ್ನು ಕೊಟ್ಟು ಕಳುಹಿಸಿದೆ. ನನ್ನನ್ನು ಮಾತ್ರ ಬಿಡದಿರುವೆ' ಎಂದನು. ಅದಕ್ಕೆ ಗೌತಮನು 'ಓ ಬ್ರಾಹ್ಮಣೋತ್ತಮಾ! ನೀನು ಮಾಡುತ್ತಿರುವ ಶುಶ್ರೂಷೆಯಿಂದ ನಿನ್ನಲ್ಲಿ ಅಧಿಕಪ್ರೀತನಾದ ನನಗೂ ಇಷ್ಟು ದೀರ್ಘಕಾಲವಾದುದು ತಿಳಿಯಲಿಲ್ಲ. ಈಗ ನೀನು ನಿನ್ನ ಮನೆಗೆ ಹೊರಡಲಪೇಕ್ಷಿಸುವುದಾದರೆ ಹೊರಡು. ನಿನಗೆ ಅನುಮತಿಯನ್ನು ಕೊಡುವೆನು. ಇನ್ನು ವಿಳಂಬವು ಬೇಡ' ಎಂದನು. ಆಗ ಉದಂಕನು 'ಓ ಬ್ರಾಹ್ಮಣೋತ್ತಮಾ! ನಾನು ನಿನಗೆ ಯಾವ ಗುರುದಕ್ಷಿಣೆಯನ್ನು ಕೊಡಲಿ? ತಿಳಿಸು. ಅದನ್ನು ನಿನಗೆ ಸಲ್ಲಿಸಿ, ನಿನ್ನ ಅನುಮತಿಯನ್ನು ಪಡೆದು ಹೊರಡುವೆನು' ಎಂದನು. ಅದಕ್ಕೆ ಗೌತಮನು 'ಗುರುಗಳನ್ನು ಯಾವ ವಿಧದಿಂದಲಾದರೂ ತೃಪ್ತಿಗೊಳಿಸುವುದೇ ದೊಡ್ಡ ದಕ್ಷಿಣೆಯೆಂದು ಧರ್ಮಜ್ಞರು ಹೇಳುವರು. ಧರ್ಮಾನುಸಾರಿಯಾದ ನಿನ್ನಲ್ಲಿ ನಾನು ಪ್ರೀತನಾದೆನು ನೀನು ಈಗಲೂ ಹದಿನಾರುವರ್ಷದ ತರುಣನಾದರೆ, ಕನ್ಯೆಯಾದ ನನ್ನ ಮಗಳನ್ನು ನಿನಗೆ ವಿವಾಹಮಾಡಿಕೊಡುವೆನು. ಇವಳು ಹೊರತು ಬೇರೆ ಯಾರೂ ನಿನ್ನ ತೇಜಸ್ಸನ್ನು ತಡೆಯಲಾರರು' ಎಂದನು. ಆಮೇಲೆ ಉದಂಕನು ಅಂತಹ ತರುಣನಾಗಿ, ಪ್ರಸಿದ್ಧಳಾದ ಆ ಕನ್ಯೆಯನ್ನು ಸ್ವೀಕರಿಸಿ, ಗುರುವಿನಿಂದ ಅನುಮತಿಯನ್ನು ಪಡೆದು ಹೊರಡುವಾಗ, ಗುರುಪತ್ನಿಯನ್ನು ಕುರಿತು 'ಅಮ್ಮಾ! ನಿನಗೆ ಯಾವುದನ್ನು ಗುರುದಕ್ಷಿಣೆಯಾಗಿ ಕೊಡಲಿ? ಆಜ್ಞಾಪಿಸು. ನಿನಗೆ ಪ್ರಿಯವೂ, ಹಿತವೂ ಆದ ಕಾರ್ಯವನ್ನು ಎಷ್ಟು ಧನವ್ರಯದಿಂದಾದರೂ, ಕಡೆಗೆ ನನ್ನ ಪ್ರಾಣವನ್ನೇ

ಕೊಟ್ಟಾದರೂ ನೆರವೇರಿಸುವೆನು. ಈ ಪ್ರಪಂಚದಲ್ಲಿ ದೊರೆಯಲಾರದ ಮಹಾಶ್ಚರ್ಯಕರವಾದ ಎಂತಹ ಅನರ್ಘ್ಯ ರತ್ನವನ್ನಾದರೂ ನಾನು ನನ್ನ ತಪೋಮಹಿಮೆಯಿಂದ ತರುವೆನು. ಇದರಲ್ಲಿ ಯಾವ ಸಂಶಯವೂ ಇಲ್ಲ' ಎಂದನು. ಆಗ ಗುರುಪತ್ನಿಯಾದ ಅಹಲ್ಯೆಯು 'ಓ ಬ್ರಾಹ್ಮಣಾ! ನಿರ್ದೋಷೀ! ನಿನ್ನ ದೃಢಭಕ್ತಿಗಾಗಿ ನಾನು ಸಂತೋಷಿಸಿದೆನು. ಇಷ್ಟೇ ಸಾಕು. ನಿನಗೆ ಕ್ಷೇಮವುಂಟಾಗಲಿ. ನಿನ್ನ ಇಷ್ಟಾನುಸಾರವಾಗಿ ಹೊರಡು' ಎಂದಳು. ಆಗ ಉದಂಕನು ತಿರುಗಿ 'ಅಮ್ಮಾ! ನನಗೆ ಆಜ್ಞೆಯನ್ನು ಕೊಡು. ನಾನು ನಿನಗೆ ಪ್ರಿಯವಾದ ಕಾರ್ಯವನ್ನು ಮಾಡಿಯೇ ಹೋಗಬೇಕು' ಎಂದನು.

ಅದಕ್ಕೆ ಅಹಲ್ಯೆಯು 'ಹಾಗಾದರೆ ಸೌದಾಸನ ಪತ್ನಿಯು ಧರಿಸಿರುವ ದಿವ್ಯವಾದ ರತ್ನಕುಂಡಲಗಳನ್ನು ತೆಗೆದುಕೊಂಡು ಬಾ! ನಿನಗೆ ಕ್ಷೇಮವಾಗುವುದು. ಇದರಿಂದ ಗುರುದಕ್ಷಿಣೆಯನ್ನೂ ನೀನು ಸಲ್ಲಿಸಿದಂತಾಗುವುದು' ಎಂದಳು. ಉದಂಕನು 'ಹಾಗೆಯೇ ಆಗಲಿ' ಎಂದು ಒಪ್ಪಿಕೊಂಡು, ಗುರುಪತ್ನಿಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ ಆ ಕುಂಡಲಗಳನ್ನು ತರಲು ಹೊರಟನು. ಆತನು ಆ ಕುಂಡಲಗಳನ್ನು ಯಾಚಿಸಲು ನರಭಕ್ಷಕನಾದ ಸೌದಾಸನ ಬಳಿಗೆ ವೇಗದಿಂದ ಹೋದನು. ಆಮೇಲೆ ಇತ್ತಲಾಗಿ ಗೌತಮನು ತನ್ನ ಪತ್ನಿಯನ್ನು ಕುರಿತು 'ಉದಂಕನೆಲ್ಲಿ? ಆತನು ಇಲ್ಲಿ ಕಾಣಿಸಲಿಲ್ಲ!' ಎಂದು ಕೇಳಿದನು. ಆಗ ಅಹಲ್ಯೆಯು 'ಉದಂಕನು ಕುಂಡಲಗಳಿಗಾಗಿ ಹೋಗಿರುವನು' ಎಂದಳು. ಅದಕ್ಕೆ ಗೌತಮನು 'ನೀನು ಮಾಡಿದುದು ಉಚಿತಕಾರ್ಯವಲ್ಲ! ಶಾಪಗ್ರಸ್ತನಾದ ಸೌದಾಸನು ಆ ಬ್ರಾಹ್ಮಣನನ್ನು ತಪ್ಪದೆ ಕೊಂದು ತಿಂದುಬಿಡುವನು' ಎಂದನು. ಅಹಲ್ಯೆಯು 'ನಾನು ತಿಳಿಯದೆ ಆ ಬ್ರಾಹ್ಮಣನನ್ನು ಕಳುಹಿಸಿಬಿಟ್ಟೆನು. ಆದರೂ ನಿನ್ನ ಅನುಗ್ರಹದಿಂದ ಆ ಬ್ರಾಹ್ಮಣನಿಗೆ ಏನೂ ಭಯವಿಲ್ಲದಂತಾಗಲಿ' ಎಂದಳು. ಗೌತಮನು ತನ್ನ ಪತ್ನಿಯೊಡನೆ 'ಸರಿ! ಹಾಗೆಯೇ ಆಗಲಿ' ಎಂದನು. ಅತ್ತಲಾಗಿ ಉದಂಕನು ನಿರ್ಜನಪ್ರದೇಶವಾದೊಂದು ಅರಣ್ಯದಲ್ಲಿ ಆ ರಾಜನನ್ನು ಕಂಡನು.

ಇದು ಐವತ್ತಾರನೆಯ ಅಧ್ಯಾಯವು.

ಶಾಪದಿಂದ ರಾಕ್ಷಸನಾಗಿದ್ದ ಸೌದಾಸನು, ಕೋಪದಿಂದ ಉದಂಕನನ್ನು ಭಕ್ಷಿಸಲು ಯತ್ನಿಸಿದುದು. ಉದಂಕನು ಗುರುದಕ್ಷಿಣೆಯನ್ನು ಕೊಟ್ಟುಬರುವುದಾಗಿ ತಿಳಿಸಿ, ಆತನ ಅನುಮತಿಯಂತೆ ಆತನ ಹೆಂಡತಿಯ ಕುಂಡಲಗಳನ್ನು ಕೇಳಿದುದು. ಆಕೆಯು ಆ ಕುಂಡಲದ ಮಹಿಮೆಯನ್ನೆಲ್ಲಾ ತಿಳಿಸಿ, ಅದಕ್ಕೆ ತನ್ನ ಪತಿಯ ಅನುಮತಿ ಬೇಕೆಂದುದು.

ಆಗ ಭಯಂಕರಸ್ವರೂಪನಾಗಿ, ದೊಡ್ಡ ಮೀಸೆಯನ್ನಿಟ್ಟು, ಮನುಷ್ಯರಕ್ತದಿಂದ ತೊಯ್ದ ಮೈಯುಳ್ಳ ಸೌದಾಸನನ್ನು ಕಂಡರೂ ಉದಂಕನು, ಸ್ವಲ್ಪವೂ ಭಯಪಡಲಿಲ್ಲ. ಯಮಸ್ವರೂಪನಾದ ಆ ರಾಕ್ಷಸನು ಆತನಿದಿರಿಗೆ ಬಂದು 'ಓ ಬ್ರಾಹ್ಮಣಾ! ಆಹಾರವನ್ನು ಹುಡುಕುತ್ತಿರುವ ನನ್ನ ಸಮೀಪಕ್ಕೆ ದೈವವಶದಿಂದ ನೀನು ಬಂದೆ' ಎಂದನು. ಆಗ ಉದಂಕನು 'ರಾಜಾ! ನಾನು ಗುರುದಕ್ಷಿಣೆಗಾಗಿ ಇಲ್ಲಿಗೆ ಬಂದವನು. ಗುರುದಕ್ಷಿಣೆಯನ್ನು ಸಂಪಾದಿಸಲು ಬಂದವನನ್ನು ಕೊಲ್ಲಕೂಡದೆಂದು ಪ್ರಾಜ್ಞರು ತಿಳಿಸುವರು' ಎಂದನು. ರಾಕ್ಷಸನು 'ಬ್ರಾಹ್ಮಣಾ! ನೀನು ನನಗೆ ಆರನೆಯ ಕಾಲದಲ್ಲಿ (ಹಗಲಿನ ಕೊನೆಯ ಭಾಗದಲ್ಲಿ) ಆಹಾರವಾಗಿ ದೊರತಿರುವೆ. ಬಹಳವಾಗಿ ಹಸಿದಿರುವ ನಾನು ಹೇಗೂ ನಿನ್ನನ್ನು ಬಿಡಲಾರೆನು' ಎಂದನು.

ಅದಕ್ಕೆ ಉದಂಕನು 'ಹಾಗೆಯೇ ಆಗಲಿ. ಆದರೆ ನೀನು ನನ್ನದೊಂದು ಮಾತನ್ನು ಕೇಳು. ಗುರುವಿನ ಕಾರ್ಯವನ್ನು ನೆರವೇರಿಸಿದ ಮೇಲೆ ನಾನೇ ನಿನ್ನ ಬಳಿಗೆ ಬರುವೆನು. ಓ ರಾಜೋತ್ತಮಾ! ನಾನು ಗುರುವಿಗಾಗಿ ಕೊಡುವೆನೆಂದು ಪ್ರತಿಜ್ಞೆಮಾಡಿದ ಪದಾರ್ಥವು ನಿನ್ನಲ್ಲಿರುವುದು. ಅದನ್ನು ನನಗೆ ದಯಪಾಲಿಸಬೇಕೆಂದು ಬೇಡುವೆನು. ನೀನು ಯಾವಾಗಲೂ ಬ್ರಾಹ್ಮಣಶ್ರೇಷ್ಠರಿಗೆ ರತ್ನಗಳನ್ನು ದಾನಮಾಡುತ್ತಿದ್ದವನಲ್ಲವೆ? ಪುರುಷಸಿಂಹಾ! ನೀನು ಒಳ್ಳೇ ದಾನಿಯಲ್ಲವೆ? ನಾನೂ ದಾನಕ್ಕೆ ಸತ್ಪಾತ್ರನೆಂದು ತಿಳಿ. ನಿನ್ನಲ್ಲಿ ನನ್ನ ಗುರುವಿಗೆ ಕೊಡುವ ವಸ್ತುವೊಂದಿರುವುದು. ಅದನ್ನು ನಿನ್ನಿಂದ ತೆಗೆದುಕೊಂಡುಹೋಗಿ ಗುರು

ವಿಗೆ ಕೊಟ್ಟು, ತಿರುಗಿ ನಾನೇ ನಿನ್ನ ಬಳಿಗೆ ಬರುವೆನೆಂದು ಆಣೆಯಿಡುವೆನು. ಈ ವಿಷಯದಲ್ಲಿ ನಾನು ಸುಳ್ಳಾಡುವವನಲ್ಲ. ನಾನು ಇದುವರೆಗೆ ವಿನೋದಕ್ಕಾಗಿಯೂ ಸುಳ್ಳಾಡಿದವನಲ್ಲ. ಹೀಗಿರುವಾಗ ಇಂತಹ ವಿಷಯಗಳಲ್ಲಿ ಸುಳ್ಳು ಹೇಳುವೆನೆ?' ಎಂದನು. ಸೌದಾಸನು 'ಬ್ರಾಹ್ಮಣಾ! ನಿನ್ನ ಗುರುದಕ್ಷಿಣೆಯು ನನ್ನಲ್ಲಿರುವುದಾದರೆ ಅದನ್ನು ನೀನು ಸಲ್ಲಿಸಿದಂತೆಯೇ ತಿಳಿ. ನಿನಗೆ ಬೇಕಾದುದು ನನ್ನಲ್ಲಿರುವಪಕ್ಷದಲ್ಲಿ ಈಗಲೇ ತಿಳಿಸು, ಕೊಡುವೆನು' ಎಂದನು. ಉದಂಕನು 'ಪುರುಷೋತ್ತಮಾ! ನೀನು ದಾನಶೀಲನೆಂಬುದನ್ನು ನಾನು ತಿಳಿದಿರುವೆನು. ಈಗ ನಾನು ರತ್ನಕುಂಡಲಗಳನ್ನು ಯಾಚಿಸುವುದಕ್ಕಾಗಿ ನಿನ್ನ ಬಳಿಗೆ ಬಂದಿರುವೆನು' ಎಂದನು. ಸೌದಾಸನು 'ಓ ಬ್ರಹ್ಮರ್ಷೀ! ಆ ರತ್ನಕುಂಡಲಗಳನ್ನು ನನ್ನ ಪತ್ನಿಯು ಧರಿಸಿರುವಳು. ಆದುದರಿಂದ ನೀನು ಬೇರೆ ಯಾವುದಾದರೂ ವಸ್ತುವನ್ನು ಕೇಳು. ಅದನ್ನು ಕೊಡುವೆನು' ಎಂದನು. ಉದಂಕನು 'ರಾಜಾ! ನೀನು ಹೀಗೆ ನೆಪಗಳನ್ನು ಹೇಳಬಾರದು. ನನ್ನಲ್ಲಿ ನಿನಗೆ ನಂಬಿಕೆಯಿದ್ದರೆ ಕುಂಡಲಗಳನ್ನು ಕೊಟ್ಟು ಸತ್ಯವಾದಿಯಾಗು' ಎಂದನು. ರಾಜನು ತಿರುಗಿ 'ಓ ಸಾಧುಶ್ರೇಷ್ಠಾ! ನೀನು ನನ್ನ ಪತ್ನಿಯ ಬಳಿಗೆ ಹೋಗಿ ನಾನು ಹೇಳಿದುದಾಗಿ ತಿಳಿಸಿ ಅವಳನ್ನು ಯಾಚಿಸು. ಸತ್ಯವ್ರತೆಯಾದ ಅವಳು ನನ್ನ ಮಾತಿನಂತೆ ತಪ್ಪದೆ ನಿನಗೆ ಕುಂಡಲಗಳನ್ನು ಕೊಡುವಳು. ಇದರಲ್ಲಿ ಸಂದೇಹವಿಲ್ಲ' ಎಂದನು. ಉದಂಕನು 'ನಾನು ನಿನ್ನ ಪತ್ನಿಯನ್ನು ಎಲ್ಲಿ ಕಾಣಬಹುದು? ನೀನೇ ನೇರವಾಗಿ ಏಕೆ ನಿನ್ನ ಪತ್ನಿಯ ಬಳಿಗೆ ಬರುವುದಿಲ್ಲ?' ಎನಲು, ಸೌದಾಸನು 'ನೀನು ಈಗ ಅವಳನ್ನು ಆ ಕಾಡು ಹೊಳೆಯ ಸಮೀಪದಲ್ಲಿ ಕಾಣಬಹುದು. ಈ ಆರನೆಯ ಜಾಮದಲ್ಲಿ ನಾನು ಆಕೆಯನ್ನು ನೋಡಬಾರದು' ಎಂದನು. ಆಮೇಲೆ ಉದಂಕನು ಹೊರಟು, ಮದಯಂತಿಯನ್ನು ಕಂಡು ತಾನು ಬಂದ ಕಾರ್ಯವನ್ನು ತಿಳಿಸಿದನು.

ಓ ಜನಮೇಜಯಾ! ಆಗ ಆ ಮದಯಂತಿಯು 'ಓ ಬ್ರಾಹ್ಮಣಾ! ನೀನೇನೋ ಸುಳ್ಳಾಡತಕ್ಕವನಲ್ಲ. ಆದರೂ ನೀನೊಂದು ಗುರುತನ್ನು

ತರಬೇಕು. ನನ್ನ ಈ ದಿವ್ಯರತ್ನಕುಂಡಲಗಳನ್ನು ಉಪಾಯದಿಂದ ಅಪಹರಿಸಲು, ದೇವಾಸುರ ಯಕ್ಷ ನಾಗ ಮಹರ್ಷಿಗಳೆಲ್ಲರೂ ಸಮಯ ನಿರೀಕ್ಷಣೆ ಮಾಡುತ್ತಿರುವರು. ಆ ರತ್ನವನ್ನು ನೆಲದಮೇಲಿಟ್ಟರೆ ಪನ್ನಗರು ಅಪಹರಿಸುವರು. ಅಶುಚಿಯಾಗಿರುವಾಗ ಧರಿಸಿದರೆ ಯಕ್ಷರು ಅಪಹರಿಸುವರು. ನಿದ್ರೆಯಲ್ಲಿ ದೇವತೆಗಳು ಅಪಹರಿಸುವರು. ಆದುದರಿಂದ ಅವುಗಳನ್ನು ಬಹಳ ಎಚ್ಚರಿಕೆಯಿಂದ ಧರಿಸಬೇಕು. ಇವು ಹಗಲೂ ರಾತ್ರಿಯೂ ಪ್ರಕಾಶಿಸುವುವು. ರಾತ್ರಿಯಲ್ಲಿ ನಕ್ಷತ್ರತಾರೆಗಳ ಕಾಂತಿಯನ್ನು ಮೀರಿರುವುವು. ಇವುಗಳನ್ನು ಧರಿಸಿದರೆ, ಹಸಿವು ಬಾಯಾರಿಕೆಗಳ ಭೀತಿಯೇ ಇಲ್ಲ! ವಿಷ, ಅಗ್ನಿ, ದುಷ್ಟಮೃಗಗಳು, ಇವುಗಳಿಂದಲೂ ಯಾವ ಭಯವೂ ಇಲ್ಲ. ಇವುಗಳನ್ನು ಕುಳ್ಳಾದವರು ಧರಿಸಿದರೆ, ಅವರಿಗೆ ತಕ್ಕಂತೆ ಅದೂ ಚಿಕ್ಕದಾಗಿ ಕಾಣಿಸುವುದು. ಇದು ತನ್ನನ್ನು ಧರಿಸತಕ್ಕವರ ಆಕೃತಿಗೆ ತಕ್ಕಂತೆ, ಅವರವರಿಗೆ ಅನುರೂಪವಾಗಿ ಕಾಣುವುದು. ಹೀಗೆ ಈ ನನ್ನ ಕುಂಡಲಗಳೆರಡೂ ಮಹಾಮಹಿಮೆಯುಳ್ಳವು. ಲೋಕಪ್ರಸಿದ್ಧವಾಗಿರುವುವು. ಆದುದರಿಂದ ನನ್ನ ಪತಿಯಿಂದ ಯಾವುದಾದರೊಂದು ಗುರುತನ್ನು ತೆಗೆದುಕೊಂಡು ಬಾ' ಎಂದಳು.

ಇದು ಐವತ್ತೇಳನೆಯ ಅಧ್ಯಾಯವು.

---

ಉದಂಕನು ಗುರುತನ್ನು ಕೊಟ್ಟು ಕುಂಡಲಗಳನ್ನು ತರುವಾಗ ನಾಗರು ಅವುಗಳನ್ನು ಅಪಹರಿಸಿಕೊಂಡುಹೋದುದು. ಉದಂಕನು ಇಂದ್ರನ ಸಹಾಯದಿಂದ ನಾಗಲೋಕಕ್ಕೆ ಹೋಗಿ ಅವುಗಳನ್ನು ತೆಗೆದುಕೊಂಡುಬಂದು ಗುರುಪತ್ನಿಗೆ ಕೊಟ್ಟುದು.

ಆಮೇಲೆ ಉದಂಕನು ತಿರುಗಿ ಮಿತ್ರಸಹನ (ಸೌದಾಸನ) ಬಳಿಗೆ ಬಂದು, ಅವನ ಆಜ್ಞೆಗೆ ಗುರುತಾಗಿ ಯಾವುದನ್ನಾದರೂ ಕೊಡಬೇಕೆಂದು ಕೇಳಿದನು. ಆಗ ಇಕ್ಷ್ವಾಕುವಂಶಶ್ರೇಷ್ಠನಾದ ಆ ಸೌದಾಸನು, 'ಈ (ಗುಪ್ತರಾಕ್ಷಸಜನ್ಮವು) ನಮಗೆ ಕ್ಷೇಮಕರವಲ್ಲ. ನಮಗೆ ಬೇರೆ ಗತಿಯೂ

ಇಲ್ಲ. ಈ ನಮ್ಮ ರಹಸ್ಯವನ್ನು ಭಾವಿಸಿ ಈತನಿಗೆ ಮಣಿಕುಂಡಲಗಳನ್ನು ಕೊಡು' ಎಂಬೀ ವಾಕ್ಯಗಳನ್ನು ಹೇಳಿಕಳುಹಿಸಿದನು. ಉದಂಕನು ಮದಯಂತಿಯ ಬಳಿಗೆ ಹೋಗಿ ಈ ವಾಕ್ಯವನ್ನು ತಿಳಿಸಿದನು. ಒಡನೆಯೇ ಆಕೆಯು ಉದಂಕನಿಗೆ ರತ್ನಕುಂಡಲಗಳನ್ನು ಕೊಟ್ಟಳು. ಉದಂಕನು ಅವುಗಳನ್ನು ತೆಗೆದುಕೊಂಡು ತಿರುಗಿ ರಾಜನ ಬಳಿಗೆ ಹೋಗಿ, 'ರಾಜಾ! ಅದೇನು ರಹಸ್ಯವಾಕ್ಯವೋ ತಿಳಿಯಲು ಕುತೂಹಲಪಡುತ್ತಿರುವೆನು' ಎಂದನು. ಆಗ ಸೌದಾಸನು 'ಪ್ರಜಾಸೃಷ್ಟಿಯಾದಂದಿನಿಂದ ಕ್ಷತ್ರಿಯರು ಬ್ರಾಹ್ಮಣರನ್ನು ಪೂಜಿಸುತ್ತಿರುವರು. ಅವರಿಗೆ ಬ್ರಾಹ್ಮಣರಿಂದಲೇ ಅನೇಕಹಾನಿಗಳೂ ಉಂಟಾಗುವುವು. ಬ್ರಾಹ್ಮಣಸೇವೆಮಾಡುತ್ತಿದ್ದ ನಾನು ಅವರಿಂದಲೇ ಈ ಕೆಡುಕಿಗೆ ಗುರಿಯಾದೆನು. ಮದಯಂತಿಯ ಸಹಾಯವನ್ನು ಪಡೆದಿದ್ದರೂ ನನಗೆ ಬೇರೆ ಗತಿಯೇನೂ ತೋರಲಿಲ್ಲ. ಓ ಬ್ರಾಹ್ಮಣೋತ್ತಮಾ! ಸ್ವರ್ಗಪ್ರವೇಶಕ್ಕಾಗಲಿ, ಇಲ್ಲಿಯೇ ಇರುವುದಕ್ಕಾಗಲಿ ನನಗೆ ಮಾರ್ಗವು ಕಾಣಲಿಲ್ಲ. ಮುಖ್ಯವಾಗಿ ಬ್ರಾಹ್ಮಣರಿಗೆ ವಿರೋಧಿಯಾದ ಅರಸನು ಈ ಪ್ರಪಂಚದಲ್ಲಿ ಸುಖವನ್ನನುಭವಿಸುವುದೇ ಸಾಧ್ಯವಲ್ಲ. ಸತ್ತರೂ ಅವನು ಸುಖವನ್ನನುಭವಿಸಲಾರನು. ಈಗ ನಮ್ಮ ಕುಂಡಲಗಳನ್ನು ನಿನಗೆ ಕೊಟ್ಟೆನು. ಇನ್ನು ನೀನು ನನಗೆ ಮಾಡಿದ ಪ್ರತಿಜ್ಞೆಯನ್ನು ನಡೆಸು' ಎಂದನು. ಅದಕ್ಕೆ ಉದಂಕನು 'ರಾಜಾ! ಹಾಗೆಯೇ ಮಾಡುವೆನು. ತಿರುಗಿ ನಿನ್ನ ಬಳಿಗೆ ಬರುವೆನು. ಆದರೆ ನಿನ್ನನ್ನು ಒಂದು ವಿಷಯದಲ್ಲಿ ಪ್ರಶ್ನಿಸಲಪೇಕ್ಷಿಸುವೆನು' ಎಂದನು. ಸೌದಾಸನು 'ಬ್ರಾಹ್ಮಣಾ! ಹಾಗೆಯೇ ಆಗಲಿ ಕೇಳು. ಪ್ರತ್ಯುತ್ತರವನ್ನು ಕೊಟ್ಟು ನಿನ್ನ ಸಂಶಯವನ್ನು ನಿವಾರಣೆ ಮಾಡುವೆನು. ನನಗೆ ಇದರಲ್ಲಿ ಶಂಕೆಯಿಲ್ಲ' ಎಂದನು. ಆಗ ಉದಂಕನು 'ಧರ್ಮರಹಸ್ಯವನ್ನು ತಿಳಿದವರು, ಮಾತಿಗೆ ಕಟ್ಟುಬಿದ್ದವನೇ ಬ್ರಾಹ್ಮಣನೆಂದು ಹೇಳುವರು. ಮಿತ್ರವಿರೋಧಿಯನ್ನು ಕಳ್ಳನೆಂದು ಹೇಳುವರು. ಈಗ ನೀನು ನನಗೆ ಮಿತ್ರನಾದೆಯಲ್ಲವೆ? ಈಗ ನನಗೆ ಉಚಿತವಾದ ಬುದ್ಧಿವಾದವನ್ನು ನೀನೇ ಕೊಡು. ನಾನು ನಿನ್ನಿಂದ ಪ್ರಯೋಜನವನ್ನು ಪಡೆದವನು. ನೀನು ನರಭಕ್ಷಕನಾಗಿರುವೆ. ಹೀಗಿರುವಾಗ ನಾನು ತಿರುಗಿ ಬರುವುದು ಉಚಿತವೋ,

ಅನುಚಿತವೋ ನೀನೇ ತಿಳಿಸು' ಎಂದನು. ಆಗ ಸೌದಾಸನು 'ಓ ಬ್ರಾಹ್ಮಣೋತ್ತಮಾ! ಈ ವಿಷಯದಲ್ಲಿ ನೀನು ನನ್ನ ಬಳಿಗೆ ಬಾರದಿರುವುದೇ ಉಚಿತವಾದುದು. ಹೀಗೆ ಮಾಡಿದಾಗಲೇ ನಿನಗೆ ಕ್ಷೇಮವುಂಟೆಂದು ಭಾವಿಸುವೆನು. ನೀನು ಬಂದರೆ ಮೃತನಾಗುವುದರಲ್ಲಿ ಸಂಶಯವಿಲ್ಲ' ಎಂದನು. ಹೀಗೆ ಉಚಿತವೂ, ತನಗೆ ಅನುಕೂಲವೂ ಆದ ಆ ರಾಜನ ವಾಕ್ಯಗಳನ್ನು ಕೇಳಿ, ಉದಂಕನು ರಾಜನ ಅನುಮತಿಯನ್ನು ಪಡೆದು, ಗುರುಪತ್ನಿಗೆ ಆ ಕುಂಡಲಗಳನ್ನು ಕೊಡಲು ಅತಿವೇಗದಿಂದ ಗೌತಮಾಶ್ರಮವನ್ನು ಕುರಿತು ಹೊರಟನು. ಆ ಕುಂಡಲಗಳನ್ನು ರಕ್ಷಿಸುವ ವಿಷಯದಲ್ಲಿ ಯಾವ ಎಚ್ಚರಿಕೆಗಳನ್ನು ತೆಗೆದುಕೊಳ್ಳಬೇಕೆಂದು ಮದಯಂತಿಯು ಹೇಳಿದ್ದಳೋ, ಅದೇ ರೀತಿಯಲ್ಲಿ ಅವುಗಳನ್ನು ಕೃಷ್ಣಾಜಿನದಲ್ಲಿ ಭದ್ರವಾಗಿ ಗಂಟುಕಟ್ಟಿಕೊಂಡು ಹೊರಟನು. ಮಾರ್ಗಮಧ್ಯದಲ್ಲಿ ಆತನಿಗೆ ಬಹಳ ಹಸಿವಾಯಿತು. ಅಲ್ಲಿ ಫಲಭರಿತವಾದ ಒಂದು ಬಿಲ್ವವೃಕ್ಷವನ್ನು ಕಂಡು ಅದನ್ನೇರಿದನು. ಆತನು ಆ ಮರದ ಒಂದು ಕೊಂಬೆಗೆ ತನ್ನ ಕೃಷ್ಣಾಜಿನವನ್ನು ಸಿಕ್ಕಿಸಿ, ಬಿಲ್ವಫಲಗಳನ್ನು ಉದಿರಿಸುತ್ತಿದ್ದನು. ಹೀಗೆ ಆತನು ಬಿಲ್ವಫಲಗಳನ್ನು ಕೆಡಹುವುದರಲ್ಲಿಯೇ ಗಮನವಿಟ್ಟು, ಅವುಗಳನ್ನು ಕಿತ್ತುಹಾಕುತ್ತಿರುವಾಗ, ಅವುಗಳಲ್ಲಿ ಕೆಲವು ಆ ಕೃಷ್ಣಾಜಿನದ ಗಂಟಿನಮೇಲೆ ರಭಸದಿಂದ ಬಿದ್ದುವು. ಅವುಗಳಿಂದ ಗಂಟು ಬಿಚ್ಚಿಹೋಗಿ ಕುಂಡಲಗಳ ಸಮೇತವಾಗಿ ಕೃಷ್ಣಾಜಿನವೂ ಮರದಿಂದ ಕೆಳಕ್ಕೆ ಬಿದ್ದಿತು. ಒಡನೆಯೇ ಐರಾವತಕುಲದಲ್ಲಿ ಹುಟ್ಟಿದ ಸರ್ಪವೊಂದು ಆ ರತ್ನಕುಂಡಲಗಳನ್ನು ಕಂಡಿತು. ಅದು ಆ ಕುಂಡಲಗಳನ್ನು ಬಾಯಲ್ಲಿ ಕಚ್ಚಿಕೊಂಡು ಹುತ್ತದೊಳಕ್ಕೆ ಹೋಯಿತು. ಅದನ್ನು ನೋಡಿ ಉದಂಕನು ಭಯ ದುಃಖಗಳಿಂದ ಮರದಮೇಲಿಂದ ಧುಮಿಕಿದನು. ಮಿತಿಮೀರಿದ ಕೋಪದಿಂದ, ಒಂದು ದೊಡ್ಡ ಕೊಂಬೆಯನ್ನು ಹಿಡಿದು, ರಭಸದಿಂದ ಮೂವತ್ತೈದು ದಿನಗಳವರೆಗೂ ಆ ಹುತ್ತವನ್ನು ಅಗೆಯುತ್ತ ಬಂದನು. ಭೂಮಿಯು ಆ ಕೋಲಿನ ರಭಸದಿಂದ ಬಾಧೆಪಟ್ಟು ನಡುಗುವುದಕ್ಕಾರಂಭಿಸಿತು. ಆಮೇಲೆ ಆತನು ನಾಗಲೋಕಕ್ಕೆ ದಾರಿಯನ್ನು ಮಾಡಬೇಕೆಂದು ತೀರ್ಮಾನಿಸಿ, ಹುತ್ತವನ್ನು ತೋಡುತ್ತಲೇ ಇರುವಾಗ, ಮಹಾತೇಜ

ಸ್ವಿಯಾದ ದೇವೇಂದ್ರನು ವಜ್ರಾಯುಧಧಾರಿಯಾಗಿ, ಹಸಿರುಬಣ್ಣದ ಕುದುರೆಗಳನ್ನು ಕಟ್ಟಿದ ರಥವನ್ನೇರಿಬರುತ್ತ ಆತನನ್ನು ಕಂಡನು. ಒಡನೆಯೇ ಇಂದ್ರನು ಆ ಉದಂಕನ ದುಃಖಕ್ಕಾಗಿ ತಾನೂ ವ್ಯಥೆಪಡುತ್ತ ಬ್ರಾಹ್ಮಣ ವೇಷವನ್ನು ಧರಿಸಿ, 'ಉದಂಕಾ! ಇದು ನಿನ್ನಿಂದ ಸಾಧ್ಯವಿಲ್ಲ. ಇಲ್ಲಿಂದ ನಾಗಲೋಕಕ್ಕೆ ಸಾವಿರಯೋಜನಗಳ ದೂರವಿರುವುದು. ಆದುದರಿಂದ ಈ ಕಾರ್ಯವನ್ನು ನೀನು ಈ ಕೋಲಿನಿಂದ ಸಾಧಿಸಲಾರೆ' ಎಂದನು. ಆದಕ್ಕೆ ಉದಂಕನು 'ಓ ಬ್ರಾಹ್ಮಣೋತ್ತಮಾ! ನಾಗಲೋಕದಲ್ಲಿರುವ ಆ ಕುಂಡಲಗಳನ್ನು ನಾನು ಪಡೆಯಲಾರದೆಹೋದರೆ, ಇಲ್ಲಿ ನೀನು ನೋಡುತ್ತಿರುವಂತೆಯೇ ನನ್ನ ಪ್ರಾಣವನ್ನು ತ್ಯಜಿಸುವೆನು' ಎಂದನು. ಇಂದ್ರನು ಆ ಉದಂಕನ ಹಠವನ್ನು ನಿವೃತ್ತಿಮಾಡಲು ಸಾಧ್ಯವಿಲ್ಲದುದನ್ನು ತಿಳಿದು, ಆ ದಂಡದಲ್ಲಿ ತನ್ನ ವಜ್ರಾಯುಧವನ್ನು ಪ್ರವೇಶಗೊಳಿಸಿದನು. ಭೂಮಿಯು ವಜ್ರಾಯುಧಘಾತದಿಂದ ಬೇಧಿತವಾಗಿ, ನಾಗಲೋಕಕ್ಕೆ ದಾರಿಯನ್ನು ಕೊಟ್ಟಿತು. ಆಗ ಆತನು ಅಲ್ಲಿಂದ ಆ ದಾರಿಯಲ್ಲಿ ಒಂದು ಸಾವಿರ ಯೋಜನಗಳವರೆಗೂ ಪ್ರಯಾಣಮಾಡಿ ನಾಗಲೋಕವನ್ನು ಪ್ರವೇಶಿಸಿದನು. ಅಲ್ಲಿ ಮುತ್ತು ರತ್ನಗಳಿಂದ ಅಲಂಕೃತವೂ, ಸುವರ್ಣರಚಿತವೂ ಆದ ದಿವ್ಯಪ್ರಾಕಾರಸಮೂಹಗಳನ್ನೂ, ಸ್ಫಟಿಕದ ಮೆಟ್ಟಿಲುಗಳಿಂದ ಕೂಡಿದ ಬಾವಿಗಳನ್ನೂ, ನಿರ್ಮಲೋದಕವುಳ್ಳ ನದಿಗಳನ್ನೂ, ನಾನಾಬಗೆಯ ಪಕ್ಷಿಸಮೂಹಗಳಿಂದಕೂಡಿದ ಫಲವೃಕ್ಷಗಳನ್ನೂ ನೋಡಿದನು. ಆಗ ಆತನಿಗೆ ಆ ಲೋಕದ ದ್ವಾರವು ಕಾಣಿಸಿತು. ಆತನು ಐದುಯೋಜನಗಳ ವಿಸ್ತಾರವೂ, ನೂರುಯೋಜನದುದ್ದವೂ ಆದ ನಾಗಲೋಕವನ್ನು ನೋಡಿ ಮನಸ್ಸಮಾಧಾನಪಡೆದು, ಕುಂಡಲಗಳನ್ನು ತರುವ ಕುತೂಹಲದಲ್ಲಿದ್ದನು. ಅಲ್ಲಿ ಕಪ್ಪು, ಬಿಳುಪು ಬಣ್ಣಗಳಿಂದ ಕೂಡಿ, ಬಾಲವು ಕೆಂಪಾಗಿ, ಮುಖ ಮತ್ತು ಕಣ್ಣುಗಳಿಂದಕೂಡಿ, ತೇಜಸ್ಸಿನಿಂದ ಜ್ವಲಿಸುತ್ತಿರುವ ಕುದುರೆಯೊಂದು ಆತನನ್ನು ಕುರಿತು 'ಓ ಬ್ರಾಹ್ಮಣಾ! ನೀನು ನನ್ನ ಈ ಅಪಾನದಲ್ಲಿ ಊದು. ಅದರಿಂದ ಐರಾವತಪುತ್ರನು ಇಲ್ಲಿಗೆ ತಂದಿರುವ ಕುಂಡಲಗಳನ್ನು ಪಡೆಯುವೆ. ನೀನು ಸ್ವಲ್ಪವೂ ವ್ಯಾಕುಲಪಡಬೇಡ. ನೀನು ಈ ಕಾರ್ಯವನ್ನು ಹಿಂದೆ ಗೌತಮರ ಆಶ್ರಮದಲ್ಲಿರುವಾಗಲೇ

ಅನುಷ್ಠಿಸಿರುವೆ. ಬ್ರಾಹ್ಮಣಾ! ನಾನೇ ನಿನ್ನ ಗುರುವಿಗೂ ಗುರುವಾಗಿರುವ ಅಗ್ನಿಯೆಂದು ತಿಳಿ. ನೀನು ಯಾವಾಗಲೂ ಶುದ್ಧನಾಗಿ, ಗುರುವಿಗಾಗಿ ನನ್ನನ್ನು ವಿಧ್ಯುಕ್ತರೀತಿಯಲ್ಲಿ ಪೂಜಿಸಿರುವೆ. ಆದುದರಿಂದ ನಾನು ಹೇಳಿದಂತೆ ಕೇಳು. ನಿನಗೆ ಕ್ಷೇಮವನ್ನುಂಟುಮಾಡುವೆನು. ವಿಳಂಬವು ಬೇಡ' ಎಂದಿತು. ಆಮೇಲೆ ಉದಂಕನು ಹಾಗೆಯೇ ಮಾಡಿದನು. ಅಗ್ನಿಯು ಸಂತೋಷಗೊಂಡು ನಾಗಲೋಕವನ್ನು ದಹಿಸಿಬಿಡುವಂತೆ ಜ್ವಲಿಸಿತು. ಹಾಗೆ ಊದಿದೊಡನೆ ಆ ಕುದುರೆಯ ರೋಮಕೂಪಗಳಿಂದ ನಾಗಲೋಕವನ್ನೇ ತತ್ತರಗೊಳಿಸುವಂತೆ ಹೊಗೆಯು ಹೊರಟಿತು. ಮೇಲೆ ಮೇಲೆ ಹೆಚ್ಚುತ್ತಿರುವ ಆ ಹೊಗೆಯಿಂದ ನಾಗಲೋಕದಲ್ಲಿ ಒಂದೂ ಕಾಣದಂತಾಯಿತು. ಐರಾವತ, ವಾಸುಕಿ, ಮುಂತಾದ ನಾಗರ ಗೃಹಗಳೆಲ್ಲವೂ ಹಾಹಾಕಾರಗಳಿಂದ ತುಂಬಿದುವು. ಮನೆಗಳೆಲ್ಲ ಹೊಗೆಯಿಂದ ಮುಚ್ಚಿಹೋಗಿ ಮಂಜಿನಿಂದ ಮುಚ್ಚಲ್ಪಟ್ಟ ಬೆಟ್ಟಗಳಂತೆ ಅಸ್ಪಷ್ಟವಾಗಿ ಕಾಣುತ್ತಿದ್ದುವು. ಹೊಗೆಯಿಂದ ಕಣ್ಣುಗಳು ಕೆಂಪಾಗಿ, ಆ ಅಗ್ನಿತೇಜಸ್ಸಿನಿಂದ ಮಹಾತಾಪಕ್ಕೆ ಗುರಿಯಾದ ನಾಗರೆಲ್ಲರೂ ಬಂದು, ಮಹಾತೇಜಸ್ವಿಯಾದ ಆ ಉದಂಕನ ಮಹಿಮೆಯನ್ನು ಕೇಳಿ ವಿಧ್ಯುಕ್ತರೀತಿಯಲ್ಲ ಆತನನ್ನು ಪೂಜಿಸಿದರು. ಆಬಾಲವೃದ್ಧರು ಮೊದಲಾಗಿ ಎಲ್ಲಾ ನಾಗರೂ ತಲೆಬಾಗಿ ನಮಸ್ಕರಿಸುತ್ತ 'ಓ ಭಗವಂತಾ! ಕೃಪೆಯಿಡು' ಎಂದು ಆ ಬ್ರಾಹ್ಮಣನನ್ನು ಬೇಡಿದರು. ಅತನ ಮನಸ್ಸಂತೋಷಪಡಿಸಲು ಅರ್ಘ್ಯಪಾದ್ಯಾದಿಗಳನ್ನು ಅರ್ಪಿಸಿ, ಆತನಿಗೆ ಆ ದಿವ್ಯರತ್ನಕುಂಡಲಗಳನ್ನು ಕೊಟ್ಟರು. ಆಮೇಲೆ ಉದಂಕನು ಅಗ್ನಿಪ್ರದಕ್ಷಿಣೆಮಾಡಿ ಗುರುವಿನ ಮನೆಗೆ ಹೊರಟು, ತ್ವರೆಯಿಂದ ಗುರುಗೃಹವನ್ನು ಪ್ರವೇಶಿಸಿ, ದಿವ್ಯವಾದ ಆ ರತ್ನಕುಂಡಲಗಳನ್ನು ಗುರುಪತ್ನಿಗೆ ಕೊಟ್ಟು, ನಾಗರ ವೃತ್ತಾಂತವೆಲ್ಲವನ್ನೂ ತಿಳಿಸಿದನು. ಓ ಜನಮೇಜಯರಾಜಾ! ಹೀಗೆ ಮಹಾತ್ಮನಾದ ಆ ಉದಂಕನು ಮೂರು ಲೋಕಗಳಲ್ಲಿಯೂ ಸಂಚರಿಸಿ, ಆ ರತ್ನಕುಂಡಲಗಳನ್ನು ತಂದನು. ಇದೇ ಆ ಉದಂಕಮಹಾಮುನಿಯ ಮಹಿಮೆ! ಇದೇ ಅವನ ತಪೋಬಲವು!' ಎಂದನು.

ಇದು ಐವತ್ತೆಂಟನೆಯ ಅಧ್ಯಾಯವು.

( ಕೃಷ್ಣನು ಉದಂಕನಿಗೆ ವರವನ್ನು ಕೊಟ್ಟು, ರೈವತಕ ಪರ್ವತಕ್ಕೆ ಬಂದುದು. ಅಲ್ಲಿ ತನ್ನ ಮಾತಾಪಿತೃಗಳನ್ನು ನಮಸ್ಕರಿಸಿದುದು. )

ಜನಮೇಜಯನು "ಓ ಬ್ರಾಹ್ಮಣೋತ್ತಮಾ! ಕೃಷ್ಣನು ಉದಂಕನಿಗೆ ವರವನ್ನು ಕೊಟ್ಟಮೇಲೆ ಏನು ಮಾಡಿದನು?" ಎಂದು ಕೇಳಲು, ವೈಶಂಪಾಯನನು "ಉದಂಕನಿಗೆ ವರವನ್ನು ಕೊಟ್ಟಮೇಲೆ ಕೃಷ್ಣನು, ಸಾತ್ಯಕಿಯೊಡನೆ ವೇಗವುಳ್ಳ ಕುದುರೆಗಳನ್ನೇರಿ ದ್ವಾರಕೆಗೆ ಪ್ರಯಾಣ ಹೊರಟು, ದಾರಿಯಲ್ಲಿ ತಟಾಕಗಳನ್ನೂ, ನದಿಗಳನ್ನೂ, ವನಗಳನ್ನೂ, ಬೆಟ್ಟಗಳನ್ನೂ ದಾಟಿ, ರಮ್ಯವಾದ ದ್ವಾರಕಾನಗರ ಸಮೀಪಕ್ಕೆ ಬಂದನು. ಇಷ್ಟರಲ್ಲಿ ರೈವತಕಪರ್ವತದಲ್ಲಿ ನಡೆಯುವ ಉತ್ಸವಕ್ಕಾಗಿ ಸಾತ್ಯಕಿಯೊಡನೆ ಅಲ್ಲಿಗೆ ಹೊರಟನು. ಆಗ ಆ ಪರ್ವತದ ಅಲಂಕಾರವನ್ನು ಕೇಳಬೇಕೆ? ನಾನಾಬಗೆಯ ಆಕೃತಿಗಳಿಂದ ಚಿತ್ರಿಸಲ್ಪಟ್ಟ ರತ್ನದ ಕಂಬಳಿಗಳಿಂದ ಹೊದಿಸಲ್ಪಟ್ಟಿರುವುದು. ಅಲ್ಲಲ್ಲಿ ಸುವರ್ಣಹಾರಗಳು, ಪುಷ್ಪಮಾಲಿಕೆಗಳು, ವಿಚಿತ್ರವಸ್ತ್ರಗಳು, ಸುವರ್ಣಮಯವಾಗಿರುವ ವೃಕ್ಷಾಕಾರವಾದ ದೀಪಗಳು, ಕಲ್ಪವೃಕ್ಷಗಳು, ಇವುಗಳಿಂದ ಶೋಭಿತವಾಗಿ, ಅಲ್ಲಿನ ಗಿರಿ ನದೀತೀರಸ್ಥಳಗಳೂ, ಗುಹೆಗಳೂ ಹಗಲಿನಂತೆ ಕಾಂತಿಯುಕ್ತವಾಗಿರುವುವು. ಎಲ್ಲಾ ಕಡೆಗಳಲ್ಲಿಯೂ ವಿಚಿತ್ರವೂ, ಮಣಿಮಯವೂ ಆದ ಪತಾಕೆಗಳು ಘಂಟಾಧ್ವನಿಗಳೊಡನೆ ಆಡುತ್ತಿರುವುವು. ಅನೇಕಸ್ತ್ರೀಪುರುಷರ ಗಾನಕೋಲಾಹಲಗಳಿಂದ ಕೇವಲಶಬ್ದಮಯವಾಗಿ, ಮುನಿಗಣಗಳಿಂದ ಕೂಡಿದ ಮೇರುಪರ್ವತದಂತೆ ನೋಟಕ್ಕೆ ರಮ್ಯವಾಗಿರುವುದು. ಸಂತೋಷಯುಕ್ತರಾದ ಸ್ತ್ರೀಪುರುಷರ ಗಾನಧ್ವನಿಯು ಸ್ವರ್ಗವನ್ನು ಮುಟ್ಟುವಂತಿರುವುದು. ಕ್ರೀಡೋತ್ಸಾಹದಿಂದಲೂ, ಮದ್ಯಪಾನದಿಂದಲೂ ಮೇಲೆಮೇಲೆ ಮದವೇರಿ ಕೂಗುತ್ತಿರುವ ಜನರ ಗರ್ಜನೆಯಿಂದಲೂ, ಕಲಕಲಧ್ವನಿಯಿಂದಲೂಕೂಡಿದ ಆ ಪರ್ವತವು ಚಿತ್ತಾಕರ್ಷಕವಾಗಿದ್ದಿತು. ಆಗ ಆ ಬೆಟ್ಟದಮೇಲೆ ಎಲ್ಲೆಲ್ಲಿಯೂ ಅಂಗಡಿಗಳು! ಅಂಗಡಿಬೀದಿಗಳು! ಎಲ್ಲೆಲ್ಲಿಯೂ ಭಕ್ಷ್ಯಭೋಜ್ಯಗಳು! ಎಲ್ಲೆಲ್ಲಿಯೂ ವಿಹಾರಸ್ಥಳಗಳು! ವಸ್ತ್ರಮಾಲೆಗಳು! ಪುಷ್ಪಹಾರಗಳು! ವೀಣೆ, ಮೃದಂಗ, ಕೊಳಲು, ಇವುಗಳಧ್ವನಿಗಳು.

ಎಲ್ಲರನ್ನೂ ಮರುಳುಗೊಳಿಸುವಂತಿದ್ದಿತು. ಅಲ್ಲಲ್ಲಿ ದೀನರಿಗೂ, ಕುರುಡರಿಗೂ, ದರಿದ್ರರಿಗೂ ಮದ್ಯ ಮತ್ತು ಸಾರಾಯಿಗಳನ್ನು ಕಲೆಸಿದ ಭಕ್ಷ್ಯಭೋಜ್ಯಗಳನ್ನು ಕೊಡುತ್ತಿರುವರು. ಹೀಗೆ ಆ ಪರ್ವತದಮೇಲೆ ನಡೆಯುತ್ತಿದ್ದ ಉತ್ಸವವು ದೊಡ್ಡ ವಿವಾಹಮಹೋತ್ಸವದಂತಿದ್ದಿತು. ಅಲ್ಲಲ್ಲಿ ಭಾಗ್ಯವಂತರ ದಿವ್ಯಭವನಗಳು, ವೃಷ್ಣಿವೀರರ ವಿಹಾರಸ್ಥಾನಗಳು, ವಾಸಗೃಹಗಳು, ಕೃಷ್ಣಸಾನ್ನಿಧ್ಯವನ್ನು ಕೇಳಿ ಸಂತೋಷದಿಂದ ಬಂದು ನೆರೆದ ದೇವಗಣಗಳು, ಇವುಗಳಿಂದ ಕೂಡಿದ ಆ ಪರ್ವತವು ದೇವಲೋಕಸದೃಶವಾಗಿದ್ದಿತು. ಆಗ ದೇವ ಗಂಧರ್ವ ಋಷಿಗಳೆಲ್ಲರೂ ಮರೆಯಲ್ಲಿ ನಿಂತು ಕೃಷ್ಣನನ್ನು ಕುರಿತು 'ಓ ದೇವಾ! ಎಲ್ಲಾ ಧರ್ಮಗಳನ್ನೂ ಸಫಲಗೊಳಿಸತಕ್ಕವನೂ ಅಸುರಸಂಹಾರಕನೂ, ಸೃಷ್ಟಿಕರ್ತನೂ, ಸೃಷ್ಟಿಸಲ್ಪಡುವ ವಸ್ತುಗಳೂ, ಅವಕ್ಕೆಲ್ಲ ಆಧಾರನೂ, ಕಾರಣನೂ, ನೀನೇ. ಧರ್ಮಗಳನ್ನೂ, ವೇದಗಳನ್ನೂ ಚೆನ್ನಾಗಿ ಅರಿತವನೂ ನೀನೊಬ್ಬನೇ! ನಿನ್ನ ಮಾಯೆಯಲ್ಲಿರುವ ನಾವೊಂದನ್ನೂ ತಿಳಿಯಲಾರೆವು. ನೀನೇ ರಕ್ಷಕನೆಂದೂ, ಪರಮೇಶ್ವರನೆಂದೂಮಾತ್ರ ತಿಳಿದಿರುವೆವು. ನಿನ್ನ ಸಾನ್ನಿಧ್ಯವೇ ಬ್ರಹ್ಮಾದಿಗಳಿಗೂ ರಕ್ಷಕವು. ನಿನಗೆ ನಮಸ್ಕಾರವು' ಎಂದು ಸ್ತೋತ್ರಮಾಡಿದರು. ಹೀಗೆ ದೇವಮಾನವರೆಲ್ಲರೂ ದೇವಕೀಪುತ್ರನಾದ ಕೃಷ್ಣನನ್ನು ಸ್ತುತಿಸಿ ಪೂಜಿಸುತ್ತಿರಲು ಆ ದಿವ್ಯಪರ್ವತವು ಇಂದ್ರಗೃಹದಂತೆ ಶೋಭಿಸುತ್ತಿದ್ದಿತು. ಆ ಪೂಜೆಗಳನ್ನು ಸ್ವೀಕರಿಸಿದಮೇಲೆ ಕೃಷ್ಣನೂ, ಸಾತ್ಯಕಿಯೂ, ಮಂಗಳಕರವಾದ ತಮ್ಮ ವಾಸಗೃಹಕ್ಕೆ ಹೊರಟರು. ಕೃಷ್ಣನು ಬಹಳ ದಿನಗಳವರೆಗೆ ತನ್ನ ಊರನ್ನು ಬಿಟ್ಟುಹೋಗಿದ್ದು, ಇಂದ್ರನು ದಾನವರ ವಿಷಯದಲ್ಲಿ ಹೇಗೋ ಹಾಗೆ ಅಮಾನುಷಕಾರ್ಯಗಳನ್ನು ಮಾಡಿ ಹಿಂತಿರುಗಿ ಬಂದಾಗ, ಆ ಮಹಾತ್ಮನನ್ನು ಭೋಜರು, ವೃಷ್ಣಿಗಳು, ಅಂಧಕರು, ದೇವತೆಗಳು, ಇಂದ್ರನನ್ನು ಇದಿರುಗೊಳ್ಳುವಂತೆ ಇದಿರುಗೊಂಡು ಬಂದರು. ಆತನು ಅವರೆಲ್ಲರನ್ನೂ ಪೂಜಿಸಿ ಕುಶಲಪ್ರಶ್ನೆಗಳನ್ನು ಮಾಡಿ ಸಂತೋಷದಿಂದ ತಂದೆತಾಯಿಗಳಿಗೆ ನಮಸ್ಕರಿಸಿದನು. ಒಡನೆಯೇ ತಾಯಿತಂದೆಗಳಿಬ್ಬರೂ ಹರ್ಷದಿಂದ ಆತನನ್ನು ಆಲಿಂಗಿಸಿಕೊಂಡು ಆನಂದವಾಕ್ಯಗಳನ್ನಾಡಿದರು. ಆಗ ವೃಷ್ಣಿಗಳೆಲ್ಲರೂ

ಆ ಕೃಷ್ಣನನ್ನು ಸುತ್ತಿ ಕುಳಿತರು. ಕೃಷ್ಣನು ತನ್ನ ಪಾದಗಳನ್ನು ತೊಳೆದು ಶುದ್ಧಿಮಾಡಿಕೊಂಡು ಸಂತೋಷದಿಂದ ತನ್ನ ತಂದೆಗೆ ಆಗಿನ ಮಹಾಯುದ್ಧವೆಲ್ಲವನ್ನೂ ವಿವರಿಸತೊಡಗಿದನು.

ಇದು ಐವತ್ತೊಂಭತ್ತನೆಯ ಅಧ್ಯಾಯವು.

{ ಕೃಷ್ಣನು ಕೌರವ ಪಾಂಡವಯುದ್ಧವನ್ನು ವಸುದೇವಾದಿಗಳಿಗೆ ತಿಳಸಿದುದು. }

ವಸುದೇವನು 'ಓ ಪುತ್ರಾ! ಪ್ರತಿದಿನವೂ ಜನಗಳು ಪ್ರಸ್ತಾವವಶದಿಂದ ಅದ್ಭುತವಾದ ಯುದ್ಧವೃತ್ತಾಂತವನ್ನು ಆಗಾಗ ಹೇಳುತ್ತಿದ್ದುದನ್ನು ಸ್ವಲ್ಪವಾಗಿ ಕೇಳಿರುವೆನು. ಓ ಮಹಾಬಾಹೂ! ನೀನಾದರೋ ಆ ಯುದ್ಧವನ್ನು ಪ್ರತ್ಯಕ್ಷದಲ್ಲಿ ನೋಡಿದವನು. ಕಾರ್ಯದಕ್ಷನು! ಆದುದರಿಂದ ಆ ಯುದ್ಧವನ್ನು ನಡೆದ ರೀತಿಯಲ್ಲಿ ಚೆನ್ನಾಗಿ ವಿವರಿಸು. ಮಹಾತ್ಮರಾದ ಪಾಂಡವರಿಗೂ, ಅಸ್ತ್ರವಿದ್ಯಾನಿಪುಣರೆನಿಸಿ ವಿವಿಧವೇಷಭೂಷಣಗಳಿಂದೊಪ್ಪುವ ಹಲವು ದೇಶಗಳ ಬೇರೆಬೇರೆ ರಾಜರಿಗೂ, ಭೀಷ್ಮನು, ಕರ್ಣನು, ಕೃಪನು, ದ್ರೋಣನು, ಶಲ್ಯನು, ಮೊದಲಾದವರೊಡನೆ ನಡೆದ ಆ ಘೋರಯುದ್ಧದ ರೀತಿಯನ್ನು ವಿವರಿಸು' ಎಂದನು. ತಂದೆಯ ಆಜ್ಞೆಯಂತೆ ಪುಂಡರೀಕಾಕ್ಷನು ಯುದ್ಧದಲ್ಲಿ ಕೌರವವೀರರಿಗುಂಟಾದ ನಾಶವನ್ನುಕುರಿತು ಹೀಗೆಂದು ವಿವರಿಸತೊಡಗಿದನು.

'ಅಪ್ಪಾ! ಮಹಾತ್ಮರಾದ ಆ ಕ್ಷತ್ರಿಯರ ಆಶ್ಚರ್ಯಕರವಾದ ಸಾಹಸಕಾರ್ಯಗಳು ಅಪಾರವಾಗಿರುವುದರಿಂದ, ಅವುಗಳನ್ನು ನೂರುವರ್ಷಗಳ ಕಾಲದಲ್ಲಿಯೂ ಹೇಳಿ ಮುಗಿಸಲು ಸಾಧ್ಯವಿಲ್ಲ. ಆ ಕ್ಷತ್ರಿಯೋತ್ತಮರ ಸಾಹಸಕಾರ್ಯಗಳನ್ನು ಯಥಾವತ್ತಾಗಿ ಸಂಗ್ರಹಿಸಿ ಹೇಳುವೆನು ಕೇಳು. ಹಿಂದೆ ಕುಮಾರಸ್ವಾಮಿಯು ದೇವಸೈನ್ಯಕ್ಕೆ ಹೇಗೋ ಹಾಗೆ, ಕುರುಕುಲಶ್ರೇಷ್ಠನಾದ ಭೀಷ್ಮನು ಕೌರವರ ಹನ್ನೊಂದಕ್ಷೋಹಿಣೀಸೈನ್ಯಕ್ಕೂ ಮುಖ್ಯಸೈನ್ಯಾಧಿಪತಿಯಾಗಿದ್ದನು. ಶಿಖಂಡಿಯು ಅರ್ಜುನನಿಂದ

ರಕ್ಷಿತನಾಗಿ ಪಾಂಡವರ ಏಳು ಅಕ್ಷೌಹಿಣೀಸೈನ್ಯಗಳಿಗೂ ಮುಖ್ಯಸೈನ್ಯಾಧಿಪತಿಯಾಗಿದ್ದನು. ಮಹಾತ್ಮರಾದ ಆ ಕೌರವರಿಗೂ, ಪಾಂಡವರಿಗೂ ಹತ್ತುದಿನಗಳವರೆಗೂ ರೋಮಾಂಚವನ್ನೆಬ್ಬಿಸುವಂತೆ ಘೋರಯುದ್ಧವು ನಡೆಯಿತು. ಶಿಖಂಡಿಯು ಅರ್ಜುನನೊಡನೆ ಸೇರಿ, ತನ್ನೊಡನೆ ಯುದ್ಧಮಾಡಲು ಇಷ್ಟವಿಲ್ಲದೆ ಸುಮ್ಮನಿದ್ದ ಆ ಭೀಷ್ಮನನ್ನು ಅನೇಕಬಾಣಗಳಿಂದ ಹೊಡೆದನು. ಆಮೇಲೆ ಆ ಭೀಷ್ಮನು ಧ್ಯಾನವಶನಾಗಿ ಶರತಲ್ಪವನ್ನು ಸೇರಿ, ದಕ್ಷಿಣಾಯನವು ಕಳೆದು ಉತ್ತರಾಯಣವು ಬಂದಮೇಲೆ (ಪರಲೋಕಕ್ಕೆ ಹೋಗುವಂತೆ) ಕಾಲಾವಧಿಯನ್ನು ಏರ್ಪಡಿಸಿಕೊಂಡನು. ಶುಕ್ರನು ದಾನವರಾಜನ ಮಂತ್ರಿಯಾದಂತೆ ಅಸ್ತ್ರವಿದನೂ, ಮಹಾಶೂರನೂ ಆದ ದ್ರೋಣನು ಆಮೇಲೆ ಕೌರವರಾಜನಿಗೆ ಸೈನ್ಯಾಧಿಪತಿಯಾದನು. ಆತನು ಆಗ ಕೌರವರಲ್ಲಿ ಉಳಿದಿದ್ದ ಒಂಭತ್ತು ಅಕ್ಷೌಹಿಣೀಸೈನ್ಯಗಳಿಂದ ಪರಿವೃತನಾಗಿ, ಕೃಪಾಶ್ವತ್ಥಾಮರ ಬೆಂಬಲದಿಂದ ಯುದ್ಧೋದ್ಯತನಾದನು. ಆಗ ಇತ್ತಲಾಗಿ ಅಸ್ತ್ರವಿದ್ಯಾನಿಪುಣನಾದ ಧೃಷ್ಟದ್ಯುಮ್ನನು ಮಿತ್ರನಿಂದ ವರುಣನು ಹೇಗೋ ಹಾಗೆ, ಭೀಮನಿಂದ ರಕ್ಷಿತನಾಗಿ ಪಾಂಡವಸೈನ್ಯಾಧಿಪತಿಯಾಗಿದ್ದನು. ದ್ರೋಣನು ತನ್ನ ತಂದೆಗೆ ಮಾಡಿದ ಅವಮಾನವನ್ನು ನೆನೆಸಿಕೊಂಡು, ಆತನು ದ್ರೋಣನನ್ನು ಹಿಡಿಯಬೇಕೆಂಬ ಅಪೇಕ್ಷೆಯಿಂದ ಆ ಯುದ್ಧದಲ್ಲಿ ಮಹಾಸಾಹಸಕಾರ್ಯಗಳನ್ನು ಮಾಡಿದನು. ದ್ರೋಣನಿಗೂ, ಧೃಷ್ಟದ್ಯುಮ್ನನಿಗೂ ನಡೆದ ಆ ಯುದ್ಧದಲ್ಲಿ, ನಾನಾದಿಕ್ಕುಗಳಿಂದ ಬಂದಿದ್ದ ಕ್ಷತ್ರಿಯವೀರರನೇಕರು ಮೃತಪಟ್ಟರು. ಮಹಾಭಯಂಕರವಾದ ಆ ಯುದ್ಧವು ಐದುದಿನಗಳವರೆಗೂ ನಡೆಯಿತು. ಕಡೆಗೆ ದ್ರೋಣನೂ ಸೋತು ಧೃಷ್ಟದ್ಯುಮ್ನನಿಗೆ ವಶನಾದನು. ಆಮೇಲೆ ದುರ್ಯೋಧನನ ಸೈನ್ಯದಲ್ಲಿ ಮಿಕ್ಕಿದ್ದ ಐದು ಅಕ್ಷೌಹಿಣೀಸೈನ್ಯಗಳಿಗೆ ಕರ್ಣನು ಸೈನ್ಯಾಧಿಪತಿಯಾದನು. ಪಾಂಡವರ ಕಡೆಯಲ್ಲಿ ಮಹಾವೀರರೆಲ್ಲ ಹತರಾಗಿ, ಉಳಿದ ಮೂರು ಅಕ್ಷೌಹಿಣೀಸೈನ್ಯಗಳು ಅರ್ಜುನನಿಂದ ರಕ್ಷಿತವಾಗಿದ್ದಿತು. ಎರಡನೆಯ ದಿನದಲ್ಲಿ ಕ್ರೂರನಾದ ಕರ್ಣನು, ಪತಂಗವು ದೀಪಕ್ಕೆದಿರಾಗಿ ಹೋಗುವಂತೆ ಅರ್ಜುನನನ್ನಿದಿರಿಸಿ ಮೃತನಾದನು. ಕರ್ಣನು ಮೃತನಾದೊಡನೆಯೇ, ಕೌರ

ವರು ಉತ್ಸಾಹಪರಾಕ್ರಮಶೂನ್ಯರಾಗಿ, ತಮ್ಮ ಕಡೆಯಲ್ಲಿ ಉಳಿದ ಮೂರು ಅಕ್ಷೌಹಿಣೀಸೈನ್ಯಗಳೊಡನೆ ಶಲ್ಯನ ಅಧೀನದಲ್ಲಿ ನಿಂತರು. ಇತ್ತಲಾಗಿ ಅನೇಕ ವಾಹನಗಳನ್ನು ಕಳೆದುಕೊಂಡರೂ ಪಾಂಡವರು, ಉತ್ಸಾಹಯುಕ್ತರಾಗಿ, ತಮ್ಮ ಒಂದೇ ಅಕ್ಷೌಹಿಣೀಸೇನಾಸಂಖ್ಯೆಯೊಡನೆ ಯುಧಿಷ್ಠಿರನ ಹಿಂದೆ ನಿಂತರು. ಆಗ ಧರ್ಮರಾಜನು ಮಹಾಸಾಹಸಕಾರ್ಯಗಳನ್ನು ಮಾಡಿ, ಆದಿನ ಮಧ್ಯಾಹ್ನವೇ ಮದ್ರರಾಜನಾದ ಶಲ್ಯನನ್ನು ಕೊಂದನು. ಶಲ್ಯನು ಹತನಾದಮೇಲೆ ಗಂಭೀರಪರಾಕ್ರಮವುಳ್ಳ ಸಹದೇವನು ಆ ಯುದ್ಧಕ್ಕೆಲ್ಲಕ್ಕೂ ಮೂಲಕಾರಣನಾದ ಶಕುನಿಯನ್ನು ಕೊಂದನು. ಆ ಶಕುನಿಯು ಸತ್ತಮೇಲೆ ದುರ್ಯೋಧನನು ತನ್ನ ಕಡೆಯ ವೀರರೆಲ್ಲರೂ ಹತರಾದುದಕ್ಕಾಗಿ ವ್ಯಸನಪಡುತ್ತ, ತಾನೇ ಗದೆಯನ್ನು ಕೈಯಲ್ಲಿ ಹಿಡಿದು ಓಡಿದನು. ಭೀಮನು ಮಹಾಕೋಪದಿಂದ ಆತನನ್ನು ಹಿಂಬಾಲಿಸಿ ಹೋಗಿ, ದ್ವೈಪಾಯನವೆಂಬ ಮಡುವಿನಲ್ಲಿ ಆತನು ನೀರಿನೊಳಗೆ ಮರೆಸಿಕೊಂಡಿರುವುದನ್ನು ತಿಳಿದನು. ಆಮೇಲೆ ಮೃತರಾದವರನ್ನು ಬಿಟ್ಟು ಉಳಿದ ಸೈನಿಕರೊಡನೆ ಪಂಚಪಾಂಡವರು ಮಡುವಿನಲ್ಲಿ ಅವಿತುಕೊಂಡಿದ್ದ ಆ ದುರ್ಯೋಧನನನ್ನು ಯಾವ ಕಡೆಗಳಲ್ಲಿಯೂ ಬಿಡದಂತೆ ಸುತ್ತಿ ಕುಳಿತರು. ನೀರಿನಲ್ಲಿ ಅವಿತುಕೊಂಡಿದ್ದ ದುರ್ಯೋಧನನು ಪಾಂಡವರ ವಾಗ್ಬಾಣಗಳಿಂದ ಬಾಧಿತನಾಗಿ, ತ್ವರೆಯಿಂದ ಗದಾಯುಧವನ್ನು ಕೈಯಲ್ಲಿ ಹಿಡಿದು ಮೇಲಕ್ಕೆದ್ದು ಬಂದು ಯುದ್ಧಕ್ಕೆ ನಿಂತನು. ಆಗ ದುರ್ಯೋಧನನು ಭೀಮಸೇನನೊಡನೆ ಪರಾಕ್ರಮದಿಂದ ಯುದ್ಧಮಾಡಿ, ಕಡೆಗೆ ಎಲ್ಲರೂ ನೋಡುತ್ತಿರುವಂತೆಯೇ ಭೀಮನಿಂದ ಕೊಲ್ಲಲ್ಪಟ್ಟನು. ಆಮೇಲೆ ಅಶ್ವತ್ಥಾಮನು ತನ್ನ ತಂದೆಯ ವಧೆಯನ್ನು ಸಹಿಸಲಾರದೆ, ರಾತ್ರಿ ಬಿಡಾರದಲ್ಲಿ ಗಾಢನಿದ್ರೆಯಲ್ಲಿದ್ದ ಪಾಂಡವಸೈನಿಕರನ್ನೆಲ್ಲ ಕೊಂದುಬಿಟ್ಟನು. ಪಾಂಡವರ ಕಡೆಯಲ್ಲಿ ಅವರ ಪುತ್ರ ಮಿತ್ರ ಸೈನಿಕರೆಲ್ಲರೂ ಹತರಾದರು. ಪಂಚಪಾಂಡವರೂ, ನಾನೂ, ಸಾತ್ಯಕಿಯೂಮಾತ್ರ ಉಳಿದೆವು. ಕೌರವರ ಕಡೆಯಲ್ಲಿ ಕೃಪ, ಕೃತವರ್ಮ, ಅಶ್ವತ್ಥಾಮರು ಮಾತ್ರ ಉಳಿದರು. ಧೃತರಾಷ್ಟ್ರಪುತ್ರರಲ್ಲಿ ಯುಯುತ್ಸುವೊಬ್ಬನುಮಾತ್ರ ಪಾಂಡವರನ್ನು ಆಶ್ರಯಿಸಿದುದರಿಂದ ಬದುಕಿಬಂದನು.

ದುರ್ಯೋಧನನು ಕೊಲ್ಲಲ್ಪಟ್ಟ ಕೂಡಲೆ, ವಿದುರನೂ, ಸಂಜಯನೂ ಧರ್ಮರಾಜನ ಬಳಿಗೆ ಬಂದರು. ಹೀಗೆ ಆ ಘೋರಯುದ್ಧವು ಹದಿನೆಂಟು ದಿನಗಳವರೆಗೂ ನಡೆಯಿತು. ಆ ಯುದ್ಧದಲ್ಲಿ ಕೊಲ್ಲಲ್ಪಟ್ಟ ಅರಸರೆಲ್ಲರೂ ಸ್ವರ್ಗಸ್ಥರಾದರು' ಎಂದನು. ಜನಮೇಜಯರಾಜಾ! ರೋಮಾಂಚವನ್ನೆಬ್ಬಿಸುವ ಆ ಮಹಾಯುದ್ಧವಿಚಾರವನ್ನು ಕೇಳಿದೊಡನೆ ಆ ವೃಷ್ಣಿಗಳಿಗೆ ದುಃಖವೂ, ಶೋಕವೂ, ವ್ಯಾಕುಲವೂ ಉಂಟಾಯಿತು.

ಇದು ಅರುವತ್ತನೆಯ ಅಧ್ಯಾಯವು.

---

{ ಕೃಷ್ಣನು ಸಭೆಯಲ್ಲಿ ವಸುದೇವನಿಗೆ, ಯುದ್ಧದಲ್ಲಿ ನಡೆದ ಅಭಿಮನ್ಯುವಧೆಯನ್ನು ಹೇಳದೆ ಮುಚ್ಚಿಡಲು, ಸುಭದ್ರೆಯ ಸೂಚನೆಯಿಂದ ವಸುದೇವನು ಅದನ್ನು ತಿಳಿದು ಮೂರ್ಛಿತನಾದುದು. ಕೃಷ್ಣನು ವಸುದೇವನನ್ನು ಸಮಾಧಾನಪಡಿಸಿದುದು. }

ಓ ಜನಮೇಜಯರಾಜಾ! ಕೇಳು! ಕೃಷ್ಣನು ವಸುದೇವನಿಗೆ ಭಾರತಯುದ್ಧದ ಕಥೆಗಳನ್ನೆಲ್ಲ ಹೇಳುತ್ತಬರುವಾಗ, ವಸುದೇವನ ಮನಸ್ಸಿಗೆ ಸಂಕಟವಾಗಬಾರದೆಂದು ಅಭಿಮನ್ಯುವಧೆಯ ವೃತ್ತಾಂತವನ್ನು ಮಾತ್ರ ಅವನಿಗೆ ತಿಳಿಸದೆ ಕಥೆಯನ್ನು ಮುಂದುವರಿಸಿದನು. ದೌಹಿತ್ರನ ವಧವೃತ್ತಾಂತವನ್ನು ಕೇಳಿದರೆ ವಸುದೇವನು ಪ್ರಜ್ಞೆತಪ್ಪಿ ಬೀಳಬಹುದೆಂಬ ಭಯದಿಂದ, ಕೃಷ್ಣನು ಆ ಅಭಿಮನ್ಯುವಿನ ಅಸಾಧ್ಯಪರಾಕ್ರಮವನ್ನಾಗಲಿ, ಅವನ ಮರಣವನ್ನಾಗಲಿ ತಿಳಿಸದೆ ಮುಂದಿನ ಕಥೆಯನ್ನು ಹೇಳುತ್ತಿದ್ದನು. ಆಗ ಸಮೀಪದಲ್ಲಿದ್ದ ಸುಭದ್ರೆಯು, ನಡುವೆ ಬಿಟ್ಟುಹೋದ ತನ್ನ ಮಗನ ವಧವೃತ್ತಾಂತವನ್ನು ಕೃಷ್ಣನ ನೆನಪಿಗೆ ತರಬೇಕೆಂದು ಯೋಚಿಸಿ, ವ್ಯಸನದಿಂದ ಕಣ್ಣೀರನ್ನು ಸುರಿಸುತ್ತ, 'ಕೃಷ್ಣಾ! ನಮ್ಮ ಕುಮಾರನ ವಧವೃತ್ತಾಂತವನ್ನೇಕೆ ತಿಳಿಸಲಿಲ್ಲ? ಅದನ್ನೂ ವಿವರಿಸು' ಎಂದು ಹೇಳಿ, ಒಡನೆಯೇ ಮೂರ್ಛಿತಳಾಗಿ ಬಿದ್ದುಬಿಟ್ಟಳು. ಹೀಗೆ ಮೂರ್ಛಿತಳಾಗಿ ಬಿದ್ದ ಮಗಳನ್ನು ನೋಡಿದೊಡನೆ ವಸುದೇವನೂ ದುಃಖ

ದಿಂದ ಪ್ರಜ್ಞೆತಪ್ಪಿ ಬಿದ್ದುಬಿಟ್ಟನು. ದೌಹಿತ್ರವಧದಿಂದುಂಟಾದ ದುಃಖ ದಿಂದಲೂ, ಸಂಕಟದಿಂದಲೂ ಕುದಿಯುತ್ತ, ಮೆಲ್ಲಗೆ ಚೇತರಿಸಿಕೊಂಡು ವಸುದೇವನು ಕೃಷ್ಣನನ್ನು ನೋಡಿ 'ಓ ಪುಂಡರೀಕಾಕ್ಷಾ ! ನೀನು ಲೋಕದಲ್ಲಿ ಸತ್ಯವಾಕ್ಕುಳ್ಳವನೆಂದು ಹೆಸರುಗೊಂಡವನು. ಹೀಗಿರುವಾಗ ನನ್ನ ದೌಹಿತ್ರನ ಮರಣವನ್ನು ನನಗೆ ತಿಳಿಸದೆ ಮರೆಸಿಡಬಹುದೆ? ನಿನ್ನ ಸೋದರಳಿಯನಾದ ಅವನ ವಧವೃತ್ತಾಂತವನ್ನು ವಿವರವಾಗಿ ನನಗೆ ತಿಳಿಸು. ನಿನಗೆ ನೇತ್ರಪ್ರಾಯನಾದ ಆ ನಿನ್ನ ಸೋದರಳಿಯನು ಶತ್ರುಗಳಿಂದ ಹೇಗೆ ಹತನಾದನು? ಕಾಲವು ಬಂದಲ್ಲದೆ ಮನುಷ್ಯರಿಂದ ಸಾಯುವುದಕ್ಕೆ ಸಾಧ್ಯವಿಲ್ಲವೆಂಬುದು ನಿಜವು. ಈಗಿನ ದೌಹಿತ್ರವಧವನ್ನು ತಿಳಿದಾಗಲೇ ನನ್ನ ಹೃದಯವು ಶತಸಹಸ್ರಭಾಗವಾಗಿ ಭೇದಿಸಬೇಕಾಗಿದ್ದರೂ ಹಾಗಿಲ್ಲದೆ ಇನ್ನೂ ನಾನು ಬದುಕಿರುವೆನು. ಯುದ್ಧದಲ್ಲಿ ಅಭಿಮನ್ಯುವು ಸಾಯುವಾಗ ನಿನ್ನೊಡನೆ ಹೇಳಿದುದೇನು? ತಾಯಿಯಾದ ಸುಭದ್ರೆಗೆ ಏನೆಂದು ಹೇಳಿದನು? ಚಂಚಲದೃಷ್ಟಿಯುಳ್ಳ ಆ ನನ್ನ ಪ್ರಿಯ ದೌಹಿತ್ರನು ನನಗೇನಾದರೂ ಹೇಳಿದನೇ? ಅವನು ಯುದ್ಧದಲ್ಲಿ ಬೆನ್ನು ತೋರಿಸದೆ ಧೈರ್ಯದಿಂದ ಇದಿರಿಸಿ ನಿಂತಿದ್ದಾಗಲೇ ಶತ್ರುಗಳಿಂದ ಕೊಲ್ಲಲ್ಪಟ್ಟನಷ್ಟೆ? ಅವನು ಯುದ್ಧದಲ್ಲಿ ಭಯದಿಂದ ಮುಖವಿಕಾರವನ್ನೇನಾದರೂ ತೋರಿಸಿದನೆ? ಕೃಷ್ಣಾ! ಅವನು ಮಹಾತೇಜಸ್ವಿಯೇ ಹೌದು. ಆದರೂ ಬಾಲನು. ಆ ಹುಡುಗುತನದಿಂದ ನನ್ನ ಮುಂದೆ ಯಾವಾಗಲೂ ತನ್ನ ವಿಜಯವನ್ನೇ ಶ್ಲಾಘಿಸುತ್ತಿದ್ದನು. ಇನ್ನೂ ಸಣ್ಣ ಹುಡುಗನಾಗಿ ಯುದ್ಧದಲ್ಲಿ ತಮ್ಮನ್ನಿದಿರಿಸುವುದಕ್ಕಾಗಿ ಬಂದು ನಿಂತ ಆ ಅಭಿಮನ್ಯುವನ್ನು ದ್ರೋಣ, ಕರ್ಣ, ಕೃಪಾದಿಗಳು 'ನೀನು ಇನ್ನೂ ಹುಡುಗ'ನೆಂದು ನಿರಾಕರಿಸಲಿಲ್ಲವೆ? ಅವನು ಭೂಮಿಯಲ್ಲಿ ಸತ್ತು ಮಲಗಿದ ರೀತಿಯನ್ನು ನನಗೆ ತಿಳಿಸು. ಆ ನನ್ನ ದೌಹಿತ್ರನು ಯಾವಾಗಲೂ ದ್ರೋಣನನ್ನೂ, ಭೀಷ್ಮನನ್ನೂ, ಬಲಾಢ್ಯನಾದ ಕರ್ಣನನ್ನೂ ಸ್ಪರ್ಧಿಸಿ ನನ್ನೊಡನೆ ಮಾತಾಡುತ್ತಲೇ ಇದ್ದನು. ಆ ನನ್ನ ಪ್ರಿಯಬಾಲಕನ ವಿಷಯವನ್ನು ನನಗೆ ತಿಳಿಸಬೇಕು' ಎಂದನು. ಹೀಗೆ ದುಃಖದಿಂದ ಬಹುವಿಧವಾಗಿ ವಿಲಪಿಸುತ್ತಿರುವ ತಂದೆಯನ್ನು ನೋಡಿ ಕೃಷ್ಣನು 'ಜನಕಾ! ಅಭಿಮನ್ಯುವು ಯು

ದ್ಧದಲ್ಲಿ ಯಾವಾಗಲೂ, ಯಾವ ವಿಧವಾದ ಮುಖವಿಕಾರವನ್ನೂ ತೋರಿ ಸಲಿಲ್ಲ. ಅವನು ಶತ್ರುಗಳಿಗೆ ಬೆನ್ನುಕೊಟ್ಟು ಓಡಿದವನೂ ಇಲ್ಲ. ಅವನು ಯುದ್ಧದಲ್ಲಿ ಗುಂಪುಗುಂಪಾಗಿ ಬಂದ ಶತ್ರುವೀರರನ್ನು ನೂರುಸಾವಿರ ಸಂಖ್ಯೆಯಿಂದ ಕೊಂದು ಜಯಶೀಲನಾದನು. ಆಮೇಲೆ ದ್ರೋಣ, ಕರ್ಣರಿಬ್ಬರೂ ಸೇರಿ, ಅವನನ್ನು ಬಹಳ ಸಂಕಟದಲ್ಲಿ ಸಿಕ್ಕಿಸಿದಾಗ, ಕೊನೆಗೆ ದುಶ್ಶಾಸನನ ಕುಮಾರನ ಕೈಗೆ ಸಿಕ್ಕಿಬಿದ್ದನು. ಜನಕಾ! ಆ ಅಭಿಮನ್ಯುವು ತನಗಿದಿರಾದ ಒಬ್ಬನೇ ಶತ್ರುವನ್ನು ಇದಿರಿಸಿ ನಿಂತಪಕ್ಷ ದಲ್ಲಿ, ವಜ್ರಧಾರಿಯಾದ ಇಂದ್ರನಾದರೂ ಅವನನ್ನು ಜಯಿಸಲಾರನು. ಇದು ನಿಶ್ಚಯವು. ಅದು ಹಾಗಿಲ್ಲದೆ ವಿಪರೀತವಾಗಿ ಪರಿಣಮಿಸಿತು. ಅತ್ತಲಾಗಿ ಸಂಶಪ್ತಕರೆಲ್ಲರೂ ಅರ್ಜುನನನ್ನು ನಿರ್ಬಂಧಿಸಿ ತಮ್ಮೊಡನೆ ಯುದ್ಧಕ್ಕಾಗಿ ಕರೆದರು. ಅರ್ಜುನನು ಅತ್ತಲಾಗಿ ಹೋಗಿದ್ದಸಮಯದಲ್ಲಿ ದ್ರೋಣನೇ ಮೊದಲಾದ ಕೆಲವರೆಲ್ಲರೂ ಗುಂಪಾಗಿ ಸೇರಿ ಬಂದು, ಆ ಬಾಲ ಕನನ್ನು ಮುತ್ತಿಕೊಂಡರು. ಆಗಲೂ ನಿನ್ನ ದೌಹಿತ್ರನು ಬಹುಮಂದಿ ವೀರರನ್ನು ಕೊಂದು, ಕೊನೆಗೆ ದುಶ್ಶಾಸನಪುತ್ರನ ಕೈಗೆ ಸಿಕ್ಕಿಬಿದು ಹತ ನಾದನು. ಅವನೇನೋ ನಿಜವಾಗಿಯೂ ವೀರಸ್ವರ್ಗವನ್ನೇ ಹೊಂದಿ ದನು. ಜನಕಾ! ಇನ್ನು ನಿನ್ನ ಶೋಕವನ್ನು ಬಿಡು. ನಿನ್ನಂತಹ ವಿವೇಕಿಗಳು ವ್ಯಸನಕ್ಕೆಡೆಗೊಡಬಾರದು. ದ್ರೋಣಕರ್ಣರೇ ಮೊದಲಾದ ವರನ್ನೆಲ್ಲ ಇದಿರಿಸಿ, ಅನೇಕ ಶತ್ರುಗಳನ್ನು ಕೊಂದ ಆ ಮಹಾವೀರನು ಹೇಗೆತಾನೇ ಸದ್ಗತಿಯನ್ನು ಹೊಂದದಿರುವನು? ನಿನ್ನ ದುಃಖವನ್ನು ಬಿಡು. ಶಸ್ತ್ರದಿಂದ ಪವಿತ್ರವಾದ ಗತಿಯನ್ನೇ ಅವನು ಹೊಂದಿರುವನು. ವೀರನಾದ ಆ ಕುಮಾರನು ಸತ್ತಮೇಲೆ, ನನ್ನ ತಂಗಿಯಾದ ಈ ಸುಭದ್ರೆ ಯು ಮಗನ ಬಳಿಯಲ್ಲಿ ಕುಳಿತು ಮಹಾವ್ಯಸನದಿಂದ ಕುರರಪಕ್ಷಿಯಂತೆ ಗೋಳಿಟ್ಟಳು. ಆಮೇಲೆ ದ್ರೌಪದಿಯ ಬಳಿಗೆ ಹೋಗಿ ತನ್ನ ದುಃಖವನ್ನು ಹೇಳಿಕೊಳ್ಳುತ್ತ 'ಅಮ್ಮಾ! ನಿನ್ನ ಕುಮಾರರೆಲ್ಲಿ? ಅವರನ್ನು ನಾನು ನೋಡಬೇಕೆಂದಿರುವೆನು' ಎಂದು ವಿಲಪಿಸಿದಳು. ಇವಳ ರೋದನವನ್ನು ಕೇಳಿ ಅಲ್ಲಿದ್ದ ಕೌರವಸ್ತ್ರೀಯರೆಲ್ಲರೂ ಅವಳನ್ನಪ್ಪಿಕೊಂಡು, ತಾವೂ ಅಳು ವುದಕ್ಕಾರಂಭಿಸಿದರು. ಆಮೇಲೆ ಈ ಸುಭದ್ರೆಯು ಉತ್ತರೆಯ ಬಳಿಗೆ

ಹೋಗಿ ಅವಳನ್ನು ನೋಡಿ 'ಭದ್ರೆ! ನಿನ್ನ ಗಂಡನೆಲ್ಲಿ? ಈಗಲೇ ನೀನು ಅವನು ಬಂದ ಶುಭವೃತ್ತಾಂತವನ್ನು ನನಗೆ ತಿಳಿಸಬೇಕು. ಆ ನಿನ್ನ ಪತಿಯು ನನ್ನ ಸ್ವರವನ್ನು ಕೇಳಿದೊಡನೆ ನನ್ನ ಮುಂದೆ ಬಂದು ನಿಲ್ಲುತ್ತಿದ್ದನು. ಇನ್ನೂ ಅವನೇಕೆ ಬಾರದಿರುವನು? ಓ ಅಭಿಮನ್ಯೂ! ನಿನ್ನಲ್ಲಿ ಪಶ್ಚಾತ್ತಾಪವುಳ್ಳ ನಿನ್ನ ಮಾವಂದಿರೆಲ್ಲರೂ ಈಗಲೇ ನೀನು ಯುದ್ಧಕ್ಕಾಗಿ ಬಂದಿರುವುದಾಗಿಯೂ, ನೀನು ಕ್ಷೇಮದಿಂದಿರುವುದಾಗಿಯೂ ಹೇಳಿದರಲ್ಲಾ! ಕುಮಾರಾ! ಬೇಗ ಬಾ! ಮೊದಲಿನಂತೆ ನೀನು ನನಗೆ ನಿನ್ನ ಯುದ್ಧವೃತ್ತಾಂತಗಳನ್ನೆಲ್ಲವನ್ನೂ ತಿಳಿಸು. ಹೀಗೆ ಗೋಳಿಡುತ್ತಿರುವಾಗಲೂ ನೀನು ನನಗೇಕೆ ಪ್ರತ್ಯುತ್ತರವನ್ನು ಹೇಳುವುದಿಲ್ಲ?' ಎಂದು ಹುಚ್ಚುಹಿಡಿದವಳಂತೆ ವಿಲಪಿಸಿದಳು. ಇವಳ ಗೋಳಾಟವನ್ನು ನೋಡಿ ಸಹಿಸಲಾರದೆ ಅತ್ತೆಯಾದ ಕುಂತಿಯು ಅವಳನ್ನು ಸಮಾಧಾನಗೊಳಿಸುತ್ತ 'ಸುಭದ್ರೆ! ಮರಣವೆಂಬುದು ಮನುಷ್ಯರಿಗೆ ಸಹಜವಾದ ಧರ್ಮವೇ! ಶ್ರೀಕೃಷ್ಣನಿಂದಲೂ, ಸಾತ್ಯಕಿಯಿಂದಲೂ, ತನ್ನ ತಂದೆಯಾದ ಅರ್ಜುನನಿಂದಲೂ ಎಷ್ಟೋ ಪ್ರೀತಿಯಿಂದ ಲಾಲಿತನಾದ ಆ ಬಾಲಕನು ಕಾಲಧರ್ಮದಿಂದ ಮೃತ್ಯುವಶನಾದನು. ಇದಕ್ಕೆ ಯಾರೇನು ಮಾಡಬಲ್ಲರು? ವ್ಯಸನವನ್ನು ಬಿಡು. ನಿನ್ನ ಮಗನಾದರೋ ಎಂತವರಿಗೂ ದುರ್ಜಯನು. ಈಗ ಅವನು ಉತ್ತಮಗತಿಯನ್ನೇ ಹೊಂದಿದನು. ನೀನೋ ಮಹಾತ್ಮರಾದ ಕ್ಷತ್ರಿಯರ ಕುಲದಲ್ಲಿ ಹುಟ್ಟಿದವಳು. ನಿನ್ನ ದುಃಖವನ್ನು ಬಿಡು. ಈಗ ಗರ್ಭಿಣಿಯಾಗಿರುವ ಉತ್ತರೆಯನ್ನು ಸಮಾಧಾನಪಡಿಸಿ ಅವಳನ್ನು ಕಾಪಾಡುತ್ತಿರು. ಶೀಘ್ರದಲ್ಲಿಯೇ ಅವಳಲ್ಲಿ ಅಭಿಮನ್ಯುವಿಗೆ ಪುತ್ರನೊಬ್ಬನು ಹುಟ್ಟುವನು' ಎಂದು ಸುಭದ್ರೆಯನ್ನು ಸಮಾಧಾನಪಡಿಸಿ, ಅಭಿಮನ್ಯುವಿಗೆ ಶ್ರಾದ್ಧವನ್ನು (ಉತ್ತರ ಕ್ರಿಯೆಗಳನ್ನು) ಮಾಡಿಸಿದಳು. ಆಮೇಲೆ ಕುಂತಿಯು ಧರ್ಮರಾಜನನ್ನೂ, ಭೀಮನನ್ನೂ, ನಕುಲಸಹದೇವರನ್ನೂ ಸಮಾಧಾನಗೊಳಿಸಿ ವಿವಿಧ ದಾನಗಳನ್ನು ಕೊಡಿಸಿದಳು. ಬ್ರಾಹ್ಮಣರಿಗೆ ಅನೇಕ ಗೋದಾನಗಳು ಕೊಡಲ್ಪಟ್ಟುವು. ಆಮೇಲೆ ಕುಂತಿಯು ವಿರಾಟಪುತ್ರಿಯಾದ ಉತ್ತರೆಯ ಬಳಿಗೆ ಬಂದು, 'ಅಮ್ಮಾ! ಈಗ ನೀನು ದುಃಖಿಸಬಾರದು. ನಿನ್ನ ಪತಿಯ ಪ್ರೀತಿಗಾಗಿ

ನಿನ್ನ ಗರ್ಭದಲ್ಲಿರುವ ಶಿಶುವನ್ನು ಚೆನ್ನಾಗಿ ರಕ್ಷಿಸು ' ಎಂದು ಹೇಳಿ ಸುಮ್ಮ ನಾದಳು. ಓ ಜನಕಾ! ಆಮೇಲೆ ನಾನು ಅವಳ ಅನುಮತಿಯನ್ನು ಪಡೆದು ಈ ಸುಭದ್ರೆಯನ್ನು ಇಲ್ಲಿಗೆ ಕರೆತಂದೆನು. ಇದು ಅಭಿಮನ್ಯುವು ಮರಣಹೊಂದಿದ ರೀತಿಯು. ಇದಕ್ಕಾಗಿ ನೀನು ದುಃಖಿಸಬಾರದು ' ಎಂದನು.

ಇದು ಅರುವತ್ತೊಂದನೆಯ ಅಧ್ಯಾಯವು.

ವಸುದೇವಾದಿಗಳು ಅಭಿಮನ್ಯುವಿಗೆ ಶ್ರಾದ್ಧಕಾರ್ಯಗಳನ್ನು ಮಾಡಿದುದು. ವ್ಯಾಸಮುನಿಯು ಹಸ್ತಿನಾವತಿಗೆ ಬಂದು ಉತ್ತರೆ ಮೊದಲಾದವರಿಗೆ ಸಮಾಧಾನವನ್ನು ಹೇಳಿ ಧರ್ಮರಾಜನಿಗೆ ಅಶ್ವಮೇಧಯಾಗವನ್ನು ಆರಂಭಿಸುವಂತೆ ಹೇಳಿದುದು.

ಓ ಜನಮೇಜಯರಾಜಾ! ಕೇಳು! ಮಗನಾದ ಕೃಷ್ಣನ ಮಾತನ್ನು ಕೇಳಿದಮೇಲೆ ವಸುದೇವನು ಮನಸ್ಸಿನಲ್ಲಿ ಸಮಾಧಾನವನ್ನು ಹೊಂದಿ, ಅಭಿಮನ್ಯುವಿಗೆ ತಾನು ಮಾಡಬೇಕಾದ ಶ್ರಾದ್ಧಕಾರ್ಯವನ್ನು ಮಾಡಿದನು. ಕೃಷ್ಣನೂ ತನ್ನ ಸೋದರಳಿಯನಿಗೆ ತಾನು ನಡೆಸಬೇಕಾದ ಪಾರಲೌಕಿಕಗಳನ್ನು ನಡೆಸಿ, ಅರುವತ್ತುಸಾವಿರಮಂದಿ ಬ್ರಾಹ್ಮಣರಿಗೆ ಸರ್ವ ಗುಣಸಮೃದ್ಧವಾದ ಸಂತರ್ಪಣವನ್ನು ಮಾಡಿಸಿ, ವಸ್ತ್ರದಾನಗಳನ್ನು ಮಾಡಿ, ಅವರ ಧನದಾಸೆಯನ್ನೆಲ್ಲ ನೀಗಿಸಿದನು. ಆಗ ಕೃಷ್ಣನು ಬ್ರಾಹ್ಮಣರಿಗೆ ಸುವರ್ಣವನ್ನೂ, ಗೋವುಗಳನ್ನೂ, ಶಯನಾಸನಗಳನ್ನೂ ಸಮೃದ್ಧವಾಗಿ ಕೊಟ್ಟು ಸಂತೋಷಗೊಳಿಸಿದುದು ನೋಡುವವರಿಗೆ ಆಶ್ಚರ್ಯವನ್ನುಂಟುಮಾಡುವಂತಿದ್ದಿತು. ಆಗ ಬ್ರಾಹ್ಮಣರು ಕೃಷ್ಣನಿಂದ ಕೊಡಲ್ಪಡುತ್ತಿದ್ದ ವಸ್ತುಗಳನ್ನು ನೋಡಿ 'ಇದು ತಮಗೆ ಹೆಚ್ಚೆ'ಂದು ತಮ್ಮ ಬಾಯಿಂದಲೇ ಹೇಳುತ್ತಿದ್ದರು. ಆಮೇಲೆ ಬಲರಾಮಕೃಷ್ಣರೂ, ಸಾತ್ಯಕಿಯೂ, ಸತ್ಯಕನೂ ಅಭಿಮನ್ಯುವಿಗೆ ಶ್ರಾದ್ಧಕಾರ್ಯಗಳನ್ನು ಕ್ರಮವಾಗಿ ನಡೆಸಿದರು. ಎಲ್ಲರೂ ವ್ಯಸನದಿಂದ ಬಹಳವಾಗಿ ಕುದಿಯುತ್ತಿದ್ದರು.



ಧರ್ಮರಾಜನು ಅಶ್ವಮೇಧಯಾಗಕ್ಕಾಗಿ ದೇಶಗಳಮೇಲೆ ಯಜ್ಞಾಶ್ವವನ್ನು ಬಿಟ್ಟುದು.

ಅತ್ತಲಾಗಿ ಪಾಂಡವರೂ ಹಸ್ತಿನಾವತಿಯಲ್ಲಿ ಬಹುದಿನಗಳವರೆಗೆ ಅಭಿಮನ್ಯುವಿಯೋಗಕ್ಕಾಗಿ ಕೊರಗುತ್ತಲೇ ಇದ್ದರು. ವಿರಾಟಪುತ್ರಿಯಾದ ಉತ್ತರೆಯು ಬಹುದಿನಗಳವರೆಗೆ ಊಟವನ್ನೇ ಮಾಡದೆ ಬಹಳ ಶೋಚನೀಯಸ್ಥಿತಿಯಲ್ಲಿದ್ದಳು. ಇದರಮೇಲೆ ಅವಳು ಗರ್ಭವತಿಯಾಗಿದ್ದುದರಿಂದ ಅವಳ ಸ್ಥಿತಿಯು ನೋಡುವವರಿಗೆ ಮತ್ತಷ್ಟು ಕನಿಕರವನ್ನು ಹೆಚ್ಚಿಸುತ್ತಿತ್ತು. ಉತ್ತರೆಯು ಹೀಗೆ ಗರ್ಭದಶೆಯಲ್ಲಿ ಕೊರಗುತ್ತಿರುವುದನ್ನು ದಿವ್ಯದೃಷ್ಟಿಯಿಂದ ತಿಳಿದು ವ್ಯಾಸಮುನಿಯು ಥಟ್ಟನೆ ಅವಳಿದ್ದಲ್ಲಿಗೆ ಬಂದು, ಆ ಉತ್ತರೆಯನ್ನೂ, ಕುಂತಿಯನ್ನೂ ನೋಡಿ ‘ ಅಮ್ಮಾ! ನೀವು ದುಃಖಿಸಬಾರದು. ಮಹಾತೇಜಸ್ವಿಯಾದ ಪುತ್ರನೊಬ್ಬನು ನಿನಗೆ ಜನಿಸುವನು. ಶ್ರೀಕೃಷ್ಣನ ಪ್ರಭಾವದಿಂದಲೂ, ನನ್ನ ಹೇಳಿಕೆಯಿಂದಲೂ ಅವನು ಮುಂದೆ ಮಹಾಕೀರ್ತಿವಂತನಾಗಿ, ಪಾಂಡವರ ಕಾಲಾನಂತರದಲ್ಲಿ ಈ ರಾಜ್ಯವನ್ನು ಪಾಲಿಸುವನು’ ಎಂದನು. ಆಮೇಲೆ ಅರ್ಜುನನನ್ನು ನೋಡಿ ಧರ್ಮರಾಜನ ಕಿವಿಗೂ ಬೀಳುವಂತೆ ‘ ಪಾರ್ಥಾ! ನೀನು ನಿನ್ನ ಮಗನ ಮರಣಕ್ಕಾಗಿ ದುಃಖಿಸಬೇಡ. ನಿನಗೆ ಮಹಾತ್ಮನಾದ ಪೌತ್ರನೊಬ್ಬನು ಜನಿಸುವನು. ಅವನು ಸಮುದ್ರಾಂತವಾದ ಸಮಸ್ತ ಭೂಮಿಯನ್ನೂ ಧರ್ಮದಿಂದ ಪಾಲಿಸುವನು. ನೀನು ವಿಚಾರಮಾಡಬೇಕಾದುದೊಂದೂ ಇಲ್ಲ. ನಾನು ಹೇಳಿದ ಈ ವಾಕ್ಯವು ಸತ್ಯವಾಗಿ ನಡೆಯುವುದು. ಶ್ರೀಕೃಷ್ಣನು ನಿನಗೆ ಹಿಂದೆ ಏನೇನನ್ನು ಹೇಳಿದ್ದನೋ, ಅವೆಲ್ಲವೂ ಹಾಗೆಯೇ ನಡೆಯದಿರದು. ಆ ವಿಷಯದಲ್ಲಿ ನಿನಗೆ ಸಂದೇಹವೇ ಬೇಡ. ನಿನ್ನ ಮಗನು ಅಕ್ಷಯವಾದ ದಿವ್ಯಲೋಕಗಳನ್ನು ಹೊಂದಿರುವನು. ಅವನಿಗಾಗಿ ನೀನಾಗಲಿ, ಇತರರಾಗಲಿ ಶೋಕಿಸಬೇಕಾದುದಿಲ್ಲ’ ಎಂದನು. ವ್ಯಾಸಮುನಿಯ ಈ ಮಾತನ್ನು ಕೇಳಿದಮೇಲೆ ಅರ್ಜುನನಿಗೆ ಮನಶ್ಶಾಂತಿಯುಂಟಾಯಿತು.

ಓ ಜನಮೇಜಯರಾಜಾ! ಈ ಹೇಳಿಕೆಯಂತೆ ನಿನ್ನ ತಂದೆಯಾದ ಪರೀಕ್ಷಿತ್ತು ಉತ್ತರೆಯ ಗರ್ಭದಲ್ಲಿ ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ವೃದ್ಧಿಹೊಂದುತ್ತಿದ್ದನು. ಆಮೇಲೆ ವ್ಯಾಸನು ಧರ್ಮರಾಜನಿಗೆ ಅಶ್ವ

ಮೇಧಯಾಗ ವಿಚಾರವನ್ನು ಜ್ಞಾಪಿಸಿ ಹಾಗೆಯೇ ಕಣ್ಮರೆಯಾದನು. ವ್ಯಾಸಾಜ್ಞೆಯಂತೆ ಧರ್ಮರಾಜನು ಯಜ್ಞಕ್ಕೆ ಬೇಕಾದ ಹಣವನ್ನು ತರುವುದಕ್ಕಾಗಿ ಹಿಮಾಲಯಕ್ಕೆ ಪ್ರಯಾಣಹೊರಡಲು ನಿಶ್ಚಯಿಸಿದನು.

ಇದು ಅರುವತ್ತೆರಡನೆಯ ಅಧ್ಯಾಯವು.

{ಧರ್ಮರಾಜನು ತನ್ನ ಸಹೋದರರೊಡಗೂಡಿ ಧನವನ್ನು ತರುವುದಕ್ಕಾಗಿ ಹಿಮಾಲಯಕ್ಕೆ ಹೊರಟುದು.}

ಜನಮೇಜಯರಾಜನು ವೈಶಂಪಾಯನನನ್ನು ಕುರಿತು 'ಮಹಾತ್ಮನಾದ ವ್ಯಾಸನು ಹೇಳಿ ಹೋದಮೇಲೆ, ಧರ್ಮರಾಜನು ಮಾಡಿದುದೇನು? ಮರುತ್ತನು ಬಿಟ್ಟುಹೋದ ಧನವನ್ನು ಅವನು ಹೇಗೆ ತಂದನು? ಅದನ್ನು ತಿಳಿಸು' ಎಂದನು. ಆಗ ವೈಶಂಪಾಯನನು 'ರಾಜೇಂದ್ರಾ! ಆಮೇಲೆ ಧರ್ಮರಾಜನು ತನ್ನ ಸಹೋದರರನ್ನೆಲ್ಲ ಕರೆಸಿಕೊಂಡನು. ಭೀಮಾರ್ಜುನನಕುಲಸಹದೇವರನ್ನು ನೋಡಿ 'ಓ ವೀರರೇ! ಮಹಾತ್ಮನಾದ ವ್ಯಾಸನು ನಮ್ಮಲ್ಲಿರುವ ಪ್ರೀತಿಯಿಂದಲೂ, ಕುರುಕುಲಕ್ಕೆ ಹಿತವನ್ನು ಕೋರಿಯೂ ಹೇಳಿಹೋದ ಮಾತನ್ನು ಕೇಳಿದಿರಲ್ಲವೆ? ಧರ್ಮಶೀಲನೂ, ಗುರುವೂ, ತಪೋವೃದ್ಧನೂ ಆದ ಆ ವ್ಯಾಸನೂ, ತಾತನಾದ ಭೀಷ್ಮನೂ, ಶ್ರೀಕೃಷ್ಣನೂ ನಮಗೆ ತಿಳಿಸಿದಂತೆ ಕಾರ್ಯವನ್ನು ನಡೆಸಬೇಕೆಂದು ಕೋರುವೆನು. ಅವರು ಹೇಳಿದ ಹಿತವಾಕ್ಯವು ಈಗಲೂ, ಮುಂದೆಯೂ ನಮ್ಮೆಲ್ಲರಿಗೂ ಶ್ರೇಯಸ್ಕರವಾದುದು. ಅಷ್ಟೇಕೆ? ಬ್ರಹ್ಮವಾದಿಯಾದ ವ್ಯಾಸಮುನಿಯ ವಾಕ್ಯವು ನಮಗೆ ಯಾವಾಗಲೂ ಶುಭಕರವಾದುದೇ! ಆದರೆ ಈಗ ಈ ಸಮಸ್ತಭೂಮಿಯೂ ಯುದ್ಧದ ದೆಸೆಯಿಂದ ಬರಿದಾಗಿದೆ. ಇದಕ್ಕಾಗಿ ವ್ಯಾಸನು ಮರುತ್ತನ ಧನವನ್ನು ತರಬೇಕೆಂದು ಹೇಳಿದನು. ಆ ಕಾರ್ಯವು ನಿಮಗೆ ಸಮ್ಮತವಾಗಿದ್ದರೆ, ಮತ್ತು ನಾವು ಅದನ್ನು ಮಾಡಬಹುದಾಗಿದ್ದರೆ, ನಾವೆಲ್ಲರೂ ಅದನ್ನು ತರುವುದಕ್ಕೆ ಹೋಗುವೆವು. ಭೀಮಸೇನಾ! ಈ ವಿಷಯದಲ್ಲಿ ಮೊದಲು ನಿನ್ನ ಅಭಿಪ್ರಾಯವೇನು?' ಎಂದನು. ಆಗ ಭೀಮನು ಕೈಮುಗಿದು ಧರ್ಮರಾಜನನ್ನು ಕುರಿತು

'ಓ ಮಹಾಬಾಹೂ! ನೀನು ಹೇಳಿದ ಕಾರ್ಯವು ನನಗೂ ಸಮ್ಮತವೇ. ವ್ಯಾಸನು ಹೇಳಿದಂತೆ ಆ ಧನವನ್ನು ತರುವುದಕ್ಕಾಗಿ ನಾವು ಹೊರಡುವೆವು. ಧರ್ಮದಿಂದ ಲಭಿಸತಕ್ಕ ಆ ಧನವು ನಮ್ಮ ಕಾರ್ಯಕ್ಕೆ ಅನುಕೂಲವಾದುದೇ! ಆದರಿಂದ ನಮ್ಮ ಕಾರ್ಯವು ಸಿದ್ಧಿಸಿದಂತೆಯೇ ನನ್ನ ನಿಶ್ಚಯವು. ಆದುದರಿಂದ ನಾವು ಇಲ್ಲಿಂದ ಹೋಗಿ, ಕೈಲಾಸದಲ್ಲಿರುವ ಮಹಾತ್ಮನಾದ ರುದ್ರನಲ್ಲಿ ಮರೆಹೊಕ್ಕು, ಅವನನ್ನು ಪೂಜಿಸಿ ಧನವನ್ನು ತಂದುಬಿಡುವೆವು. ದೇವದೇವನೂ, ಶೂಲಪಾಣಿಯೂ, ತ್ರಿಲೋಚನನೂ ಜನನಮರಣವಿಲ್ಲದವನೂ ಆದ ಮಹೇಶ್ವರನನ್ನೂ, ಗಣಾಧಿಪತಿಯನ್ನೂ ಆ ಶಿವನ ಅನುಚರರನ್ನೂ ನಮಸ್ಕರಿಸಿ, ಮನೋವಾಕ್ಕಾಯಗಳಿಂದ ಅವರನ್ನು ಪ್ರೀತಿಗೊಳಿಸಿ, ನಮ್ಮ ಕಾರ್ಯವನ್ನು ಸಾಧಿಸಿಕೊಂಡ ಬರುವೆವು. ಆ ರುದ್ರನನ್ನು ಪ್ರಸನ್ನನಾಗಿ ಮಾಡಿಕೊಂಡರೆ, ಆ ದ್ರವ್ಯಕ್ಕೆ ಕಾವಲಿರುವ ಕಿನ್ನರರೆಲ್ಲರೂ ನಮಗೆ ವಶರಾಗುವರು. ಆ ಪರಮೇಶ್ವರನು ಪ್ರಸನ್ನನಾದರೆ ಅಮರತ್ವವನ್ನೇ ಕೊಡಬಲ್ಲನು. ಇನ್ನು ನಮಗೆ ಆ ಕಾಂಚನವನ್ನು ಕೊಡುವುದೇನು ದೊಡ್ಡದು? ಹಿಂದೆ ನಾವು ವನವಾಸದಲ್ಲಿದ್ದಾಗ ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಟ್ಟನು. ಬ್ರಹ್ಮಶಿರಸ್ಸೆಂಬ ಅಸ್ತ್ರವನ್ನು ಕೊಟ್ಟನು. ಇನ್ನು ಧನವನ್ನು ಕೊಡಲಾರನೆ? ನಾವೆಲ್ಲರೂ ಅವನ ಭಕ್ತರು. ಅವನು ತಪ್ಪದೆ ನಮಗೆ ಪ್ರಸನ್ನನಾಗುವನು. ಅವನ ಅನುಗ್ರಹದಿಂದಲೇ ನಮಗೆ ಈ ರಾಜ್ಯವೂ ಪ್ರಾಪ್ತವಾಯಿತು. ಹಿಂದೆ ಅಭಿಮನ್ಯುವಧವಾದಮೇಲೆ ಧನಂಜಯನು ಆ ಸಾಯಂಕಾಲದೊಳಗಾಗಿ ಜಯದ್ರಥನನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದನಲ್ಲವೆ? ಆಗ ಸ್ವಪ್ನದಲ್ಲಿ ಅರ್ಜುನನು ಕೃಷ್ಣನೊಡಗೂಡಿ, ಲೋಕಗುರುವಾದ ಶಿವನನ್ನು ಮೆಚ್ಚಿಸಿ ಅಸ್ತ್ರವನ್ನು ಪಡೆದನು. ರಾತ್ರಿ ಕಳೆದು ಬೆಳಗಾದೊಡನೆ ಅರ್ಜುನನ ಮುಂದೆಯೇ ರುದ್ರನು ತಲೆದೋರಿ ತನ್ನ ಶೂಲದಿಂದ ಕೌರವಸೈನ್ಯವನ್ನೆಲ್ಲ ಕೊಂದನು. ಮಹಾರಾಜಾ! ಮಹಾಧನುರ್ಧಾರಿಗಳಾದ ದ್ರೋಣಕರ್ಣರಿಂದ ರಕ್ಷಿಸಲ್ಪಟ್ಟ ಆ ಕುರುಸೈನ್ಯವನ್ನು ಆ ಮಹೇಶ್ವರನಲ್ಲದೆ ಮನುಷ್ಯಮಾತ್ರನಾದ ಯಾವನು ತಾನೇ ಮನಸ್ಸಿನಿಂದಲಾದರೂ ಇದಿರಿಸಬಲ್ಲನು? ಆ ಮಹೇಶ್ವರನ ಅನುಗ್ರಹದಿಂದಲೇ ನಮ್ಮ ಶತ್ರುಗಳೆ

ಲ್ಲರೂ ಹತರಾದರು. ಈಗ ನಮ್ಮ ಅಶ್ವಮೇಧವನ್ನು ಅವನೇ ಪೂರ್ತಿಗೊಳಿಸುವನು' ಎಂದನು. ಭೀಮನು ಹೇಳಿದ ಈ ವಾಕ್ಯವನ್ನು ಕೇಳಿ ಧರ್ಮರಾಜನಿಗೆ ಬಹಳ ಸಂತೋಷವಾಯಿತು. ಅರ್ಜುನಾದಿಗಳೂ ಅದನ್ನೇ ಅನುಮೋದಿಸಿ ಮಾತನಾಡಿದರು. ಆಮೇಲೆ ಪಾಂಡವರೆಲ್ಲರೂ ಆ ಧನವನ್ನು ತರುವುದಕ್ಕಾಗಿ ನಿಶ್ಚಯಿಸಿದರು. ರೋಹಿಣೀನಕ್ಷತ್ರದಿಂದ ಕೂಡಿದ ಭಾನುವಾರದಲ್ಲಿ ಅಮೃತಸಿದ್ಧಿಯೋಗದಲ್ಲಿ ತಮ್ಮ ಸೈನ್ಯವನ್ನೆಲ್ಲ ಪ್ರಯಾಣಹೊರಡಿಸಿದರು. ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿ, ಆರಂಭದಲ್ಲಿ ಮಹೇಶ್ವರನನ್ನು ಪೂಜಿಸಿ, ಪಾಯಸ, ಕಡುಬು, ಮಾಂಸ, ಮೊದಲಾದ ಭಕ್ಷಣಗಳನ್ನು ನಿವೇದನಮಾಡಿ, ಅವನ ಮುಂದೆ ಹರಕೆಯನ್ನು ಮಾಡಿ ಉತ್ಸಾಹದಿಂದ ಪ್ರಯಾಣ ಹೊರಟರು. ಅವರು ಹೊರಡುವಾಗ ಬ್ರಾಹ್ಮಣರೂ, ನಗರವಾಸಿಗಳೂ ಸಂತೋಷದಿಂದ ಮಂಗಳಪಾಠಗಳನ್ನು ಹೇಳಿದರು. ಅಗ್ನಿಸಹಿತರಾದ ಬ್ರಾಹ್ಮಣರಿಗೆ ಪಾಂಡವರು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ಪುತ್ರಶೋಕದಿಂದ ಕೊರಗುತ್ತಿದ್ದ ಧೃತರಾಷ್ಟ್ರನನ್ನೂ, ಗಾಂಧಾರಿಯನ್ನೂ, ಕುಂತಿಯನ್ನೂ ನಮಸ್ಕರಿಸಿ, ಅವರ ಅನುಮತಿಯನ್ನು ಪಡೆದು ಪ್ರಯಾಣಹೊರಟರು. ಅವರ ಉಪಚಾರಕ್ಕಾಗಿ ಯುಯುತ್ಸುವನ್ನು ಅಲ್ಲಿಯೇ ನಿಲ್ಲಿಸಿ, ವ್ರತನಿಯಮಗಳೊಡನೆ ಆ ನಗರವನ್ನು ಬಿಟ್ಟು ಎಲ್ಲರೂ ಪ್ರಯಾಣಮಾಡಿದರು.

ಇದು ಅರುವತ್ತುಮೂರನೆಯ ಅಧ್ಯಾಯವು.

---

( ಯುಧಿಷ್ಠಿರನು ಹಿಮಾಲಯಕ್ಕೆ ಹೋಗಿ ಅಲ್ಲಿ ಸೈನ್ಯವನ್ನಿಳಿಸಿದುದು. ಅಲ್ಲಿ ಬ್ರಾಹ್ಮಣರ ನಿಯಮದಿಂದ ಉಪವಾಸಾದಿ ವ್ರತಗಳನ್ನು ನಡೆಸುತ್ತ ರಾತ್ರಿಯನ್ನು ಕಳೆದುದು. )

ಓ ರಾಜೇಂದ್ರಾ! ಪಾಂಡವರೂ, ಅವರ ಕಡೆಯ ಸೈನಿಕರೂ ಅತ್ಯುತ್ಸಾಹದಿಂದ ಪ್ರಯಾಣಹೊರಟರು. ಅವರ ರಥಘೋಷವು ಭೂಮಿಯನ್ನೆಲ್ಲ ಆವರಿಸಿತು. ವಂದಿಮಾಗಧರು ಸುತ್ತಲೂ ನಿಂತು ಸ್ತುತಿಸುತ್ತಿದ್ದರು. ರಶ್ಮಿಗಳಿಂದ ಆವೃತನಾದ ಸೂರ್ಯನಂತೆ ದೊಡ್ಡ ಸೈನ್ಯದಿಂದ

ಪರಿವೃತರಾಗಿ ಹೊರಟರು. ತಲೆಯಮೇಲೆ ಬೆಳಗುತ್ತಿರುವ ಬಿಳುಪಾದ ಶ್ವೇತಚ್ಛತ್ರದಿಂದ ಯುಧಿಷ್ಠಿರನು ಪೂರ್ಣಿಮೆಯ ಚಂದ್ರನಂತೆ ತೋರುತ್ತಿದ್ದನು. ದಾರಿಯುದ್ದಕ್ಕೂ ಜನರು ಜಯಶಬ್ದಗಳನ್ನು ಮಾಡುತ್ತಿದ್ದರು. ಧರ್ಮರಾಜನು ಅವರನ್ನೆಲ್ಲ ಪ್ರೀತಿಯಿಂದ ಆದರಿಸಿದನು. ಸೈನಿಕರೆಲ್ಲರೂ ರಾಜನನ್ನು ಹಿಂಬಾಲಿಸಿದರು. ಅವರ ಉತ್ಸಾಹ ಕೋಲಾಹಲವು ಆಕಾಶವನ್ನೆಲ್ಲ ತುಂಬಿತು. ಈ ಪ್ರಯಾಣದಲ್ಲಿ ಧರ್ಮರಾಜನು ಅನೇಕ ನದಿಗಳನ್ನೂ, ಕೊಳಗಳನ್ನೂ, ಕಾಡುಗಳನ್ನೂ, ಉಪವನಗಳನ್ನೂ, ಬೆಟ್ಟಗಳನ್ನೂ ದಾಟಿ, ಆ ದ್ರವ್ಯವಿದ್ದ ಸ್ಥಳಕ್ಕೆ ಬಂದು ಸೇರಿದನು. ಅಲ್ಲಿ ಶುದ್ಧವಾಗಿಯೂ, ಸಮವಾಗಿಯೂ, ಮಂಗಳಕರವಾಗಿಯೂ ಇರುವ ಒಂದು ಸ್ಥಳವನ್ನು ನೋಡಿ, ಅಲ್ಲಿ ತನ್ನ ಸೈನಿಕರೊಡನೆ ಇಳಿದನು. ಆಮೇಲೆ ತಪಸ್ಸಿನಿಂದಲೂ, ವಿದ್ಯೆಯಿಂದಲೂ, ಶಮದಮಾದಿ ಗುಣಗಳಿಂದಲೂ ಕೂಡಿದ ಬ್ರಾಹ್ಮಣರನ್ನೂ, ವೇದವೇದಾಂಗಪಾರಂಗತನಾದ ಧೌಮ್ಯನನ್ನೂ ಮುಂದಿಟ್ಟುಕೊಂಡು, ವಿಧ್ಯುಕ್ತವಾಗಿ ಶಾಂತಿಕರ್ಮಗಳನ್ನು ಮಾಡಿದಮೇಲೆ ಎಲ್ಲರೂ ಅಲ್ಲಿ ತಂಗಿದರು. ಜನರು ಅಲ್ಲಿ ರಾಜನನ್ನೂ, ಮಂತ್ರಿಗಳನ್ನೂ ನಡುವೆ ಬಿಟ್ಟುಕೊಂಡು, ಆರು ರಾಜಮಾರ್ಗಗಳೂ, ಒಂಭತ್ತು ಖಂಡಗಳೂ ಉಳ್ಳ ನಿವೇಶನವನ್ನು ಏರ್ಪಡಿಸಿದರು. ಆನೆ ಕುದುರೆಗಳಿಗೂ ಅಲ್ಲಿ ತಕ್ಕ ಸ್ಥಳವನ್ನು ಕಲ್ಪಿಸಿದಮೇಲೆ ಧರ್ಮರಾಜನು ಬ್ರಾಹ್ಮಣರನ್ನು ನೋಡಿ, 'ಎಲೈ ವಿಪ್ರರೇ! ಶುಭನಕ್ಷತ್ರದಿಂದಕೂಡಿದ ದಿನದಲ್ಲಿ ಕಾರ್ಯಸಾಧನೆಗಾಗಿ ನಿಮಗೆ ಹೇಗೆ ತೋರುವುದೋ ಹಾಗೆ ಶೀಘ್ರದಲ್ಲಿ ನಡೆಸಿರಿ. ನಾವು ಇಲ್ಲಿದ್ದುಕೊಂಡು ಕಾಲತಾಮಸ ಮಾಡಬಾರದು. ಈ ಅಂಶವನ್ನು ನೆನಪಿನಲ್ಲಿಟ್ಟುಕೊಂಡು ಹೇಗೆ ಮಾಡಬೇಕೋ ಹಾಗೆ ನಡೆಸಿರಿ' ಎಂದನು. ಈ ಮಾತನ್ನು ಕೇಳಿ ಬ್ರಾಹ್ಮಣರು ಧರ್ಮರಾಜನ ಕ್ಷೇಮವನ್ನು ಕೋರಿ 'ಓ ರಾಜೇಂದ್ರಾ! ಈ ದಿನವೇ ಶುಭನಕ್ಷತ್ರವಾಗಿದೆ. ಈಗಲೇ ಒಳ್ಳೆಯ ಮುಹೂರ್ತವು. ನಾವು ನಮ್ಮ ಕಾರ್ಯಕ್ಕೆ ಪ್ರಯತ್ನಿಸಬಹುದು. ಈಗ ನಾವು ವ್ರತವನ್ನು ಹಿಡಿಯುವೆವು. ನೀವೂ ಈ ದಿನ ಉಪವಾಸವಿರಬೇಕು' ಎಂದರು. ಈ ಮಾತನ್ನು ಕೇಳಿ ಪಾಂಡವರು ಆ ದಿನವೆಲ್ಲಾ ಉಪವಾಸವಿದ್ದು, ರಾತ್ರಿಯಲ್ಲಿ ದರ್ಭಾಸನವನ್ನು

ಕಲ್ಪಿಸಿ, ಯಾಗಾಗ್ನಿಗಳಂತೆ ಅದರಮೇಲೆ ವಾಸಿಸುತ್ತಿದ್ದರು ಆಗ ಅಲ್ಲಿ ಬ್ರಾಹ್ಮಣರು ಹೇಳುತ್ತಿದ್ದ ಪುಣ್ಯಕಥೆಗಳನ್ನು ಕೇಳುತ್ತಿದ್ದಹಾಗೆಯೇ ರಾತ್ರಿಯು ಕಳೆದು ಬೆಳಗಾಯಿತು. ಚೆನ್ನಾಗಿ ಬೆಳಕಾದಮೇಲೆ ಬ್ರಾಹ್ಮಣರು ಧರ್ಮರಾಜನನ್ನು ನೋಡಿ ಮುಂದೆ ಹೇಳುವ ಮಾತುಗಳನ್ನಾಡಿದರು.

ಇದು ಅರುವತ್ತುನಾಲ್ಕನೆಯ ಅಧ್ಯಾಯವು.

{ ಯುಧಿಷ್ಠಿರನು ಮಹೇಶ್ವರನನ್ನು ಪೂಜಿಸಿ, ದ್ರವ್ಯವನ್ನು ತೆಗೆದುಕೊಂಡು ತನ್ನ ನಗರಕ್ಕೆ ಹಿಂತಿರುಗಿದುದು. }

ಬ್ರಾಹ್ಮಣರು ಯುಧಿಷ್ಠಿರನನ್ನು ಕುರಿತು 'ಮಹಾರಾಜಾ! ಮೊದಲು ಮಹಾತ್ಮನಾದ ತ್ರ್ಯಂಬಕನಿಗೆ ಉಪಹಾರಗಳನ್ನು ನಿವೇದನ ಮಾಡಿಸು. ಆಮೇಲೆ ನಮ್ಮ ಕಾರ್ಯಕ್ಕೆ ಯತ್ನಿಸುವೆವು' ಎನಲು, ಧರ್ಮರಾಜನು ಹಾಗೆಯೇ ಉಪಹಾರಗಳನ್ನು ಮಾಡಿಸಿದನು. ಪುರೋಹಿತನು ಸಂಸ್ಕರಿಸಲ್ಪಟ್ಟ ಅಗ್ನಿಯನ್ನು ಹವಿಸ್ಸಿನಿಂದ ತೃಪ್ತಿಗೊಳಿಸಿ, ಮಂತ್ರಸಿದ್ಧವಾದ ಚರುವನ್ನು ಮಾಡಿಸಿದನು. ಆಮೇಲೆ ಆ ಪುರೋಹಿತನು ಮಂತ್ರಗಳಿಂದ ಪವಿತ್ರವಾದ ಪುಷ್ಪಗಳನ್ನು ತಂದು, ಕಡುಬು, ಪಾಯಸ, ಮಾಂಸ ಮುಂತಾದ ನಿವೇದನಗಳಿಂದ ಬಲಿಯನ್ನು ಕೊಡಿಸಿದನು. ವಿಚಿತ್ರಪುಷ್ಪಗಳಿಂದಲೂ, ಹಲವು ಬಗೆಯ ಅರಳುಗಳಿಂದಲೂ ಸ್ವಿಷ್ಟಕೃತ್ತೆಂಬ ಹೋಮವನ್ನು ಮಾಡಿಸಿದನು. ಆಮೇಲೆ ಕಿಂಕರರಿಗೂ ಉತ್ತಮವಾದ ಬಲಿಯನ್ನು ಅರ್ಪಿಸಿದನು. ಆಮೇಲೆ ಯಕ್ಷರಾಜನಾದ ಕುಬೇರನಿಗೂ ಮಾಣಿಭದ್ರನಿಗೂ, ಇತರ ಯಕ್ಷರಿಗೂ, ಭೂತಪತಿಗಳಿಗೂ ಎಳ್ಳುಂಡೆ, ಮಾಂಸ, ಮುಂತಾದುವುಗಳಿಂದ ಬಲಿಯನ್ನು ಮಾಡಿಸಿ ತೃಪ್ತಿಗೊಳಿಸಿದನು. ತರ್ಪಣ ಜಲದಿಂದಲೂ, ಹಲವು ಕೊಡಗಳಲ್ಲಿ ತುಂಬಿದ ಅನ್ನಗಳಿಂದಲೂ ಅವರಿಗೆಲ್ಲ ಉಪಹಾರಗಳನ್ನು ಅರ್ಪಿಸಿದನು. ಬ್ರಾಹ್ಮಣರಿಗೆ ಸಾವಿರಾರು ಗೋವುಗಳನ್ನು ದಾನಮಾಡಿದನು. ರಾತ್ರಿಸಂಚಾರಿಗಳಾದ ಭೂತಗಳಿಗೂ ಬಲಿಗಳನ್ನು ಕೊಡಿಸಿದನು. ಈ ಪೂಜಾಸಾಮಗ್ರಿ

ಗಳಿಂದ ಆ ಸ್ಥಳವೆಲ್ಲವೂ ಧೂಪ ದೀಪ ಗಂಧಗಳಿಂದಲೂ, ಪುಷ್ಪಗಳಿಂದ ಲೂ ಆವೃತವಾಗಿ ಮನೋಹರವಾಗಿದ್ದಿತು. ಹೀಗೆ ಧರ್ಮರಾಜನು ರುದ್ರನಿಗೂ, ರುದ್ರಗಣಗಳಿಗೂ ಪೂಜೆಯನ್ನು ಮಾಡಿದಮೇಲೆ, ವ್ಯಾಸ ನನ್ನು ಮುಂದಿಟ್ಟುಕೊಂಡು ರತ್ನಗಳ ನಿಧಿಯಿದ್ದ ಕಡೆಗೆ ಹೋದನು. ಅಲ್ಲಿ ಧನಾಧಿಪತಿಯಾದ ಕುಬೇರನನ್ನು ನಮಸ್ಕರಿಸಿ, ಪುಷ್ಪಗಳಿಂದ ಪೂಜಿಸಿ, ಎಳ್ಳುಂಡೆ, ಕಡುಬು, ಮೊದಲಾದ ಉಪಹಾರಗಳಿಂದ ತೃಪ್ತಿಪಡಿಸಿದನು. ಶಂಖ, ಪದ್ಮಾದಿ ನಿಧಿಗಳನ್ನೂ, ಆ ನಿಧಿಗಳ ಪಾಲಕರನ್ನೂ ಪೂಜೆ ಮಾಡಿ ಬ್ರಾಹ್ಮಣರಿಂದ ಸ್ವಸ್ತಿವಾಚನಗಳನ್ನು ಮಾಡಿಸಿದನು. ಆ ಬ್ರಾಹ್ಮ ಣರ ಪುಣ್ಯಾಹಘೋಷದಿಂದಲೂ, ತನ್ನ ನಿಜತೇಜಸ್ಸಿನಿಂದಲೂ ಬೆಳ ಗುತ್ತಿದ್ದ ಆ ಧರ್ಮರಾಜನು, ಸಂತೋಷದಿಂದ ಆ ನಿಧಿಯಿದ್ದ ಸ್ಥಳವನ್ನು ಅಗೆಯಿಸಲಾರಂಭಿಸಿದನು. ಆ ನೆಲವನ್ನಗೆಯುತಿದ್ದಹಾಗೆಯೇ ದೊಡ್ಡ ಪಾತ್ರೆಗಳು, ಅದರಿಂದ ಪದಾರ್ಥಗಳನ್ನೆತ್ತತಕ್ಕ ಸಣ್ಣ ಪಾತ್ರೆಗಳು, ಸೌಟು ಗಳು, ಬಟ್ಟಲುಗಳು, ಹಂಡೆಗಳು, ಕೊಡಗಳು, ಶ್ರಾವೆಗಳು, ಇವೇ ಮೊದಲಾಗಿ ಮನೋಹರಗಳೂ, ವಿಚಿತ್ರಗಳೂ ಆದ ಪಾತ್ರೆಗಳು ಸಾವಿ ರಾರು ಸಂಖ್ಯೆಯಿಂದ ಗೋಚರಿಸಿದುವು. ಅವನ್ನೆಲ್ಲ ಮೇಲಕ್ಕೆ ತೆಗೆ ಸಿದನು. ಓ ಮಹಾರಾಜಾ! ಈ ಪಾತ್ರೆಗಳನ್ನೆಲ್ಲ ಅಡಗಿಸಿಕೊಳ್ಳುವು ದಕ್ಕೆ ತಕ್ಕಂತೆ ಸಂದೂಕದಂತಿರುವ ದೊಡ್ಡ ಪಾತ್ರೆಯೊಂದು ಸಿಕ್ಕಿತು. ಅದು ಅರ್ಧತೊಲೆಯ ಭಾರವುಳ್ಳುದಾಗಿತ್ತು. ಧರ್ಮರಾಜನಿಗೆ ಅರು ವತ್ತುಲಕ್ಷ ಒಂಟೆಗಳೂ, ನೂರಿಪ್ಪತ್ತುಲಕ್ಷ ಕುದರೆಗಳೂ, ಲಕ್ಷಗಜಗಳೂ, ಲಕ್ಷ ಹೆಣ್ಣಾನೆಗಳೂ, ಲಕ್ಷ ರಥಗಳೂ, ಲಕ್ಷ ಶಕಟಗಳೂ, ಎಣಿಸುವುದ ಕ್ಕಾಗದಷ್ಟು ಹೇಸರಕತ್ತೆಗಳೂ, ಮನುಷ್ಯರೂ ವಾಹನಗಳಾಗಿ ಬಂದಿ ದ್ದುವು. ಆ ನಿಧಿಯಿಂದ ತೆಗೆದ ಧನವೂ ಹದಿನಾರು, ಎಂಟು, ಇಪ್ಪತ್ತುನಾ ಲ್ಕುಸಾವಿರ ಭಾರದಷ್ಟಿದ್ದುವು. ಯುಧಿಷ್ಠಿರನು ಅಷ್ಟು ದ್ರವ್ಯವನ್ನೂ ತಾನು ತಂದಿದ್ದ ವಾಹನಗಳಮೇಲೆ ಹೊರಿಸಿದನು. ತಿರುಗಿ ಅಲ್ಲಿ ಮಹಾದೇವ ನನ್ನು ಪೂಜಿಸಿ, ಅಲ್ಲಿ ತನಗೆ ಕಾಣಿಸಿದ ವ್ಯಾಸನಿಂದ ಅನುಜ್ಞೆಯನ್ನು ಪಡೆದು, ಪುರೋಹಿತರೊಡನೆ ಅಲ್ಲಿಂದ ಹಿಂತಿರುಗಿದನು. ಬರುವಾಗ ಒಂದೊಂದು ಕ್ರೋಶದೂರಕ್ಕೂ ವಿಶ್ರಾಂತಿಗಾಗಿ ಇಳಿಯುತ್ತ ಪ್ರಯಾಣ

ಮಾಡಿದನು. ಆ ಮಹಾಸೈನ್ಯವೂ ಪಾಂಡವರನ್ನು ಸಂತೋಷಗೊಳಿಸುತ್ತ ಆ ದ್ರವ್ಯಭಾರವನ್ನು ಹೊರಲಾರದೆ ಹೊತ್ತುಕೊಂಡು ಬಹುಕಷ್ಟದಿಂದ ನಗರಕ್ಕೆ ಬಂದು ಸೇರಿತು.

ಇದು ಅರುವತ್ತೈದನೆಯ ಅಧ್ಯಾಯವು.

ಕೃಷ್ಣನು ಬಲರಾಮ ಸುಭದ್ರಾದಿಗಳೊಡನೆ ಯಜ್ಞಕ್ಕಾಗಿ ಹಸ್ತಿನಾವತಿಗೆ ಬಂದುದು. ಉತ್ತರೆಯಲ್ಲಿ ಪರೀಕ್ಷಿತ್ತಿನ ಜನನವು. ಅಶ್ವತ್ಥಾಮನ ಅಸ್ತ್ರದಿಂದ ಶವಪ್ರಾಯವಾಗಿ ಹುಟ್ಟಿದ ಆ ಪರೀಕ್ಷಿತ್ತನ್ನು ಬದುಕಿಸಬೇಕೆಂದು ಕುಂತಿ ಮೊದಲಾದವರು ಕೃಷ್ಣನನ್ನು ಪ್ರಾರ್ಥಿಸಿದುದು.

ಓ ಜನಮೇಜಯರಾಜಾ! ಕೇಳು! ಇದೇ ಸಮಯದಲ್ಲಿ ಕೃಷ್ಣನು ಹಿಂದೆ ತಾನು ಹಸ್ತಿನಾವತಿಯಿಂದ ಹೊರಟಾಗ, ಧರ್ಮರಾಜನು ಪ್ರಾರ್ಥಿಸಿಕೊಂಡಿದ್ದಂತೆ ಅಶ್ವಮೇಧಯಾಗವು ಆರಂಭವಾದ ಸಮಯವನ್ನು ತಿಳಿದು, ವೃಷ್ಣಿಗಳೊಡನೆ ಹಸ್ತಿನಾವತಿಗೆ ಬಂದು ಸೇರಿದನು. ಪ್ರದ್ಯುಮ್ನ, ಸಾತ್ಯಕಿ, ಚಾರುದೇಷ್ಣ, ಸಾಂಬ, ಗದ, ಕೃತವರ್ಮ, ಸಾರಣ, ನಿಶಠ, ಉಲ್ಮುಖರೇ ಮೊದಲಾದ ಯಾದವರೂ ಅವನೊಡನೆ ಹೊರಟರು. ಕೃಷ್ಣನು ಬಲರಾಮನನ್ನು ಮುಂದಿಟ್ಟುಕೊಂಡು ಸುಭದ್ರೆಯನ್ನೂ ಕರೆದುಕೊಂಡು ಹೊರಟನು. ದ್ರೌಪದಿಯನ್ನೂ, ಉತ್ತರೆಯನ್ನೂ, ಕುಂತಿಯನ್ನೂ ನೋಡುವುದಕ್ಕಾಗಿಯೂ, ಯುದ್ಧದಲ್ಲಿ ಪತಿಹೀನರಾದ ಕ್ಷತ್ರಿಯಸ್ತ್ರೀಯರನ್ನು ಸಮಾಧಾನಗೊಳಿಸುವುದಕ್ಕಾಗಿಯೂ ಆ ಎಲ್ಲಾ ಯಾದವರೂ ಹಸ್ತಿನಾವತಿಗೆ ಬಂದರು. ಇವರ ಆಗಮನವನ್ನು ಕೇಳಿ ಧೃತರಾಷ್ಟ್ರನೂ, ವಿದುರನೂ ಅವರನ್ನೆಲ್ಲ ಆದರಿಸಿ ಬರಮಾಡಿಕೊಂಡನು. ಕೃಷ್ಣನು ಅಲ್ಲಿ ವಿದುರನಿಂದಲೂ, ಯುಯುತ್ಸುವಿನಿಂದಲೂ ವಿಶೇಷಸತ್ಕೃತನಾಗಿ ಅವರೊಡನೆ ಇರುತಿದ್ದನು. ಜನಮೇಜಯರಾಜಾ! ಹೀಗೆ ವೃಷ್ಣಿಗಳೆಲ್ಲರೂ ಅಲ್ಲಿಗೆ ಬಂದು ಸೇರಿದಿದ್ದ ಕಾಲದಲ್ಲಿಯೇ ನಿನ್ನ ತಂದೆ

ಯಾದ ಪರೀಕ್ಷಿತ್ತಿನ ಜನನವಾಯಿತು. ಆದರೇನು? ಅವನು ಗರ್ಭದಲ್ಲಿದ್ದಾಗ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಬೆಂದು ಕೇವಲ ಶವಪ್ರಾಯನಾಗಿ ಗರ್ಭದಿಂದ ಬಿದ್ದನು. ಅವನನ್ನು ನೋಡಿದಾಗ ಪುತ್ರೋತ್ಸವದ ಸಂತೋಷದೊಡನೆ ದುಃಖವೂ ಉಂಟಾಯಿತು. ಕೌರವವಂಶೋದ್ಧಾರಕನಾದ ಪುತ್ರನು ಹುಟ್ಟಿದನೆಂಬ ಸಂತೋಷ ಕೋಲಾಹಲವು ಜನಗಳಲ್ಲಿ ಪ್ರಬಲವಾಗಿ ದಿಕ್ಕುಗಳನ್ನೆಲ್ಲ ವ್ಯಾಪಿಸಿತು. ಇಷ್ಟರಲ್ಲಿ ಕೃಷ್ಣನು ಕಲಗಿದ ಇಂದ್ರಿಯವುಳ್ಳವನಾಗಿ, ಬಹುವೇಗದಿಂದ ಸಾತ್ಯಕಿಯನ್ನು ಕರೆದುಕೊಂಡು ಅಂತಃಪುರದ ಕಡೆಗೆ ಹೋದನು. ಇಷ್ಟರಲ್ಲಿ ಅವನ ಅತ್ತೆಯಾದ ಕುಂತಿಯೂ ಕೂಡ ವ್ಯಸನದಿಂದ ಕೂಗಿಕೊಳ್ಳುತ್ತ 'ಕೃಷ್ಣಾ! ಕೃಷ್ಣಾ! ಓಡು! ಓಡು' ಎಂದು ಬಾರಿಬಾರಿಗೂ ತ್ವರೆಪಡಿಸುತ್ತ ಕೃಷ್ಣನನ್ನು ನಿರ್ಬಂಧಿಸುತಿದ್ದಳು. ಕುಂತಿಯ ಹಿಂದೆ ದ್ರೌಪದಿಯೂ, ಸುಭದ್ರೆಯೂ ಓಡಿಬರುತ್ತಿದ್ದರು. ಇನ್ನೂ ಅಂತಃಪುರದ ಸ್ತ್ರೀಯರೆಲ್ಲರೂ ದೈನ್ಯದಿಂದ ಮೊರೆಯಿಡುತ್ತ ಬಂದರು. ಆಗ ಕುಂತಿಯು ಕೃಷ್ಣನ ಮುಂದೆ ಬಂದು ನಿಂತು ಕಣ್ಣೀರು ಬಿಡುತ್ತ, ಗದ್ಗದಸ್ವರದಿಂದ 'ಓ ರಾಜಶಾರ್ದೂಲಾ! ವಾಸುದೇವಾ! ಮಹಾಬಾಹೂ! ನಿನ್ನಿಂದ ದೇವಕಿಯು ಸುಪುತ್ರವತಿಯಾದಳು. ನೀನೇ ನಮಗೆ ಗತಿ! ನಮ್ಮನ್ನು ನೆಲೆಗೊಳಿಸತಕ್ಕವನೂ ನೀನೇ. ನಮ್ಮ ಕುಲವೇ ನಿನ್ನ ಅಧೀನವು. ಅದೋ! ನಿನ್ನ ತಂಗಿಯ ಗರ್ಭದಲ್ಲಿ ಹುಟ್ಟಿದ ಶಿಶುವು ಅಶ್ವತ್ಥಾಮನ ಅಸ್ತ್ರದಿಂದ ಶವಪ್ರಾಯನಾಗಿ ಜನಿಸಿರುವುದು. ಅದನ್ನು ಬದುಕಿಸಬೇಕು. ಆ ಮೃತಶಿಶುವನ್ನು ನೀನು ಹೋಗಿ ನೋಡು. ಕೃಷ್ಣಾ! ಆ ಪುತ್ರನನ್ನು ಬದುಕಿಸುವುದರಿಂದ ನೀನು ಉತ್ತರೆ, ಸುಭದ್ರೆ, ದ್ರೌಪದಿ, ನಾನು, ಧರ್ಮಪುತ್ರನು, ಭೀಮಾರ್ಜುನರು, ನಕುಲಸಹದೇವರು ಇವರೆಲ್ಲರನ್ನೂ ಬದುಕಿಸಿದಂತಾಗುವುದು. ಈಗ ನನ್ನ ಮತ್ತು ಪಾಂಡವರೆಲ್ಲರ ಪ್ರಾಣಗಳೆಲ್ಲವೂ ಅವನೊಬ್ಬನ ಅಧೀನವಾಗಿದೆ. ಪಾಂಡುವಿಗೂ, ನನ್ನ ಮಾವನಿಗೂ, ಅಭಿಮನ್ಯುವಿಗೂ ಅವನಿಂದಲೇ ಪಿಂಡವು ಸಲ್ಲಬೇಕಾಗಿರುವುದು. ಮೃತಪ್ರಾಯನಾಗಿರುವ ಅವನನ್ನು ಬದುಕಿಸಿದರೆ, ಅವನಿಗೆ ಮಾತ್ರವಲ್ಲದೆ ಎಲ್ಲರಿಗೂ ನೀನು ಪ್ರಿಯವನ್ನುಂಟುಮಾಡಿದಂತಾಗುವುದು. ಕೃಷ್ಣಾ! ಉತ್ತರೆಯು ಹಿಂದೆ ಅಭಿಮ

ನ್ಯುವು ತನಗೆ ಹೇಳಿದ ಮಾತನ್ನೇ ಈಗ ನಿನಗೆ ಜ್ಞಾಪಿಸುತ್ತಿರುವಳು. ಆಗ ಅಭಿಮನ್ಯುವು ಉತ್ತರೆಗೆ 'ಪ್ರಿಯೇ! ನಿನ್ನ ಮಗನು ನನ್ನ ಮಾವನ ಮನೆಯಲ್ಲಿ ಸೇರುವನು. ಮತ್ತು ಅವನು ವೃಷ್ಣಿಗಳು, ಅಂಧಕರು ಮೊದಲಾದ ಯಾದವರ ಗೃಹದಲ್ಲಿಯೇ ಇದ್ದು, ಧನುರ್ವೇದವನ್ನೂ, ಅಸ್ತ್ರಗಳನ್ನೂ, ನೀತಿಶಾಸ್ತ್ರಗಳನ್ನೂ ಕಲಿಯುವನು' ಎಂದು ಹೇಳಿದ್ದನಂತೆ. ಆಗ ಅವನು ಪ್ರೀತಿಯಿಂದ ಹೇಳಿದ ಮಾತು ಈಗ ಹಾಗೆಯೇ ನಡೆಯಬೇಕಾಗಿ ಬಂದಿದೆ. ಓ ಮಧುಸೂದನಾ! ನಾವೆಲ್ಲರೂ ಕೈಜೋಡಿಸಿ ಬೇಡುವೆವು. ಕುರುವಂಶದ ಹಿತಕ್ಕಾಗಿ ನೀನು ಅವನನ್ನು ಬದುಕಿಸಬೇಕು' ಎಂದು ಹೇಳಿ, ಎರಡು ತೋಳುಗಳನ್ನೂ ಮೇಲಕ್ಕೆತ್ತಿ ದೈನ್ಯದಿಂದ ಮೊರೆಯಿಟ್ಟಳು. ಅವಳೂ, ಇತರ ಸ್ತ್ರೀಯರೂ ದುಃಖದಿಂದ ಮೂರ್ಛಿತರಾಗಿ ಬಿದ್ದರು. ಸ್ತ್ರೀಯರೆಲ್ಲರೂ ಆಗ 'ಕೃಷ್ಣನ ಸೋದರಳಿಯನು ಮೃತಶಿಶುವಾಗಿ ಹುಟ್ಟಿದನಲ್ಲಾ!' ಎಂದು ಕೂಗುತ್ತಿದ್ದರು. ಆಗ ಕೃಷ್ಣನು ಮೂರ್ಛಿತಳಾಗಿ ಬಿದ್ದ ಕುಂತಿಯನ್ನು ಕೈಹಿಡಿದೆತ್ತಿ ಸಮಾಧಾನಪಡಿಸಿದನು.

ಇದು ಅರುವತ್ತಾರನೆಯ ಅಧ್ಯಾಯವು.



ಸುಭದ್ರೆಯು ಕೃಷ್ಣನಲ್ಲಿ ಮೊರೆಯಿಟ್ಟು ಪ್ರಾರ್ಥಿಸಿದುದು.

ಕುಂತಿಯು ಮೂರ್ಛೆತಿಳಿದೆದ್ದಮೇಲೆ, ಸುಭದ್ರೆಯು ಮಹಾವ್ಯಸನದಿಂದ ಕೃಷ್ಣನ ಮುಂದೆ ಗೋಳಿಡುತ್ತ 'ಪುಂಡರೀಕಾಕ್ಷಾ! ನಿನ್ನ ಪ್ರಿಯಸಖನಾದ ಅರ್ಜುನನ ಮೊಮ್ಮಗನ ಅವಸ್ಥೆಯನ್ನು ನೋಡು. ಕೌರವರೆಲ್ಲರೂ ಸತ್ತುದಲ್ಲದೆ, ಆ ವಂಶದಲ್ಲಿ ಹುಟ್ಟಿದ ಈ ಶಿಶುವೂ ಕೇವಲಕ್ಷೀಣವಾಗಿ, ಮೃತಪ್ರಾಯವಾಗಿ ಬಿದ್ದಿತಲ್ಲ? ಅಶ್ವತ್ಥಾಮನಿಂದ ಭೀಮನಿಗಾಗಿ ಪ್ರಯೋಗಿಸಲ್ಪಟ್ಟ ಇಷೀಕಾಸ್ತ್ರವು ಉತ್ತರೆಯಮೇಲೂ, ಪಾರ್ಥನಮೇಲೂ, ನನ್ನ ಮೇಲೆಯೂ ಬಿದ್ದಿರುವುದು. ಆ ಬಾಣವು ನನ್ನ ಹೃದಯದಲ್ಲಿ ಈಗಲೂ ಜ್ವಲಿಸುತ್ತಿರುವುದು. ಓ ಪ್ರಭೂ! ಪುತ್ರಸಹಿತನಾದ ಆ ನನ್ನ ಪ್ರಿಯನನ್ನು ನಾನು ಕಾಣದಂತಾಯಿತಲ್ಲಾ! ಈಗಿನ ಸ್ಥಿತಿಯನ್ನು ಕೇಳಿದರೆ

ಧರ್ಮಾತ್ಮನಾದ ಯುಧಿಷ್ಠಿರನೂ, ಭೀಮಾರ್ಜುನರೂ, ನಕುಲಸಹದೇವರೂ ಏನು ಹೇಳುವರು? ಅಭಿಮನ್ಯುವಿನ ಪುತ್ರನು ಮೃತನಾಗಿಯೇ ಹುಟ್ಟಿದನೆಂದು ಕೇಳಿದಾಗ ಅವರ ಮನಸ್ಸು ಹೇಗಿರುವುದು? ಈಗ ಅಶ್ವತ್ಥಾಮನ ಅಸ್ತ್ರವು ಪಾಂಡವರೆಲ್ಲರನ್ನೇ ಕೊಂದಂತಾಯಿತು. ಆ ಅಭಿಮನ್ಯುವು ಅವನ ತಂದೆ ತಾತಂದಿರಿಗೆಲ್ಲ ಅತ್ಯಂತ ಪ್ರಿಯನು. ಅವರು ಇದನ್ನು ಕೇಳಿ ಹೇಗೆ ಸಹಿಸುವರು? ಇದಕ್ಕಿಂತಲೂ ನಮಗೆ ಅಧಿಕ ದುಃಖವೇನಿರುವುದು? ಕೃಷ್ಣಾ! ನಾನು ನಿನ್ನನ್ನು ತಲೆಬಗ್ಗಿ ಬೇಡುವೆನು. ಈ ಕುಂತಿಯನ್ನೂ, ದ್ರೌಪದಿಯನ್ನೂ ನೋಡು. ಇವರ ದುಃಖವನ್ನು ನೀಗಿಸು. ಹಿಂದೆ ದ್ರೋಣಪುತ್ರನು ಪಾಂಡವರ ಗರ್ಭಗಳನ್ನೆಲ್ಲ ನಿರ್ಮೂಲಮಾಡುವುದಕ್ಕಾಗಿ ಅಪಾಂಡವಾಸ್ತ್ರವನ್ನು ಪ್ರಯೋಗಿಸಿದಾಗ ನೀನು ಕೋಪದಿಂದ ಹೇಳಿದ ಮಾತು ನಿನ್ನ ನೆನಪಿನಲ್ಲಿರಲಿ. ಆಗಲೇ ನೀನು ಅಶ್ವತ್ಥಾಮನನ್ನು ನೋಡಿ ಕೋಪದಿಂದ 'ಎಲೆ ನರಾಧಮಾ! ಬ್ರಹ್ಮಬಂಧೂ! ನಿನ್ನ ಪ್ರಯತ್ನವನ್ನು ನಾನು ವಿಫಲಮಾಡುವೆನು. ಅರ್ಜುನ ಪೌತ್ರನನ್ನು ನಾನು ಬದುಕಿಸುವೆನು' ಎಂದು ಹೇಳಿದೆಯಲ್ಲವೆ? ಆ ನಿನ್ನ ಪ್ರತಿಜ್ಞೆಯನ್ನು ನಾನು ಕೇಳಿದ್ದೆನು. ನಿನ್ನ ಶಕ್ತಿಯನ್ನೂ ನಾನು ಬಲ್ಲೆನು. ಈಗ ನಿನ್ನನ್ನು ಪ್ರಾರ್ಥಿಸುವೆನು. ಆ ಪುತ್ರನನ್ನು ಬದುಕಿಸು. ಕೃಷ್ಣಾ! ನೀನು ಮಾಡಿದ ಪ್ರತಿಜ್ಞೆಯನ್ನು ನೆರವೇರಿಸದಿದ್ದರೆ ನಾನೂ ಈಗ ಮೃತಳಾದಂತೆಯೇ ತಿಳಿ. ನೀನು ಬದುಕಿರುವಾಗಲೂ ಆ ಮಗನನ್ನು ನೀನು ಬದುಕಿಸದಿದ್ದರೆ, ನಿನ್ನಿಂದ ನಾನು ಪಡೆಯಬೇಕಾದುದು ಬೇರೇನಿದೆ? ಆದುದರಿಂದ ಈ ಮೃತಪುತ್ರನನ್ನು ಬದುಕಿಸು. ನಮ್ಮೆಲ್ಲರಿಗೂ ಕಣ್ಣಾಗಿರುವ ಈ ಮಗುವನ್ನು, ಮಳೆಯು ಪೈರನ್ನು ಚಿಗುರಿಸುವಹಾಗೆ ನೀನು ಪುನರ್ಜೀವಿತನನ್ನಾಗಿ ಮಾಡಬೇಕು. ಓ ಕೇಶವಾ! ನೀನಾದರೋ ಧರ್ಮಾತ್ಮನು! ಸತ್ಯವಾಕ್ಕುಳ್ಳವನು! ಸತ್ಯಪರಾಕ್ರಮನು! ಆದುದರಿಂದ ನೀನು ನಿನ್ನ ಪ್ರತಿಜ್ಞೆಯನ್ನು ಸುಳ್ಳಾಗಿಸಬಾರದು. ನೀನು ಮನಸ್ಸಿಟ್ಟರೆ ತ್ರೈಲೋಕ್ಯವನ್ನೂ ಪುನಃ ಬದುಕಿಸಬಲ್ಲೆ. ಹೀಗಿರುವಾಗ ನಿನಗೆ ಪ್ರಿಯನಾಗಿ, ಸೋದರಳಿಯನೆನಿಸಿದ ಇವನನ್ನು ಬದುಕಿಸುವುದು ನಿನಗೆ ಅಸಾಧ್ಯವೆ? ನಿನ್ನ ಪ್ರಭಾವವನ್ನು ತಿಳಿದೇ ನಾನು ನಿನ್ನನ್ನು

ಯಾಚಿಸುವೆನು. ಪಾಂಡುಪುತ್ರರಲ್ಲಿ ಇದೊಂದು ಪರಮಾನುಗ್ರಹವನ್ನು ನೀನು ತೋರಿಸಬೇಕು. ನಾನು ತಂಗಿಯೆಂಬ ಅಭಿಮಾನದಿಂದಾಗಲಿ, ಮಗನನ್ನು ಕಳೆದುಕೊಂಡವಳೆಂಬ ಕನಿಕರದಿಂದಲಾಗಲಿ, ನನ್ನಲ್ಲಿ ಮರೆ ಹೊಕ್ಕವಳೆಂಬ ಶರಣಾಗತವಾತ್ಸಲ್ಯದಿಂದಲಾಗಲಿ ನೀನು ಈ ಕಾರ್ಯವನ್ನು ಮಾಡಿಯೇ ತೀರಬೇಕು' ಎಂದಳು.

ಇದು ಅರುವತ್ತೇಳನೆಯ ಅಧ್ಯಾಯವು.

---

ಕೃಷ್ಣನು ಪರೀಕ್ಷಿತ್ತಿನ ಸೂತಿಕಾಗೃಹವನ್ನು ಪ್ರವೇಶಿಸಿದುದು. ಅಲ್ಲಿ ಉತ್ತರೆಯು ಕೃಷ್ಣನ ಮುಂದೆ ರೋದಿಸುತ್ತ ತನ್ನ ಪುತ್ರನನ್ನು ಬದುಕಿಸಬೇಕೆಂದು ಕೇಳಿದುದು.

ಓ ಜನಮೇಜಯರಾಜಾ! ಕೇಳು! ಈ ಮಾತನ್ನು ಕೇಳಿ ಕೃಷ್ಣನು ಕನಿಕರಗೊಂಡು, ಅಲ್ಲಿದ್ದ ಜನಗಳಿಗೆಲ್ಲ ಸಂತೋಷವಾಗುವಂತೆ 'ಸರಿ, ಹಾಗೆಯೇ ಆಗಲಿ' ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಈ ಮಾತನ್ನು ಕೇಳಿದಾಗ, ಅಲ್ಲಿದ್ದ ಜನರಿಗೆ ಬೇಸಗೆಯಿಂದ ಬೆಂದವರಮೇಲೆ ಮಳೆ ಬಿದ್ದಂತೆ ಆಪ್ಯಾಯನವಾಯಿತು. ಒಡನೆಯೇ ಕೃಷ್ಣನು ನಿನ್ನ ತಂದೆಯ ಸೂತಿಕಾಗೃಹವನ್ನು ಪ್ರವೇಶಿಸಿದನು. ಆ ಪ್ರಸವಗೃಹಕ್ಕೆ ವಿಧ್ಯುಕ್ತವಾದ ಅಲಂಕಾರಗಳೆಲ್ಲವನ್ನೂ ಮಾಡಿದ್ದರು. ಎಲ್ಲಾ ಕಡೆಯೂ ಬಿಳಿಯ ಹೂಗಳನ್ನು ಚೆಲ್ಲಿರುವರು. ನಾನಾದಿಕ್ಕುಗಳಲ್ಲಿಯೂ ಪೂರ್ಣಕುಂಭಗಳನ್ನಿರಿಸಿರುವರು. ತುಪ್ಪದಲ್ಲಿ ಅದ್ದಿದ ತಿಂದುಕವೃಕ್ಷದ ದೀವಟಿಗೆಗಳನ್ನು ಅಲ್ಲಲ್ಲಿ ಹಚ್ಚಿಟ್ಟಿರುವರು. ಅಲ್ಲಲ್ಲಿ ಸಾಸುವೆಗಳನ್ನೂ, ಅಸ್ತ್ರಗಳನ್ನೂ ಇಟ್ಟಿರುವರು. ನಾಲ್ಕುಕಡೆಗಳಲ್ಲಿಯೂ ಅಗ್ನಿಗಳು ಜ್ವಲಿಸುತ್ತಿರುವುವು. ವೃದ್ಧನಾರಿಯರು ಸುತ್ತಲೂ ನಿಂತಿರುವರು. ಸಮರ್ಥರಾದ ವೈದ್ಯರು ಸಿದ್ಧರಾಗಿರುವರು. ಒಳ್ಳೇ ಕುಶಲರಾದ ಜನಗಳು ರಾಕ್ಷಸವಿನಾಶಕಗಳಾದ ದ್ರವ್ಯಗಳನ್ನು ಎಲ್ಲಾ ಕಡೆಯೂ ಇಟ್ಟಿರುವರು. ಕೃಷ್ಣನು ಅಲ್ಲಿನ ಸನ್ನಿವೇಶವನ್ನು ನೋಡಿ ಸಂತೋಷಗೊಂಡು 'ಭಲೆ! ಭಲೆ!' ಎಂದು ಕೊಂಡಾಡಿ

ದನು. ಹೀಗೆ ಕೃಷ್ಣನು ಸಂತೋಷದಿಂದಿರುವಾಗ, ದ್ರೌಪದಿಯು ಥಟ್ಟನೆ ಉತ್ತರೆಯ ಬಳಿಗೆ ಬಂದು 'ಅಮ್ಮಾ! ಅದೋ! ನಿನ್ನ ಗಂಡನ ಸೋದರ ಮಾವನಾದ ಶ್ರೀಕೃಷ್ಣನು ಬರುತ್ತಿರುವನು. ಅವನ ಮಹಿಮೆಯು ಅಸಾಧಾರಣವಾದುದು. ನರನಾರಾಯಣರೆಂಬ ಪುರಾತನಮಹರ್ಷಿಗಳಲ್ಲಿ ಈತನೊಬ್ಬನು. ಅಚಿಂತ್ಯಪ್ರಭಾವವುಳ್ಳವನು. ಯಾರಿಗೂ ಸೋಲದ ವನು' ಎಂದಳು. ಆಗ ಉತ್ತರೆಯು ಕಣ್ಣೀರನ್ನೊರೆಸಿಕೊಂಡು, ದುಃಖ ಗದ್ಗದವಾದ ಕಂಠಸ್ವರವನ್ನು ಅಡಗಿಸಿಕೊಂಡು, ದೇವದೇವನಲ್ಲಿ ಶರಣು ಹೊಗುವಂತೆ, ಆ ಕೃಷ್ಣನಲ್ಲಿ ಮೊರೆಯಿಡುವುದಕ್ಕಾಗಿ ಬಂದಳು. ಒಳ್ಳೇ ಶುದ್ಧವಾದ ಬಟ್ಟೆಯನ್ನು ಸುತ್ತಿಕೊಂಡು, ದುಃಖಿತವಾದ ಹೃದಯದೊಡನೆ ಆ ಕೃಷ್ಣನಿಗಿದಿರಾಗಿ ಅಳುತ್ತ ಮುಂದೆ ಬಂದು 'ಓ ಪುಂಡರೀಕಾಕ್ಷಾ! ನಮ್ಮ ಗತಿಯನ್ನು ನೋಡು. ಈಗ ನಾನೂ, ನನ್ನ ಪತಿಯೂ ಪುತ್ರ ಹೀನರಾದೆವು. ಓ ವೀರಾಗ್ರಣೀ! ನಮ್ಮಿಬ್ಬರ ಪುತ್ರನನ್ನು ಮೃತ್ಯುವು ಬಲಾತ್ಕಾರದಿಂದ ಎಳೆದುಕೊಂಡುಹೋಯಿತು. ತಲೆಬಗ್ಗಿ ಪ್ರಾರ್ಥಿಸು ವೆನು. ದ್ರೋಣಪುತ್ರನ ಅಸ್ತ್ರದಿಂದ ದಗ್ಧನಾದ ನನ್ನ ಮಗನನ್ನು ಬದು ಕಿಸು. ಮೊದಲೇ ಧರ್ಮರಾಜನಾಗಲಿ, ಭೀಮನಾಗಲಿ, ನೀನಾಗಲಿ "ಆ ಇಷೀಕಾಸ್ತ್ರದಿಂದ ಮುಗ್ಧೆಯಾದ ಈ ತಾಯಿಯೇ ಸಾಯಲೆಂ"ದು ಹೇಳಿದ್ದ ಪಕ್ಷದಲ್ಲಿ, ಆಗ ನಾನು ಸತ್ತು, ಈ ಶಿಶುವಾದರೂ ಬದುಕಿಕೊಳ್ಳು ತ್ತಿದ್ದಿತು. ದುರಾತ್ಮನಾದ ದ್ರೋಣಪುತ್ರನು ಸ್ವಲ್ಪವೂ ಕನಿಕರವಿಲ್ಲದೆ ನನ್ನ ಗರ್ಭದಲ್ಲಿದ್ದ ಈ ಶಿಶುವಿನಮೇಲೆ ಬ್ರಹ್ಮಾಸ್ತ್ರವನ್ನು ಬಿಟ್ಟನಲ್ಲವೆ? ಈ ಘಾತುಕಕೃತ್ಯದಿಂದ ಅವನಿಗಾದರೂ ಬಂದ ಫಲವೇನು? ಕೃಷ್ಣಾ! ತಲೆಬಗ್ಗಿ ಬೇಡುವೆನು. ಇವನನ್ನು ನೀನು ಬದುಕಿಸದಿದ್ದರೆ ನಾನೂ ಪ್ರಾಣ ಗಳನ್ನು ಬಿಡುವೆನು. ಇವನಲ್ಲಿ ನಾನು ಎಷ್ಟೋ ಮನೋರಥಗಳನ್ನಿಟ್ಟು ಕೊಂಡಿದ್ದೆನು. ಆ ಮನೋರಥಗಳನ್ನೆಲ್ಲ ದ್ರೋಣಪುತ್ರನು ಒಂದೇ ಸಲಕ್ಕೆ ಕೆಡಿಸಿಬಿಟ್ಟನು. ಕೇಶವಾ! ಇನ್ನು ನಾನು ಬದುಕಿರುವುದೇಕೆ? ಮಗುವನ್ನೆತ್ತಿಕೊಂಡೇ ನಿನ್ನ ಪಾದಗಳಿಗೆ ಸಂತೋಷದಿಂದ ನಮಸ್ಕರಿಸ ಬೇಕೆಂದು ಆಸೆಪಟ್ಟಿದ್ದೆನು. ಆ ಕೋರಿಕೆಯೆಲ್ಲವೂ ವ್ಯರ್ಥವಾಯಿತು. ಅಭಿಮನ್ಯುಪುತ್ರನಾದ ಈ ಶಿಶುವು ಸತ್ತುದರಿಂದ ನನ್ನ ಕೋರಿಕೆಗಳೆಲ್ಲವೂ

ವ್ಯರ್ಥವಾದುವು. ಅಭಿಮನ್ಯುವು ನಿನಗೆ ಅತ್ಯಂತಪ್ರಿಯನಲ್ಲವೆ? ಅವನ ಮಗನು ಬ್ರಹ್ಮಾಸ್ತ್ರದಿಂದ ಯಾವ ಅವಸ್ಥೆಯನ್ನು ಹೊಂದಿರುವನೋ ನೋಡು. ಅಯ್ಯೋ! ಇವನೂ ಇವನ ತಂದೆಯಂತೆಯೇ ನನ್ನಲ್ಲಿ ದಯಾಶೂನ್ಯನೂ, ಕೃತಘ್ನನೂ ಆದನೇ? ಪಾಂಡವರ ರಾಜ್ಯೈಶ್ವರ್ಯವನ್ನೆಲ್ಲ ಬಿಟ್ಟು, ನನ್ನನ್ನೂ ತೊರೆದು ಯಮಪುರಿಗೆ ಹೋದನಲ್ಲವೆ? ಯುದ್ಧದಲ್ಲಿ ನನ್ನ ಪತಿಯು ಸತ್ತಾಗಲೇ 'ನಿನ್ನೊಡನೆ ನಾನೂ ಬಂದುಬಿಡುವೆನು' ಎಂದು ನಾನು ಪ್ರತಿಜ್ಞೆಮಾಡಿದ್ದೆನು. ಕಠಿನಹೃದಯಳಾದ ನಾನು ಆ ಕಾರ್ಯವನ್ನು ಮಾಡದೆ ಜೀವದಾಸೆಯಿಂದ ಇನ್ನೂ ಬದುಕಿರುವೆನು. ಇಂತಹ ನಾನು ಆಮೇಲೆ ಪರಲೋಕಕ್ಕೆ ಹೋದರೂ, ನನ್ನ ಪತಿಯು ಅಲ್ಲಿ ನನ್ನನ್ನು ಏನೆಂದು ಹೇಳುವನು?

ಇದು ಅರುವತ್ತೆಂಟನೆಯ ಅಧ್ಯಾಯವು.

ಕೃಷ್ಣನು ಶಪಥಮಾಡಿ ಪರೀಕ್ಷಿತ್ತನ್ನು ಪಾದಸ್ಪರ್ಶದಿಂದ ಬದುಕಿಸಿದುದು.

ಓ ಜನಮೇಜಯರಾಜಾ! ಕೇಳು! ಉತ್ತರೆಯು ಹೀಗೆ ಹುಚ್ಚುಹಿಡಿದಂತೆ ವಿಲಪಿಸುತ್ತ, ಪುತ್ರಶೋಕದಿಂದ ಮೂರ್ಛಿತಳಾಗಿ ಕೆಳಗೆ ಬಿದ್ದುಬಿಟ್ಟಳು. ಇವಳು ಬಿದ್ದುದನ್ನು ನೋಡಿ ಕುಂತಿಯೂ, ಇತರ ಕೌರವಸ್ತ್ರೀಯರೂ ಗಟ್ಟಿಯಾಗಿ ರೋದಿಸತೊಡಗಿದರು. ಒಂದು ಮುಹೂರ್ತಕಾಲದವರೆಗೆ ಪಾಂಡವರ ಗೃಹವು ಗೋಳಾಟದಿಂದ ತುಂಬಿ, ನೋಡುವುದಕ್ಕೇ ಸಾಧ್ಯವಿಲ್ಲದಷ್ಟು ಶೋಚನೀಯಸ್ಥಿತಿಯಲ್ಲಿದ್ದಿತು. ಮುಹೂರ್ತಕಾಲದವರೆಗೆ ಉತ್ತರೆಯು ಪ್ರಜ್ಞೆಯಿಲ್ಲದೆ ಬಿದ್ದಿದ್ದು, ಆಮೇಲೆ ಮೆಲ್ಲಗೆ ಚೇತರಿಸಿಕೊಂಡು, ಆ ಮೃತಶಿಶುವನ್ನು ಎತ್ತಿ ತೊಡೆಯಮೇಲಿಟ್ಟುಕೊಂಡು ಹೀಗೆಂದು ಹೇಳುವಳು. 'ಕುಮಾರಾ! ನೀನು ಅಂತಹ ಧರ್ಮಜ್ಞನ ಮಗನಾಗಿ ಧರ್ಮವನ್ನು ತಿಳಿಯದೆಹೋದೆಯಾ? ಯಾದವಕುಲಕ್ಕೆಲ್ಲ ಪ್ರಧಾನನಾದ ಕೃಷ್ಣನು ಬಂದು ಮುಂದೆ ನಿಂತಿರುವಾಗಲೂ ಮೇಲೆದ್ದು ನಮಸ್ಕಾರಮಾಡದೆ ಮಲಗಿರುವೆಯಲ್ಲಾ? ಮಗೂ! ನೀನು ನಿನ್ನ ತಂದೆ

ಯನ್ನು ಕಂಡಾಗ ಈ ನನ್ನ ಮಾತನ್ನು ಹೇಳು. “ಕಾಲವು ಬಂದಹೊರತು ಯಾವ ಪ್ರಾಣಿಗಳಿಗೂ ಸಾಯುವುದು ಸಾಧ್ಯವಲ್ಲ. ಇದಕ್ಕೆ ನಾನೇ ನಿದರ್ಶನವು. ಪತಿಯನ್ನು ಕಳೆದುಕೊಂಡೆನು! ಪುತ್ರನನ್ನು ಕಳೆದುಕೊಂಡೆನು! ಸಮಸ್ತ ಮಂಗಳವೂ ಹೋಯಿತು! ಏನೂ ಇಲ್ಲದ ಶೂನ್ಯಪ್ರಾಯಳಾದೆನು! ಇಷ್ಟಾದರೂ ನಾನು ಇನ್ನೂ ಸಾಯದಿರುವೆನಲ್ಲವೆ?” ಈಗಲೂ ಧರ್ಮರಾಜನ ಅನುಮತಿಯನ್ನು ಪಡೆದು ವಿಷವನ್ನಾದರೂ ಕುಡಿಯುವೆನು. ಬೆಂಕಿಯಲ್ಲಿಯಾದರೂ ಬೀಳುವೆನು. ಅಯ್ಯೋ! ಪತಿಪುತ್ರರನ್ನು ಕಳೆದುಕೊಂಡ ನನ್ನ ಹೃದಯವಾದರೂ ಸಹಸ್ರಭಾಗವಾಗಿ ಭೇದಿಸಿಹೋಗಬಾರದೆ? ಪುತ್ರಾ! ಏಳು! ನಿನಗಾಗಿ ದುಃಖಸಮುದ್ರದಲ್ಲಿ ಮುಳುಗಿ ಸಂಕಟಪಡುತ್ತಿರುವ ಈ ನಿನ್ನ ಮುತ್ತಜ್ಜಿಯನ್ನು ನೋಡು! ನಿನ್ನ ಅಜ್ಜಿಯಾದ ಪಾಂಚಾಲಿಯನ್ನು ನೋಡು. ಬೇಡರ ಬಾಣದಿಂದ ಭೇದಿಸಲ್ಪಟ್ಟ ಜಿಂಕೆಯಂತೆ ದುಃಖಿತೆಯಾದ ನನ್ನನ್ನು ನೋಡು. ಲೋಕನಾಥನೂ, ಪುಂಡರೀಕಾಕ್ಷನೂ ಆದ ಈ ಕೃಷ್ಣನ ಪ್ರಸನ್ನಮುಖವನ್ನಾದರೂ ನೋಡು. ನಿನ್ನ ತಂದೆಯು ಅವನನ್ನು ಮೊದಲು ಹೇಗೆ ಪ್ರೀತಿಸಿ ನೋಡುತ್ತಿದ್ದನೋ, ಹಾಗೆ ನೀನೂ ನೋಡಬಾರದೆ?' ಎಂದು ಹೇಳುತ್ತ ತಿರುಗಿ ಮೂರ್ಛೆಬಿದ್ದಳು. ಆಮೇಲೆ ಅಲ್ಲಿದ್ದ ಸ್ತ್ರೀಯರು ಅವಳನ್ನು ಮೆಲ್ಲಗೆ ಸಮಾಧಾನಪಡಿಸಿ ಎಬ್ಬಿಸಿದರು. ಅವಳು ತಿರುಗಿ ಭೂಮಿಯಲ್ಲಿ ಬಿದ್ದು ಕೃಷ್ಣನಿಗೆ ನಮಸ್ಕರಿಸಿದಳು. ಅವಳ ಗೋಳಾಟವನ್ನು ಕೇಳಿದೊಡನೆ ಕೃಷ್ಣನು ಬ್ರಹ್ಮಾಸ್ತ್ರವನ್ನು ಉಪಸಂಹಾರಮಾಡಲು, ಆಚಮನವನ್ನು ಮಾಡಿ ಶುದ್ಧನಾಗಿ ಬಂದನು. ಮತ್ತು ಅಲ್ಲಿದ್ದ ಜನರೆಲ್ಲರೂ ಕೇಳುವಹಾಗೆ ಘಟ್ಟಿಯಾಗಿ ಕೂಗಿ ಹೀಗೆಂದು ಪ್ರತಿಜ್ಞೆಮಾಡಿದನು. “ಎಲೆ ಕುಮಾರೀ! ಉತ್ತರೇ! ನನ್ನ ಮಾತು ಎಂದಿಗೂ ಸುಳ್ಳಾಗದು. ನಾನು ಹೇಳಿದಂತೆಯೇ ನಡೆಯುವುದು. ಎಲ್ಲರೂ ನೋಡುತ್ತಿರುವಹಾಗೆಯೇ ಇವನನ್ನು ಬದುಕಿಸುವೆನು ನೋಡು. “ನಾನು ವಿನೋದಕ್ಕಾಗಿಯೂ ಹಿಂದೆ ಎಂದೂ ಸುಳ್ಳಾಡಿದವನಲ್ಲ, ಮತ್ತು ಯುದ್ಧದಲ್ಲಿ ಬೆನ್ನು ತೋರಿಸಿದವನೂ ಅಲ್ಲವೆಂಬುದು ನಿಶ್ಚಯವಾಗಿದ್ದರೆ, ಈ ಶಿಶುವು ಬದುಕಲಿ! ಲೋಕದಲ್ಲಿ ಧರ್ಮವೂ, ವಿಶೇಷವಾಗಿ ಬ್ರಾಹ್ಮಣರೂ ನನಗೆ ಪ್ರಿಯ

ವಾಗಿರುವುದು ಸತ್ಯವಾಗಿದ್ದರೆ, ಈ ಅಭಿಮನ್ಯುಪುತ್ರನು ಬದುಕಿಕೊಳ್ಳಲಿ. ನಾನು ಎಂದಿಗೂ ಅರ್ಜುನನಲ್ಲಿ ವಿರೋಧವನ್ನು ಎಣಿಸದಿದ್ದುದು ಸತ್ಯವಾಗಿದ್ದರೆ ಅದರಿಂದ ಈ ಶಿಶುವು ಬದುಕಿಕೊಳ್ಳಲಿ. ಸತ್ಯ ಧರ್ಮಗಳೆರಡೂ ನನ್ನಲ್ಲಿ ನಿತ್ಯವಾಸಮಾಡುತ್ತಿರುವುದು ನಿಜವಾದರೆ ಈ ಮಗುವು ಬದುಕಿಕೊಳ್ಳಲಿ. ಕಂಸನೂ, ಕೇಶಿಯೂ ಧರ್ಮದಿಂದಲೇ ನನ್ನಿಂದ ಕೊಲ್ಲಲ್ಪಟ್ಟುದು ನಿಜವಾದರೆ, ಈ ಶಿಶುವು ತಿರುಗಿ ಬದುಕಿಕೊಳ್ಳಲಿ'' ಎಂದು ಹೇಳಿ ಕೃಷ್ಣನು ಬ್ರಹ್ಮರುದ್ರಾದಿಗಳಿಂದ ಪೂಜಿತವಾಗಿಯೂ, ಕಮಲದಂತೆ ಕಾಂತಿವಿಶಿಷ್ಟವಾಗಿಯೂ ಇರುವ ತನ್ನ ಪಾದದಿಂದ, ಆ ಶಿಶುವಿನ ಕಾಲಿನಿಂದ ಹಿಡಿದು ತಲೆಯವರೆಗೆ ಸ್ಪರ್ಶಿಸಿದನು. ಕೃಷ್ಣನ ಪಾದಸ್ಪರ್ಶವಾದೊಡನೆ ಆ ಬಾಲಕನು ಮೆಲ್ಲಮೆಲ್ಲಗೆ ಚೈತನ್ಯವನ್ನು ಹೊಂದಿದನು. ಕ್ರಮಕ್ರಮವಾಗಿ ಆ ಶಿಶುವಿನ ಕೈಕಾಲುಗಳು, ಆಡಲಾರಂಭಿಸಿದುವು.

ಇದು ಅರುವತ್ತೊಂಭತ್ತನೆಯ ಅಧ್ಯಾಯವು.

---

(ಕೃಷ್ಣನು ಪರೀಕ್ಷಿತ್ತೆಂಬ ನಾಮಕರಣವನ್ನು ಮಾಡಿದುದು. ಇಷ್ಟರಲ್ಲಿ ಧರ್ಮರಾಜಾದಿಗಳು ಸುವರ್ಣಭಾರವನ್ನು ಹೊರಿಸಿಕೊಂಡು ಬರುವುದನ್ನು ಕೇಳಿ ಕೃಷ್ಣನೇ ಮೊದಲಾದವರು ಇದಿರುಗೊಂಡು ಹೋದುದು.)

ಓ ಮಹಾರಾಜಾ! ಕೇಳು! ಕೃಷ್ಣನು ಆ ಬ್ರಹ್ಮಾಸ್ತ್ರದ ಶಕ್ತಿಯನ್ನು ಉಪಸಂಹರಿಸಿದೊಡನೆ ಆ ಮನೆಯೆಲ್ಲವೂ ನಿನ್ನ ತಂದೆಯ ತೇಜಸ್ಸಿನಿಂದ ಬೆಳಗಿದಂತಾಯಿತು. ಭೂತರಾಕ್ಷಸ ಪಿಶಾಚಾದಿಗಳೆಲ್ಲವೂ ಆ ಮನೆಯನ್ನು ಬಿಟ್ಟು ಓಡಿದುವು. ಅಂತರಿಕ್ಷದಲ್ಲಿ 'ಕೃಷ್ಣಾ! ಭಲೆ! ಭಲೆ!' ಎಂಬ ಸಾಧುವಾದಗಳು ಹೊರಟುವು. ಜ್ವಲಿಸುತ್ತಿದ್ದ ಬ್ರಹ್ಮಾಸ್ತ್ರವು ಬ್ರಹ್ಮನ ಬಳಿಗೆ ಹೋಗಿ ಸೇರಿತು. ಇತ್ತಲಾಗಿ ಮೃತಪ್ರಾಯನಾಗಿದ್ದ ನಿನ್ನ ತಂದೆಗೆ ತಿರುಗಿ ಪ್ರಾಣಗಳು ಕೂಡಿಕೊಂಡು, ಮೆಲ್ಲಮೆಲ್ಲಗೆ ಉತ್ಸಾಹವೂ, ಬಲವೂ, ಹುಟ್ಟಿ, ಕೈಕಾಲುಗಳು ಆಡಲಾರಂಭಿಸಿದುವು. ಭರತವಂಶದ ಸ್ತ್ರೀಯರೆ



ಪುಟ ೨೧೨. ಮೃತಶರೀರವಾಗಿ ಜನಿಸಿದ ಪರೀಕ್ಷಿತ್ತನ್ನು ಶ್ರೀಕೃಷ್ಣನು ತನ್ನ ಪಾದಸ್ಪರ್ಶದಿಂದ ಬದುಕಿಸಿದುದು.

ಲ್ಲರೂ ಸಂತೋಷಗೊಂಡರು. ಕೃಷ್ಣಾಜ್ಞೆಯಿಂದ ಬ್ರಾಹ್ಮಣರು ಸ್ವಸ್ತಿ ವಾಚನಗಳನ್ನು ಮಾಡಿದರು. ಅಲ್ಲಿದ್ದ ಸ್ತ್ರೀಯರೆಲ್ಲರೂ ಭರತಕುಲಕ್ಕೆ ಸಿಂಹಪ್ರಾಯನಾದ ಕುಮಾರನು ಜೀವಿಸಿದುದಕ್ಕಾಗಿ, ಸಮುದ್ರಮಧ್ಯದಲ್ಲಿ ಮುಳುಗಿಹೋಗುತ್ತಿದ್ದವರಿಗೆ ದಡವನ್ನು ಮುಟ್ಟಿಸತಕ್ಕ ಹಡಗು ಸಿಕ್ಕಿದರೆ ಹೇಗೋ ಹಾಗೆ ಸಂತೋಷಗೊಂಡು ಕೃಷ್ಣನನ್ನು ಸ್ತುತಿಸಿದರು. ಕುಂತಿ, ದ್ರೌಪದಿ, ಸುಭದ್ರೆ, ಉತ್ತರೆ, ಮುಂತಾಗಿ ಅಲ್ಲಿದ್ದ ಎಲ್ಲಾ ಸ್ತ್ರೀಯರೂ, ಅತ್ಯಂತ ಹರ್ಷಿತರಾದರು. ಜಟ್ಟಿಗಳು, ನರ್ತಕರು, ಜೋಯಿಸರು, ರಾಜರಿಗೆ ಸುಖನಿದ್ರೆಯನ್ನು ವಿಚಾರಿಸುವ ಜನರು, ವಂದಿಮಾಗಧರು, ಎಲ್ಲರೂ ಕೃಷ್ಣನನ್ನು ಹೊಗಳುತ್ತಿದ್ದರು. ಅಲ್ಲಿದ್ದ ಮಹಾಜನರು ಸ್ತೋತ್ರಗಳಿಂದಲೂ, ಆಶೀರ್ವಾದಗಳಿಂದಲೂ ಕುರುರಾಜಕುಲವನ್ನು ಸಂತೋಷಗೊಳಿಸುತ್ತಿದ್ದರು. ಆಮೇಲೆ ಉತ್ತರೆಯು ಸಕಾಲಕ್ಕೆದ್ದು, ಸಂತೋಷದಿಂದ ಮಗನನ್ನೆತ್ತಿಕೊಂಡು ಬಂದು, ಅವನೊಡನೆ ಕೃಷ್ಣನ ಪಾದಗಳಿಗೆ ನಮಸ್ಕರಿಸಿದಳು. ಕೃಷ್ಣನು ಮಗುಬಾಣಂತಿಯರಿಗೆ ವಿಶೇಷ ರತ್ನಗಳನ್ನು ಬಹುಮಾನಿಸಿದನು. ಆಮೇಲೆ ಕೃಷ್ಣನು ನಿನ್ನ ತಂದೆಗೆ ನಾಮಕರಣವನ್ನು ಮಾಡಬೇಕೆಂದೆಣಿಸಿ, ಅಲ್ಲಿ ನೆರೆದಿದ್ದವರೆಲ್ಲರನ್ನೂ ನೋಡಿ 'ಎಲೈ ಮಹಾಜನರೇ! ಪೂರ್ಣವಾಗಿ ಕ್ಷೀಣಿಸಿಹೋಗಿದ್ದ ಭರತ ಕುಲವನ್ನುದ್ಧರಿಸುವುದಕ್ಕಾಗಿ ಇವನು ಹುಟ್ಟಿದುದರಿಂದ, ಇವನಿಗೆ **ಪರೀಕ್ಷಿತ್ತೆಂಬ** ಹೆಸರು ಪ್ರಸಿದ್ಧವಾಗಲಿ' ಎಂದನು. ಓ ಜನಮೇಜಯರಾಜಾ! ಆಮೇಲೆ ನಿನ್ನ ತಂದೆಯು ಕಾಲಕ್ರಮದಿಂದ ಬೆಳೆಯುತ್ತ, ದಿನದಿನಕ್ಕೆ ಸಮಸ್ತಲೋಕಕ್ಕೂ ಸಂತೋಷಜನಕನಾದನು. ಮಗುವಿಗೆ ಒಂದು ತಿಂಗಳು ಕಳೆಯುವಷ್ಟರಲ್ಲಿ, ಪಾಂಡವರು ದೊಡ್ಡ ರತ್ನಭಾರಗಳನ್ನು ಹೊರಿಸಿಕೊಂಡು ಹಸ್ತಿನಾವತಿಗೆ ಬಂದು ಸೇರಿದರು. ಮೇರುಶಿಖರದಂತೆ ದೊಡ್ಡದಾಗಿ, ಕೈಯಿಂದ ಮಾಡಿದ ಮತ್ತು ಪ್ರಕೃತಿಸಿದ್ಧವಾದ ಹಂಡೆಗಳಲ್ಲಿಯೂ, ಕೊಳಗಗಳಲ್ಲಿಯೂ ಇತರ ಪಾತ್ರೆಗಳಲ್ಲಿಯೂ ತುಂಬಿದ ಧನಕನಕರತ್ನಾದಿಗಳನ್ನು ಹೊತ್ತುಕೊಂಡು ಬಂದರು. ಆ ಭಾರವನ್ನು ಹೊರಲಾರದೆ ಹೊತ್ತುಕೊಂಡು ಬರುತ್ತಿದ್ದ ವಾಹನಗಳೊಡನೆ, ದಾರಿಯಲ್ಲಿ ಎರಡೆರಡು ಹರಿದಾರಿಗಳಿಗೆ ಒಮ್ಮೊಮ್ಮೆ

ವಿಶ್ರಾಂತಿಗಾಗಿ ತಂಗುತ್ತ, ಆಗಾಗ ಈಶ್ವರನನ್ನು ಸ್ಮರಿಸುತ್ತ ಅವರು ಪ್ರಯಾಣಮಾಡಿ ಬಂದರು. ಯುಧಿಷ್ಠಿರನೊಬ್ಬನಿಗೆ ಹೊರತು ಬೇರೆ ಯಾವ ರಾಜನಿಗಾದರೂ ಭಾರವನ್ನು ಹೊರುವ ಕಷ್ಟವು ತಪ್ಪಲಿಲ್ಲ. ಭೀಮನು ಮೊದಲಾಗಿ ಒಬ್ಬೊಬ್ಬರೂ ತಮ್ಮಿಂದಾದಷ್ಟು ಭಾರವನ್ನು ಹೊತ್ತು ತಂದರು. ಇವರು ಹಸ್ತಿನಾವತಿಯ ಸಮೀಪಕ್ಕೆ ಬಂದ ವೃತ್ತಾಂತವು ಕೃಷ್ಣನಿಗೆ ತಿಳಿಯಿತು. ಒಡನೆಯೇ ಕೃಷ್ಣನು ಪುರವನ್ನು ಪುಷ್ಪಮಾಲಾದಿಗಳಿಂದ ಅಲಂಕರಿಸಿ, ಪಾಂಡವರನ್ನು ಇದಿರುಗೊಂಡು ಕರೆತರುವುದಕ್ಕಾಗಿ ತಾನೂ ಪರಿವಾರಗಳೊಡನೆ ಹೊರಟನು. ಪುರಜನರು ಧ್ವಜಪತಾಕೆಗಳಿಂದ ಮನೆಮನೆಗಳನ್ನು ಅಲಂಕರಿಸಿದರು. ಮಹಾತ್ಮನಾದ ವಿದುರನೂಕೂಡ ಪಾಂಡವರ ಶ್ರೇಯಸ್ಸಿಗಾಗಿ ಪಟ್ಟಣದೊಳಗಿನ ದೇವಾಲಯಗಳಲ್ಲಿ ಪೂಜೆಗಳನ್ನು ನಡೆಸುವಂತೆ ಆಜ್ಞೆಮಾಡಿದನು. ರಾಜಬೀದಿಗಳೆಲ್ಲ ಪುಷ್ಪೋಪಹಾರಗಳಿಂದ ಅಲಂಕರಿಸಲ್ಪಟ್ಟುವು. ನರ್ತಕರ ನರ್ತನದಿಂದಲೂ, ಗಾಯಕರ ಗಾನದಿಂದಲೂ ಉಂಟಾದ ಶಬ್ದವು ಸಮುದ್ರವು ಉಕ್ಕಿಬಂದಂತೆ ಮಹಾಧ್ವನಿಯುಳ್ಳುದಾಯಿತು. ಆಗ ಆ ಪಟ್ಟಣವು ಕುಬೇರಭವನದಂತೆ ಶೋಭಿಸಿತು. ಎಲ್ಲಿ ನೋಡಿದರೂ ವಂದಿಗಳೂ, ದಂಪತಿಗಳೂ ನೆರೆದು ನಿಂತಿದ್ದರು. ಆಗ ಗಾಳಿಯಿಂದಾಡುತ್ತಿದ್ದ ಪತಾಕೆಗಳು ದಕ್ಷಿಣೋತ್ತರ ಕುರುಗಳನ್ನು ಕೈನೀಡಿ ತೋರಿಸುವಂತೆ ಕಾಣುತಿದ್ದುವು. ಆಗ ರಾಜಾಂಗದ ಅಧಿಕಾರಿಗಳು 'ಈಗ ಪಾಂಡವರು ಯಾಗಕ್ಕಾಗಿ ಅಪರಿಮಿತರತ್ನಗಳನ್ನು ತರುವುದರಿಂದ, ಈದಿನದ ಮೊತ್ತಕ್ಕೆ ನಮ್ಮ ದೇಶವೇ ಕಾರ್ಯನಿರ್ಬಂಧದಲ್ಲಿಲ್ಲದೆ ವಿರಾಮಹೊಂದಿ ಸಂತೋಷದಿಂದ ಆಡುತ್ತಿರಬೇ'ಕೆಂದು ಹೇಳಿ ಡಂಗುರವನ್ನು ಹಾಕಿಸಿದನು.

ಇದು ಎಪ್ಪತ್ತನೆಯ ಅಧ್ಯಾಯವು.



ಪಾಂಡವರು ಸುವರ್ಣಭಾರದೊಡನೆ ಹಸ್ತಿನಾಪುರವನ್ನು ಪ್ರವೇಶಿಸಿದುದು. ವ್ಯಾಸನು ಆ ಕಾಲಕ್ಕೆ ಬಂದು ಅಶ್ವಮೇಧ ಯಾಗದ ಪ್ರಭಾವವನ್ನು ತಿಳಿಸಿ, ಅದನ್ನು ನಡೆಸುವಂತೆ ಹೇಳಿದುದು. ಯುಧಿಷ್ಠಿರನು ಕೃಷ್ಣನನ್ನು ಯಜ್ಞ ದೀಕ್ಷಿತನಾಗಿರಬೇಕೆಂದು ಹೇಳಲು, ಕೃಷ್ಣನು ಧರ್ಮರಾಜನನ್ನೇ ಆ ಕಾರ್ಯಕ್ಕೆ ನಿಲ್ಲಿಸಿದುದು.

ಓ ಜನಮೇಜಯರಾಜಾ! ಕೇಳು! ಪಾಂಡವರು ಸಮೀಪಕ್ಕೆ ಬಂದುದನ್ನು ಕೇಳಿದೊಡನೆ, ಕೃಷ್ಣನು ತನ್ನ ಮಂತ್ರಿ ಸುಹೃತ್ತುಗಳೊಡನೆ ಪಾಂಡವರನ್ನು ನೋಡುವುದಕ್ಕಾಗಿ ಇದಿರುಗೊಂಡು ಹೋದನು. ಪಾಂಡವರೂ, ಯಾದವರೂ ಸಂಧಿಸಿ, ಕುಶಲಪ್ರಶ್ನಾದಿಗಳೆಲ್ಲ ನಡೆದಮೇಲೆ, ಎಲ್ಲರೂ ಒಂದಾಗಿ ಹಸ್ತಿನಾವತಿಗೆ ಪ್ರವೇಶಮಾಡಿದರು. ದೊಡ್ಡ ಸೈನ್ಯವು ಅವರನ್ನು ಹಿಂಬಾಲಿಸುವಾಗ, ಅವುಗಳ ಕಾಲ್ನಡೆಯ ಧ್ವನಿಯು ಭೂಮ್ಯಾಕಾಶಗಳನ್ನೆಲ್ಲ ತುಂಬಿ ಸ್ವರ್ಗವನ್ನೂ ಆವರಿಸಿದುವು. ಪಾಂಡವರೆಲ್ಲರೂ ದೊಡ್ಡ ಭಂಡಾರವನ್ನು ಹೊರಿಸಿಕೊಂಡು, ಸಂತೋಷದಿಂದ ರಾಜನಾದ ಧೃತರಾಷ್ಟ್ರನಬಳಿಗೆ ಬಂದು ತಮ್ಮತಮ್ಮ ಹೆಸರನ್ನು ಹೇಳುತ್ತ ಅವನಿಗೆ ನಮಸ್ಕರಿಸಿದರು. ಅವನಿಂದ ಅನುಮತಿಯನ್ನು ಪಡೆದಮೇಲೆ ಕ್ರಮವಾಗಿ ಗಾಂಧಾರಿಯನ್ನೂ, ಕುಂತಿಯನ್ನೂ, ವಿದುರನನ್ನೂ ಕಂಡು ನಮಸ್ಕರಿಸಿದರು. ಆಮೇಲೆ ವೈಶ್ಯಾಪುತ್ರನಾದ ಯುಯುತ್ಸುವನ್ನು ಮಾತಾಡಿಸಿದರು. ಎಲ್ಲರೂ ಪಾಂಡವರನ್ನು ಕಂಡು ಆದರಿಸಿದಮೇಲೆ, ಪರೀಕ್ಷಿತ್ತಿನ ಜನನವೃತ್ತಾಂತವು ಅವರಿಗೆ ತಿಳಿದುಬಂದಿತು. ಓ ಜನಮೇಜಯರಾಜಾ! ನಿನ್ನ ತಂದೆಯ ಆಶ್ಚರ್ಯಕರವಾದ ಜನ್ಮವೃತ್ತಾಂತವನ್ನೂ, ಅವನನ್ನು ಬದುಕಿಸುವುದಕ್ಕಾಗಿ ಕೃಷ್ಣನು ತೋರಿಸಿದ ಅದ್ಭುತ ಪ್ರಭಾವವನ್ನೂ ಕೇಳಿ ವಿಸ್ಮಿತರಾದರು. ಆಮೇಲೆ ಅವರೆಲ್ಲರೂ ಕೃಷ್ಣನನ್ನು ಪೂಜಿಸಿ, ಅವನನ್ನು ಪ್ರಸಂಶೆಮಾಡುತ್ತಿದ್ದರು. ಆಮೇಲೆ ಕೆಲವು ದಿವಸಗಳಿಗೆ ಮಹಾತ್ಮನಾದ ವ್ಯಾಸಮುನಿಯೂ ಹಸ್ತಿನಾವತಿಗೆ ಬಂದನು. ಆಗ ಪಾಂಡವರೂ, ಯಾದವಶ್ರೇಷ್ಠರೂ ಆ ಮಹರ್ಷಿಯನ್ನು ವಿಧ್ಯುಕ್ತವಾಗಿ ಪೂಜಿಸಿದರು. ಅವರಲ್ಲಿ ನಾನಾವಿಧವಾದ ಸಲ್ಲಾಪಗಳು ನಡೆದಮೇಲೆ

ಧರ್ಮರಾಜನು ವ್ಯಾಸನನ್ನು ಕುರಿತು 'ಹೇ ಭಗವನ್! ತಮ್ಮ ಅನುಗ್ರಹದಿಂದ ನಮಗೆ ಲಭಿಸಿದ ಈ ಸುವರ್ಣವನ್ನು ಅಶ್ವಮೇಧಯಾಗಕ್ಕಾಗಿ ಉಪಯೋಗಿಸುವವಿಷಯದಲ್ಲಿ ನಮಗೆ ಅನುಮತಿಯನ್ನು ಕೊಡಬೇಕು. ನಾವೆಲ್ಲರೂ ನಿನ್ನ ಮತ್ತು ಮಹಾತ್ಮನಾದ ಶ್ರೀಕೃಷ್ಣನ ಅಧೀನವಲ್ಲದ್ದು, ನೀವು ಹೇಳಿದಂತೆ ನಡೆಯತಕ್ಕವರು' ಎಂದನು. ಆಗ ವ್ಯಾಸನು "ಓ ರಾಜಾ! ಆಗಲಿ! ಮುಂದಿನ ಕಾರ್ಯವನ್ನು ಆರಂಭಿಸು. ವಿಧ್ಯುಕ್ತವಾದ ದಕ್ಷಿಣೆಯೊಡನೆ ಈ ಅಶ್ವಮೇಧವನ್ನು ಮುಗಿಸು. ಅಶ್ವಮೇಧವೆಂಬುದು ಸಮಸ್ತಪಾಪಗಳಿಂದಲೂ ಬಿಡಿಸಿ ಪವಿತ್ರವಾಗಿ ಮಾಡತಕ್ಕುದು. ಇದರಿಂದ ನೀನು ಸರ್ವದೋಷವಿಮುಕ್ತನಾಗುವುದರಲ್ಲಿ ಸಂದೇಹವೇ ಇಲ್ಲ' ಎಂದನು. ಆಮೇಲೆ ಯುಧಿಷ್ಠಿರನು ಯಾಗಕಾರ್ಯಕ್ಕಾಗಿ ನಿರ್ಧರಿಸಿ, ಕೃಷ್ಣನ ಬಳಿಗೆ ಬಂದು ಹೀಗೆಂದು ಪ್ರಾರ್ಥಿಸುವನು "ಓ ಪುರುಷೋತ್ತಮಾ! ದೇವಕೀದೇವಿಯು ನಿನ್ನಿಂದ ಸುಪುತ್ರವತಿಯೆನಿಸಿದಳು. ಓ ಮಹಾಬಾಹೂ! ನಾನು ಹೇಳುವ ಒಂದು ಪ್ರಾರ್ಥನೆಯನ್ನು ನಡೆಸಿಕೊಡಬೇಕು. ಕೃಷ್ಣಾ! ನಿನ್ನ ಮಹಿಮೆಯಿಂದ ಸಂಪಾದಿಸಲ್ಪಟ್ಟ ಭೋಗಗಳನ್ನೇ ನಾವು ಈಗ ಅನುಭವಿಸುತ್ತಿರುವೆವು. ನಿನ್ನ ಪರಾಕ್ರಮದಿಂದಲೂ, ಬುದ್ಧಿಯಿಂದಲೂ ರಾಜ್ಯವು ನಮಗೆ ವಶವಾಯಿತು. ಆದುದರಿಂದ ನೀನೇ ನಮಗೆ ಪರಮಗುರು! ಆದುದರಿಂದ ಈ ಯಜ್ಞಕ್ಕೆ ನೀನೇ ದೀಕ್ಷೆಯನ್ನು ವಹಿಸು. ನೀನು ಯಜ್ಞವನ್ನು ಮಾಡಿದರೆ ನಮ್ಮ ಪಾಪವು ನೀಗುವುದು. ಓ ಮಹಾತ್ಮಾ! ಅಷ್ಟೇಕೆ? ಯಜ್ಞವೂ ನೀನೇ! ಯಜ್ಞವನ್ನು ಉಪದೇಶಿಸತಕ್ಕ ಗುರುವೂ ನೀನೇ. ನಿನಗೆ ತಿಳಿಯದ ಧರ್ಮಗಳಿಲ್ಲ! ಸಾಕ್ಷಾತ್ ಬ್ರಹ್ಮದೇವನೂ ನೀನೇ. ಸಮಸ್ತ ಭೂಗತಳಿಗೂ ನೀನೇ ಗತಿಯೆಂಬುದು ನನ್ನ ನಿಶ್ಚಯವು" ಎಂದನು. ಅದಕ್ಕಾ ಕೃಷ್ಣನು 'ಓ ಧರ್ಮಪುತ್ರಾ! ಹಾಗಲ್ಲ. ನೀನೇ ಇದನ್ನು ನಡೆಸಬೇಕು. ಸಮಸ್ತಪ್ರಜೆಗಳಿಗೂ ನೀನು ಪಾಲಕನಾದುದರಿಂದ, ನೀನೇ ಎಲ್ಲರಿಗೂ ಗತಿಯೆನಿಸಿರುವೆ. ಕೌರವಕುಲದಲ್ಲಿ ಧರ್ಮಸ್ವರೂಪದಿಂದ ನೀನು ವಿರಾಜಿಸುತ್ತಿರುವೆ. ನೀನೇ ನಮಗೆ ರಾಜನು. ನಮಗೆ ಗುರುಸ್ಥಾನದಲ್ಲಿರುವವನೂ ನೀನೇ. ನಾವೆಲ್ಲರೂ ನಿನ್ನ ಪರಿವಾರದವರು. ಈ ಯಜ್ಞವನ್ನು ನೀನೇ

ನಡೆಸು. ನಮ್ಮನ್ನೆಲ್ಲ ನೀನೇ ಆಯಾಕಾರ್ಯಗಳಲ್ಲಿ ನಿಯಮಿಸು. ನಿನಗೆ ಬೇಕಾದ ಕಾರ್ಯಗಳನ್ನೆಲ್ಲ ನಾನು ನಡೆಸಿಕೊಡುವೆನು. ಇದು ಸತ್ಯವು. ಈ ವಿಷಯದಲ್ಲಿ ಬೇಕಾದರೆ ಶಪಥಮಾಡಿಕೊಡುವೆವು. ರಾಜನಾದ ನೀನು ಯಜ್ಞಮಾಡಿದರೆ, ನಿನ್ನ ತಮ್ಮಂದಿರಾದ ಭೀಮಾರ್ಜುನ ನಕುಲಸಹದೇವರೆಲ್ಲರೂ ಯಾಗಮಾಡಿದಂತೆಯೇ ಆಗುವುದು.

ಇದು ಎಪ್ಪತ್ತೊಂದನೆಯ ಅಧ್ಯಾಯವು.

---

{ ವ್ಯಾಸನು ಅಶ್ವಮೇಧಕ್ಕಾಗಿ ದೇಶಗಳಮೇಲೆ ಕುದುರೆಯನ್ನು ಬಿಡುವಂತೆ ಯುಧಿಷ್ಠಿರನಿಗೆ ಹೇಳಿದುದು. ಅರ್ಜುನನನ್ನು ಅಶ್ವರಕ್ಷಣೆಗಾಗಿ ನಿಯಮಿಸಿದುದು. }

ಕೃಷ್ಣನ ಈ ಮಾತನ್ನು ಕೇಳಿದೊಡನೆ ಯುಧಿಷ್ಠಿರನು ವ್ಯಾಸನನ್ನು ನೋಡಿ 'ಓ ಮಹಾತ್ಮಾ! ಅಶ್ವಮೇಧಯಾಗವನ್ನು ಆರಂಭಿಸುವುದಕ್ಕೆ ತಕ್ಕ ಕಾಲವಾವುದೆಂಬುದನ್ನು ತಿಳಿದವನು ನೀನೇ! ಆ ಕಾಲಕ್ಕೆ ನನಗೆ ದೀಕ್ಷೆಯನ್ನು ಮಾಡಿಸಬೇಕು. ಈ ಯಾಗವೂ ನಿನ್ನಿಂದಲೇ ನಡೆಯಬೇಕಾಗಿದೆ' ಎಂದನು. ಆದಕ್ಕಾ ವ್ಯಾಸಮುನಿಯು 'ಧರ್ಮರಾಜಾ! ಇದೋ! ಈ ಪೌಲನೂ, ಈ ಯಾಜ್ಞವಲ್ಕ್ಯನೂ ಇಲ್ಲಿಯೇ ಇದ್ದು ಯಾವಯಾವ ಕಾಲಕ್ಕೆ ಏನೇನನ್ನು ಮಾಡಬೇಕೋ ಅದನ್ನು ಕ್ರಮವಾಗಿ ನಡೆಸುವರು. ಮುಂದಿನ ಚೈತ್ರಶುದ್ಧ ಪೌರ್ಣಮಾದಿನದಲ್ಲಿ ನಿನಗೆ ಯಜ್ಞದೀಕ್ಷೆಯು ನಡೆಸಲ್ಪಡುವುದು. ಈಗಿನಿಂದಲೇ ಯಜ್ಞಸಾಮಗ್ರಿಗಳೆಲ್ಲವೂ ಸಿದ್ಧವಾಗಲಿ. ಅಶ್ವವಿದ್ಯೆಯನ್ನು ಬಲ್ಲ ಸೂತರೂ, ಬ್ರಾಹ್ಮಣರೂ, ಯಾಗಯೋಗ್ಯವಾದ ಒಂದು ಅಶ್ವವನ್ನು ಶಾಸ್ತ್ರೀಯವಾಗಿ ಪರೀಕ್ಷಿಸಿ ನಿಶ್ಚಯಿಸಲಿ! ಆ ಕುದುರೆಯನ್ನು ವಿಧ್ಯುಕ್ತವಾಗಿ ಪೂಜಿಸಿ, ಭೂಸಂಚಾರಕ್ಕಾಗಿ ಕಳುಹಿಸಬೇಕು. ಅದು ನಿನ್ನ ಬಿರುದನ್ನು ವಹಿಸಿ ಲೋಕದಲ್ಲಿ ನಿನ್ನ ಕೀರ್ತಿಯನ್ನು ಪ್ರಕಾಶಗೊಳಿಸುತ್ತ ಎಲ್ಲಾ ದೇಶಗಳನ್ನೂ ಸುತ್ತಿಬರಲಿ' ಎಂದನು. ಈ ಮಾತನ್ನು ಕೇಳಿದೊಡನೆ ಯುಧಿಷ್ಠಿರನು ಎಲ್ಲವನ್ನೂ ಸಿದ್ಧಗೊಳಿಸಿದನು. ವ್ಯಾಸಮುನಿಯು ಹೇಳಿದ್ದ ಸಾಮಗ್ರಿಗಳೆಲ್ಲವೂ ಸಿದ್ಧ

ವಾದುವು. ಹೀಗೆ ಎಲ್ಲವೂ ಸಿದ್ಧವಾದ ಸಂಗತಿಯನ್ನು ಧರ್ಮರಾಜನು ವ್ಯಾಸಮಹರ್ಷಿಗೆ ತಿಳಿಸಿದನು. ಆಗ ವ್ಯಾಸನು ಧರ್ಮರಾಜನನ್ನು ಕುರಿತು 'ರಾಜೇಂದ್ರಾ! ಕಾಲಕ್ಕೂ, ದೇಶಕ್ಕೂ ತಕ್ಕಂತೆ ನಿನಗೆ ದೀಕ್ಷೆಯನ್ನು ನಡೆಸಲು ನಾವು ಸಿದ್ಧರಾಗಿರುವೆವು. ಮರದ ಕತ್ತಿ, ಕೂರ್ಚ, ಇವೆಲ್ಲಾ ಈ ಯಾಗಕ್ಕೆ ಸ್ವರ್ಣಮಯವಾಗಿಯೇ ಮಾಡಿಸಲ್ಪಡಲಿ, ಎಲ್ಲವೂ ಆದಷ್ಟುಮಟ್ಟಿಗೆ ಸ್ವರ್ಣಮಯವಾಗಿರಬೇಕು. ಕುದುರೆಯನ್ನು ಈಗಲೇ ಭೂಮಿಯಮೇಲೆ ಯಥೇಷ್ಟವಾಗಿ ಸಂಚರಿಸುವುದಕ್ಕಾಗಿ ಬಿಡು. ಆ ಅಶ್ವವು ಶಾಸ್ತ್ರೋಕ್ತವಾಗಿ ರಕ್ಷಿಸಲ್ಪಡುತ್ತ, ಎಲ್ಲಾ ಕಡೆಯನ್ನೂ ಸುತ್ತಿ ಬರಲಿ' ಎಂದನು. ಆಗ ಧರ್ಮರಾಜನು 'ಇದೋ! ಅಶ್ವವು ಸಿದ್ಧವಾಗಿರುವುದು. ಇದನ್ನು ಈಗಲೇ ಕಳುಹಿಸುವೆನು. ಆದರೆ, ಈ ಕುದುರೆಯ ಹಿಂದೆ ಅಂಗರಕ್ಷಕನಾಗಿ ಯಾವನು ಹೋಗಬೇಕೋ, ಅದನ್ನೂ ನೀನೇ ತಿಳಿಸಬೇಕು' ಎನಲು, ವ್ಯಾಸನು 'ರಾಜೇಂದ್ರಾ! ಅರ್ಜುನನನ್ನು ಆ ಕಾರ್ಯಕ್ಕೆ ನಿಯಮಿಸು. ಅವನು ಎಲ್ಲಾ ಧನುರ್ಧಾರಿಗಳಲ್ಲಿ ಮೇಲೆನಿಸಿದವನು. ಜಯಶೀಲನು. ತಾಳ್ಮೆಯುಳ್ಳವನು. ಕಷ್ಟಗಳನ್ನು ಸಹಿಸಬಲ್ಲವನು. ಧೀರನು! ನಿವಾತಕವಚರನ್ನು ಕೊಂದ ಈತನು, ಸಮಸ್ತಭೂಮಿಯನ್ನೂ ಜಯಿಸಬಲ್ಲವನು. ಅವನಲ್ಲಿ ದಿವ್ಯಾಸ್ತ್ರಗಳುಂಟು. ದಿವ್ಯ ಕವಚಗಳುಂಟು. ದಿವ್ಯ ಧನುಸ್ಸುಂಟು. ಅಕ್ಷಯ ಬಾಣಗಳುಳ್ಳ ಎರಡು ಬತ್ತಳಿಕೆಗಳುಂಟು. ಅವನು ಧರ್ಮಾರ್ಥಗಳಲ್ಲಿ ನಿಪುಣನು. ಸರ್ವವಿದ್ಯಾವಿಶಾರದನು. ಉತ್ತಮರಾಜಕುಮಾರನು. ಕಮಲದಂತೆ ನೇತ್ರವುಳ್ಳವನು. ಅಭಿಮನ್ಯುವಿಗೆ ಜನಕನು. ಅಂತಹ ವೀರನಾದ ಅರ್ಜುನನು ಈ ಕುದುರೆಗೆ ಬೆಂಬಲವಾಗಿದ್ದು, ಶಾಸ್ತ್ರೋಕ್ತವಾಗಿ ಇದನ್ನು ಸುತ್ತಿಸಿಕೊಂಡು ಬರುವನು. ಭೀಮಸೇನನೂ, ನಕುಲನೂ, ಸಹದೇವನೂ, ರಾಜ್ಯವನ್ನು ರಕ್ಷಿಸುವುದಕ್ಕೆ ಸಮರ್ಥರು. ಧೀಮಂತನಾದ ಸಹದೇವನು ಕುಟುಂಬದ ಯೋಗಕ್ಷೇಮವನ್ನು ಕ್ರಮವಾಗಿ ನೋಡಿಕೊಳ್ಳುವನು' ಎಂದನು. ವ್ಯಾಸನು ಹೇಳಿದಂತೆ ಧರ್ಮರಾಜನು ಸಮಸ್ತವನ್ನೂ ಸಿದ್ಧಗೊಳಿಸಿ, ಕುದುರೆಯ ಕಾವಲಿಗಾಗಿ ಅರ್ಜುನನನ್ನು ಕರೆದು 'ಅರ್ಜುನಾ! ಈ ಕುದುರೆಯ ಕಾವಲಿಗಾಗಿ ನೀನು ಹೊರಡು. ಈ ಕಾರ್ಯಕ್ಕೆ ನೀನೊಬ್ಬನಲ್ಲದೆ

ಬೇರೆ ಸಮರ್ಥರಿಲ್ಲ. ನಿನ್ನನ್ನು ಯುದ್ಧಕ್ಕಾಗಿ ಇದಿರಿಸುವ ಕ್ಷತ್ರಿಯರು ಯಾರೇ ಆದರೂ, ಅವರೊಡನೆ ಆದಷ್ಟುಮಟ್ಟಿಗೆ ಯುದ್ಧವಿಲ್ಲದಂತೆ ಪ್ರಯತ್ನಿಸು. ಅಲ್ಲಲ್ಲಿ ಕಂಡ ರಾಜರಿಗೆಲ್ಲ ನನ್ನ ಯಜ್ಞವೃತ್ತಾಂತವನ್ನು ತಿಳಿಸಿ, ಆ ಸಮಯಕ್ಕೆ ಇಲ್ಲಿಗೆ ಬರುವಂತೆಯೂ ಹೇಳು' ಎಂದನು.

ಓ ಜನಮೇಜಯರಾಜಾ! ಧರ್ಮರಾಜನು ಅರ್ಜುನನಿಗೆ ಈ ಮಾತನ್ನು ಹೇಳಿದಮೇಲೆ, ಭೀಮ ನಕುಲರನ್ನು ಪುರರಕ್ಷಣೆಗಾಗಿಯೂ, ಸಹದೇವನನ್ನು ಕುಟುಂಬಯೋಗಕ್ಷೇಮಗಳನ್ನು ನೋಡಿಕೊಳ್ಳುವುದಕ್ಕಾಗಿಯೂ ನಿಯಮಿಸಿ, ಆ ವಿಷಯದಲ್ಲಿ ತಂದೆಯಾದ ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದನು.

ಇದು ಎಪ್ಪತ್ತೆರಡನೆಯ ಅಧ್ಯಾಯವು.

{ ಅರ್ಜುನನು ಧರ್ಮರಾಜನ ನಿಯಮದಂತೆ ಪ್ರಯಾಣಕ್ಕೆ ಸಿದ್ಧನಾಗಿ, ಉತ್ತರದಿಕ್ಕಿಗೆ ಹೊರಟ ಕುದುರೆಯನ್ನು ಹಿಂಬಾಲಿಸಿಹೋದುದು. }

ಜನಮೇಜಯರಾಜಾ! ಕೇಳು! ಯಜ್ಞದೀಕ್ಷಾಕಾಲವು ಬಂದಿತು. ಸಮರ್ಥರಾದ ಋತ್ವಿಕ್ಕುಗಳು ಧರ್ಮರಾಜನಿಗೆ ಅಶ್ವಮೇಧಕ್ಕಾಗಿ ದೀಕ್ಷೆಯನ್ನು ಶಾಸ್ತ್ರೋಕ್ತವಾಗಿ ಮಾಡಿಸಿದರು. ಧರ್ಮರಾಜನು ಪಶುಮೇಧಗಳನ್ನು ಮಾಡಿ ದೀಕ್ಷೆಯನ್ನು ಕೈಕೊಂಡು, ಋತ್ವಿಕ್ಕುಗಳೊಡಗೂಡಿ ಮಹಾತೇಜಸ್ಸಿನಿಂದ ಬೆಳಗುತ್ತಿದ್ದನು. ಬ್ರಹ್ಮಜ್ಞನಾದ ವ್ಯಾಸಮಹರ್ಷಿಯು ಯಾಗದ ಕುದುರೆಯನ್ನು ಮೊದಲು ತಾನೇ ನಿಂತು, ಶಾಸ್ತ್ರೋಕ್ತವಾಗಿ ದೇಶಸಂಚಾರಕ್ಕಾಗಿ ಕಳುಹಿಸಿದನು. ಧರ್ಮರಾಜನು ರಾಜಧರ್ಮಕ್ಕನುಸಾರವಾಗಿ ದೀಕ್ಷೆಯನ್ನು ವಹಿಸಿ, ಸುವರ್ಣಮಾಲಿಕೆಯನ್ನೂ, ಚಿನ್ನದ ಕಂಠಹಾರವನ್ನೂ ಧರಿಸಿ, ಜ್ವಲಿಸುವ ಅಗ್ನಿಯಂತೆ ಬೆಳಗುತ್ತಿದ್ದನು. ಕೃಷ್ಣಾಜಿನವನ್ನು ಧರಿಸಿ, ದಂಡವನ್ನು ಕೈಯಲ್ಲಿ ಹಿಡಿದು, ಶುದ್ಧವಾದ ದುಕೂಲವನ್ನುಟ್ಟಿದ್ದ ಧರ್ಮರಾಜನು, ಯಾಗಕ್ಕಾಗಿ ಕುಳಿತ ಸಾಕ್ಷಾತ್ ಬ್ರಹ್ಮದೇವನಂತೆ ಪ್ರಕಾಶಿಸುತ್ತಿದ್ದನು. ಋತ್ವಿಕ್ಕುಗಳೂ ಇವನಂತೆಯೇ

ಉಚಿತವೇಷದಿಂದ ಸುತ್ತಲೂ ಕುಳಿತರು. ಅರ್ಜುನನು ಬಿಳಿಯ ಕುದುರೆಗಳಿಂದಲೂ, ಕಪಿಧ್ವಜಗಳಿಂದಲೂ ಕೂಡಿದ ರಥವನ್ನೇರಿ, ಅಗ್ನಿಯಂತೆ ಬೆಳಗುತ್ತ, ಗಾಂಡೀವಕ್ಕೆ ನಾಣೇರಿಸಿ, ಉಡುವಿನ ಚರ್ಮದಿಂದ ಮಾಡಿದ ಕೈಚೀಲವನ್ನು ಧರಿಸಿ, ಉತ್ಸಾಹದಿಂದ ಆ ಕುದುರೆಯ ಹಿಂದೆ ಹೊರಟನು. ಇವನು ಕುದುರೆಯ ಹಿಂದೆ ಬರುವಾಗ ದಾರಿಯುದ್ದಕ್ಕೂ ಅಲ್ಲಲ್ಲಿ ನಗರವೇ ಒಟ್ಟಕ್ಕೆ ಬಂದು ನಿಂತಂತೆ, ಇವನನ್ನು ನೋಡುವ ಆಸೆಯಿಂದ ಅಸಂಖ್ಯಾತ ಜನರು ಗುಂಪುಗೂಡುತ್ತಿದ್ದರು. ಅಶ್ವಮೇಧದ ಕುದುರೆಯನ್ನೂ, ಅದನ್ನು ಹಿಂಬಾಲಿಸುವ ಅರ್ಜುನನನ್ನೂ ನೋಡುವುದಕ್ಕಾಗಿ ಬಂದ ಜನಗಳ ತಿಕ್ಕಾಟದಿಂದಲೇ ಅಗ್ನಿಯುಂಟಾಗುವಂತೆ ತೋರಿತು. ಅಲ್ಲಿ ಸೇರಿದ ಜನಗಳ ಕೋಲಾಹಲವು ದಿಕ್ಕುಗಳನ್ನೂ, ಆಕಾಶವನ್ನೂ ವ್ಯಾಪಿಸಿತು. ಅಲ್ಲಲ್ಲಿ ಜನರು ಒಬ್ಬರಿಗೊಬ್ಬರು 'ಅದೋ! ಅರ್ಜುನನು ಬರುತ್ತಿರುವನು. ಅದೋ! ಶಾಂತಿಯುಕ್ತವಾದ ಯಾಗದ ಕುದುರೆಯು ಕಾಣುತ್ತಿರುವುದು. ಅದೋ! ಮಹಾಬಾಹುವಾದ ಅರ್ಜುನನು ಗಾಂಡೀವವನ್ನು ಕೈಯಲ್ಲಿ ಹಿಡಿದು ಬರುತ್ತಿರುವನು ನೋಡಿರಿ' ಎಂದು ಆಶ್ಚರ್ಯದಿಂದ ನುಡಿಯುತ್ತಿದ್ದರು. ಕೆಲವರು 'ಕುಂತೀಕುಮಾರಾ! ನಿನಗೆ ಮಂಗಳವಾಗಲಿ. ತಿರುಗಿ ಕ್ಷೇಮದಿಂದ ಹಿಂತಿರುಗಿ ಬಂದುಬಿಡು' ಎಂದು ಕೆಲವರು ಆಶೀರ್ವದಿಸಿದರು. ಬೇರೆ ಕೆಲವರು ಅರ್ಜುನನನ್ನು ನೋಡಲಾರದೆ 'ಅಯ್ಯೋ! ಈ ಗುಂಪಿನಲ್ಲಿ ಅರ್ಜುನನೇ ಕಾಣುವುದಿಲ್ಲವಲ್ಲಾ! ಅದೋ! ಅವನ ಬಿಲ್ಲುಮಾತ್ರ ಕಾಣುತ್ತಿರುವುದು. ಅದೋ! ಲೋಕಪ್ರಸಿದ್ಧವಾದ ಗಾಂಡೀವಧನುಸ್ಸೆಂಬುದು ಅದೇ! ಇರಲಿ! ಅವನು ಕ್ಷೇಮದಿಂದ ಹೋಗಿ ಬರಲಿ. ಅವನಿಗೆ ಈ ಪ್ರಯಾಣದಲ್ಲಿ ಎಲ್ಲಿಯೂ ಭಯವಿಲ್ಲದಿರಲಿ! ಹೇಗಿದ್ದರೂ ಇವನು ಜಯಶೀಲನಾಗಿ ಹಿಂತಿರುಗಿ ಬರುವನು. ಆಗ ನಾವು ಅವನನ್ನು ನೋಡಬಹುದು' ಎಂದು ಹೇಳುತ್ತಿದ್ದರು. ಹೀಗೆ ಅಲ್ಲಲ್ಲಿ ಸ್ತ್ರೀಪುರುಷರೆಲ್ಲರೂ ನುಡಿಯುತ್ತಿದ್ದ ಇಂಪಾದ ಮಾತುಗಳನ್ನು ಅರ್ಜುನನೂ ಕಿವಿಗೊಟ್ಟು ಕೇಳುತ್ತಿದ್ದನು. ಯಜ್ಞಕಾರ್ಯದಲ್ಲಿ ಸಮರ್ಥನೂ, ವೇದಪಾರಂಗತನೂ ಆದ ಯಾಜ್ಞವಲ್ಕ್ಯನ ಶಿಷ್ಯನಾದ ಸೋಮಶ್ರವಸ್ಸು, ಅಲ್ಲಲ್ಲಿ ಶಾಂತಿಕರ್ಮಗಳನ್ನು ಮಾಡಿಸುವುದಕ್ಕಾಗಿ

ಅರ್ಜುನನೊಡನೆ ಹೊರಟನು. ವೇದಪಾರಂಗತರಾದ ಅನೇಕ ಬ್ರಾಹ್ಮಣರೂ, ಶೂರರಾದ ಕ್ಷತ್ರಿಯರೂ ಧರ್ಮರಾಜಾಜ್ಞೆಯಿಂದ ಅರ್ಜುನನ ಹಿಂದೆ ಹೊರಟರು. ಆ ಯಾಗದ ಕುದುರೆಯು ಪಾಂಡವರಿಂದ ಜಯಿಸಲ್ಪಟ್ಟ ಭೂಮಿಯನ್ನೆಲ್ಲ ಸ್ವೇಚ್ಛೆಯಾಗಿ ಸಂಚರಿಸುತ್ತ ಬಂದಿತು. ಅಲ್ಲಲ್ಲಿ ಅರ್ಜುನನನ್ನು ಕೆಲವರು ಇದಿರಿಸಿ ನಿಂತುದರಿಂದ, ಕೆಲವು ವಿಚಿತ್ರಯುದ್ಧಗಳೂ ನಡೆದುವು. ಪ್ರಬಲಯುದ್ಧಗಳೂ ನಡೆದುವು. ಕುದುರೆಯು ಮೊದಲು ಉತ್ತರದಿಕ್ಕಿನಕಡೆಗೆ ಹೊರಟು, ಅಲ್ಲಲ್ಲಿ ಅನೇಕ ರಾಜ್ಯಗಳ ಮೇಲೆ ಸಂಚರಿಸಿತು. ಅರ್ಜುನನೂ ಅದನ್ನು ಹಿಂಬಾಲಿಸಿದನು. ಓ ರಾಜೇಂದ್ರಾ! ದಾರಿಯಲ್ಲಿ ಅರ್ಜುನನನ್ನು ಇದಿರಿಸಿ, ಯುದ್ಧಮಾಡಿದ ರಾಜರ ಸಂಖ್ಯೆಗೆ ಮಿತಿಯೇ ಇಲ್ಲ. ಅನೇಕ ಕ್ಷತ್ರಿಯರು ಯುದ್ಧದಲ್ಲಿ ತಮ್ಮ ಬಂಧುಮಿತ್ರರನ್ನೆಲ್ಲ ಕಳೆದುಕೊಂಡು ಪರಾಜಿತರಾದರು. ಕಿರಾತರು, ಯವನರು, ಮ್ಲೇಚ್ಛರು, ಇನ್ನೂ ನಾನಾದೇಶೀಯರು, ಕತ್ತಿಗಳನ್ನೂ, ಬಿಲ್ಲುಗಳನ್ನೂ ಹಿಡಿದು, ಅರ್ಜುನನನ್ನಿದಿರಿಸಿ ಪರಾಜಿತರಾದರು. ಆರ್ಯಕುಲದ ಅನೇಕರಾಜರು ಇವನಿಂದ ಪರಾಜಿತರಾಗಿ, ಕೊನೆಗೆ ಅವನೊಡನೆಯೇ ಸೇರಿಕೊಂಡು ತಾವೂ ಮುಂದೆ ಹೊರಟರು. ಹೀಗೆ ಅಲ್ಲಲ್ಲಿ ಅರ್ಜುನನಿಗೆ ನಾನಾದೇಶದ ರಾಜರೊಡನೆ ಅನೇಕಯುದ್ಧಗಳು ನಡೆದುವು. ಆ ಕುದುರೆಗಾಗಿ ನಡೆದ ಕೆಲವು ಪ್ರಬಲ ಯುದ್ಧಗಳನ್ನೆಲ್ಲ ಕ್ರಮವಾಗಿ ತಿಳಿಸುವೆನು ಕೇಳು' ಎಂದನು.

ಇದು ಎಪ್ಪತ್ತುಮೂರನೆಯ ಅಧ್ಯಾಯವು.

---

### ಅರ್ಜುನನು ತ್ರಿಗರ್ತರನ್ನು ಜಯಿಸಿದುದು.

ಓ ಜನಮೇಜಯರಾಜಾ! ಕೇಳು! ಅರ್ಜುನನು ಮೊದಲು ತ್ರಿಗರ್ತದೇಶದವರನ್ನು ಸಂಧಿಸಬೇಕಾಯಿತು. ಆ ತ್ರಿಗರ್ತರಿಗೆ ಮೊದಲಿಂದಲೂ ಅರ್ಜುನನಮೇಲೆ ದ್ವೇಷವಿದ್ದಿತು. ಹಿಂದೆ ತ್ರಿಗರ್ತರು ಮಹಾರಥರೆಂದು ಪ್ರಖ್ಯಾತಿಗೊಂಡ ಪಾಂಡವರಿಂದ ಹತರಾದುದರಿಂದ, ಅವರ ಮಕ್ಕಳು ಮೊಮ್ಮಕ್ಕಳೆಲ್ಲರೂ ಸೇರಿ, ಯಜ್ಞಾಶ್ವದೊಡನೆ ಅರ್ಜುನನು

ಬಂದಿರುವುದನ್ನು ತಿಳಿದು, ಯುದ್ಧಕವಚಗಳನ್ನು ಧರಿಸಿ, ಧನುರ್ಬಾಣಗಳನ್ನೆಲ್ಲ ಸಿದ್ಧಪಡಿಸಿಕೊಂಡು, ಒಳ್ಳೆಯ ಕುದುರೆಗಳನ್ನು ಹೂಡಿದ ಯುದ್ಧರಥಗಳನ್ನೇರಿ, ಊರಹೊರಗೆ ಬಂದು, ಆ ಯಜ್ಞದ ಕುದುರೆಯನ್ನು ಹಿಡಿದು ಕಟ್ಟುವುದಕ್ಕಾಗಿ ಅದನ್ನು ಸುತ್ತಿ ಮುತ್ತಿ ನಿಂತರು. ಇವರ ಪ್ರಯತ್ನವನ್ನು ನೋಡಿ ಅರ್ಜುನನು ಮೊದಲು ಮೃದುವಾಕ್ಯದಿಂದ ಅವರನ್ನು ನಿವಾರಿಸಿದನು. ಆ ಮಾತನ್ನು ಲಕ್ಷ್ಯಮಾಡದೆ ಅವರೆಲ್ಲರೂ ಸೇರಿ ಬಾಣಗಳನ್ನು ಪ್ರಯೋಗಿಸಲಾರಂಭಿಸಿದರು. ರಜಸ್ತಮೋಗುಣಗಳಿಂದ ಆಸೆಗೂ, ಕೋಪಕ್ಕೂ ಈಡಾದ ಅವರನ್ನು ಅರ್ಜುನನು ತನ್ನ ಬಾಣಗಳಿಂದ ತಡೆದು ನಗುತ್ತ ಅವರೊಡನೆ ಹೀಗೆಂದು ಹೇಳುವನು. ‘ ಎಲೈ ! ನಿಮಗೆ ಧರ್ಮವು ತಿಳಿಯದು. ಹಿಂತಿರುಗಿರಿ. ನಿಮ್ಮ ಕ್ಷೇಮವನ್ನೂ, ಬದುಕನ್ನೂ ಕಾಪಾಡಿಕೊಳ್ಳಿರಿ ’ ಎಂದನು. ಹಿಂದೆ ತಾನು ಕುದುರೆಯನ್ನು ಹಿಂಬಾಲಿಸಿ ಹೊರಡುವಾಗ ಧರ್ಮರಾಜನು ಕುರುಕ್ಷೇತ್ರದ ಯುದ್ಧದಲ್ಲಿ ಬಂಧುಗಳನ್ನು ಕಳೆದುಕೊಂಡ ರಾಜರನ್ನು ನೀನು ಕೊಲ್ಲಬಾರದು ’ ಎಂದು ಹೇಳಿದ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು, ಅರ್ಜುನನು ಆ ತ್ರಿಗರ್ತರೊಡನೆ ಯುದ್ಧಮಾಡಲು ಇಷ್ಟವಿಲ್ಲದೆ, ಬಾರಿಬಾರಿಗೂ ಅವರನ್ನು ‘ ಹಿಂತಿರುಗಿರಿ ! ಹಿಂತಿರುಗಿರಿ ! ’ ಎಂದು ಹೇಳುತ್ತಲೇ ಇದ್ದನು. ಎಷ್ಟು ಹೇಳಿದರೂ ಅವರು ಹಿಂತಿರುಗಲಿಲ್ಲ. ಆಗ ಅರ್ಜುನನು ಸೂರ್ಯವರ್ಮನೆಂಬ ಆ ತ್ರಿಗರ್ತರಾಜನನ್ನು ಬಾಣಗಳಿಂದ ಹೊಡೆದನು. ಆಗ ತ್ರಿಗರ್ತರೆಲ್ಲರೂ ರಥಧ್ವನಿಯಿಂದ ದಿಕ್ಕುಗಳನ್ನೆಲ್ಲ ಮೊಳಗಿಸುವಂತೆ ವೇಗದಿಂದ ಬಂದು, ಅರ್ಜುನನನ್ನು ಮುತ್ತಿಕೊಂಡರು. ಆಗ ಸೂರ್ಯವರ್ಮನು ತನ್ನ ಹಸ್ತಲಾಘವವನ್ನೆಲ್ಲ ತೋರಿಸುತ್ತ ಅರ್ಜುನನಮೇಲೆ ನೂರು ಬಾಣಗಳನ್ನು ಪ್ರಯೋಗಿಸಿದನು. ಅವನಿಗೆ ಬೆಂಬಲವಾಗಿ ಬಂದ ಇತರ ಧನುರ್ಧಾರಿಗಳೂ, ಅರ್ಜುನನನ್ನು ತೀರಿಸಿಬಿಡಬೇಕೆಂದು ಬಾಣವರ್ಷವನ್ನು ಕರೆಯುತ್ತಿದ್ದರು. ಅವರು ನಾನಾಕಡೆಗಳಿಂದ ಪ್ರಯೋಗಿಸಿದ ಬಾಣಗಳನ್ನೆಲ್ಲಾ ಅರ್ಜುನನು ತನ್ನ ಬಾಣಗಳಿಂದ ನಡುದಾರಿಯಲ್ಲಿಯೇ ಕತ್ತರಿಸಿದನು. ಇಷ್ಟರಲ್ಲಿ ತ್ರಿಗರ್ತರಾಜನಾದ ಸೂರ್ಯವರ್ಮನ ತಮ್ಮನಾದ ಕೇತುವರ್ಮನು, ಅಣ್ಣನಿಗೆ ಬೆಂಬಲವಾಗಿ ಬಂದು, ಅರ್ಜುನನೊಡನೆ ಯುದ್ಧವನ್ನಾರಂಭಿಸಿ

ದನು. ನಿಮಿಷಮಾತ್ರದಲ್ಲಿ ಅರ್ಜುನನು ಅವನನ್ನು ಬಾಣಗಳಿಂದ ನಿವಾರಿಸಿ ಕೆಳಕ್ಕೆ ಕೆಡಹಿಬಿಟ್ಟನು. ಇದನ್ನು ಕಂಡು ಧೃತವರ್ಮನೆಂಬ ಮತ್ತೊಬ್ಬ ಸಹೋದರನು ಮುಂದೆ ಬಂದು ಅರ್ಜುನನಮೇಲೆ ಬಹುವೇಗದಿಂದ ಅನೇಕ ಬಾಣಗಳ್ನು ಪ್ರಯೋಗಿಸಿದನು. ಬಾಲನಾಗಿದ್ದರೂ ಮಹಾರಥನೆನಿಸಿಕೊಂಡ ಈ ಧೃತವರ್ಮನ ಹಸ್ತಲಾಘವವನ್ನು ನೋಡಿ ಅರ್ಜುನನಿಗೂ ಬಹಳ ಆಶ್ಚರ್ಯವಾಯಿತು. ಆ ಧೃತವರ್ಮನು ಬಾಣಗಳನ್ನು ಎತ್ತುವುದಾಗಲಿ, ಬಿಲ್ಲಿನಲ್ಲಿ ಸೇರಿಸುವುದಾಗಲಿ ಯಾವುದೂ ತಿಳಿಯುತ್ತಿರಲಿಲ್ಲ. ಅವನ ಕಡೆಯಿಂದ ಬಾಣಗಳು ಬಂದು ಬೀಳುತ್ತಿರುವುದು ಮಾತ್ರ ಜನರಿಗೆ ಕಾಣಿಸುತ್ತಿತ್ತು. ಅರ್ಜುನನು ಅವನ ಕೈಚಳಕಕ್ಕಾಗಿ ಮನಸ್ಸಿನಲ್ಲಿಯೇ ಅವನನ್ನು ಸ್ವಲ್ಪಹೊತ್ತಿನವರೆಗೆ ಕೊಂಡಾಡುತ್ತಲಿದ್ದನು. ಬಾಲನಾದ ಇವನು ತೋರಿಸಿದ ಧನುರ್ವಿದ್ಯಾಕೌಶಲ್ಯವನ್ನು ನೋಡಿ ಅರ್ಜುನನಿಗೆ ತನ್ನ ಮಗನಾದ ಅಭಿಮನ್ಯುವಿನ ನೆನಪು ಬಂದಿತು. ಆದುದರಿಂದ ಅರ್ಜುನನು ಆ ಬಾಲಕನಮೇಲೆ ಕೋಪವನ್ನು ತೋರಿಸದೆ, ಅವನ ಪರಾಕ್ರಮಕ್ಕೆ ಆಶ್ಚರ್ಯಪಟ್ಟು ನಗುತ್ತಲೇ ಇದ್ದನು. ಆ ಬಾಲಕನು ಕೋಪಗೊಂಡ ಹಾವಿನಂತೆ ತನ್ನನ್ನು ನೋಡುತಿದ್ದರೂ ಅರ್ಜುನನು ಅವನಲ್ಲಿ ಪ್ರೀತಿಯಿಂದ ಅವನನ್ನು ಕೊಲ್ಲಲು ಇಷ್ಟಪಡದೆ ಮೃದುವಾಗಿಯೇ ಅವನನ್ನು ತಡೆಯುತಿದ್ದನು. ಹೀಗೆ ಅರ್ಜುನನು ತನ್ನಲ್ಲಿ ದಯೆಯನ್ನು ತೋರಿಸುತ್ತಿರುವಾಗಲೂ ಧೃತವರ್ಮನು ಅರ್ಜುನನಮೇಲೆ ತೇಜಸ್ಸಿನಿಂದ ಉರಿಯುವಂತಿರುವ ಒಂದು ಬಾಣವನ್ನು ಪ್ರಯೋಗಿಸಿದನು. ಆ ಬಾಣವು ಅರ್ಜುನನ ಕೈಗೆ ತಗುಲಿ, ಬಹಳ ನೋವಾದುದರಿಂದ, ಅವನಿಗೆ ಹಾಗೆಯೇ ಮೂರ್ಛೆ ಬಂದಂತಾಯಿತು. ಅವನ ಕೈಹಿಡಿತವು ತಪ್ಪಿದುದರಿಂದ ಅವನು ಹಿಡಿದಿದ್ದ ಗಾಂಡೀವವು ಇಂದ್ರಚಾಪದಂತೆ ಅವನ ಕೈಯಿಂದ ಜಾರಿ ಕೆಳಗೆ ಬಿದ್ದಿತು. ಅರ್ಜುನನ ಮಹಾಧನುಸ್ಸು ಕೈಯಿಂದ ಬಿದ್ದುದನ್ನು ನೋಡಿ ಧೃತವರ್ಮನು ಸಂತೋಷದಿಂದ ದೊಡ್ಡ ಸಿಂಹನಾದವನ್ನು ಮಾಡಿದನು. ಅರ್ಜುನನಿಗೆ ತಡೆಯಲಾರದ ಕೋಪವುಂಟಾಯಿತು. ಒಡನೆಯೇ ಅವನು ತನ್ನ ಕೈಯಲ್ಲಿ ಸುರಿಯುತ್ತಿದ್ದ ರಕ್ತವನ್ನು ಒರೆಸಿಕೊಂಡು, ತಿರುಗಿ ತನ್ನ ದಿವ್ಯಧನುಸ್ಸನ್ನು ಕೈಯಲ್ಲಿ

ಹಿಡಿದು, ಧೃತವರ್ಮನಮೇಲೆ ಬಾಣವರ್ಷವನ್ನು ಕರೆದನು. ಆಗ ಅರ್ಜುನನು ತೋರಿಸಿದ ಅಸ್ತ್ರಕೌಶಲವನ್ನು ನೋಡಿ ಸಮಸ್ತ ಭೂತಗಳೂ ಕೊಂಡಾಡುತ್ತಿದ್ದುವು. ಈ ಪ್ರಶಂಸಾವಾಕ್ಯವು ಆಕಾಶವನ್ನೆಲ್ಲ ವ್ಯಾಪಿಸಿತು. ಅರ್ಜುನನು ಕಾಲಾಂತಕನಂತೆ ಕೋಪಗೊಂಡಿರುವುದನ್ನು ನೋಡಿ ಅನೇಕ ತ್ರಿಗರ್ತಯೋಧರು ಧೃತವರ್ಮನ ರಕ್ಷಣೆಗಾಗಿ ಅರ್ಜುನನನ್ನು ಮುತ್ತಿಕೊಂಡರು. ಅರ್ಜುನನು ಕೋಪಗೊಂಡು ತನ್ನನ್ನು ಮುತ್ತಿನಿಂತಿದ್ದ ಹದಿನೆಂಟುಮಂದಿ ಯೋಧರನ್ನೂ ವಜ್ರಸಮಾನಗಳಾದ ಉಕ್ಕಿನ ಬಾಣಗಳಿಂದ ನಿಮಿಷಮಾತ್ರದಲ್ಲಿ ಹೊಡೆದನು. ಇನ್ನೂ ಅನೇಕರನ್ನು ಅತಿವೇಗದಿಂದ ಕೂಡಿದ ಸರ್ಪಸಮಾನಗಳಾದ ಬಾಣಗಳಿಂದ ನಿವಾರಿಸಿದನು. ಇದರಿಂದ ಮಹಾರಥರೆನಿಸಿದ ತ್ರಿಗರ್ತವೀರರೆಲ್ಲರೂ ಭಯದಿಂದ ಎದೆಗುಂದಿ ದಿಕ್ಕುದಿಕ್ಕಿಗೆ ಪಲಾಯನ ಮಾಡತೊಡಗಿದರು. ಸತ್ತುಳಿದ ಕೆಲವು ಮಂದಿ ವೀರರು, 'ಸಂಶಪ್ತಕರನ್ನೆಲ್ಲ ಸಂಹರಿಸಿದ ಆ ಅರ್ಜುನನ ಪರಾಕ್ರಮವು ಸಹಿಸಲಸಾಧ್ಯ'ವೆಂದು ತಿಳಿದು, ಥಟ್ಟನೆ ಮುಂದೆ ಬಂದು ಅವನಲ್ಲಿ ಮರೆಹೊಕ್ಕು "ಓ ವೀರಾಗ್ರಣೀ! ನಿನಗೆ ನಾವೆಲ್ಲರೂ ಕಿಂಕರರು. ನಿನ್ನ ಅಧೀನರು. ನಮ್ಮನ್ನು ನಿನ್ನ ಸೇವಕರಂತೆ ಭಾವಿಸಿ ನಮ್ಮಿಂದಾಗಬೇಕಾದ ಕೆಲಸವನ್ನಾಜ್ಞಾಪಿಸು. ನಿನಗೆ ಪ್ರಿಯವಾದ ಯಾವ ಕಾರ್ಯವನ್ನಾದರೂ ಮಾಡಲು ಸಿದ್ಧರಾಗಿರುವೆವು" ಎಂದರು. ಆಗ ಅರ್ಜುನನು ಅವರನ್ನು ನೋಡಿ 'ಎಲೈ! ನಿಮ್ಮ ಜೀವವನ್ನು ರಕ್ಷಿಸಿಕೊಳ್ಳಿರಿ! ನನ್ನ ಮಾತನ್ನು ಕೇಳಿ!' ಎಂದು ಹೇಳಿ ಕಳುಹಿಸಿಬಿಟ್ಟನು.

ಇದು ಎಪ್ಪತ್ತುನಾಲ್ಕನೆಯ ಅಧ್ಯಾಯವು.



{ ಯಜ್ಞಾಶ್ವವು ಪ್ರಾಗ್ಜ್ಯೋತಿಷಪುರವನ್ನು ಪ್ರವೇಶಿಸಿದುದು, ಅಲ್ಲಿ ಭಗದತ್ತನ ಮಗನಾದ ಯಜ್ಞದತ್ತನೊಡನೆ ಅರ್ಜುನನು ಯುದ್ಧವನ್ನು ತೊಡಗಿದುದು. }

ಓ ಜನಮೇಜಯರಾಜಾ! ಯಜ್ಞದ ಕುದುರೆಯು ಪ್ರಾಗ್ಜ್ಯೋತಿಷಪುರಕ್ಕೆ ಹೋಯಿತು. ಅಲ್ಲಿ ಭಗದತ್ತನ ಮಗನಾದ ಯಜ್ಞದತ್ತನೆಂಬು

ವನು ರಾಜ್ಯವನ್ನಾಳುತ್ತಿದ್ದನು. ಯಜ್ಞಾಶ್ವದೊಡನೆ ಅರ್ಜುನನು ತನ್ನ ದೇಶಕ್ಕೆ ಬಂದಿರುವುದನ್ನು ಕೇಳಿ, ಆ ಯಜ್ಞದತ್ತನು ಯುದ್ಧಸನ್ನದ್ಧನಾಗಿ ಹೊರಟುಬಂದು, ಆ ಕುದುರೆಯನ್ನು ಹಿಡಿದುಕೊಂಡು ತನ್ನ ನಗರದಕಡೆಗೆ ಹಿಂತಿರುಗಿದನು. ಇದನ್ನು ಕಂಡೊಡನೆ ಅರ್ಜುನನು ತನ್ನ ಗಾಂಡೀವವನ್ನು ಮಿಡಿಯುತ್ತ, ಆ ಯಜ್ಞದತ್ತನನ್ನು ಬೆನ್ನಟ್ಟಿ ಅವನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದನು. ಈ ಬಾಣಗಳಿಂದ ನೊಂದ ಆ ಯಜ್ಞದತ್ತನು ತಾನು ಹಿಡಿದಿದ್ದ ಕುದುರೆಯನ್ನು ಅಲ್ಲಿಯೇ ಬಿಟ್ಟುಬಿಟ್ಟು ಅರ್ಜುನನನ್ನು ಇದಿರಿಸುವುದಕ್ಕಾಗಿ ನಿಶ್ಚಯಿಸಿದನು. ಒಡನೆಯೇ ಅವನು ತಿರುಗಿ ತನ್ನ ಪಟ್ಟಣಕ್ಕೆ ಹೋಗಿ, ದೃಢವಾದ ಯುದ್ಧಕವಚವನ್ನು ತೊಟ್ಟು, ದೊಡ್ಡದೊಂದು ಆನೆಯನ್ನೇರಿ ಬಂದನು. ಆನೆಯಮೇಲೆ ಜಾಜ್ವಲ್ಯಮಾನವಾದ ಶ್ವೇತಚ್ಛತ್ರವು ಶೋಭಿಸುತ್ತಿರುವುದು. ಇವನ ಉಭಯಪಾರ್ಶ್ವದಲ್ಲಿಯೂ ಚಾಮರಗ್ರಾಹಿಣಿಯರು ಬಿಳಿಯ ಚಾಮರಗಳನ್ನು ಬೀಸುತ್ತಿರುವರು. ಈ ರಾಜಚಿಹ್ನಗಳೊಡನೆ ಯಜ್ಞದತ್ತನು ಬಂದು, ತನ್ನ ಬಾಲಬುದ್ಧಿಯಿಂದಲೂ, ಅಜ್ಞಾನದಿಂದಲೂ ಅರ್ಜುನನ ಪರಾಕ್ರಮವನ್ನು ತಿಳಿಯದೆ ಅವನನ್ನು ಯುದ್ಧಕ್ಕೆ ಕರೆಯುತ್ತ, ಬೆಟ್ಟದಂತೆ ಮಹೋನ್ನತವಾದ ತನ್ನ ಮದದಾನೆಯನ್ನು ಅರ್ಜುನನಮೇಲೆ ಬಿಟ್ಟನು. ಆ ಆನೆಯು ಇದರೋ ಮೊದಲೇ ಯುದ್ಧದಲ್ಲಿ ಆತುರಗೊಂಡಿರುವುದು. ಅದರ ಮುಖದಲ್ಲಿಯೂ, ಗಂಡಸ್ಥಳದಲ್ಲಿಯೂ ಮದಜಲವು ಉಕ್ಕುವುದರಿಂದ, ಮಳೆಯನ್ನು ಸುರಿಸುವ ಮೇಘದಂತೆ ಕಾಣಿಸುತ್ತಿರುವುದು. ಶಾಸ್ತ್ರೀಯವಾಗಿ ಯುದ್ಧಕಾರ್ಯದಲ್ಲಿ ಶಿಕ್ಷೆಯನ್ನು ಹೊಂದಿದ್ದ ಆ ದೊಡ್ಡ ಆನೆಯನ್ನು ಯಜ್ಞದತ್ತನು ಅಂಕುಶದಿಂದ ತಿವಿದು ಮುಂದೆ ಬಿಟ್ಟೊಡನೆ, ಅದು ಆಕಾಶದಲ್ಲಿ ಹಾರುವಂತೆ ವೇಗದಿಂದ ಬಂದಿತು. ಇದನ್ನು ನೋಡಿ ಅರ್ಜುನನು ಕೋಪಗೊಂಡು, ತಾನು ನೆಲದಲ್ಲಿ ನಿಂತಿದ್ದಂತೆಯೇ ಗಜಾರೂಢನಾದ ಆ ಯಜ್ಞದತ್ತನೊಡನೆ ಯುದ್ಧವನ್ನಾರಂಭಿಸಿದನು. ಯಜ್ಞದತ್ತನು ಅರ್ಜುನನಮೇಲೆ ಅಗ್ನಿಸಮಾನಗಳಾದ ತೋಮರಗಳನ್ನು ಪ್ರಯೋಗಿಸಿದನು. ಶಲಭಗಳಂತೆ ಗುಂಪಾಗಿ ಬರುತ್ತಿರುವ ಆ ತೋಮರಗಳನ್ನೆಲ್ಲ ಅರ್ಜುನನು ನಡುದಾರಿಯಲ್ಲಿಯೇ ತನ್ನ

ಬಾಣಗಳಿಂದ ಎರಡು ಮೂರು ತುಂಡುಗಳಾಗಿ ಕತ್ತರಿಸಿದನು. ತೋಮರಗಳು ವಿಫಲವಾದುದನ್ನು ನೋಡಿ ಯಜ್ಞದತ್ತನು ಬಾಣಗಳನ್ನು ಬಿಡಲಾರಂಭಿಸಿದನು. ಅರ್ಜುನನು ತನ್ನ ಬಾಣಗಳಿಂದ ಆ ಬಾಣಗಳನ್ನೂ ತಡೆದು ಭಗದತ್ತನ ಮಗನನ್ನು ಅನೇಕ ಬಾಣಗಳಿಂದ ಹೊಡೆದನು. ಆಗ ಯಜ್ಞದತ್ತನು ಅರ್ಜುನನ ಬಾಣಗಳಿಂದ ಬಹಳವಾಗಿ ನೊಂದು ಆನೆಯಿಂದ ಕೆಳಕ್ಕೆ ಬಿದ್ದುಬಿಟ್ಟನು. ಆದರೆ, ಆಗಲೂ ಅವನಿಗೆ ಪ್ರಜ್ಞೆತಪ್ಪಲಿಲ್ಲ. ತಿರುಗಿ ಕ್ಷಣಮಾತ್ರದಲ್ಲಿ ಚೇತರಿಸಿಕೊಂಡು ಆನೆಯನ್ನೇರಿ ಕುಳಿತು ಅದನ್ನು ಅರ್ಜುನನಮೇಲೆ ಬಿಟ್ಟನು. ಒಡನೆಯೇ ಅರ್ಜುನನು ತಿರುಗಿ ಆ ಆನೆಯನ್ನು ತಡೆಯುವುದಕ್ಕಾಗಿ ಸರ್ಪದಂತೆಯೂ, ಅಗ್ನಿಯಂತೆಯೂ ಇರುವ ಅನೇಕ ಬಾಣಗಳನ್ನು ಪ್ರಯೋಗಿಸಿದನು. ಈ ಬಾಣಪ್ರಹಾರಗಳಿಂದ ಆ ಆನೆಯ ಅಂಗಾಂಗಗಳಲ್ಲಿಯೂ ರಕ್ತವು ಕಿತ್ತುಕೊಂಡು, ಅನೇಕ ಗಿರಿನದಿಗಳಿಂದ ಕೂಡಿದ ಪರ್ವತದಂತೆ ಆ ಆನೆಯು ಕಾಣಿಸುತ್ತಿತ್ತು.

ಇದು ಎಪ್ಪತ್ತೈದನೆಯ ಅಧ್ಯಾಯವು.

ಅರ್ಜುನನು ಭಗದತ್ತನ ಮಗನನ್ನು ಜಯಿಸಿದುದು.

ಹೀಗೆ ಅರ್ಜುನನಿಗೂ, ಭಗದತ್ತನ ಮಗನಾದ ಯಜ್ಞದತ್ತನಿಗೂ ಇಂದ್ರ ವೃತ್ರರ ಯುದ್ಧದಂತೆ ಮೂರು ರಾತ್ರಿಗಳವರೆಗೆ ಪ್ರಬಲಯುದ್ಧವು ನಡೆಯಿತು. ನಾಲ್ಕನೆಯ ದಿನದಲ್ಲಿ ಯಜ್ಞದತ್ತನು ದೊಡ್ಡ ಅಟ್ಟಹಾಸದೊಡನೆ ನಗುತ್ತ ಅರ್ಜುನನನ್ನು ಕುರಿತು 'ಅರ್ಜುನಾ! ನಿಲ್ಲು! ನಿಲ್ಲು! ನೀನು ಬೇರೆ ನನ್ನ ಕೈಯಿಂದ ಬದುಕಿಹೋಗಲಾರೆ. ನಿನ್ನನ್ನು ಕೊಂದಮೇಲೆಯೇ ನಾನು ತಂದೆಗೆ ತರ್ಪಣವನ್ನು ಬಿಡುವೆನು. ನೀನು ಹಿಂದೆ ವೃದ್ಧನಾದ ನನ್ನ ತಂದೆಯನ್ನು ಕೊಂದೆ. ವೃದ್ಧನಾದ ನನ್ನ ತಂದೆಯ ಸ್ನೇಹಿತನನ್ನೂ ಕೊಂದೆ! ಈಗ ಬಾಲನಾದ ನನ್ನೊಡನೆ ನಿಂತು ಯುದ್ಧಮಾಡು ನೋಡುವೆನು' ಎಂದು ಹೇಳಿ, ಕೋಪದಿಂದ ಅರ್ಜುನನಮೇಲೆ ನ್ನ ಆನೆಯನ್ನು ಬಿಟ್ಟನು. ಆ ಆನೆಯು ಆಕಾಶದಲ್ಲಿ ಹಾರುವಂತೆಯೂ,

ಕೋಪದಿಂದ ತನ್ನ ಸುಂಡಿಲಿನಲ್ಲಿ ಉಚ್ಛ್ವಾಸದ ಬಿಂದುಗಳನ್ನೆರಚುವಂತೆಯೂ ಬುಸುಗುಟ್ಟುತ್ತ ಮುಂದೆ ಬಂದಿತು. ದೊಡ್ಡ ನೀಲಮೇಘವು ಪರ್ವತವನ್ನು ನೋಡುವಂತೆ ಅರ್ಜುನನನ್ನು ದುರದುರನೆ ನೋಡಿತು. ಮೇಘದಂತೆ ಗರ್ಜಿಸುತ್ತ ಮದಸೂಚಕವಾದ ಮುಖವಿಕಾರದಿಂದಲೂ, ಕೂಗಿನಿಂದಲೂ ಅರ್ಜುನನನ್ನು ಹೆದರಿಸುವಂತೆ ಮುಂದೆ ಬಂದಿತು. ಕುಣಿಯುತ್ತ ಬರುವ ಆ ಆನೆಯನ್ನು ನೋಡಿಯೂ ಅರ್ಜುನನು ಗಾಂಡೀವವನ್ನೂರಿ ನಿಶ್ಚಲನಾಗಿ ನಿಂತುಕೊಂಡಿದ್ದನು. ಆ ಯಜ್ಞದತ್ತನು ತನ್ನ ಕಾರ್ಯಕ್ಕೆ ಹಲವು ದಿನಗಳವರೆಗೆ ಅಡ್ಡಿಯಾದುದನ್ನೂ, ತನ್ನ ತಂದೆಯಲ್ಲಿ ಅವನಿಗಿದ್ದ ಪೂರ್ವ ವೈರವನ್ನೂ ನೆನೆಸಿಕೊಂಡು ಅತ್ಯಂತ ಕೋಪದಿಂದ ಜ್ವಲಿಸುತ್ತಿದ್ದನು. ಒಡನೆಯೇ ಪಾರ್ಥನು ಬಾಣಗಳಿಂದ ವೇಲೆಯು ಸಮುದ್ರವೇಗವನ್ನು ತಡೆಯುವಂತೆ ಆ ಆನೆಯ ವೇಗವನ್ನು ತಡೆದನು. ಅರ್ಜುನನ ಬಾಣಗಳು ಅಂಗಾಂಗಗಳಲ್ಲಿಯೂ ನಾಟಿಕೊಂಡು ಆ ಆನೆಯು ಮುಳ್ಳುಹಂದಿಯಂತೆ ಕಾಣಿಸುತ್ತಿತ್ತು. ಅರ್ಜುನನಿಂದ ತನ್ನ ಆನೆಯು ತಡೆಯಲ್ಪಟ್ಟುದನ್ನು ನೋಡಿ ಯಜ್ಞದತ್ತನಿಗೆ ಅತ್ಯಾಕ್ರೋಶವುಂಟಾಯಿತು. ಅರ್ಜುನನಮೇಲೆ ಪರಂಪರೆಯಾಗಿ ಬಾಣಗಳನ್ನು ಬಿಟ್ಟನು. ಆ ಬಾಣಗಳನ್ನೆಲ್ಲ ಅರ್ಜುನನು ನಡುದಾರಿಯಲ್ಲಿಯೇ ಕತ್ತರಿಸಿ ಕೆಡಹುತ್ತಿದ್ದನು. ಇದು ಅತ್ಯಾಶ್ಚರ್ಯಕರವಾಯಿತು. ತಿರುಗಿ ಪ್ರಾಗ್ಜ್ಯೋತಿಷಪತಿಯಾದ ಆ ಯಜ್ಞದತ್ತನು, ತನ್ನ ಆನೆಯನ್ನು ಮುಂದೆ ಬಿಟ್ಟನು. ಆನೆಯು ಬರುವುದನ್ನು ಕಂಡೊಡನೆ ಅರ್ಜುನನು ಅಗ್ನಿಸಮಾನವಾದ ಒಂದು ಬಾಣವನ್ನು ಪ್ರಯೋಗಿಸಿದನು. ಈ ಬಾಣವು ತಗುಲಿದೊಡನೆ ಆನೆಯು ಬಹಳವಾಗಿ ನೊಂದು, ವಜ್ರಾಹತವಾದ ಪರ್ವತವು ಭೂಮಿಗೆ ಬೀಳುವಂತೆ ನೆಲಕ್ಕುರುಳಿತು. ಆನೆಯು ಕೆಳಗೆ ಬಿದ್ದೊಡನೆ ಯಜ್ಞದತ್ತನು ನೆಲಕ್ಕೆ ಹಾರಿದನು. ಹೀಗೆ ವಾಹನವನ್ನು ಕಳೆದುಕೊಂಡು ಪದಾತಿಯಾಗಿ ನಿಂತಿದ್ದ ಯಜ್ಞದತ್ತನನ್ನು ನೋಡಿ ಕನಿಕರದಿಂದ ಅರ್ಜುನನು 'ರಾಜಾ! ನಾನು ಹೊರಡುವಾಗ ನಮ್ಮಣ್ಣನಾದ ಧರ್ಮರಾಜನು ಯುದ್ಧದಲ್ಲಿ ಯಾವ ರಾಜರನ್ನೂ ಕೊಲ್ಲಬಾರದೆಂದೂ, ಹಿಂದಿನ ಯುದ್ಧದಲ್ಲಿ ಮಾಡಿದ ಕೊಲೆಯೇ ಸಾಕೆಂದೂ, ಯೋಧರನ್ನಾದರೂ ಇನ್ನು

ಮುಂದೆ ಯುದ್ಧದಲ್ಲಿ ಕೊಲ್ಲಬಾರದೆಂದೂ ಹೇಳಿರುವನು. ಎಲ್ಲಾ ರಾಜರಿಗೂ ಈ ಅಂಶವನ್ನು ತಿಳಿಸಿ, ಅವರ ಬಂಧುಮಿತ್ರರೊಡನೆ ಯಜ್ಞಕ್ಕೆ ಕರೆತರಬೇಕೆಂದೂ ಹೇಳಿರುವನು. ನೀವೆಲ್ಲರೂ ಬಂದು ಆ ಯಜ್ಞಸಂಭ್ರಮವನ್ನು ಅನುಭವಿಸಬೇಕೆಂಬುದು ನಮ್ಮಣ್ಣನ ಕೋರಿಕೆ. ಆದುದರಿಂದ ಆ ಧರ್ಮಪುತ್ರನ ಮಾತಿಗೆ ಬದ್ಧನಾಗಿ ನಾನು ನಿನ್ನನ್ನು ಕೊಲ್ಲಲಾರೆನು. ನಿನಗೆ ನನ್ನಿಂದ ಭಯವೇನೂ ಇರದು. ನಿನಗೆ ಕ್ಷೇಮವುಂಟಾಗಲಿ! ನನ್ನೊಡನೆ ಆ ಮಹಾಯಜ್ಞಕ್ಕೆ ನೀನೂ ಬಂದು ಸೇರಬೇಕು. ಧರ್ಮರಾಜನ ಅಶ್ವಮೇಧವು ಅತಿಸಂಭ್ರಮದಿಂದ ನಡೆಯುತ್ತಿರುವುದು' ಎಂದನು. ಒಡನೆಯೇ ಭಗವತ್ತನಕುಮಾರನು ಹಾಗೆಯೇ ಆಗಲೆಂದು ಸಮ್ಮತಿಸಿದನು.

ಇದು ಎಪ್ಪತ್ತಾರನೆಯ ಅಧ್ಯಾಯವು.



ಅರ್ಜುನನಿಗೆ ಸೈಂಧವರೊಡನೆ ಪ್ರಬಲವಾದ ಯುದ್ಧವು ನಡೆಯುತ್ತಿದ್ದಾಗ, ಅರ್ಜುನನ ಕೈಯಿಂದ ಗಾಂಡೀವವು ಜಾರಿಬಿದ್ದುದು. ಆಗ ತೇಜೋಹೀನನಾದ ಅರ್ಜುನನಿಗೆ ದೇವರ್ಷಿಗಳ ಜಪದಿಂದ ತಿರುಗಿ ತೇಜಸ್ಸುಂಟಾಗಿ ಯುದ್ಧಾರಂಭವಾದುದು.

ಓ ಜನಮೇಜಯರಾಜಾ! ಹೀಗೆ ಭಗವತ್ತನ ಕುಮಾರನಾದ ಯಜ್ಞದತ್ತನು ಪರಾಜಿತನಾಗಿ ತನಗೆ ಅನುಕೂಲನಾದಮೇಲೆ, ಅರ್ಜುನನ ಕುದುರೆಯು ಮುಂದೆ ಹೊರಟು ಸಿಂಧುದೇಶವನ್ನು ಪ್ರವೇಶಿಸಿತು. ಅಲ್ಲಿ ಅರ್ಜುನನಿಗೆ ಸೈಂಧವವೀರರೊಡನೆ ದೊಡ್ಡ ಯುದ್ಧವು ಆರಂಭಿಸಿತು. ಹಿಂದಿನ ಕುರುಯುದ್ಧದಲ್ಲಿ ಹತಶೇಷರಾಗಿ ಉಳಿದವರೂ, ಅವರ ಮಕ್ಕಳೂ ಅರ್ಜುನನು ತನ್ನ ದೇಶಕ್ಕೆ ಬಂದುದನ್ನು ಕೇಳಿ ಕೋಪದಿಂದ ಯುದ್ಧಕ್ಕಾಗಿ ಇದಿರಿಸಿ ಬಂದರು. ಯಜ್ಞಾಶ್ವವು ತಮ್ಮ ದೇಶಕ್ಕೆ ಬಂದಿರುವುದನ್ನೂ, ಅದಕ್ಕೆ ಅರ್ಜುನನೇ ಬೆಂಬಲವಾಗಿ ನಿಂತಿರುವುದನ್ನೂ ತಿಳಿದು ಸ್ವಲ್ಪವಾದರೂ ಭಯವಿಲ್ಲದೆ ಯುದ್ಧಕ್ಕೆ ಸಿದ್ಧರಾದರು. ಯಜ್ಞಾಶ್ವವನ್ನು

ಹಿಂಬಾಲಿಸಿ ಪದಾತಿಯಾಗಿ ಕೈಯಲ್ಲಿ ಗಾಂಡೀವವನ್ನು ಹಿಡಿದಿದ್ದ ಅರ್ಜುನನನ್ನು ಲಕ್ಷ್ಯಮಾಡದೆ, ಹಿಂದೆ ಅವನಿಂದ ತಮಗಾದ ಪರಾಜಯವನ್ನೂ, ನೆನೆಸಿಕೊಂಡು ಅವನನ್ನು ಜಯಿಸುವ ಉದ್ದೇಶದಿಂದ ಅವನ ಸುತ್ತಲೂ ಮುತ್ತಿಕೊಂಡರು. ಅವರಲ್ಲಿ ಒಬ್ಬೊಬ್ಬರೂ ತಮ್ಮ ತಮ್ಮ ಹೆಸರುಗಳನ್ನೂ, ಕುಲಗೋತ್ರಗಳನ್ನೂ, ತಮ್ಮ ಹಲವು ಸಾಹಸಕಾರ್ಯಗಳನ್ನೂ ಹೇಳಿಕೊಳ್ಳುತ್ತ ಅರ್ಜುನನಮೇಲೆ ಬಾಣವರ್ಷಗಳನ್ನು ಕರೆದು, ಅವನು ಕಾಲ್ನಡೆಯಲ್ಲಿ ನಿಂತಿರುವಾಗಲೇ ಅವರೆಲ್ಲರೂ ಸುತ್ತಲೂ ರಥಾರೂಢರಾಗಿ ಬಾಣಗಳನ್ನು ಪ್ರಯೋಗಿಸುತ್ತಿದ್ದರು. ತಮಗೆ ರಾಜನಾದ ಜಯದ್ರಥನನ್ನೂ, ಪ್ರಬಲಪರಾಕ್ರಮಿಗಳಾದ ನಿವಾತಕವಚರನ್ನೂ, ಸಂಶಪ್ತಕರನ್ನೂ ಕೊಂದ ಮಹಾವೀರನೆನಿಸಿದ ಅರ್ಜುನನನ್ನೂ ಲಕ್ಷ್ಯಮಾಡದೆ ಅವರು ಸಾವಿರಾರು ರಥಗಳಿಂದಲೂ, ಅನೇಕ ಸಹಸ್ರ ಗಜಸೈನ್ಯಗಳಿಂದಲೂ ಆವರಿಸಿಕೊಂಡು, 'ಇನ್ನು ಅರ್ಜುನನು ತಮ್ಮ ಕೈಗೆ ಸಿಕ್ಕಿದ'ನೆಂದೇ ಸಂತೋಷಗೊಂಡರು. ಹಿಂದೆ ಅರ್ಜುನನು ಜಯದ್ರಥನನ್ನು ಕೊಂದ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು, ಎಲ್ಲರೂ ಸೇರಿ ಮೇಘದಂತೆ ಅರ್ಜುನನಮೇಲೆ ಶರವರ್ಷಗಳನ್ನು ಕರೆಯುತ್ತಿದ್ದರು. ಅರ್ಜುನನು ಅವರ ಬಾಣಗಳಲ್ಲಿ ಮರೆಸಿ, ಮೇಘಾವೃತವಾದ ಸೂರ್ಯನಂತೆಯೂ, ಪಂಜರದೊಳಗಿನ ಪಕ್ಷಿಯಂತೆಯೂ ತೋರುತ್ತಿದ್ದನು. ಇದನ್ನು ನೋಡಿ ಅರ್ಜುನನ ಕಡೆಯಲ್ಲಿ ದೊಡ್ಡ ಹಾಹಾಕಾರವುಂಟಾಯಿತು. ತ್ರೈಲೋಕ್ಯವೂ ನಡುಗುವಂತೆ ತೋರಿತು. ಸೂರ್ಯಬಿಂಬವು ಧೂಳು ಮುಚ್ಚಿದಂತೆ ಕೆಂಪಾಯಿತು. ದೊಡ್ಡ ಬಿರುಗಾಳಿಯೆದ್ದಿತು. ಪರ್ವಕಾಲದಲ್ಲಿ ಹೇಗೋ ಹಾಗೆ ಅಕಾಲದಲ್ಲಿ ರಾಹುವು ಸೂರ್ಯನನ್ನು ನುಂಗಿದಹಾಗೆ ಕಾಣಿಸಿತು. ಉಲ್ಕೆಗಳು ಸೂರ್ಯಬಿಂಬವನ್ನು ನಾಲ್ಕು ಕಡೆಗಳಿಂದಲೂ ಭೇದಿಸುವಂತೆ ಕಾಣಿಸಿತು. ಸ್ಥಿರವಾದ ಕೈಲಾಸಪರ್ವತದಲ್ಲಿ ನಡುಕವು ಕಾಣಿಸಿತು. ಸಪ್ತಋಷಿಗಳೂ, ದೇವರ್ಷಿಗಳೂ ದುಃಖಾತಿಶಯದಿಂದಲೂ, ಭಯದಿಂದಲೂ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತಿದ್ದರು. ಉಲ್ಕೆಗಳು ಚಂದ್ರನಲ್ಲಿರುವ ಮೊಲದ ಚಿಹ್ನೆಯನ್ನು ಭೇದಿಸಿಕೊಂಡು, ಆ ಚಂದ್ರಮಂಡಲವನ್ನೇ ಆವರಿಸುವಂತೆ ಕಾಣಿಸಿತು. ದಿಕ್ಕುಗಳೆಲ್ಲವೂ ಹೊಗೆ ಕವಿದು ವಿವರ್ಣವಾಯಿತು. ಮೇಘಗಳು

ಒಂದು ವಿಚಿತ್ರವಾದ ಬಣ್ಣದಿಂದ ಕೂಡಿ, ಇಂದ್ರಧನುಸ್ಸುಗಳನ್ನೂ, ಮಿಂಚುಗಳನ್ನೂ ಹೊರಡಿಸುತ್ತ ಆಕಾಶವನ್ನೆಲ್ಲ ಮರೆಸಿಕೊಂಡು ರಕ್ತಮಾಂಸಗಳನ್ನು ವರ್ಷಿಸುವಂತೆ ತೋರಿತು. ಹೀಗೆ ಅರ್ಜುನನು ಬಾಣವರ್ಷಗಳಿಂದ ಮರೆಸಲ್ಪಟ್ಟಾಗ ಆಶ್ಚರ್ಯಕರವಾದ ಉತ್ಪಾತಗಳು ಕಾಣಿಸಿದುವು. ಇಷ್ಟರಲ್ಲಿಯೇ ಅರ್ಜುನನ ಮನಸ್ಸಿಗೆ ಮೋಹವು ಆವರಿಸಿದಂತಾಗಿ, ಅವನ ಕೈಯಲ್ಲಿದ್ದ ಗಾಂಡೀವವೂ, ಕೈಚೀಲವೂ ಕಳಚಿ ಬಿದ್ದುಹೋದುವು. ಅರ್ಜುನನು ಹೀಗೆ ಮೂರ್ಛಿತನಾಗಿ ಶಕ್ತಿಗುಂದಿದ್ದ ಸಮಯವನ್ನು ನೋಡಿ, ಇದೇ ತಕ್ಕ ಸಮಯವೆಂದು ಸೈಂಧವವೀರರು ಮೇಲೆಮೇಲೆ ಬಾಣಗಳನ್ನು ಪ್ರಯೋಗಿಸುತ್ತಿದ್ದರು. ಅರ್ಜುನನ ಅಪಾಯಸ್ಥಿತಿಯನ್ನು ನೋಡಿ ಆಕಾಶದಲ್ಲಿ ದೇವತೆಗಳ ಮನಸ್ಸಿಗೆ ಭೀತಿಯುಂಟಾಯಿತು. ಅವರು ಅನಿಷ್ಟಶಾಂತಿಗಾಗಿ ಪ್ರಯತ್ನಿಸಿದರು. ಆಗ ದೇವರ್ಷಿಗಳೂ, ಸಪ್ತಋಷಿಗಳೂ, ಬ್ರಹ್ಮರ್ಷಿಗಳೂ ಪಾರ್ಥನಿಗೆ ಜಯವನ್ನುದ್ದೇಶಿಸಿ ಮಂತ್ರಜಪಗಳನ್ನು ಮಾಡತೊಡಗಿದರು. ಅದರ ಪ್ರಭಾವದಿಂದ ಅರ್ಜುನನಿಗೆ ಮೊದಲಿದ್ದ ತೇಜಸ್ಸು ಜ್ವಲಿಸಲಾರಂಭಿಸಿತು. ಭಯಂಕರವಾದ ಆ ಯುದ್ಧದಲ್ಲಿ ನಿಶ್ಚಲನಾಗಿ ನಿಂತು ತಿರುಗಿ ತನ್ನ ಧನುಸ್ಸನ್ನು ಕೈಗೆತ್ತಿಕೊಂಡು ನಾಣನ್ನು ತಟ್ಟಿದನು. ಆ ಧ್ವನಿಯು ಯಂತ್ರಧ್ವನಿಯಂತೆ ಪ್ರಬಲವಾಗಿ ಕೇಳಿಸುತ್ತಿತ್ತು. ಒಡನೆಯೇ ಶತ್ರುಗಳಮೇಲೆ ಬಾಣವರ್ಷಗಳನ್ನು ಕರೆದನು. ಅರ್ಜುನನ ಬಾಣವರ್ಷದಲ್ಲಿ ಸೈಂಧವರೆಲ್ಲರೂ ಮಿಡಿತೆಗಳಿಂದ ಮುಚ್ಚಲ್ಪಟ್ಟ ಗಿಡಗಳಂತೆ ಅದೃಶ್ಯರಾದರು. ಅನೇಕರು ಅರ್ಜುನನ ಗಾಂಡೀವಧ್ವನಿಗೆ ಹೆದರಿ ಓಡಿದರು. ಅನೇಕರು ಕಣ್ಣೀರು ಬಿಟ್ಟರು. ಹಲವರು ತಮ್ಮ ಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟರು. ಅರ್ಜುನನು ಅಲಾತಚಕ್ರದಂತೆ ತನ್ನ ಬಾಣಗಳಿಂದ ಆ ಸೈಂಧವರನ್ನೆಲ್ಲ ಆವರಿಸಿಕೊಂಡನು. ಅರ್ಜುನನು ಇಂದ್ರಜಾಲಕ್ಕೆ ಸಮಾನವಾದ ಬಾಣಸಮೂಹಗಳಿಂದ ದಿಕ್ಕುಗಳನ್ನೆಲ್ಲ ಮರೆಸುತ್ತ ಮೇಘದಂತೆ ತನ್ನನ್ನು ಸುತ್ತಿದ್ದ ಸೈನ್ಯವನ್ನು ಚದರಿಸಿ, ಶರತ್ಕಾಲದ ಸೂರ್ಯನಂತೆ ತೇಜಸ್ಸಿನಿಂದ ಬೆಳಗುತ್ತಿದ್ದನು.

ಇದು ಎಪ್ಪತ್ತೇಳನೆಯ ಅಧ್ಯಾಯವು.

ಅರ್ಜುನನು ಬಂದುದನ್ನು ಕೇಳಿದೊಡನೆ ಜಯದ್ರಥನ ಮಗನು ಮೃತನಾದುದು. ದುಶ್ಶಲೆಯು ಅವನ ಮಗನನ್ನು ಕರೆತಂದು ಅರ್ಜುನನಿಗೆ ತೋರಿಸಿ ದೈನ್ಯದಿಂದ ಪ್ರಾರ್ಥಿಸಲು, ಅರ್ಜುನನು ಯುದ್ಧದಿಂದ ಹಿಂಜರಿದುದು.

ಜನಮೇಜಯರಾಜಾ! ಕೇಳು! ಆಮೇಲೆ ಗಾಂಡೀವಧಾರಿಯಾದ ಅರ್ಜುನನು ಯುದ್ಧಕ್ಕೆ ಸಿದ್ಧನಾಗಿ, ಹಿಮವತ್ಪರ್ವತದಂತೆ ಧೈರ್ಯದಿಂದ ನಿಶ್ಚಲನಾಗಿ ನಿಂತನು. ತಿರುಗಿ ಆ ಸೈಂಧವವೀರರೆಲ್ಲರೂ ಯುದ್ಧಕ್ಕೆ ನಿಶ್ಚಯಮಾಡಿಕೊಂಡು, ಮಹಾಕೋಪದಿಂದ ಬಾಣವರ್ಷಗಳನ್ನು ಕರೆದರು. ಒಮ್ಮೆ ಸೋತುಹೋಗಿ ತಿರುಗಿ ಯುದ್ಧಕ್ಕಾಗಿ ಬಂದು ನಿಂತಿರುವ ಆ ಸೈನಿಕರನ್ನು ನೋಡಿ ಅರ್ಜುನನು ನಗುತ್ತ, ಬುದ್ಧಿಗೆಟ್ಟು ಸಾಯುವುದಕ್ಕಾಗಿ ಬಂದು ನಿಂತಿರುವ ಅವರನ್ನು ಕುರಿತು, ಮೃದುವಾಕ್ಯದಿಂದ 'ಎಲೈ ಯೋಧರೇ! ನಿಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಿ ಯುದ್ಧಮಾಡಿರಿ! ನನ್ನನ್ನು ಜಯಿಸುವುದಕ್ಕಾಗಿ ಆದಷ್ಟು ಪ್ರಯತ್ನಮಾಡಿರಿ! ನಿಮ್ಮ ಸಮಸ್ತ ಸಾಮಗ್ರಿಗಳನ್ನೂ ಉಪಯೋಗಿಸಿರಿ! ನಿಮಗಾದರೋ ಈಗ ಮಹತ್ತಾದ ಭಯವು ಬಂದೊದಗಿರುವುದು. ಇದೋ! ನಾನು ನಿಮ್ಮೆಲ್ಲರನ್ನೂ ಇದಿರಿಸುವೆನು. ಬಾಣದ ಬಲೆಯನ್ನು ಬೀಸುವೆನು. ಸಿದ್ಧರಾಗಿ ನಿಲ್ಲಿರಿ. ನಿಮ್ಮ ಕೆಚ್ಚನ್ನು ಮುರಿಯುವೆನು' ಎಂದು ಹೇಳಿ ಬಾಣಪ್ರಯೋಗಕ್ಕಾಗಿ ಗಾಂಡೀವವನ್ನು ಹಿಡಿದು ನಿಂತನು. ಇಷ್ಟರಲ್ಲಿ ಅರ್ಜುನನಿಗೆ ತನ್ನ ಅಣ್ಣನು ತನಗೆ ಹೇಳಿದ್ದ ಬುದ್ಧಿವಾದವು ನೆನಪಿಗೆ ಬಂದಿತು. ಅವನು ಯುದ್ಧಕ್ಕೆ ಹೊರಡುವಾಗ ತನ್ನನ್ನು ಕುರಿತು 'ಯುದ್ಧಕ್ಕಾಗಿ ಬಂದ ಯಾವ ರಾಜರನ್ನೂ ನೀನು ಕೊಲ್ಲಬಾರದು. ಅವರಿಗೆ ಅಪಜಯವನ್ನುಮಾತ್ರ ಉಂಟುಮಾಡು' ಎಂದು ಹೇಳಿದ ಧರ್ಮರಾಜನ ಮಾತು ನೆನಪಿಗೆ ಬಂದೊಡನೆ, ತನ್ನಲ್ಲಿ ತಾನು 'ರಾಜರನ್ನು ಕೊಲ್ಲಬಾರದೆಂಬುದು ಅಣ್ಣನ ಆಜ್ಞೆ! ಪವಿತ್ರವಾದ ಆ ಬುದ್ಧಿವಾದವನ್ನು ನಾನು ಸುಳ್ಳಾಗಿಸಬಾರದು. ಇವರಾದರೋ ತಿರುಗಿ ಯುದ್ಧಕ್ಕೆ ಬಂದಿರುವರು. ರಾಜಾಜ್ಞೆಯನ್ನು ಸಲ್ಲಿಸಬೇಕಾದರೆ ಇವರನ್ನು ಕೊಲ್ಲದಿರಬೇಕು' ಎಂದು ಯೋಚಿಸಿ, ಯುದ್ಧಾತುರದಿಂದ ಬಂದು ನಿಂತಿರುವ ಆ ಸೈಂಧವವೀರರನ್ನು ಕುರಿತು

ತಿರುಗಿ ಹೀಗೆಂದು ಹೇಳುವನು. 'ಎಲೈ ಯೋಧರೇ! ಯುದ್ಧಕ್ಕಾಗಿ ಬಂದಿರುವ ನಿಮ್ಮಲ್ಲಿ ಸಣ್ಣವಯಸ್ಸಿನವರನ್ನೂ, ಸ್ತ್ರೀಯರನ್ನೂ, 'ನಾನು ನಿನ್ನವನು' ಎಂದು ಮರೆಹೊಕ್ಕವರನ್ನೂ ನಾನು ಎಂದಿಗೂ ಕೊಲ್ಲಲಾರೆನು. ವಿರೋಧಿಸಿ ಬಂದವರನ್ನು ಮಾತ್ರ ನಾನು ಕೊಲ್ಲುವುದು ನಿಶ್ಚಯವು. ನನ್ನ ಬಾಣದಿಂದ ಸ್ವಸ್ಥಗಾಗಿ ನೀವು ಕಷ್ಟಕ್ಕೆ ಗುರಿಯಾಗುವಿರಿ' ಎಂದು ಎಚ್ಚರಿಕೆಕೊಟ್ಟು, ಆಮೇಲೆ ಯುದ್ಧವನ್ನಾರಂಭಿಸಿದನು. ಶತ್ರುಗಳು ತನ್ನನ್ನು ಜಯಿಸಬೇಕೆಂದು ಮಹಾಕೋಪದಿಂದ ಯುದ್ಧಮಾಡುತ್ತಿದ್ದರೂ, ಅರ್ಜುನನು ಆತುರವಿಲ್ಲದೆಯೂ, ಆಕ್ರೋಶವಿಲ್ಲದೆಯೂ ಮೆಲ್ಲಗೆ ಅವರನ್ನು ತಡೆಯುತ್ತ ಬಂದನು. ನೂರುಸಾವಿರ ಲಕ್ಷ ಸಂಖ್ಯೆಯಿಂದ ಸೈಂಧವರು ಅರ್ಜುನನಮೇಲೆ ಬಾಣಗಳನ್ನು ಬಿಡುತ್ತಿದ್ದರು. ಸರ್ಪವಿಷದಂತೆ ಕ್ರೂರವಾಗಿ ಬರುತ್ತಿರುವ ಆ ಬಾಣಗಳನ್ನೆಲ್ಲ ಅರ್ಜುನನು ತನ್ನ ಬಾಣದಿಂದ ಕತ್ತರಿಸಿ ಕೆಡಹಿದನು. ಸಾಣೆಹಿಡಿದು ಗರಿಗಟ್ಟಿದ ಆ ಬಾಣಗಳನ್ನೆಲ್ಲ ತುಂಡುಮಾಡಿದಮೇಲೆ, ಅವರಲ್ಲಿ ಒಬ್ಬೊಬ್ಬನನ್ನೂ ಬೇರೆಬೇರೆಯಾಗಿ ಬಾಣದಿಂದ ಹೊಡೆದನು. ಅವರೂಕೂಡ ಹಿಂದೆ ಅರ್ಜುನನು ತಮ್ಮ ಪ್ರಭುವಾದ ಜಯದ್ರಥನನ್ನು ಕೊಂದ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು, ಪ್ರಾಸಗಳನ್ನೂ, ಶಕ್ತಿಗಳನ್ನೂ ಅರ್ಜುನನಮೇಲೆ ಪ್ರಯೋಗಿಸಿದರು. ಅರ್ಜುನನು ಅವರ ಆಯುಧಗಳನ್ನೆಲ್ಲ ನಡುದಾರಿಯಲ್ಲಿಯೇ ಕತ್ತರಿಸಿ, ಅವರ ಪ್ರಯತ್ನವನ್ನು ವಿಫಲಮಾಡಿದುದಲ್ಲದೆ, ವಿರೋಧಿಸಿ ಮುಂದೆ ಬಂದ ಕೆಲವರ ತಲೆಗಳನ್ನು ಬಾಣದಿಂದ ಕತ್ತರಿಸಿ ಸಿಂಹನಾದಮಾಡಿದನು. ತಿರುಗಿ ಎಲ್ಲರೂ ಭಯದಿಂದ ಓಡುವುದಕ್ಕಾರಂಭಿಸಿದರು. ಕೆಲವರು ಯುದ್ಧಕ್ಕಾಗಿ ಮುಂದೆ ಬಂದರು. ಕೆಲವರು ಯುದ್ಧಕ್ಕೆ ಹಿಂಜರಿದು ನಿಂತರು. ಇವರ ಕೂಗಾಟಗಳು ಸಮುದ್ರಘೋಷದಂತೆ ಹೆಚ್ಚಿತು. ಅರ್ಜುನನಿಂದ ಪ್ರಬಲವಾಗಿ ಕೊಲೆಮಾಡಲ್ಪಡುತ್ತಿದ್ದರೂ, ಕೆಲವರು ತಮ್ಮ ತಮ್ಮ ಶಕ್ತಿಗೂ, ಉತ್ಸಾಹಕ್ಕೂ ತಕ್ಕಂತೆ ಹೋರಾಡಿದರು. ಕೊನೆಗೆ ಅರ್ಜುನನ ಬಾಣಗಳಿಂದ ಬಹುಜನರು ಮೂರ್ಛಿತರಾದರು. ಅವರ ವಾಹನಗಳೂ, ಸೈನ್ಯಗಳೂ ಬಹಳವಾಗಿ ಬಳಲಿಹೋದುವು. ಹೀಗೆ ಸೈನ್ಯಗಳೆಲ್ಲವೂ ಸೋತುಹೋದುದನ್ನು ಕಂಡು, ಜಯದ್ರಥನ ಪತ್ನಿಯೂ, ಧೃತ

ರಾಷ್ಟ್ರನ ಮಗಳೂ ಆದ ದುಶ್ಶಲೆಯು. ತನ್ನ ಮಗನಾದ ಸುರಥನ ಮಗನನ್ನು (ತನ್ನ ಪೌತ್ರನನ್ನು) ರಥದಮೇಲೆ ಕುಳ್ಳಿರಿಸಿಕೊಂಡು, ಅರ್ಜುನನನ್ನು ಸಮಾಧಾನಗೊಳಿಸುವದಕ್ಕಾಗಿ ಎಲ್ಲಾ ಯೋಧರೂ ನೋಡುತ್ತಿರುವಹಾಗೆ ಅರ್ಜುನನಿದ್ದ ಸ್ಥಳಕ್ಕೆ ಬಂದು, ಅವನ ಮುಂದೆ ಆರ್ತಸ್ವರದಿಂದ ಗೋಳಿಟ್ಟಳು. ಅವಳ ದೈನ್ಯವನ್ನು ಕಂಡೊಡನೆ ಅರ್ಜುನನು ಕೈಯಲ್ಲಿದ್ದ ಗಾಂಡೀವವನ್ನು ಕೆಳಗಿಟ್ಟು, ತನಗೆ ತಂಗಿಯಾದ ಅವಳನ್ನು ಕುರಿತು 'ಅಮ್ಮಾ! ನನ್ನಿಂದ ಆಗಬೇಕಾದುದೇನು?' ಎಂದನು. ಅದಕ್ಕವಳು 'ಪ್ರಭೂ! ಇದೋ! ಇವನು ನನ್ನ ಪೌತ್ರನು. ನಿನಗೆ ಸೋದರಳಿಯನು. ಇನ್ನೂ ಬಾಲನು. ಇವನು ನಿನಗೆ ನಮಸ್ಕಾರಮಾಡುವನು ನೋಡು. ಇವನನ್ನು ರಕ್ಷಿಸು' ಎಂದಳು. ಆಗ ಅರ್ಜುನನು 'ಅಮ್ಮಾ! ಆಗಲಿ. ಇವನ ತಂದೆಯು ಈಗ ಎಲ್ಲಿರುವನು?' ಎಂದು ಪ್ರಶ್ನೆಮಾಡಲು, ದುಶ್ಶಲೆಯು 'ಓ ಭರತಕುಲೋತ್ತಮಾ! ಪಿತೃಮರಣದಿಂದುಂಟಾದ ಶೋಕದಿಂದ ಕೊರಗುತ್ತಿದ್ದ ಇವನ ತಂದೆಯು ಆಗಲೇ ಮೃತನಾದನು. ಅವನ ಮರಣವೃತ್ತಾಂತವನ್ನು ತಿಳಿಸುವೆನು ಕೇಳು. ನೀನು ಯುದ್ಧದಲ್ಲಿ ನನ್ನ ಪತಿಯನ್ನು ಕೊಂದುದನ್ನು ಕೇಳಿದಾಗಿನಿಂದ ಅವನು ಕೊರಗುತ್ತಲೇ ಇದ್ದನು. ಈಗ ನೀನು ತಿರುಗಿ ಯಜ್ಞಾಶ್ವದೊಡನೆ ಬಂದ ವೃತ್ತಾಂತವು ಅವನ ಕಿವಿಗೆ ಬಿದ್ದಿತು. ನಿನ್ನ ಹೆಸರನ್ನು ಕೇಳಿದೊಡನೆ ಅವನು ಭಯದಿಂದಲೂ, ದುಃಖದಿಂದಲೂ ಪ್ರಾಣವನ್ನು ಬಿಟ್ಟನು. 'ಬೀಭತ್ಸುವು ಬಂದನು' ಎಂದು ನಿನ್ನ ಹೆಸರನ್ನು ಹೇಳಿದೊಡನೆ, ನನ್ನ ಮಗನು ಮೂರ್ಛಿತನಾಗಿ ಬಿದ್ದವನು ತಿರುಗಿ ಏಳಲೇ ಇಲ್ಲ. ಹೀಗೆ ಮೃತನಾದ ನನ್ನ ಮಗನನ್ನು ನೋಡಿ ನಾನು ಅವನ ಪುತ್ರನಾದರೂ ಸಾಯದಿರಲೆಂದು ನಿನ್ನಲ್ಲಿ ಮರೆಹುಗುವುದಕ್ಕಾಗಿ ಕರೆತಂದೆನು' ಎಂದು ಹೇಳಿ, ಕಣ್ಣೀರು ಬಿಟ್ಟು ದೈನ್ಯದಿಂದ ವಿಲಪಿಸಿದಳು. ಇದನ್ನೆಲ್ಲ ನೋಡಿ ಅರ್ಜುನನು ಕನಿಕರದಿಂದ ತಲೆಬಗ್ಗಿಸಿ ನಿಂತಿದ್ದನು. ಆಗ ತಿರುಗಿ ದುಶ್ಶಲೆಯು 'ಓ ಧರ್ಮಜ್ಞಾ! ನಿನ್ನ ತಂಗಿಯಾದ ನನ್ನನ್ನು ನೋಡು! ನಿನ್ನ ಸೋದರಳಿಯನ ಮಗನಾದ ಈ ಬಾಲನನ್ನು ನೋಡು. ನಮ್ಮಲ್ಲಿ ದಯೆಯನ್ನು ತೋರಿಸು. ಮಂದಬುದ್ಧಿಯುಳ್ಳ ಕೌರವನೂ, ನನ್ನ ಪತಿಯಾದ ಜಯ

ದ್ರಥನೂ ನಿನಗೆ ಮಾಡಿದ ಕೆಡಕುಗಳನ್ನು ಮರೆತುಬಿಡು. ನಿನ್ನ ಮಗನಾದ ಅಭಿಮನ್ಯುವಿಗೆ ಪರೀಕ್ಷಿತ್ತೆಂಬ ಶಿಶುವು ಹುಟ್ಟಿದಂತೆಯೇ, ನನ್ನ ಮಗನಿಗೆ ಈತನು ಜನಿಸಿರುವನು. ಇವನನ್ನು ತಂದು ನಿನ್ನಲ್ಲಿ ಬಿಟ್ಟಿರುವೆನು. ಇನ್ನುಮೇಲೆ ಎಲ್ಲಾ ಯೋಧರ ಕ್ಷೇಮಕ್ಕಾಗಿ ನಾನು ಹೇಳುವ ಮಾತನ್ನು ಲಾಲಿಸು. ಈ ಬಾಲನಲ್ಲಿ ಅನುಗ್ರಹವನ್ನು ತೋರಿಸು. ಇದೋ! ಈ ಶಿಶುವು ತಲೆಬಗ್ಗಿ ನಮಸ್ಕರಿಸಿ ಬೇಡುತ್ತಿರುವುದನ್ನು ನೋಡು. ಶಾಂತಿಯನ್ನು ವಹಿಸು. ಈತನು ಇನ್ನೂ ಬಾಲನು. ತಂದೆ ತಾತಂದಿರು ಮೊದಲಾದ ಸಮಸ್ತ ಬಂಧುಗಳನ್ನೂ ಕಳೆದುಕೊಂಡವನು. ಏನನ್ನೂ ತಿಳಿಯದವನು. ಕೋಪವನ್ನು ಬಿಟ್ಟು ಇವನಲ್ಲಿ ಪ್ರಸನ್ನನಾಗು. ಇವನ ತಾತನು ಹಿಂದೆ ನಿಮಗೆ ಮಾಡಿದ ಅಪರಾಧವನ್ನೆಲ್ಲ ಮರೆತು, ಇವನಲ್ಲಿ ಅನುಗ್ರಹವನ್ನು ತೋರಿಸು' ಎಂದಳು. ಹೀಗೆ ದುಶ್ಶಲೆಯು ದೈನ್ಯದಿಂದ ಬೇಡುತ್ತಿರುವುದನ್ನು ಕೇಳಿ ಅರ್ಜುನನಿಗೆ ಕರುಣೆಯು ಹುಟ್ಟಿತು. ಧೃತರಾಷ್ಟ್ರ ಗಾಂಧಾರಿಯರ ಸ್ಥಿತಿಯೂ ಅವನ ನೆನಪಿಗೆ ಬಂದಿತು. ಆಗ ಅರ್ಜುನನು ಕ್ಷತ್ರಿಯಧರ್ಮವನ್ನು ನಿಂದಿಸುತ್ತ, ಅವಳನ್ನು ಸಮಾಧಾನಗೊಳಿಸಿ, 'ಅಮ್ಮಾ! ಈ ವಿಚಾರದಲ್ಲಿ ಅತ್ಯಲ್ಪನೂ, ರಾಜ್ಯದಲ್ಲಿ ಅತ್ಯಾಸೆಯುಳ್ಳವನೂ, ಆದ ಆ ದುರ್ಯೋಧನನನ್ನು ನಿಂದಿಸಬೇಕು. ಅವನಿಂದಲ್ಲವೇ ನಾನು ಇಷ್ಟುಮಂದಿಯನ್ನೂ ಯುದ್ಧದಲ್ಲಿ ಕೊಲ್ಲಬೇಕಾಯಿತು. ಮಾಡುವುದೇನು? ಕ್ಷತ್ರಿಯಧರ್ಮವೇ ಹೀಗೆ ಕ್ರೂರವಾದುದು' ಎಂದನು. ಹೀಗೆ ಅರ್ಜುನನು ಅವಳನ್ನು ಸಮಾಧಾನಪಡಿಸಿ ಆ ಮಗುವನ್ನೆತ್ತಿ ಆಲಿಂಗಿಸಿ, 'ಇನ್ನು ನೀವು ಮನೆಗೆ ಹಿಂತಿರುಗಿರಿ' ಎಂದು ಕಳುಹಿಸಿದನು. ಒಡನೆಯೇ ದುಶ್ಶಲೆಯು ಯುದ್ಧಕ್ಕೆ ಬಂದಿದ್ದ ತನ್ನ ಕಡೆಯ ಯೋಧರನ್ನೆಲ್ಲ ಹಿಂತಿರುಗಿಸಿ, ಅರ್ಜುನನ್ನು ಪೂಜಿಸಿ, ಮನೆಗೆ ಹಿಂತಿರುಗಿದಳು.

ಓ ಜನಮೇಜಯರಾಜಾ! ಹೀಗೆ ಅರ್ಜುನನು ಸೈಂಧವವೀರರನ್ನೆಲ್ಲ ಜಯಿಸಿದಮೇಲೆ ಯಜ್ಞಾಶ್ವವನ್ನು ಹಿಂಬಾಲಿಸಿ ಹೊರಟನು. ಪೂರ್ವದಲ್ಲಿ ರುದ್ರನು ಪಿನಾಕಪಾಣಿಯಾಗಿ ಮೃಗವನ್ನು ಹಿಂಬಾಲಿಸಿದಂತೆ, ಇವನು ಯಜ್ಞಾಶ್ವವನ್ನು ಹಿಂಬಾಲಿಸಿದನು. ಆ ಕುದುರೆಯು ತನ್ನ ಇಷ್ಟ

ಬಂದಂತೆ ದೇಶದೇಶಗಳಮೇಲೆ ಹೋಗುತ್ತ, ಮಣಲೂರುರಾಜನ ರಾಜ್ಯವನ್ನು ಪ್ರವೇಶಿಸಿತು.

ಇದು ಎಪ್ಪತ್ತೆಂಟನೆಯ ಅಧ್ಯಾಯವು.

ಅರ್ಜುನನು ಮಣಲೂರ (ಮಣಿಪುರ) ಪುರಕ್ಕೆ ಬಂದಾಗ, ಅಲ್ಲಿ ಬಭ್ರುವಾಹನನು ಪಿತೃಭಕ್ತಿಯನ್ನು ತೋರಿಸಿದುದು. ಅರ್ಜುನನು ಕ್ಷತ್ರಿಯ ಧರ್ಮವನ್ನು ಬಿಟ್ಟು, ದೈನ್ಯವನ್ನು ತೋರಿಸಿದುದಕ್ಕಾಗಿ ಮಗನನ್ನು ನಿಂದಿಸಿದುದು. ಅದನ್ನು ಸಹಿಸದೆ ಉಲೂಪಿಯು ಬಭ್ರುವಾಹನನನ್ನು ಯುದ್ಧಕ್ಕೆ ಹುರಿಗೊಳಿಸಿದುದು. ಯುದ್ಧದಲ್ಲಿ ಬಭ್ರುವಾಹನನು ಅರ್ಜುನನನ್ನು ಬಾಣಗಳಿಂದ ಮೂರ್ಛೆಗೊಳಿಸಿ, ಆ ದುಃಖದಿಂದ ತಾನೂ ಮೂರ್ಛೆಯನ್ನು ಹೊಂದಿದುದು.

ಓ ಜನಮೇಜಯರಾಜಾ! ಕೇಳು. ಅರ್ಜುನನು ಮಣಲೂರಪುರಕ್ಕೆ ಬಂದುದನ್ನು ಕೇಳಿ, ಅಲ್ಲಿ ಅವನಿಗೆ ಚಿತ್ರಾಂಗದೆಯ ಗರ್ಭದಲ್ಲಿ ಹುಟ್ಟಿದ ಬಭ್ರುವಾಹನನು ಪಿತೃಭಕ್ತಿಯಿಂದ ಅನೇಕಬ್ರಾಹ್ಮಣರನ್ನೂ, ದೊಡ್ಡವರನ್ನೂ ಮುಂದಿಟ್ಟುಕೊಂಡು, ಅರ್ಜುನನನ್ನು ಕಾಣುವುದಕ್ಕಾಗಿ ಬಂದರು. ಅರ್ಜುನನಾದರೋ ಕ್ಷತ್ರಿಯಧರ್ಮವನ್ನು ನೆನೆಸಿಕೊಂಡು, ಆ ರಾಜಕುಮಾರನು ಹೀಗೆ ಮೊದಲೇ ದೈನ್ಯದಿಂದ ತನ್ನಲ್ಲಿಗೆ ಬಂದುದನ್ನು ಒಪ್ಪಲಿಲ್ಲ. ಆಗ ಅವನು ಕೋಪವನ್ನು ತೋರಿಸುತ್ತ, ಆ ಬಭ್ರುವಾಹನನನ್ನು ನೋಡಿ, ‘ ರಾಜಕುಮಾರಾ! ಈ ನಿನ್ನ ನಡತೆಯು ನನಗೆ ಯುಕ್ತವಾಗಿ ತೋರಲಿಲ್ಲ. ನೀನು ಕ್ಷತ್ರಿಯ ಧರ್ಮದಿಂದ ಹೊರಗಾದವನು. ಯುಧಿಷ್ಠಿರನ ಅಶ್ವಮೇಧಯಾಗದ ಕುದುರೆಗೆ ನಾನು ಕಾವಲಾಗಿ ನಿನ್ನ ದೇಶಕ್ಕೆ ಪ್ರವೇಶಿಸಿರುವಾಗಲೂ, ನೀನು ಯುದ್ಧ ಮಾಡಲಾರದೆ ಹೀಗೆ ದೈನ್ಯವನ್ನು ತೋರಿಸುವು

ದೆಂದರೇನು? ಕ್ಷತ್ರಿಯ ಧರ್ಮದಲ್ಲಿ ನಿಪುಣನೆನಿಸಿಕೊಂಡು ಇಂತಹ ಅಲ್ಪಬುದ್ಧಿಯಿಂದ ಪ್ರವರ್ತಿಸಿದ ನೀನು ಕೇವಲ ನಿಂದಾರ್ಹನು. ನಿನ್ನ ಜನ್ಮವನ್ನು ಸುಡಬೇಕು! ಯುದ್ಧಕ್ಕಾಗಿ ಬಂದ ನನ್ನನ್ನು ಪ್ರಿಯವಾಕ್ಯದಿಂದ ಕರೆಯುತ್ತಿರುವೆ! ಓ ರಾಜಕುಮಾರಾ! ಇನ್ನು ನೀನು ಈ ಲೋಕದಲ್ಲಿ ಬದುಕಿ ಪ್ರಯೋಜನವೇನೂ ಕಾಣಲಿಲ್ಲ. ಯುದ್ಧಕ್ಕೆ ಬಂದ ಕ್ಷತ್ರಿಯನಿಗೆ ಹೆದರಿ, ಸಾಮವಾಕ್ಯದಿಂದ ವಶೀಕರಿಸಲು ಯತ್ನಿಸುತ್ತಿರುವೆ. ಎಲ ಬುದ್ಧಿಗೆಟ್ಟವನೇ! ನಾನು ಯುದ್ಧವನ್ನಪೇಕ್ಷಿಸದೆ ಶಸ್ತ್ರವನ್ನು ಮನೆಯಲ್ಲಿಯೇ ಇಟ್ಟು ಬಂದಿದ್ದ ಪಕ್ಷದಲ್ಲಿ, ಆಗ ಈ ನಿನ್ನ ನಡತೆಯು ಯುಕ್ತವಾಗುತ್ತಿತ್ತು' ಎಂದನು.

ಓ ಜನಮೇಜಯರಾಜಾ! ಅರ್ಜುನನು ಹೇಳಿದ ಈ ನಿಂದಾವಾಕ್ಯಗಳು ಪಾತಾಳದಲ್ಲಿದ್ದ ಉಲೂಪಿಯೆಂಬ ನಾಗಕನ್ಯಕೆಗೆ ತಿಳಿಯಿತು. ಆಗ ಅವಳು ತನ್ನ ಪತಿಯಾದ ಅರ್ಜುನನು ಮಗನ ವಿಷಯವಾಗಿ ಹೇಳಿದ ಈ ನಿಂದಾವಾಕ್ಯವನ್ನು ಸಹಿಸಲಾರದೆ, ಭೂಮಿಯನ್ನು ಭೇದಿಸಿಕೊಂಡು ಮೇಲೆ ಬಂದಳು. ಅಲ್ಲಿ ಹಿಂದುಮುಂದುತೋರದೆ ಏನನ್ನೋ ಆಲೋಚಿಸುತ್ತ ತಲೆಬಗ್ಗಿಸಿಕೊಂಡು ಸುಮ್ಮನೆನಿಂತಿದ್ದ ಆ ಕುಮಾರನನ್ನೂ, ಯುದ್ಧಾತುರವುಳ್ಳ ತಂದೆಯಿಂದ ಆಗಾಗ ಅವನು ಕಠಿಣ ವಾಕ್ಯಗಳಿಂದ ಹೆದರಿಸಲ್ಪಡುತ್ತಿರುವುದನ್ನೂ ನೋಡಿ, ಬಭ್ರುವಾಹನನ ಬಳಿಗೆ ಬಂದು ಹೀಗೆಂದು ಹೇಳುವಳು. 'ಕುಮಾರಾ! ನಾನು ಉಲೂಪಿಯೆಂಬ ನಾಗಕನ್ನಿಕೆ! ನಾನು ನಿನಗೆ ತಾಯಿಯಾಗಬೇಕೆಂದು ತಿಳಿ. ಇದರಿಂದ ನಿನಗೆ ಒಳ್ಳೆಯ ಧರ್ಮವುಂಟು. ಕುರುಕುಲಶ್ರೇಷ್ಠನಾದ ಅರ್ಜುನನೊಡನೆ ನೀನು ಯುದ್ಧಮಾಡು. ಆಗಲೇ ಅವನು ನಿನ್ನ ವಿಷಯದಲ್ಲಿ ಪ್ರೀತನಾಗುವನು' ಎಂದಳು. ಉಲೂಪಿಯು ಹೀಗೆ ಪ್ರೋತ್ಸಾಹಿಸಿದಮೇಲೆ ಬಭ್ರುವಾಹನನಿಗೆ ಯುದ್ಧದಲ್ಲಿ ಮನಸ್ಸು ಹುಟ್ಟಿತು. ಸುವರ್ಣ ಕವಚವನ್ನೂ, ಶಿರಸ್ತ್ರಾಣವನ್ನೂ ಧರಿಸಿ, ನೂರಾರು ಬತ್ತಳಿಕೆಗಳಿಂದಲೂ, ಬೇರೆ ಎಲ್ಲಾ ಯುದ್ಧಸಾಮಗ್ರಿಗಳಿಂದಲೂ ಸಿದ್ಧವಾದ ರಥವನ್ನು ಏರಿದನು. ಆ ರಥಕ್ಕೆ ಮನೋವೇಗವುಳ್ಳ ನಾಲ್ಕು ಕುದುರೆಗಳು ಹೂಡಲ್ಪಟ್ಟಿದ್ದುವು. ಚಕ್ರವೇ ಮೊದ

ಲಾದ ಎಲ್ಲಾ ಅಂಗಗಳೂ ಪೃಥವಾಗಿ, ಸುವರ್ಣಾಲಂಕಾರಗಳಿಂದ ಚಿತ್ರಿತ ವಾಗಿದ್ದಿತು. ಎಲ್ಲರಿಂದಲೂ ಪೂಜಿತವಾದ ಆ ರಥದಮೇಲೆ ಸುವರ್ಣಮಯ ವಾದ ಹಂಸಧ್ವಜವು ಏರಿಸಲ್ಪಟ್ಟಿತ್ತು. ಬಭ್ರುವಾಹನನು ಅಂತಹ ದಿವ್ಯ ರಥವನ್ನೇರಿ ಹೊರಟು, ಅರ್ಜುನನು ಯಜ್ಞಾಶ್ವವನ್ನು ನಿಲ್ಲಿಸಿದ್ದ ಸ್ಥಳಕ್ಕೆ ಬಂದು, ಅಶ್ವಶಿಕ್ಷೆಯಲ್ಲಿ ನಿಪುಣರಾದ ತನ್ನ ಕಡೆಯ ಸೇವಕರಿಂದ ಆ ಕುದು ರೆಯನ್ನು ಹಿಡಿದು ತರಿಸಿದನು. ಕುದುರೆಯು ಹಿಡಿಯಲ್ಪಟ್ಟುದನ್ನು ನೋಡಿ ಅರ್ಜುನನ ಮನಸ್ಸಿಗೆ ಸಂತೋಷವುಂಟಾಯಿತು. ತಾನು ಭೂಮಿಯಲ್ಲಿ ನಿಂತಿದ್ದಹಾಗೆಯೇ ರಥದಮೇಲೆ ಕುಳಿತಿದ್ದ ತನ್ನ ಮಗನನ್ನು ಬಾಣಗ ಳಿಂದ ತಡೆದನು. ಬಭ್ರುವಾಹನನೂ ಸರ್ಪಗಳಂತಿರುವ ಅನೇಕಬಾಣ ಸಮೂಹಗಳನ್ನು ಅರ್ಜುನನಮೇಲೆ ಪ್ರಯೋಗಿಸಿದನು. ದೇವಾಸುರರ ಯುದ್ಧದಂತೆ ತಂದೆ ಮಕ್ಕಳಿಬ್ಬರಿಗೂ ಪ್ರಬಲ ಯುದ್ಧವು ನಡೆಯಿತು. ಇಬ್ಬರೂ ಯುದ್ಧೋತ್ಸಾಹದಿಂದ ಹೋರಾಡುತ್ತಿದ್ದರು. ಇಷ್ಟರಲ್ಲಿ ಬಭ್ರು ವಾಹನನು ನಗುತ್ತ, ಅರ್ಜುನನ ಹೊಳಕ್ಕೈಗೆ ಗುರಿಯಿಟ್ಟು ಒಂದು ತೀಕ್ಷ್ಣ ಬಾಣವನ್ನು ಹೊಡೆದನು. ಆ ಬಾಣವು ಅರ್ಜುನನ ಅವಯವವನ್ನು ಭೇದಿಸಿಕೊಂಡು ಹೋಗಿ, ಹುತ್ತವನ್ನು ಹುಗುವ ಹಾವಿನಂತೆ ಭೂಮಿಯಲ್ಲಿ ಪ್ರವೇಶಿಸಿತು. ಆ ಬಾಣದಿಂದ ಬಹಳವಾಗಿ ನೊಂದ ಅರ್ಜುನನು, ಕೈಯಲ್ಲಿ ಗಾಂಢೀವವನ್ನು ಹಿಡಿದಿದ್ದಹಾಗೆಯೇ ಮೃತನಾದಂತೆ ಕೆಳಗೆಬಿದ್ದುಬಿಟ್ಟನು. ಆದರೆ, ಅವನ ದಿವ್ಯತೇಜಸ್ಸು ಮಾತ್ರ ದೇಹದಲ್ಲಿಯೇ ಅಡಗಿದ್ದಿತು. ಇಷ್ಟರಲ್ಲಿಯೇ ಅವನು ತಿರುಗಿ ಚೇತರಿಸಿಕೊಂಡು, ಆ ಬಭ್ರುವಾಹನನನ್ನು ಕೊಂಡಾಡುತ್ತ, 'ವತ್ಸಾ! ಭಲೆ! ಶಹಭಾಷ್! ಚಿತ್ರಾಂಗದೆಯ ಮಗ ನಾದ ನೀನು ನಿನ್ನ ಕ್ಷತ್ರಿಯಕುಲಕ್ಕೆ ಯೋಗ್ಯವಾದ ಕರ್ಮವನ್ನು ನಡೆಸಿದು ದಕ್ಕಾಗಿ ನಾನು ಸಂತೋಷಪಟ್ಟೆನು. ಇದೋ! ನಾನೂ ಬಾಣಗಳನ್ನು ಬಿಡುವೆನು. ಎಚ್ಚರದಿಂದಿರು' ಎಂದು ಹೇಳಿ, ಅವನಮೇಲೆ ಅನೇಕಬಾಣ ಗಳನ್ನು ವರ್ಷಿಸಿದನು. ಗಾಂಡೀವ ಧನುಸ್ಸಿನಿಂದ ಬಿಡಲ್ಪಟ್ಟ ವಜ್ರ ಸಮಾ ನವಾದ ಆ ಬಾಣಗಳನ್ನೆಲ್ಲಾ ಬಭ್ರುವಾಹನನು ತನ್ನ ಬಾಣಗಳಿಂದ ಮೂರು ಮೂರು ತುಂಡುಗಳಾಗಿ ಕತ್ತರಿಸಿದನು. ಅರ್ಜುನನು ಇಷ್ಟರಲ್ಲಿ ಸುವರ್ಣಮಯವಾದ ತಾಳೆಯ ಮರದಂತೆ ಮಹೋನ್ನತವಾದ ಅವನ

ಹಂಸಧ್ವಜವನ್ನು ಒಂದು ಕ್ಷುರಾಯುಧದಿಂದ ತುಂಡುಮಾಡಿ ಕೆಡಹಿದನು. ನಗುತ್ತಿರುವವನಂತೆಯೇ ಆ ಬಭ್ರುವಾಹನನ ರಥಾಶ್ವಗಳನ್ನೆಲ್ಲ ಕೊಂದನು. ಆಗ ಬಭ್ರುವಾಹನನು ಅತ್ಯಾಕ್ರೋಶದಿಂದ ರಥದಿಂದ ಕೆಳಕ್ಕೆ ಧುಮುಕಿ ಕಾಲು ನಡೆಯಿಂದಲೇ ಯುದ್ಧವನ್ನಾರಂಭಿಸಿದನು. ಅರ್ಜುನನು ತನ್ನ ಮಗನ ಪರಾಕ್ರಮಕ್ಕಾಗಿ ಸಂತೋಷಗೊಂಡು ಅವನನ್ನು ಬಹಳವಾಗಿ ನೋಯಿಸಲಾರದೆ ಮೆಲ್ಲಗೆ ಬಾಣಗಳನ್ನು ಬಿಡುತ್ತಿದ್ದನು. ಹೀಗೆ ಅರ್ಜುನನು ಬಾಣಗಳಿಂದ ತನ್ನನ್ನು ಹೊಡೆಯುತ್ತಿರುವಾಗಲೂ ಲಕ್ಷ್ಯಮಾಡದೆ, ಬಭ್ರುವಾಹನನು ಮುಂದೆ ಬಿದ್ದ ಸರ್ಪದಂತಿರುವ ಬಾಣಗಳಿಂದ ಅವನನ್ನು ಹೊಡೆದನು. ಬಾಲಭಾವದಿಂದ ಯುಕ್ತಾಯುಕ್ತವನ್ನರಿಯದ ಆ ಬಭ್ರುವಾಹನನು, ಅತಿ ತೀಕ್ಷ್ಣವಾದ ಒಂದು ಬಾಣವನ್ನು ತಂದೆಯ ಎದೆಗೆ ಗುರಿಯಿಟ್ಟು ಬಲವಾಗಿ ಹೊಡೆದನು. ಆ ಬಾಣವು ಉರಿಯುವ ಬೆಂಕಿಯಂತೆ ಜ್ವಲಿಸುತ್ತ ಬಂದು, ಅರ್ಜುನನ ಹೃದಯದ ಮರ್ಮಸ್ಥಾನವನ್ನು ಭೇದಿಸಿಕೊಂಡು ಹೋಯಿತು. ಇದರಿಂದ ಬಹಳ ಬಾಧೆಗೊಂಡ ಅರ್ಜುನನು, ಮೂರ್ಛಿತನಾಗಿ ಕೆಳಗೆ ಬಿದ್ದುಬಿಟ್ಟನು. ತಂದೆಯು ಮೂರ್ಛಿತನಾಗಿ ಬಿದ್ದುದನ್ನು ಕಂಡೊಡನೆ ಬಭ್ರುವಾಹನನೂಕೂಡ ದುಃಖದಿಂದ ಪ್ರಜ್ಞೆತಪ್ಪಿ ಕೆಳಕ್ಕೆ ಬಿದ್ದುಬಿಟ್ಟನು. ಮೊದಲೇ ಅರ್ಜುನನ ಬಾಣಗಳಿಂದ ನೊಂದಿದ್ದ ಆತನಿಗೆ ತಂದೆಯು ಮೃತನಾದನೆಂಬ ದುಃಖವು ಒಡನೆಯೇ ಪ್ರಜ್ಞೆತಪ್ಪುವಂತೆ ಮಾಡಿತು. ಹೀಗೆ ಪತಿಪುತ್ರರಿಬ್ಬರೂ ಮೂರ್ಛಿತರಾಗಿ ಬಿದ್ದ ಸಂಗತಿಯು ಚಿತ್ರಾಂಗದೆಗೆ ತಿಳಿಯಿತು. ಒಡನೆಯೇ ಅವಳು ಭಯಶೋಕಗಳಿಂದ ನಡುಗುತ್ತ ರಣಾಂಗಣಕ್ಕೆ ಬಂದು, ಅಲ್ಲಿ ಪತಿ ಪುತ್ರರಿಬ್ಬರೂ ಪ್ರಜ್ಞೆಯಿಲ್ಲದೆ ಬಿದ್ದಿರುವುದನ್ನು ನೋಡಿ ಬಹಳವಾಗಿ ರೋದಿಸಿದಳು.

ಇದು ಎಪ್ಪತ್ತೊಂಭತ್ತನೆಯ ಅಧ್ಯಾಯವು.



ಚಿತ್ರಾಂಗದೆಯು ದುಃಖವನ್ನು ತಡೆಯಲಾರದೆ ಮೂರ್ಛೆ ಬಿದ್ದು, ಪ್ರಜ್ಞೆ ಬಂದಮೇಲೆ ಉಲೂಪಿಯನ್ನು ನಿಂದಿಸಿದುದು. ಬಭ್ರುವಾಹನನು ಮೆಲ್ಲಗೆ ಮೂರ್ಛೆಯಿಂದೆದ್ದು, ತನ್ನನ್ನು ನಿಂದಿಸಿಕೊಳ್ಳುತ್ತ ಪ್ರಾಯೋಪವೇಶದಿಂದ ಪ್ರಾಣತ್ಯಾಗಕ್ಕೆ ನಿಶ್ಚಯಿಸಿದುದು.

ಓ ಜನಮೇಜಯರಾಜಾ! ಚಿತ್ರಾಂಗದೆಯು ಬಹಳವಾಗಿ ವಿಲಪಿಸಿ, ಹಾಗೆಯೇ ಮೂರ್ಛಿತಳಾಗಿ ನೆಲದಮೇಲೆ ಬಿದ್ದುಬಿಟ್ಟಳು. ಆಮೇಲೆ ಸ್ವಲ್ಪ ಹೊತ್ತಿಗೆ ಅವಳಿಗೆ ಪ್ರಜ್ಞೆ ಬಂದಿತು. ಆಗ ನಾಗಕನ್ನಿಕೆಯಾದ ಉಲೂಪಿಯನ್ನು ನೋಡಿ ಹೀಗೆಂದು ಹೇಳುವಳು. “ಉಲೂಪೀ! ನಿನ್ನ ಪತಿಯು ರಣಭೂಮಿಯಲ್ಲಿ ಹತನಾಗಿ ಬಿದ್ದುದನ್ನು ನೋಡಿದೆಯಾ? ನಿನ್ನಿಂದಲ್ಲವೇ ನನ್ನ ಮಗನು ಈ ಅಕಾರ್ಯವನ್ನು ಮಾಡಬೇಕಾಯಿತು? ನೀನು ಆರ್ಯಧರ್ಮಗಳನ್ನೆಲ್ಲಾ ತಿಳಿದವಳು! ಪತಿವ್ರತೆಯೆನಿಸಿದವಳು. ನಿನ್ನಿಂದಲ್ಲವೆ ನಮ್ಮಿಬ್ಬರ ಪತಿಗೆ ಈ ಮರಣವುಂಟಾಯಿತು. ಎಲೆ ಮೂಢೆ! ನಿನ್ನ ಪತಿಯು ನಿನಗೆ ಮಾಡಿದ ಅಪರಾಧವೇನು? ಅಥವಾ ಏನಾದರೂ ತಪ್ಪಿದ್ದರೂ, ಅವನಿಗಾಗಿ ನಾನು ಬೇಡಿಕೊಳ್ಳುವೆನು. ಅವನನ್ನು ಬದುಕಿಸು. ನೀನು ಧರ್ಮಜ್ಞಳೆಂದು ಮೂರುಲೋಕದಲ್ಲಿಯೂ ಹೆಸರುಗೊಂಡವಳು. ಇಂತಹ ನೀನು ಮಗನ ಕೈಯಿಂದ ಪತಿಯನ್ನು ಕೊಲ್ಲಿಸಿ, ಅದಕ್ಕಾಗಿ ಚಿಂತಿಸದೆಯೂ ಇರುವೆಯಲ್ಲಾ! ಎಲೆ ನಾಗಕನ್ನಿಕೆ! ನಾನು ನನ್ನ ಮಗನ ಸಾವಿಗೂ ದುಃಖಿಸುವುದಿಲ್ಲ! ಪತಿಮರಣಕ್ಕಾಗಿ ಸಂಕಟಪಡುವೆನು. ನಮ್ಮ ಮನೆಗೆ ಬಂದ ಪತಿಗೆ ನಾವು ಮಾಡಿದ ಸತ್ಕಾರವು ಇದೇ ಅಲ್ಲವೆ?” ಎಂದಳು. ಹೀಗೆ ಚಿತ್ರಾಂಗದೆಯು ಉಲೂಪಿಗೆ ಮರ್ಮಭೇದಕಗಳಾದ ಮಾತುಗಳನ್ನಾಡಿದಮೇಲೆ, ತನ್ನ ಪತಿಯ ದೇಹವು ಬಿದ್ದಿದ್ದ ಸ್ಥಳಕ್ಕೆ ಬಂದು ‘ಕೌರವವಂಶಕ್ಕೆಲ್ಲಾ ಪ್ರಮುಖನಾದವನೇ! ಓ ನನ್ನ ಪ್ರಿಯನೇ! ಮೇಲೇಳು! ಇದೋ ನಿನ್ನ ಯಾಗಾಶ್ವವನ್ನು ನಾನು ಬಿಡಿಸಿಕೊಡುವೆನು. ನಾಥಾ! ನೀನು ಧರ್ಮರಾಜನ ಈ ಯಾಗಾಶ್ವವನ್ನು ಹಿಂಬಾಲಿಸಿ ಹೊರಡಬೇಡವೆ? ಇದೇಕೆ ಇನ್ನೂ ಹೀಗೆ ಮಲಗಿರುವೆ? ಓ ಕುರುನಂದನಾ! ಈಗ ಕುರು

ವಂಶದವರ ಪ್ರಾಣಗಳೆಲ್ಲ ನಿನ್ನ ಅಧೀನವಾಗಿವೆ. ಇತರರೆಲ್ಲರಿಗೂ ಪ್ರಾಣವನ್ನು ಕೊಡತಕ್ಕ ನೀನೇ ಪ್ರಾಣವನ್ನು ಕಳೆದುಕೊಂಡೆಯಾ? ಉಲೂಪೀ! ನೋಡು! ಮೃತನಾಗಿ ಮಲಗಿರುವ ನಿನ್ನ ಪತಿಯನ್ನು ಚೆನ್ನಾಗಿ ನೋಡು! ಮಗನನ್ನು ಹುರಿಗೊಳಿಸಿ, ಪತಿಯನ್ನು ಕೊಲ್ಲಿಸಿದ ನೀನು ಈ ಕಾರ್ಯಕ್ಕಾಗಿ ಸ್ವಲ್ಪವೂ ನಾಚಿಕೆಯಾಗಲಿಲ್ಲವೊ, ದುಃಖವಾದರೂ ಇಲ್ಲದೆ ಹೋಯಿತಲ್ಲಾ! ಅಯ್ಯೋ! ಈ ನನ್ನ ಬಾಲಕನು ಮೃತ್ಯುವಶನಾಗಿ ನೆಲದಮೇಲೆ ಮಲಗಿದ್ದರೂ ಅದರಿಂದ ನನಗೇನೂ ಚಿಂತೆಯಿಲ್ಲ. ಯಾವ ಶತ್ರುಗಳನ್ನೂ, ಸಿದ್ಧಾದಿಗಳನ್ನು ಜಯಿಸುವವನಾದ ಈ ವಿಜಯನುಮಾತ್ರ ಬದುಕಿಕೊಳ್ಳಲಿ! ಇಷ್ಟೇ ನನ್ನ ಕೋರಿಕೆ! ಎಲೆ ಭದ್ರೆ! ಪುರುಷರಿಗೆ ಎಷ್ಟು ಮಂದಿ ಪತ್ನಿಯರಿದ್ದರೂ ದೋಷವಿಲ್ಲ. ಒಬ್ಬಳು ಹೋದರೆ ಮತ್ತೊಬ್ಬಳನ್ನು ಮದುವೆಯಾಗಬಹುದು. ಸ್ತ್ರೀಯರ ಸಂಗತಿಯು ಹಾಗಲ್ಲ. ಇದನ್ನು ತಿಳಿದ ನಿನಗೂ ಈ ವಿಧವಾದ ಬುದ್ಧಿಯುಂಟಾಗಬಹುದೆ? ಸ್ತ್ರೀ ಪುರುಷರಿಗಿರುವ ಸ್ನೇಹವು ಬ್ರಹ್ಮನಿಂದಲೇ ನಿರ್ಣಯಿಸಲ್ಪಟ್ಟು ಅಕ್ಷಯವೆನಿಸಿರುವುದು. ಆ ಸ್ನೇಹವೆಂತಹದೆಂಬುದನ್ನು ನೀನು ಚೆನ್ನಾಗಿ ಪರ್ಯಾಲೋಚಿಸು. ನಿನ್ನ ಪತಿಪ್ರೇಮವನ್ನು ನಿಜವಾಗಿಸು. ಉಲೂಪೀ! ನೀನೇ ಈ ನನ್ನ ಮಗನ ಮೂಲಕವಾಗಿ ನಮ್ಮಿಬ್ಬರ ಪತಿಯನ್ನು ಕೊಲ್ಲಿಸಿದೆ. ಇರಲಿ! ಚಿಂತೆಯಿಲ್ಲ! ಈಗಲೂ ಅವನನ್ನು ಜೀವವಂತನನ್ನಾಗಿ ಮಾಡಿ ನನಗೆ ತೋರಿಸು! ಇಲ್ಲದಿದ್ದರೆ ಈಗಲೇ ನಾನು ಪ್ರಾಣವನ್ನು ಬಿಟ್ಟುಬಿಡುವೆನು. ನಾನು ಪತಿಪುತ್ರರಿಬ್ಬರನ್ನೂ ಕಳೆದುಕೊಂಡು ಸಹಿಸಬಾರದ ದುಃಖಕ್ಕೆ ಗುರಿಯಾದೆನು. ಇವರನ್ನು ನೀನು ಬದುಕಿಸದಿದ್ದರೆ, ಇಲ್ಲಿಯೇ ನಿನ್ನ ಕಣ್ಣುಮುಂದೆ ಪ್ರಾಯೋಪವೇಶವನ್ನು ಮಾಡುವೆನು. ಇದರಲ್ಲಿ ಸಂದೇಹವಿಲ್ಲ' ಎಂದಳು.

ಓ ಜನಮೇಜಯರಾಜಾ! ಚಿತ್ರವಾಹನನ ಮಗಳಾದ ಚಿತ್ರಾಂಗದೆಯು, ತನ್ನ ಸವತಿಯಾದ ಉಲೂಪಿಗೆ ಈ ಮಾತನ್ನು ಹೇಳಿ ನಿಲ್ಲಿಸಿ ಆಗಲೇ ಪ್ರಾಯೋಪವೇಶವನ್ನಾರಂಭಿಸಿದಳು. ಬಹಳವಾಗಿ ರೋದಿಸಿ, ಬಳಲಿದ್ದ ಆಕೆಯು, ಪತಿಯ ಪಾದಗಳೆರಡನ್ನೂ ಹಿಡಿದುಕೊಂಡು ಕುಳಿತು, ಒಮ್ಮೊಮ್ಮೆ ಮಗನನ್ನು ನೋಡುತ್ತ, ದೈನ್ಯದಿಂದ ನಿಟ್ಟುಸಿರನ್ನು ಬಿಡುತ್ತಿ



ಪುಟ ೨೮೩. ಉಲೂಪಿಯು ತರಿಸಿಕೊಟ್ಟ ಜೀವರತ್ನವನ್ನು ಬಭ್ರುವಾಹನನು, ತನ್ನ ಬಾಣದಿಂದ ಮೂರ್ಛಿತನಾದ ಅರ್ಜುನನ ಎದೆಯ ಮೇಲಿಟ್ಟು, ಅವನನ್ನು ಬದುಕಿಸಿದುದು.

ದ್ದಳು. ಇಷ್ಟರಲ್ಲಿ ಬಭ್ರುವಾಹನನಿಗೆ ಮೆಲ್ಲಮೆಲ್ಲಗೆ ಪ್ರಜ್ಞೆಬಂದಿತು. ಅವನು ಮೂರ್ಛೆ ತಿಳಿದೆದ್ದು, ರಣಾಂಗಣದಲ್ಲಿ ಬಂದು ಕುಳಿತಿದ್ದ ತಾಯಿಯನ್ನು ನೋಡಿದನು. ಅಲ್ಲಿನ ಸ್ಥಿತಿಯನ್ನು ನೋಡಿ ಸಹಿಸಲಾರದೆ, ಅವನು ಮಹಾವ್ಯಸನದಿಂದ 'ಅಯ್ಯೋ! ಇದಕ್ಕಿಂತಲೂ ನನಗೆ ಅಧಿಕದುಃಖವೇನಿರುವುದು? ಎಷ್ಟೋ ಸುಖದಿಂದ ಬೆಳೆದ ನನ್ನ ತಾಯಿಯು ಮೃತನಾದ ಪತಿಯ ಬಳಿಯಲ್ಲಿ ಬಿದ್ದು ಹೀಗೆ ಗೋಳಾಡುತ್ತಿರುವಳಲ್ಲ! ಶಸ್ತ್ರಧಾರಿಗಳಲ್ಲಿ ಮೇಲೆನಿಸಿಕೊಂಡ ಶತ್ರುಗಳನ್ನೆಲ್ಲಾ ಸಂಹರಿಸತಕ್ಕವನಾಗಿ, ಬೇರೆಯಾರಿಂದಲೂ ಮರಣಕ್ಕೀಡಾಗದ ಈ ವೀರನು ನನ್ನ ಕೈಯಿಂದಲೇ ಹತನಾಗಿ ಬಿದ್ದುದನ್ನು ಇವಳು ನೋಡುವಂತಾಯಿತೆ? ಅಯ್ಯೋ! ವಿಶಾಲವಾದ ಎದೆಯುಳ್ಳವನೂ, ಮಹಾಬಾಹುವೂ ಆದ ಇಂತಹ ಪತಿಯು ಹತನಾಗಿ ಬಿದ್ದಿರುವುದನ್ನು ನೋಡಿಯೂ ಎದೆಯೊಡೆಯದೆಕುಳಿತಿರುವ ಈಕೆಯ ಹೃದಯವು ಎಷ್ಟು ಕಠಿನವಾದುದೋ? ಕಾಲವು ಬಂದಹೊರತು ಸಾಯುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲವೆಂಬುದು ನಿಜವು! ನಾನಾಗಲಿ, ನನ್ನ ತಾಯಿಯಾಗಲಿ ಇಬ್ಬರೂ ಇನ್ನೂ ಬದುಕಿರುವೆವಲ್ಲಾ! ಹಾ! ಕುರುವೀರನಾದ ಈತನ ಸುವರ್ಣಕಿರೀಟವು ನನ್ನಿಂದಲೇ ಕೆಡಹಲ್ಪಟ್ಟು, ನೆಲದ ಮೇಲೆ ಉರುಳಾಡುತ್ತಿರುವುದು. ಪುತ್ರನಾದ ನಾನೇ ಆತನನ್ನು ಕೊಂದೆನು. ಎಲೈ ಬ್ರಾಹ್ಮಣರೇ! ಮಗನಾದ ನನ್ನಿಂದಲೇ ಹತನಾಗಿ ವೀರಶಯನದಲ್ಲಿ ಮಲಗಿರುವ ನನ್ನ ತಂದೆಯನ್ನು ನೋಡಿರಿ! ಧರ್ಮರಾಜನಿಂದ ಯಜ್ಞಾಶ್ವದೊಡನೆ ಕಳುಹಿಸಲ್ಪಟ್ಟಿರುವ ಈ ಬ್ರಾಹ್ಮಣರು, ನನ್ನಿಂದ ಹತನಾದ ಇವನಿಗೆ ಯಾವ ತರದ ಸಂಸ್ಕಾರವನ್ನು ಮಾಡಬಲ್ಲರು? ಎಲೈ ಬ್ರಾಹ್ಮಣರೇ! ಪಿತೃಘಾತಿಯಾದ ನನ್ನ ಘೋರಪಾಪಕ್ಕೆ ನೀವು ಯಾವ ಪ್ರಾಯಶ್ಚಿತ್ತವನ್ನು ಮಾಡಬಹುದೋ ಹೇಳಿರಿ? ತಂದೆಯನ್ನು ಕೊಂದ ಕ್ರೂರನಾದ ನನಗೆ ನನ್ನ ತಂದೆಯ ಮೈಚರ್ಮವನ್ನೇ ಸುಲಿದು ಹೊದಿಸಿರಿ! ಇವನ ತಲೆಚಿಪ್ಪಿನಿಂದಲೇ ಭೋಜನವನ್ನಿಕ್ಕುತ್ತ ಬನ್ನಿರಿ! ಹನ್ನೆರಡು ವರ್ಷಗಳವರೆಗೆ ಇಂತಹ ದುರ್ಜೀವನದಿಂದ ಕಷ್ಟಪಡುತ್ತಿರುವುದೇ ನನಗೆ ಪ್ರಾಯಶ್ಚಿತ್ತವಲ್ಲದೆ, ಈ ಪಿತೃಮರಣಕ್ಕೆ ಬೇರೆ ಪ್ರಾಯಶ್ಚಿತ್ತವೇ ಇಲ್ಲ! ಅಮ್ಮಾ! ನಾಗರಾಜಕನ್ನಿಕೆ? ನಿನ್ನ ಪತಿಯು ನನ್ನಿಂದಲೇ ಹತನಾಗಿ ಬಿದ್ದಿರುವು

ದನ್ನು ನೋಡಿದೆಯಾ ? ನಿನ್ನ ಪ್ರಿಯಕ್ಕಾಗಿ ಇವನನ್ನು ನಾನು ಕೊಂದುದಾಯಿತು. ಇನ್ನು ನಾನೂ ನನ್ನ ತಂದೆಯ ಮಾರ್ಗವನ್ನೇ ಹಿಂಬಾಲಿಸುವೆನು. ಇನ್ನುಮೇಲೆ ನಾನು ಈ ಜೀವವನ್ನು ಧರಿಸಿರಲಾರೆನು. ಅಮ್ಮಾ! ಇದೋ! ಶಪಥಮಾಡಿ ಹೇಳುವೆನು. ನಾನೂ ಮೃತನಾಗಿ, ಈತನು ಸತ್ತುದನ್ನು ನೋಡಿದಮೇಲೆ ನೀನು ಸಂತೋಷದಿಂದಿರಬಹುದು'' ಎಂದನು. ಬಭ್ರುವಾಹನನು ಹೀಗೆಂದು ಹೇಳಿ, ಒಡನೆಯೇ ಆಚಮನ ಮಾಡಿ ಬಂದು ಕೈಯೆತ್ತಿ ನಿಂತು ''ಚರಾಚರಗಳಾದ ಸಮಸ್ತ ಭೂತಗಳೂ ನನ್ನ ಮಾತನ್ನು ಕೇಳಲಿ! ಜನನೀ! ಓ ನಾಗರಾಜಕನ್ನಿಕೆ? ಈಗಲೂ ನನ್ನ ತಂದೆಯು ಬದುಕಿ ಮೇಲೆದ್ದು ನಿಲ್ಲದಿದ್ದರೆ, ಇಲ್ಲಿಯೇ ನಾನು ಈ ನನ್ನ ಶರೀರವನ್ನು ಪ್ರಾಯೋಪವೇಶದಿಂದ ಶೋಷಿಸಿ ನೀಗಿಬಿಡುವೆನು. ತಂದೆಯನ್ನು ಕೊಂದ ನನಗೆ ಎಲ್ಲಿಯೂ, ಯಾವ ಪ್ರಾಯಶ್ಚಿತ್ತವೂ ಇಲ್ಲ. ಗುರುವನ್ನು ಕೊಂದ ನನಗೆ, ನರಕವಲ್ಲದೆ ಬೇರೆ ಗತಿಯಿಲ್ಲ! ವೀರನಾದ ಕ್ಷತ್ರಿಯನನ್ನು ಕೊಂದವನು ನೂರು ಗೋವುಗಳನ್ನು ದಾನಮಾಡುವುದರಿಂದ ಪಾಪವಿಮುಕ್ತನಾಗುವನು. ತಂದೆಯನ್ನು ಕೊಂದ ನನಗೆ ಪ್ರಾಯಶ್ಚಿತ್ತವೇ ಇಲ್ಲ. ಲೋಕಕ್ಕೆಲ್ಲಾ ಮಹಾತೇಜಸ್ವಿಯೆನಿಸಿಕೊಂಡು, ಧರ್ಮಾತ್ಮನೆನಿಸಿದ ನನ್ನ ತಂದೆಯನ್ನು ಕೊಂದ ನನಗೆ ಪ್ರಾಯಶ್ಚಿತ್ತವೆಲ್ಲಿಯದು?' ಎಂದು ಹೇಳಿ, ತಿರುಗಿ ಆಚಮನಮಾಡಿ, ಪ್ರಾಯೋಪವೇಶಕ್ಕಾಗಿ ಕುಳಿತುಬಿಟ್ಟನು.

ಇದು ಎಂಭತ್ತನೆಯ ಅಧ್ಯಾಯವು.

ಉಲೂಪಿಯು ಸಂಜೀವನ ರತ್ನವನ್ನು ತರಿಸಿ, ಅದರಿಂದ ಅರ್ಜುನನನ್ನು ಬದುಕಿಸಿದುದು. ಅರ್ಜುನನು ಚಿತ್ರಾಂಗದೆಯು ಯುದ್ಧಭೂಮಿಗೆ ಬರಲು ಕಾರಣವೇನೆಂದು ಕೇಳಲು, ಬಭ್ರುವಾಹನನು ಉಲೂಪಿಯನ್ನು ಕೇಳುವಂತೆ ಹೇಳಿದುದು.

ಆಗ ಮಣಲೂರಪುರದರಸನು, ಪಿತೃಶೋಕಗ್ರಸ್ತನಾಗಿ, ತನ್ನ ತಾಯಿಯೊಡನೆ ಪ್ರಾಯೋಪವೇಶಕ್ಕೆ ಕುಳಿತುದನ್ನು ನೋಡಿ, ಉಲೂ

ಪಿಗೆ ಸಂಜೀವನರತ್ನವು ನೆನಪಿಗೆ ಬಂದಿತು. ಅವಳು ನೆನೆಸಿದ ಮಾತ್ರಕ್ಕೆ ನಾಗಲೋಕದಿಂದ ಆ ಮಣಿಯು ಅಲ್ಲಿ ಕಾಣಿಸಿತು. ಒಡನೆಯೇ ಉಲೂಪಿಯು ಅದನ್ನು ಕೈಗೆತ್ತಿಕೊಂಡು, ಸೈನಿಕರಿಗೆ ಉತ್ಸಾಹ ಜನಕವಾದ ಈ ವಾಕ್ಯಗಳಿಂದ 'ಓ ಪುತ್ರಾ! ಏಳು! ವ್ಯಸನಪಡಬೇಡ! ಅರ್ಜುನನು ನಿನ್ನಿಂದ ಹತನಾಗಿಲ್ಲ. ಈತನನ್ನು ಮನುಷ್ಯರಾಗಲಿ, ಇಂದ್ರನೊಡಗೂಡಿದ ದೇವತೆಗಳಾಗಲಿ ವಧಿಸಲಾರರು. ಲೋಕಪ್ರಖ್ಯಾತನಾದ ನಿನ್ನ ಪಿತನಿಗೆ ಪ್ರಿಯವನ್ನುಂಟುಮಾಡಲು ನಾನೇ ಈಗ ಮೋಹಿನಿಯೆಂಬ ಈ ಮಾಯೆಯನ್ನು ತೋರಿಸಿದೆನು ಓ ಕೌರವರಾಜಾ! ಈತನು ಯುದ್ಧ ಮಾಡುವುದರಲ್ಲಿ ನಿಪುಣನಾದ ನಿನ್ನ ಬಲವನ್ನು ಪರೀಕ್ಷಿಸಲು ಬಂದವನು. ಅದನ್ನು ತಿಳಿದೇ ನಾನೂ ನಿನ್ನನ್ನು ಯುದ್ಧಕ್ಕೆ ಪ್ರೇರಿಸಿದೆನು. ಓ ಪುತ್ರಾ! ಈ ವಿಷಯದಲ್ಲಿ ಅಣುಮಾತ್ರವಾದರೂ ನಿನ್ನ ದೋಷವಿರುವುದೆಂದು ಭಾವಿಸಬೇಡ. ಈತನು ಮಹಾತ್ಮನು! ಪುರಾತನನೂ, ಶಾಶ್ವತನೂ ಆದ ನರನೆಂಬ ಋಷಿ! ಈತನನ್ನು ಇಂದ್ರನಾದರೂ ಯುದ್ಧದಲ್ಲಿ ಜಯಿಸಲಾರನು. ರಾಜಾ! ಈಗ ನಾನೊಂದು ದಿವ್ಯರತ್ನವನ್ನು ತರಿಸಿರುವೆನು. ಇದು ಯಾವಾಗಲೂ ಮೃತರಾದ ನಾಗರನ್ನು ಬದುಕಿಸತಕ್ಕ ಜೀವಮಣಿ! ಇದನ್ನು ನೀನು ನಿನ್ನ ಪಿತನ ಎದೆಯ ಮೇಲಿಡು. ಒಡನೆ ಅವನು ಬದುಕಿ ಬರುವುದನ್ನು ನೋಡುವೆ' ಎಂದಳು. ಇದನ್ನು ಕೇಳಿ ಬಭ್ರುವಾಹನನು ಸಂತೋಷದಿಂದ ಆ ಮಣಿಯನ್ನು ಅರ್ಜುನನ ಎದೆಯ ಮೇಲಿಟ್ಟನು. ಆ ಮಣಿಯನ್ನಿಟ್ಟಕೂಡಲೆ ವೀರನೂ, ಪ್ರಭುವೂ ಆದ ಅರ್ಜುನನು ಜೀವಸಹಿತನಾಗಿ ನಿದ್ರೆಯಿಂದೆದ್ದವನಂತೆ ಕೆಂಪೇರಿದ ಕಣ್ಣುಗಳನ್ನೊರಸಿಕೊಂಡು ಮೇಲಕ್ಕೆದ್ದನು. ತಂದೆಯಾದ ಅರ್ಜುನನು ಪ್ರಜ್ಞೆ ತಿಳಿದೆದ್ದುದನ್ನು ಕಂಡು, ಬಭ್ರುವಾಹನನು ಆತನಿಗೆ ನಮಸ್ಕರಿಸಿದನು. ಅರ್ಜುನನು ಸಜೀವನಾಗಿ ಎದ್ದೊಡನೆಯೇ, ಇಂದ್ರನು ದೇವಲೋಕದಿಂದ ಪುಷ್ಪವರ್ಷವನ್ನು ಸುರಿಸಿದನು. ದೇವದುಂದುಭಿಗಳು ತಮಗೆ ತಾವಾಗಿ ಮೇಘಗರ್ಜನದಂತೆ ಧ್ವನಿ ಮಾಡಿದುವು. ಅರ್ಜುನನು ಬಭ್ರುವಾಹನನನ್ನು ಅಪ್ಪಿಕೊಂಡು, ಆತನ ತಲೆಯನ್ನು ಆಘ್ರಾಣಿಸಿದನು. ಆಮೇಲೆ ಆತನು, ದುಃಖದಿಂದ ಕಂದಿ ಉಲೂಪಿಯೊಡನೆ ದೂರದಲ್ಲಿ ನಿಂತಿರುವ ಆತನ ತಾಯಿ

ಯನ್ನು ಕಂಡು (ಬಭ್ರುವಾಹನನನ್ನು ಕುರಿತು) 'ಓ ಶತ್ರುಸಂಹಾರಕಾ! ಈ ಯುದ್ಧಭೂಮಿಯೆಲ್ಲವೂ ಶೋಕ, ಆಶ್ಚರ್ಯ, ಸಂತೋಷಗಳಿಂದ ತುಂಬಿರುವಂತೆ ಕಾಣುತ್ತಿರುವುದಲ್ಲಾ! ಇದೇನು? ನಿನಗೆ ತಿಳಿದಿರುವುದಾದರೆ, ಆ ವಿವರವೆಲ್ಲವನ್ನೂ ನನಗೆ ತಿಳಿಸು. ನಿನ್ನ ತಾಯಿಯಾದ ಈ ಚಿತ್ರಾಂಗದೆಯು ಏತಕ್ಕಾಗಿ ಈ ಯುದ್ಧಭೂಮಿಗೆ ಬಂದಳು? ನಾಗರಾಜಕುಮಾರಿಯಾದ ಈ ಉಲೂಪಿಯೇಕೆ ಇಲ್ಲಿಗೆ ಬಂದಳು? ನೀನು ಈ ಯುದ್ಧವನ್ನು ಹೂಡಿದ ವಿಚಾರವುಮಾತ್ರ ನನಗೆ ತಿಳಿದಿರುವುದು. ಬೇರೊಂದೂ ತಿಳಿಯದು. ಈ ಸ್ತ್ರೀಯರು ರಣಭೂಮಿಗೆ ಬಂದು ನಿಂತಿರುವ ಕಾರಣವೇನು?' ಎಂದನು. ಆಗ ಬಭ್ರುವಾಹನನು ಅರ್ಜುನನಿಗೆ ತಲೆಬಾಗಿ ಆ ವಿಚಾರಗಳನ್ನೆಲ್ಲ ಉಲೂಪಿಯನ್ನೇ ಕೇಳು' ಎಂದನು.

ಇದು ಎಂಭತ್ತೊಂದನೆಯ ಅಧ್ಯಾಯವು.

---

ಉಲೂಪಿಯು, ತಾವು ಯುದ್ಧಭೂಮಿಗೆ ಬಂದುದಕ್ಕೂ, ಅರ್ಜುನನು ಪುತ್ರನಿಂದ ಪರಾಜಿತನಾದುದಕ್ಕೂ ಕಾರಣವನ್ನು ತಿಳಿಸಿದುದು.

ಅರ್ಜುನನು ಉಲೂಪಿಯನ್ನು ಕುರಿತು 'ಓ ನಾಗಕನ್ಯಕೆ? ನೀನೂ, ಈ ಬಭ್ರುವಾಹನನ ತಾಯಿಯೂ ಯುದ್ಧಭೂಮಿಗೆ ಬಂದ ಕಾರಣವೇನು? ನೀನು ಈ ರಾಜನಿಗೆ ಕ್ಷೇಮವನ್ನು ಬಯಸಿ ಬಂದೆಯಾ! ಅಥವಾ ನನ್ನ ಕ್ಷೇಮವನ್ನು ಬಯಸಿ ಬಂದೆಯಾ? ನಾನಾಗಲಿ, ಈ ಬಭ್ರುವಾಹನನಾಗಲಿ ನಿನಗೆ ತಿಳಿಯದೆಯಾದರೂ ಅಪ್ರಿಯಕಾರ್ಯವನ್ನೇನೂ ಮಾಡಿಲ್ಲವಷ್ಟೆ! ನಿನ್ನ ಸವತಿಯಾದ ಈ ಚಿತ್ರಾಂಗದೆಯಾದರೂ ನಿನಗೆ ಯಾವ ಕೆಡುಕನ್ನೂ ಮಾಡಲಿಲ್ಲವಷ್ಟೆ?' ಎಂದನು.

ಆಗ ಉಲೂಪಿಯು, ಮಂದಹಾಸವದನದಿಂದ 'ನೀನು ನನಗೆ ಯಾವ ಕೆಡುಕನ್ನೂ ಮಾಡಲಿಲ್ಲ. ಬಭ್ರುವಾಹನನಾದರೂ ನನಗೇನೂ ಕೇಡು ಮಾಡಿದವನಲ್ಲ. ನನಗೆ ಸಖಿಯಂತಿರುವ ಚಿತ್ರಾಂಗದೆಯು ಕೂಡ ನನಗೆ ಯಾವ ಕೆಡುಕನ್ನೂ ಮಾಡಿದವಳಲ್ಲ. ಆದರೆ, ಈಗ ನಾನು ಮಾಡಿದ

ಕಾರ್ಯಗಳೆಲ್ಲವನ್ನೂ ತಿಳಿಸುವೆನು. ಅದಕ್ಕಾಗಿ ನೀನು ನನ್ನಲ್ಲಿ ಕೋಪಿಸ ಬಾರದು. ತಲೆಬಾಗಿ ಬೇಡುವೆನು. ಓ ಪ್ರಭೂ! ದೀರ್ಘಬಾಹೂ! ಧನಂಜಯಾ! ನಿನ್ನ ಪ್ರಿಯಕ್ಕಾಗಿಯೇ ನಾನು ಈ ಕಾರ್ಯಗಳನ್ನು ಮಾಡಿದೆನು. ನೀನು ಹಿಂದೆ ಭಾರತಯುದ್ಧದಲ್ಲಿ ಶಂತನುಪುತ್ರನೂ, ಕ್ಷತ್ರಿಯೋತ್ತಮನೂ ಆದ ಭೀಷ್ಮನನ್ನು ಅಧರ್ಮರೀತಿಯಿಂದ ಕೊಂದು ದಕ್ಕೆ ಪ್ರಾಯಶ್ಚಿತ್ತರೂಪವಾಗಿ ಹೀಗೆ ಏರ್ಪಟ್ಟಿತು. ಭೀಷ್ಮನು ಯುದ್ಧ ಮಾಡುತ್ತಿರುವಾಗ ನೀನು ಆತನನ್ನು ಕೊಲ್ಲದೆ, ಶಿಖಂಡಿಯನ್ನು ಮುಂದಿ ಟ್ಟುಕೊಂಡು, ಆ ಭೀಷ್ಮನನ್ನು ಕೊಂದೆಯಲ್ಲವೆ? ಅದಕ್ಕೆ ತಕ್ಕ ಪ್ರಾಯ ಶ್ಚಿತ್ತವನ್ನು ಈಗಲೇ ಮಾಡಿಕೊಳ್ಳದಿದ್ದ ಪಕ್ಷದಲ್ಲಿ, ಆ ಪಾಪಕೃತ್ಯಕ್ಕಾಗಿ ನಿನ್ನ ಆಯುಷ್ಯಾಂತದಲ್ಲಿ ತಪ್ಪದೆ ನೀನು ನರಕದಲ್ಲಿ ಬೀಳುತ್ತಿದ್ದೆ. ನೀನು ಈಗ ನಿನ್ನ ಪುತ್ರನಿಂದ ಪಡೆದ ಅಪಜಯವೇ (ಅದಕ್ಕೆ) ತಕ್ಕ ಪ್ರಾಯ ಶ್ಚಿತ್ತವಾಗಿ ಏರ್ಪಟ್ಟಿತು.

ಓ ಧೀಮಂತಾ! ಗಂಗೆಯೂ, ಅಷ್ಟವಸುಗಳೂ ನಿನ್ನ ವಿಷಯವಾಗಿ ಹಿಂದೆ ಮಾತನಾಡುತ್ತಿದ್ದುದನ್ನು ನಾನು ಕೇಳಿದೆನು. ಭೀಷ್ಮನು ಹತನಾಗಿ ಬಿದ್ದೊಡನೆ, ವಸುಗಳೆಲ್ಲರೂ ಕೂಡಿ ಬಂದು, ಗಂಗೆಯಲ್ಲಿ ಸ್ನಾನಮಾಡಿ, ಮೇಲೆದ್ದು ಬಂದು, ದಡವನ್ನು ಸೇರಿದಮೇಲೆ ಗಂಗೆಯನ್ನು ಕುರಿತು ಈ ವಾಕ್ಯವನ್ನು ಹೇಳುತ್ತಿದ್ದರು. ' ಓ ನಾರೀಮಣೀ! ಭೀಷ್ಮನು ರಣ ದಲ್ಲಿ ಬೇರೊಬ್ಬನೊಡನೆ ಯುದ್ಧ ಮಾಡುತ್ತಿರುವಾಗ ಅರ್ಜುನನು ಆತ ನನ್ನು ಕೊಂದನು. ಆದುದರಿಂದ ಈ ಸಮಯದಲ್ಲಿ ನಾವು ಅರ್ಜುನನ ಅನ್ಯಾಯಕ್ಕಾಗಿ ಅವನನ್ನು ಶಪಿಸದೆ ತೀರದು" ಎಂದರು. ಆಗ ಗಂಗೆಯೂ ಅದಕ್ಕನುಮತಿಸಿ "ಹಾಗೆಯೇ ಆಗಲಿ" ಎಂದಳು. ನಾನು ಹೋಗಿ ಈ ವೃತ್ತಾಂತವೆಲ್ಲವನ್ನೂ ನನ್ನ ಪಿತನಿಗೆ ತಿಳಿಸಿ ವ್ಯಾಕುಲದಿಂದಿ ದ್ದೆನು. ನನ್ನ ತಂದೆಯೂ ಇದನ್ನು ಕೇಳಿ ಬಹಳ ದುಃಖಕ್ಕೆ ಗುರಿಯಾದನು. ಆತನು ನಿನಗಾಗಿ ವಸುಗಳ ಬಳಿಗೆ ಹೋಗಿ, ಅವರನ್ನು ನಿನ್ನಲ್ಲಿ ಪ್ರಸನ್ನ ರನ್ನಾಗಿ ಮಾಡಲು ಅಡಿಗಡಿಗೆ ಪ್ರಾರ್ಥಿಸಿದನು. ಅವರು ಆತನನ್ನು ಕುರಿತು ' ಓ ಭಾಗ್ಯಶಾಲೀ! ಆತನಿಗೆ ಮಣಲೂರ ಪುರದರಸನೂ, ಯೌವ

ನವಯುಸ್ಕನೂ ಆದ ಒಬ್ಬ ಮಗನಿರುವನು. ಅವನು ಯುದ್ಧಭೂಮಿಯಲ್ಲಿ ಆತನನ್ನು ಬಾಣಗಳಿಂದ (ಹೊಡೆದು) ನೆಲಕ್ಕೆ ಕೆಡಹುವನು. ಆಗ ಅರ್ಜುನನಿಗೆ ಪಾಪವಿಮೋಚನೆಯಾಗುವುದು. ನೀನು ಹೋಗು' ಎಂದರು. ನನ್ನ ತಂದೆಯು ಆ ಮಾತನ್ನು ನನಗೆ ತಿಳಿಸಿದನು. ಅದನ್ನು ಕೇಳಿದ್ದ ನಾನು ಈಗ ನಿನ್ನನ್ನು ಶಾಪದಿಂದ ಬಿಡಿಸಿದೆನು. ನಿನ್ನನ್ನು ದೇವತೆಗಳುಕೂಡ ಯುದ್ಧದಲ್ಲಿ ಜಯಿಸಲಾರರು. "ಆತ್ಮಾ ವೈ ಪುತ್ರನಾಮಾಸಿ" ಎಂದರೆ, 'ತಂದೆಯೇ ಮಗನಾಗುವ'ನೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುದಷ್ಟೆ? ಆದುದರಿಂದ ನೀನು ನಿನ್ನ ಪುತ್ರನಿಂದಲೇ ಜಯಿಸಲ್ಪಟ್ಟೆ. ಇದರಲ್ಲಿ ನಿನಗೆ ಅಪಕೀರ್ತಿಯಾಗಲಿ, ದೋಷವಾಗಲಿ ಇಲ್ಲ. ಇನ್ನು ನಿನ್ನ ಅಭಿಪ್ರಾಯವೇನು? ಎಂದಳು. ಆಗ ಅರ್ಜುನನು 'ದೇವೀ! ಈಗ ನೀನು ಮಾಡಿದ ಕಾರ್ಯಗಳು ನನಗೆ ಅತ್ಯಂತ ಪ್ರಿಯಕರಗಳೇ' ಎಂದನು. ಆಮೇಲೆ ಕೌರವ್ಯಪುತ್ರಿಯಾದ ಉಲೂಪಿಯೂ, ಚಿತ್ರಾಂಗದೆಯೂ ಕೇಳುತ್ತಿರುವಂತೆಯೇ, ಪಾರ್ಥನು ತನ್ನ ಪುತ್ರನನ್ನು ಕುರಿತು 'ಕುಮಾರಾ! ಬರುವ ಚಿತ್ರಾಪೂರ್ಣಿಮೆಯ ದಿನದಲ್ಲಿ ಯುಧಿಷ್ಠಿರನ ಅಶ್ವಮೇಧಯಾಗವು ನಡೆಯುವುದು. ಅದಕ್ಕೆ ನೀನು ನಿನ್ನ ಮಂತ್ರಿಗಳೊಡನೆಯೂ, ನಿನ್ನ ಈ ಇಬ್ಬರು ತಾಯಿಯರೊಡನೆಯೂ ಬರಬೇಕು' ಎಂದನು. ಆ ಮಾತನ್ನು ಕೇಳಿ ಬಭ್ರುವಾಹನನು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತ ತಂದೆಯನ್ನು ಕುರಿತು 'ಓ ಧರ್ಮಜ್ಞಾ! ನಿನ್ನ ಆಜ್ಞೆಯಂತೆ ನಡೆಯುವೆನು. ಆ ಅಶ್ವಮೇಧಯಾಗದಲ್ಲಿ ನಾನು ಬ್ರಾಹ್ಮಣರಿಗೆ ಬಡಿಸುವ ಕಾರ್ಯಗಳನ್ನು ಮಾಡುವೆನು. ಓ ಧರ್ಮವಿದನೇ! ನನ್ನನ್ನು ಅನುಗ್ರಹಿಸುವುದಕ್ಕಾಗಿ ಈ ನಿನ್ನ ಇಬ್ಬರು ಪತ್ನಿಯರೊಡನೆ ನೀನು ನನ್ನ ರಾಜ್ಯಕ್ಕೆ ಬರಬೇಕು. ಅದೂ ನಿನ್ನ ರಾಜ್ಯವೇ! ನೀನು ಈ ವಿಷಯದಲ್ಲಿ ಸಂದೇಹಿಸಬೇಕಾದುದಿಲ್ಲ. ಓ ಪ್ರಭೂ! ಶತ್ರುಸಂಹಾರಕಾ! ಈ ಪಟ್ಟಣದಲ್ಲಿ ಒಂದು ರಾತ್ರಿಯಮಟ್ಟಿಗೆ ನನ್ನ ಮನೆಯಲ್ಲಿ ಸುಖವಾಗಿದ್ದು, ಬೆಳಗ್ಗೆ ಕುದುರೆಯನ್ನು ಹಿಂಬಾಲಿಸಿ ಹೊರಡು! ಎಂದನು. ಆಗ ಅರ್ಜುನನು ಚಿತ್ರಾಂಗದೆಯ ಪುತ್ರನನ್ನು ನೋಡಿ ನಗುತ್ತ 'ಓ ಮಹಾಬಾಹೂ! ಈಗ ನಾನು ದೀಕ್ಷೆಯಲ್ಲಿರುವೆನೆಂಬುದು ನಿನಗೆ ತಿಳಿಯದೆ? ಈಗ ನಾನು ನಿನ್ನ ಪಟ್ಟಣಕ್ಕೆ ಬರಲಾರೆನು. ಈ ಯಾ

ಗಾಶ್ವವು ಸ್ವೇಚ್ಛೆಯಿಂದ ಸಂಚರಿಸುತ್ತಿರುವುದು. ನನಗೆ ಇಲ್ಲಿ ನಿಲ್ಲಲು ಸಾಧ್ಯವಿಲ್ಲ ' ನಿನಗೆ ಕ್ಷೇಮವಾಗಲಿ! ನಾನು ಹೋಗುವೆನು. ಎಂದನು. ಇಂದ್ರಕುಮಾರನಾದ ಅರ್ಜುನನು, ಆಮೇಲೆ ಬಭ್ರುವಾಹನನಿಂದ ವಿಧ್ಯುಕ್ತರೀತಿಯಲ್ಲಿ ಪೂಜೆಗಳನ್ನು ಸ್ವೀಕರಿಸಿ, ತನ್ನ ಇಬ್ಬರು ಹೆಂಡತಿಯರಿಂದಲೂ ಅನುಮತಿಯನ್ನು ಪಡೆದು ಮುಂದಕ್ಕೆ ಹೊರಟನು.

ಇದು ಎಂಭತ್ತೆರಡನೆಯ ಅಧ್ಯಾಯವು.

{ ಅರ್ಜುನನು ಮಗಧ ದೇಶದಲ್ಲಿ ಜರಾಸಂಧ ಪೌತ್ರನಾದ ಮೇಘಸಂಧಿಯನ್ನೂ, ಮ್ಲೇಚ್ಛರನ್ನೂ ಸೋಲಿಸಿದುದು. }

ಓ ರಾಜಾ! ಆ ಕುದುರೆಯು ಸಮುದ್ರ ಪರ್ಯಂತವಾಗಿ ಭೂಮಿಯೆಲ್ಲವನ್ನೂ ಸುತ್ತಿ, ಆಮೇಲೆ ಹಸ್ತಿನಾಪುರದ ಕಡೆಗೆ ತಿರುಗಿತು. ಅರ್ಜುನನೂ ಕುದುರೆಯನ್ನು ಹಿಂಬಾಲಿಸಿ ಹೋಗುತ್ತ, ಆಕಸ್ಮಿಕವಾಗಿ ರಾಜಗೃಹವೆಂಬ ಪಟ್ಟಣವನ್ನು ಸೇರಿದನು. ಓ ಪ್ರಭೂ! ಅಲ್ಲಿ ತನ್ನೆಡೆಗೆ ಬಂದ ಅರ್ಜುನನನ್ನು ಕಂಡು, ಕ್ಷತ್ರಿಯ ಧರ್ಮಾವಲಂಬಿಯೂ, ವೀರನೂ, ಜರಾಸಂಧನ ಮೊಮ್ಮಗನೂ, ಸಹದೇವನ ಕುಮಾರನೂ ಆದ ಮೇಘಸಂಧಿಯು, ಆತನನ್ನು ಯುದ್ಧಕ್ಕೆ ಕರೆದನು. ಅವನು ಬಿಲ್ಲುಬಾಣಗಳನ್ನು ಹಿಡಿದು ರಥವನ್ನೇರಿ ಪಟ್ಟಣದಿಂದ ಹೊರಗೆ ಬಂದು, ಪದಾತಿಯಾದ (ವಾಹನವಿಲ್ಲದ) ಅರ್ಜುನನನ್ನು ಇದಿರಿಸಿ ನಿಂತು, ಬಾಲಭಾವದಿಂದ ಅವನನ್ನು ಕುರಿತು ಹಾಸ್ಯಪೂರ್ವಕವಾಗಿ " ಓ ಭರತಕುಲೋತ್ತಮಾ! ಈ ಕುದುರೆಯನ್ನು ಹೀಗೇಕೆ ಸ್ತ್ರೀಯರ ಮಧ್ಯದಲ್ಲಿ ನಡೆಸುವಂತೆ ನಡೆಸುತ್ತಿರುವೆ? ನಾನು ಇದನ್ನು ಹಿಡಿದು ಕಟ್ಟಿಡುವೆನು. ಬಿಡಿಸಿಕೊಳ್ಳುವುದಕ್ಕೆ ಪ್ರಯತ್ನಿಸು. ನಿನಗೆ ನನ್ನ ಹಿರಿಯರಿಂದ ಯುದ್ಧದಲ್ಲಿ ತೃಪ್ತಿಯಾಗದಿದ್ದರೆ, ಈಗ ನಾನು ನಿನಗೆ ಆದರಲ್ಲಿ ಅತಿಥಿಪೂಜೆಯನ್ನು ಮಾಡುವೆನು. ನೀನು (ನನ್ನನ್ನು) ಹೊಡೆ! ನಾನೂ (ನಿನ್ನನ್ನು) ಹೊಡೆಯುವೆನು ' ಎಂದನು. ಅಸಮರ್ಥನಾಗಿದ್ದರೂ ಹುಡುಗುತನದಿಂದ ಅವನು ಹೇಳಿದ ಆ ಮಾತನ್ನು ಕೇಳಿ ಅರ್ಜುನನು ನಗುತ್ತ ' ಓ ರಾಜಾ! ಈ ಕುದುರೆಗೆ ಅಡ್ಡಿಮಾಡುವವ

ರನ್ನು ತಡೆಯಬೇಕೆಂದೇ ಹಿರಿಯಣ್ಣನು ನನಗೆ ನಿಯಮಿಸಿರುವನು. ಈ ಸಂಗತಿಯು ನಿನಗೂ ತಿಳಿದುದೇ! ನಿನ್ನಿಂದ ಸಾಧ್ಯವಾದಷ್ಟು ಹೊಡೆ. ನನಗೆ ಕೋಪವಿಲ್ಲ' ಎಂದನು. ಆಗ ಮಗಧ ರಾಜನು ದೇವೇಂದ್ರನು ಮಳೆಯನ್ನು ಸುರಿಸುವಂತೆ ಸಾವಿರಾರು ಬಾಣಗಳನ್ನು ವರ್ಷಿಸಿ ಅರ್ಜುನನನ್ನು ಮೊದಲು ಹೊಡೆದನು. ಆಮೇಲೆ ಅರ್ಜುನನು ಗಾಂಡೀವ ಪ್ರಯುಕ್ತ ಬಾಣಗಳಿಂದ ಆ ಬಾಣಗಳನ್ನೆಲ್ಲ ವಿಫಲ ಮಾಡಿದನು. ಮತ್ತು ಉರಿಯುವ ಬಾಯುಳ್ಳ ಸರ್ಪಗಳಂತೆ ಜ್ವಲಿಸುತಿದ್ದ ಇನ್ನೂ ಅನೇಕಬಾಣಗಳನ್ನು ಮೇಘಸಂಧಿಯ ಧ್ವಜ, ಧ್ವಜದಂಡ, ರಥ, ರಥಾಶ್ವಗಳು, ರಥಾವಯವಗಳು, ಇವುಗಳ ಮೇಲೆಲ್ಲಾ ಪ್ರಯೋಗಿಸಿದನು. ಆ ಮೇಘಸಂಧಿಯ ಶರೀರದಮೇಲೆ, ಮತ್ತು ಅವನ ಸಾರಥಿಯಮೇಲೆ ಮಾತ್ರ ಬಾಣವನ್ನು ಬಿಡಲಿಲ್ಲ. ಇದರಿಂದ ಗಾಯಪಡದೆ ಸುರಕ್ಷಿತನಾಗಿದ್ದ ಆ ರಾಜನು ಅದಕ್ಕೆ ತನ್ನ ಶಕ್ತಿಯೇ ಕಾರಣವೆಂದೆಣಿಸಿ ಅರ್ಜುನನಮೇಲೆ ಬಾಣಗಳನ್ನು ಪ್ರಯೋಗಿಸಿದನು. ಅದರಿಂದ ಅರ್ಜುನನು ವಸಂತ ಕಾಲದಲ್ಲಿ ಪುಷ್ಪಿಸಿದ ಮುತ್ತುಗದ ಮರದಂತೆ ರಕ್ತದಿಗ್ಧನಾದನು. ಇದಕ್ಕಾಗಿ ಅರ್ಜುನನು ಬಹಳ ಕೋಪಗೊಂಡು ತನ್ನ ಬಲವೆಲ್ಲವನ್ನೂ ಬಿಟ್ಟು ಬಿಲ್ಲನ್ನೆಳೆದು, ಮೇಘಸಂಧಿಯ ಕುದುರೆಗಳನ್ನು ಕೊಂದು ಆತನ ಸಾರಥಿಯ ತಲೆಯನ್ನು ಕತ್ತರಿಸಿದನು. ಹಾಗೆಯೇ ತನ್ನ ಬಾಣದಿಂದ ಆತನ ದೊಡ್ಡ ಬಿಲ್ಲನ್ನೂ, ಕೈಗೌಸಣಿಗೆಯನ್ನೂ, ಪತಾಕೆಯನ್ನೂ, ಧ್ವಜವನ್ನೂ ಬೇಧಿಸಿ ಕೆಡಹಿದನು. ಕುದುರೆಗಳೂ, ಸಾರಥಿಯೂ, ಬಿಲ್ಲೂ ಹೋದಮೇಲೆ ಆ ಅರಸನು ವ್ಯಾಕುಲಗೊಂಡು, ಗದಾಯುಧವನ್ನು ಕೈಯಲ್ಲಿ ಹಿಡಿದು, ವೇಗದಿಂದ ಅರ್ಜುನನನ್ನಿದಿರಿಸಿ ಹೊರಟನು. ಆತನು ಬರುತ್ತಿರುವಾಗಲೇ ಅರ್ಜುನನು ತನ್ನ ಬಿಲ್ಲಿಗೆ ಹೂಡಿದ ಬಾಣಗಳಿಂದ ಆತನ ಗದಾಯುಧವನ್ನೂ ಕತ್ತರಿಸಿದನು. ಮಣಿಮಯವಾದ ಕಟ್ಟುಗಳುಳ್ಳ ಆ ಗದಾಯುಧದ ತುಂಡುಗಳು, ಸರ್ಪಗಳಂತೆ ಭೂಮಿಯಮೇಲೆ ಬಿದ್ದುವು. ನಿರಾಯುಧನಾದ ಮೇಘಸಂಧಿಯಮೇಲೆ ಯುದ್ಧಮಾಡಲು ಇಷ್ಟವಿಲ್ಲದೆ ಆತನನ್ನು ಸಮಾಧಾನಪಡಿಸುತ್ತ "ಓ ಬಾಲಕಾ! ನೀನು ಕ್ಷತ್ರಿಯಧರ್ಮವನ್ನು ಪೂರ್ಣವಾಗಿ ತೋರಿಸಿದೆ. ಇನ್ನಾದರೂ ಹಿಂತಿರುಗು! ನೀನು

ಬಾಲನಾಗಿದ್ದರೂ ಯುದ್ಧದಲ್ಲಿ ಅಮಾನುಷ ಕಾರ್ಯಗಳನ್ನು ಮಾಡಿದೆ. ರಾಜರಾರಾನ್ನೂ ಕೊಲ್ಲಬೇಡವೆಂದು ಯುಧಿಷ್ಠಿರನು ನನಗೆ ಆಜ್ಞಾಪಿಸಿರುವನು. ಆದರಿಂದ, ನೀನು ನನಗೆ ಯುದ್ಧದಲ್ಲಿ ಕೆಡುಕುಮಾಡಿದ್ದರೂ ನಿನ್ನನ್ನು ಕೊಲ್ಲದೆ ಜೀವಸಹಿತವಾಗಿ ಬಿಟ್ಟಿರುವೆನು" ಎಂದನು. ಆಗ ಮಗಧನು ವಾಸ್ತವದಲ್ಲಿ ತಾನು ಜಯಿಸಲ್ಪಟ್ಟುದನ್ನು ತಿಳಿದು ಅರ್ಜುನನಿದಿರಿಗೆ ಬಂದು ನಿಂತು, ಕೈ ಮುಗಿದು ಆತನನ್ನು ಪೂಜಿಸಿ "ಮಹಾತ್ಮಾ! ನಾನು ನಿನ್ನಿಂದ ಜಯಿಸಲ್ಪಟ್ಟೆನು. ನಿನಗೆ ಕ್ಷೇಮವಾಗಲಿ! ಇನ್ನು ನನಗೆ ಯುದ್ಧಮಾಡಲು ಉತ್ಸಾಹವಿಲ್ಲ. ನಾನು ನಡೆಸಬೇಕಾದ ಕಾರ್ಯಗಳೇನಿದ್ದರೂ ತಿಳಿಸು! ಅವೆಲ್ಲವನ್ನೂ ನೆರವೇರಿಸುವೆನು' ಎಂದನು. ಅರ್ಜುನನು ತಿರುಗಿ ಆತನನ್ನು ಸಮಾಧಾನಪಡಿಸಿ "ರಾಜಕುಮಾರಾ! ಬರುವ ಚಿತ್ರಾಪೂರ್ಣಿಮೆಯಲ್ಲಿ ನಡೆಯುವ ಯುಧಿಷ್ಠಿರನ ಅಶ್ವಮೇಧಕ್ಕೆ ನೀನು ತಪ್ಪದೆ ಬರಬೇಕು' ಎಂದನು. ಅದನ್ನು ಕೇಳಿ ಮೇಘಸಂಧಿಯು 'ಹಾಗೆಯೇ ಆಗಲಿ' ಎಂದು ಹೇಳಿ ಆ ಕುದುರೆಯನ್ನೂ, ಅರ್ಜುನನನ್ನೂ ವಿಧ್ಯುಕ್ತರೀತಿಯಲ್ಲಿ ಪೂಜಿಸಿದನು. ಓ ರಾಜಾ! ಆಮೇಲೆ ಧನಂಜಯನು ಸ್ವೇಚ್ಛೆಯಾಗಿ ಸಮುದ್ರತೀರದಲ್ಲಿರುವ ವಂಗ, ಪುಂಡ್ರ, ಕೇರಳ, ದೇಶಗಳಲ್ಲಿ ಸಂಚಾರಮಾಡಿ, ಅಲ್ಲಲ್ಲಿ ಅಸಂಖ್ಯಾತವಾದ ಮ್ಲೇಚ್ಛಸೈನ್ಯವನ್ನು ಜಯಿಸಿದನು.

ಇದು ಎಂಭತ್ತುಮೂರನೆಯ ಅಧ್ಯಾಯವು.

(ಅರ್ಜುನನು ಚೇದಿರಾಜನಿಂದ ಪೂಜಿತನಾಗಿ, ಕಾಶೀ ಕೋಸಲ ರಾಜರನ್ನು ಜಯಿಸಿ, ಗಾಂಧಾರ ದೇಶವನ್ನು ಪ್ರವೇಶಿಸಿದುದು.)

ಓ ರಾಜಾ! ಆಮೇಲೆ ಅರ್ಜುನನು ದಕ್ಷಿಣಕ್ಕೆ ತಿರುಗಿದ ಆ ಕುದುರೆಯೊಡನೆ ಸಂಚರಿಸುತ್ತಿದ್ದಾಗ, ಆ ಕುದುರೆಯು ಹಿಂತಿರುಗಿ ಚೇದಿದೇಶಕ್ಕೆ ಸೇರಿದ ಶುಕ್ತಿಪುರಕ್ಕೆ ಬಂದಿತು. ಅಲ್ಲಿಗೆ ರಾಜನಾಗಿದ್ದ ಶಿಶುಪಾಲಪುತ್ರನಾದ ಶರಭನು, ಆ ಕುದುರೆಯನ್ನು ತಡೆದಿಟ್ಟು, ಮೊದಲು

ಯುದ್ಧವನ್ನು ಹೂಡಿ, ಆಮೇಲೆ ವಿನೀತನಾಗಿ ಅರ್ಜುನನನ್ನೂ, ಆ ಯಜ್ಞಾಶ್ವವನ್ನೂ ಸತ್ಕರಿಸಿದನು. ಅಲ್ಲಿಂದ ಮುಂದೆ ಆ ಕುದುರೆಯು ಕ್ರಮವಾಗಿ ಕಾಶಿ, ಅಂಗ, ಕೋಸಲ, ಕಿರಾತ, ತಂಗಣಾಗಳೆಂಬ ದೇಶಗಳನ್ನು ಸುತ್ತಿಬಂದಿತು. ಅರ್ಜುನನು ಆ ಕಡೆಗಳಲ್ಲೆಲ್ಲಾ ಪೂಜಿತನಾಗಿ ಅಲ್ಲಿಂದ ದಶಾರ್ಣದೇಶವನ್ನು ಸೇರಿದನು. ಆ ದೇಶವನ್ನು ಮಹಾಬಲಶಾಲಿಯೂ, ರಿಪುಭಯಂಕರನೂ ಆದ ಚಿತ್ರಾಂಗದನೆಂಬ ಅರಸನು ಆಳುತ್ತಿದ್ದನು. ಆತನೊಡನೆ ಅರ್ಜುನನಿಗೆ ಮಹಾಭಯಂಕರವಾದ ಯುದ್ಧವು ಸಂಭವಿಸಿತು. ಅರ್ಜುನನು ಆತನನ್ನು ವಶಪಡಿಸಿಕೊಂಡು, ಬೇಡರಿಗೆ ಅರಸನಾದ ಏಕಲವ್ಯನ ದೇಶಕ್ಕೆ ಹೋದನು. ಅಲ್ಲಿ ಏಕಲವ್ಯನ ಪುತ್ರನು ಅರ್ಜುನನೊಡನೆ ಯುದ್ಧಕ್ಕೆ ನಿಲ್ಲಲು, ಅರ್ಜುನನು ಆ ಬೇಡರೊಡನೆ ರೋಮಾಂಚವನ್ನೆಬ್ಬಿಸುವಂತೆ ಪ್ರಬಲಯುದ್ಧಮಾಡಿ, ಆತನನ್ನು ಯುದ್ಧದಲ್ಲಿ ಜಯಿಸಿ, ಕೊನೆಗೆ ಆತನಿಂದ ಪೂಜಿತನಾದನು. ಅಲ್ಲಿಂದ ತಿರುಗಿ ದಕ್ಷಿಣಸಮುದ್ರಕ್ಕೆ ಹೊರಟನು. ಅಲ್ಲಿ ಅರ್ಜುನನಿಗೆ ದ್ರಾವಿಡರು, ಆಂಧ್ರರು, ರೌದ್ರರು, ಮಾಹಿಷರು, ಕೊಲ್ಲಗಿರಿಪ್ರಾಂತದವರು, ಇವರೊಡನೆ ಆಗಾಗ ಯುದ್ಧವು ಸಂಭವಿಸಿತು. ಅರ್ಜುನನು ಅವರುಗಳಲ್ಲಿಯೂ ಅಧಿಕ ಕ್ರೌರ್ಯವನ್ನು ತೋರಿಸದೆ, ಅವರೆಲ್ಲರನ್ನೂ ಸೋಲಿಸಿ, ಯಜ್ಞಾಶ್ವದೊಡನೆ ಸುರಾಷ್ಟ್ರದೇಶಗಳಕಡೆಗೆ ಹೊರಟನು. ಆಮೇಲೆ ಗೋಕರ್ಣಕ್ಷೇತ್ರವನ್ನು ಸೇರಿ, ಅಲ್ಲಿಂದ ಪ್ರಭಾಸಕ್ಕೆ ಹೊರಟನು. ಆಮೇಲೆ ಯಾಗಾಶ್ವವು ವೃಷ್ಣಿವೀರರಿಂದ ರಕ್ಷಿತವಾದ ಸುಂದರವಾದ ದ್ವಾರಕಾನಗರಿಯನ್ನು ಸೇರಿತು. ಅಲ್ಲಿದ್ದ ಯಾದವಬಾಲಕರು ಕೆಲವರು ಆ ದಿವ್ಯಾಶ್ವವನ್ನು ಹಿಡಿದುಕೊಂಡು ಹೋದರು. ಆಗ ಉಗ್ರಸೇನನು ಅವರನ್ನು ತಡೆದು, ಅರ್ಜುನನ ಮಾವನಾದ ವಸುದೇವನೊಡನೆ ಸೇರಿ ಭರತಶ್ರೇಷ್ಠನಾದ ಅರ್ಜುನನ ಬಳಿಗೆ ಬಂದು, ಆತನನ್ನು ವಿಧ್ಯುಕ್ತರೀತಿಯಲ್ಲಿ ಪೂಜಿಸಿದನು. ಅರ್ಜುನನು ಅವರ ಅನುಮತಿಯನ್ನು ಪಡೆದು, ಮುಂದೆ ಕುದುರೆಯನ್ನು ಹಿಂಬಾಲಿಸಿ ಹೊರಟನು. ಅದು ಪಶ್ಚಿಮಸಮುದ್ರ ತೀರದಲ್ಲಿರುವ ದೇಶಗಳಲ್ಲೆಲ್ಲ ಕ್ರಮವಾಗಿ ಪ್ರಯಾಣಮಾಡುತ್ತ ಫಲವತ್ತಾದ ಪಂಚನದವನ್ನು ಸೇರಿತು. ಆಮೇಲೆ ಅಲ್ಲಿಂದ

ಗಾಂಧಾರ ದೇಶವನ್ನು ಪ್ರವೇಶಿಸಿತು. ಅಲ್ಲಿ ಕುದುರೆಯನ್ನು ಹಿಂಬಾಲಿಸಿಬಂದ ಅರ್ಜುನನಿಗೆ, ಹಿಂದಿನಿಂದಲೂ ವಿರೋಧಬುದ್ಧಿಯಿಂದಿದ್ದ ಶಕುನಿಯ ಪುತ್ರನೊಡನೆ ಘೋರಯುದ್ಧವು ಸಂಭವಿಸಿತು.

ಇದು ಎಂಭತ್ತುನಾಲ್ಕನೆಯ ಅಧ್ಯಾಯವು.

{ ಅರ್ಜುನನು ಶಕುನಿಯಪುತ್ರನನ್ನು ಸೋಲಿಸಿ, ಆತನ ಸೈನ್ಯವನ್ನು ನಾಶಮಾಡಿದುದು. ಶಕುನಿಯ ಪತ್ನಿಯು ಬಂದು ಬೇಡಲು, ಆಕೆಗಾಗಿ ಆತನನ್ನು ಬಿಟ್ಟುಬಿಟ್ಟುದು. }

ಗಾಂಧಾರರಲ್ಲಿ ವೀರನೂ, ಮಹಾರಥನೂ ಆದ ಶಕುನಿಯ ಕುಮಾರನು, ರಥ ಗಜ ತುರಗಗಳು, ಪತಾಕೆಗಳು, ಧ್ವಜಗಳು, ಇವುಗಳ ಪಙ್ಕ್ತಿಗಳಿಂದ ಕೂಡಿದ ದೊಡ್ಡ ಸೈನ್ಯದಿಂದ ಪರಿವೃತನಾಗಿ ಅರ್ಜುನನನ್ನಿದಿರಿಸಿ ಹೊರಟನು. ಶಕುನಿಯ ವಧೆಗಾಗಿ ಕ್ರೋಧಗೊಂಡಿದ್ದ ಆ ಯುದ್ಧವೀರರೆಲ್ಲ ಒಟ್ಟುಗೂಡಿ, ತಮ್ಮ ಬಿಲ್ಲುಗಳನ್ನು ಕೈಗೆತ್ತಿಕೊಂಡು, ಅರ್ಜುನನನ್ನಿದಿರಿಸಿ ಹೊಡೆದರು. ಧರ್ಮಾತ್ಮನಾದ ಆ ಅರ್ಜುನನು ಅವರಿಗೂ ಯುಧಿಷ್ಠಿರನ ಮಾತನ್ನು ತಿಳಿಸಿದನು. ಆದರೇನು? ಅವರು ಆ ಹಿತವಾಕ್ಯಗಳನ್ನು ಆದರಿಸದೆ, ಅರ್ಜುನನು ಅನೇಕ ಬುದ್ಧಿವಾದಗಳನ್ನು ಹೇಳಿ ತಡೆದರೂ ಕೇಳದೆ, ಕೋಪದಿಂದ ಕುದುರೆಯನ್ನು ಮುತ್ತಿ ನಿಂತರು. ಆಗ ಅರ್ಜುನನು ತನ್ನ ಗಾಂಡೀವಧನುಸ್ಸಿನಿಂದ ತೀವ್ರಬಾಣಗಳನ್ನು ಪ್ರಯೋಗಿಸಿ ಅನೇಕರ ತಲೆಗಳನ್ನು ಕತ್ತರಿಸಿದನು. ಅರ್ಜುನನ ಬಾಣಹತಿಗಳನ್ನು ತಡೆಯಲಾರದೆ ಕೆಲವು ಸೈನಿಕರು ಕುದುರೆಯನ್ನು ಬಿಟ್ಟು ಭಯದಿಂದ ಹಿಂತಿರುಗಿದರು. ಕೆಲವರು ಇನ್ನೂ ಯುದ್ಧಮಾಡುತ್ತಿದ್ದರು. ಅರ್ಜುನನೂ ಆ ಶತ್ರುಗಳಿಗೆಲ್ಲ ಎಷ್ಟೋ ವಿಧದಿಂದ ಬುದ್ಧಿವಾದಗಳನ್ನು ಹೇಳಿ ನಿವಾರಿಸಿದನು. ಇಷ್ಟರಲ್ಲಿ ಗಾಂಧಾರದೇಶದ ರಾಜನಾದ ಶಕುನಿಪುತ್ರನು, ತನ್ನ ಸೈನ್ಯಗಳು ಹತವಾಗುತ್ತಿರುವುದನ್ನು ಕಂಡು ಸಹಿಸಲಾರದೆ, ತಾನೇ ಅರ್ಜುನನನ್ನು ಇದಿರಿಸಿ ತಡೆದನು. ಕ್ಷತ್ರಿಯಧರ್ಮವನ್ನು ಹಿಡಿದು ಯುದ್ಧಕ್ಕೆ ನಿಂತಿರುವ ಆ ರಾಜನನ್ನುಕುರಿತು ಅರ್ಜುನನು

"ಯುಧಿಷ್ಠಿರನು ಯಾವ ರಾಜನನ್ನೂ ಕೊಲ್ಲಬಾರದೆಂದು ನನಗೆ ಆಜ್ಞಾಪಿಸಿರುವನು. ಅದರಂತೆ ನಾನು ಯಾವ ಕ್ಷತ್ರಿಯನನ್ನೂ ಕೊಲ್ಲಲಾರೆನು. ಈಗ ನೀನು ಯುದ್ಧಮಾಡುವುದರಿಂದ ಪ್ರಯೋಜನವಿಲ್ಲ. ಸುಮ್ಮನೆ ಇಲ್ಲಿಗೆ ಬಂದು ಸಾಯಬೇಡ' ಎಂದನು. ಆ ರಾಜನು ಬುದ್ಧಿಭ್ರಮಣದಿಂದ ಆ ಮಾತನ್ನು ಲಕ್ಷ್ಯಮಾಡದೆ, ಅರ್ಜುನನಮೇಲೆ ಬಾಣಗಳನ್ನು ಪ್ರಯೋಗಿಸಿದನು. ಅರ್ಜುನನು ಹಿಂದಿನ ಯುದ್ಧದಲ್ಲಿ ಜಯದ್ರಥನ ತಲೆಯನ್ನು ಹೇಗೋ ಹಾಗೆ, ಅರ್ಧಚಂದ್ರಬಾಣದಿಂದ ಆ ರಾಜನ ಶಿರೋವಸ್ತ್ರವನ್ನು ಕೆಳಕ್ಕೆ ಕೆಡಹಿದನು. ಸೈನಿಕರಿಗೆಲ್ಲ ಇದು ಆಶ್ಚರ್ಯವಾಯಿತು. ಅರ್ಜುನನು ತನ್ನ ದಯಾಗುಣದಿಂದಲೇ ತಮ್ಮ ಪ್ರಭುವನ್ನು ಕೊಲ್ಲದೆ ಬಿಟ್ಟನೆಂದು ತಿಳಿದರು. ಮತ್ತು ಅವರು ರಣರಂಗದಿಂದ ಓಡುವ ಆತುರದಲ್ಲಿರುವುದನ್ನು ಕಂಡು, ಗಾಂಧಾರರಾಜಕುಮಾರನು, ಅಲ್ಪಮೃಗಗಳಂತೆ ಭಯಗ್ರಸ್ತರಾದ ಅವರನ್ನು ತಾನೂ ಹಿಂಬಾಲಿಸಿದನು. ಅರ್ಜುನನು ಅವರೆಲ್ಲರೂ ಓಡುತ್ತಿರುವಾಗಲೇ ತನ್ನ ಬಾಣಗಳಿಂದ ಅನೇಕರ ಕಿರೀಟಗಳನ್ನು ಹಾರಿಸಿದನು. ಓಡುವ ಆತುರದಲ್ಲಿ ತಾವು ಮೇಲೆತ್ತಿದ ತೋಳುಗಳು ಅರ್ಜುನನ ಬಾಣಗಳಿಂದ ತುಂಡಾದುದೂ ಹಲವರಿಗೆ ತಿಳಿಯದೆ ಹೋಯಿತು. ಅರ್ಜುನನ ಗಾಂಡೀವದಿಂದ ಪ್ರಯೋಗಿಸಲ್ಪಟ್ಟ ಬಾಣಗಳು, ಶತ್ರುಸೈನ್ಯದಲ್ಲಿದ್ದ ಗಜ, ತುರಗ, ಪದಾತಿ ಸೈನ್ಯಗಳನ್ನೆಲ್ಲ ಚದರಿಸಲು, ಆ ಸೈನ್ಯಗಳು ಅಲ್ಲಲ್ಲಿ ಬಿದ್ದು ಮುಗ್ಗರಿಸುತ್ತ ಓಡಿದುವು. ಎಷ್ಟೋ ಸೈನ್ಯಗಳು ಹತವಾದುವು. ಎಷ್ಟೋ ಸೈನ್ಯಗಳು ಓಡಿಹೋದುವು. ಕೆಲವು ಹಿಂತಿರುಗಿ ಬಂದುವು. ಆದರೆ ಅರ್ಜುನನ ಬಾಣಗಳನ್ನು ತಡೆದು ನಿಲ್ಲಲು ಆ ಸೈನಿಕರಲ್ಲಿ ಯಾರೂ ಸಮರ್ಥರಾಗಲಿಲ್ಲ. ಇಷ್ಟರಲ್ಲಿ ಗಾಂಧಾರರಾಜನ ತಾಯಿಯು ಭಯಪಟ್ಟು, ತನ್ನ ದೇಶದ ಮಂತ್ರಿಗಳನ್ನೂ, ವೃದ್ಧರನ್ನೂ ಮುಂದಿಟ್ಟುಕೊಂಡು, ಉತ್ತಮವಾದ ಪೂಜಾದ್ರವ್ಯಗಳೊಡನೆಯೂ, ಕಾಣಿಕೆಗಳೊಡನೆಯೂ ಅರಮನೆಯಿಂದ ಹೊರಟು, ಯುದ್ಧಾತುರದಲ್ಲಿದ್ದ ತನ್ನ ಮಗನನ್ನು ಬೇಡವೆಂದು ನಿವಾರಿಸಿದಳು. ಅರ್ಜುನನಿಗೂ ಕೋಪಶಮನಾಧಾನವನ್ನು ಮಾಡಿದಳು. ಒಡನೆಯೇ ಅರ್ಜುನನು ಅವಳನ್ನು ವಂದಿಸಿ, ಅವಳಲ್ಲಿ ಕನಿಕರದಿಂದ ಶಕುನಿಯ ಪುತ್ರನ ಬಳಿಗೆ ಬಂದು 'ಓ ಮಹಾ

ಬಾಹೂ! ನೀನು ನನ್ನನ್ನು ಇದಿರಿಸುವುದಕ್ಕಾಗಿ ಬಂದುದೇ ನನಗೆ ಉಚಿತವಾಗಿ ತೋರಲಿಲ್ಲ. ನ್ಯಾಯವಾಗಿ ನೀನು ನನಗೆ ಸಹೋದರನು. ನಮ್ಮ ತಾಯಿಯಾದ ಗಾಂಧಾರಿಯನ್ನೂ, ಧೃತರಾಷ್ಟ್ರನನ್ನೂ ನೋಡಿ ನಿನ್ನನ್ನು ನಾನು ಕೊಲ್ಲದೆ ಬಿಟ್ಟೆನು. ಆದರಿಂದ ನೀನು ಈಗಲೂ ಜೀವಿಸಿರುವಂತಾಯಿತು. ನಿನ್ನ ಸೈನಿಕರಲ್ಲಿ ಅನೇಕರು ಹತರಾದರು. ನೀನು ಇನ್ನು ಮೇಲೆಯಾದರೂ ಇಂತಹ ವೈರಬುದ್ಧಿಯನ್ನು ಬೆಳಸದೆ ಶಾಂತನಾಗಿರು. ಈ ಅಸೂಯಾಗುಣವನ್ನು ಬಿಟ್ಟುಬಿಡು. ಮುಂದಿನ ಚಿತ್ರಾಪೂರ್ಣಿಮೆಯ ದಿನದಲ್ಲಿ ನಡೆಯುವ ನಮ್ಮ ಅಶ್ವಮೇಧಯಾಗಕ್ಕೆ ನೀನೂ ಬರಬೇಕು' ಎಂದನು. ಆಮೇಲೆ ಅರ್ಜುನನು ಸ್ವೇಚ್ಛೆಯಾಗಿ ಮುಂದೆ ಹೊರಟ ಯಾಗದ ಕುದುರೆಯನ್ನು ಹಿಂಬಾಲಿಸಿದನು. ಯುದ್ಧದಲ್ಲಿ ಹತಶೇಷರಾದ ಗಾಂಧಾರವೀರರೂ ತಮ್ಮ ನಗರಕ್ಕೆ ಹಿಂತಿರುಗಿದರು.

ಇದು ಎಂಭತ್ತೈದನೆಯ ಅಧ್ಯಾಯವು.

ಅರ್ಜುನನು ಹಿಂತಿರುಗಿ ಬರುವುದನ್ನು ಯುಧಿಷ್ಠಿರನು ಚಾರರ ಮೂಲಕವಾಗಿ ತಿಳಿದು, ಭೀಮನನ್ನು ಯಾಗಶಾಲೆಯ ನಿರ್ಮಾಣಕ್ಕಾಗಿ ನಿಯಮಿಸಿದುದು, ಅನೇಕದೇಶಗಳಿಂದ ಬ್ರಾಹ್ಮಣರನ್ನು ಕರೆಯಿಸಿ, ಅವರ ಸತ್ಕಾರಗಳಗಾಗಿ ಸೌಕರ್ಯಗಳನ್ನು ಮಾಡಿದುದು.

ಓ ಜನಮೇಜಯರಾಜಾ! ಆಮೇಲೆ ಕುದುರೆಯು ಹಸ್ತಿನಾಪುರದ ಕಡೆಗೆ ತಿರುಗಿಬಿಟ್ಟಿತು. ಈ ಸಂಗತಿಯು ಚಾರರಮೂಲಕವಾಗಿ ಯುಧಿಷ್ಠಿರನಿಗೆ ತಿಳಿಯಿತ. ಅರ್ಜುನನು ಕ್ಷೇಮದಿಂದ ಹಿಂತಿರುಗಿ ಬಂದುದನ್ನು ಕೇಳಿ ಧರ್ಮರಾಜನಿಗೆ ಅಪಾರಸಂತೋಷವಾಯಿತು. ಅರ್ಜುನನು ಗಾಂಧಾರವೇ ಮೊದಲಾದ ಅನೇಕದೇಶಗಳಲ್ಲಿ ನಡೆಸಿದ ಸಾಹಸಕಾರ್ಯಗಳನ್ನು ಕೇಳಿ ಯುಧಿಷ್ಠಿರನಿಗೆ ಆಶ್ಚರ್ಯವಾಯಿತು. ಈ ಸಮಯಕ್ಕೆ ಸರಿಯಾಗಿ ಮಾಘಮಾಸದ ದ್ವಾದಶೀತಿಥಿಯೂ, ಪುಷ್ಯನಕ್ಷತ್ರವೂ ಸೇರಿದ ದಿನವು ಪ್ರಾಪ್ತವಾಯಿತು. ಆಗ ಧರ್ಮರಾಜನು ತನ್ನ ಸಹೋ

ದರರಾದ ಭೀಮ, ನಕುಲ, ಸಹದೇವರನ್ನು ಕರೆಸಿಕೊಂಡು, ಮೊದಲು ಭೀಮನೊಡನೆ ಹೀಗೆಂದು ಹೇಳುವನು. 'ವತ್ಸ ಭೀಮಾ! ನಿನ್ನ ತಮ್ಮನಾದ ಅರ್ಜುನನು ಆಗಲೇ ಯಾಗದ ಕುದುರೆಯೊಡನೆ ಹಿಂತಿರುಗಿರುವನು. ಅವನೊಡನೆ ಹೋಗಿದ್ದ ಮನುಷ್ಯರಿಂದ ನನಗೆ ಈ ವೃತ್ತಾಂತವು ತಿಳಿಯಿತು. ಯಜ್ಞಕಾಲವೂ ಸಮಿಾಪಿಸಿತು. ಕುದುರೆಯು ಈಗ ನಮ್ಮ ಊರಿನ ಪಕ್ಕಕ್ಕೆ ಬಂದುಬಿಟ್ಟಿತು. ನಾಳೆ ಬರುವುದು ಮಾಘಮಾಸದ ಪೂರ್ಣಿಮೆ. ನಮ್ಮ ಯಾಗಕ್ಕೆ ಇನ್ನೊಂದು ತಿಂಗಳುಮಾತ್ರವೇ ಮಿಕ್ಕಿರುವುದು. ಆದುದರಿಂದ ವಿದ್ವಾಂಸರೂ, ವೇದಪಾರಂಗತರೂ ಆದ ಬ್ರಾಹ್ಮಣರು ಯಾಗಕಾರ್ಯದ ನಿರ್ವಾಹಕ್ಕಾಗಿ ಈಗಲೇ ಹೊರಡಲಿ. ಅವರಿಂದ ಯಾಗಶಾಲೆಗೆ ಯೋಗ್ಯವಾದ ಸ್ಥಳವನ್ನು ನಿರ್ಧರಮಾಡಿಸು' ಎಂದನು. ಆಗ ಭೀಮನು, ಅರ್ಜುನನ ಆಗಮನವನ್ನು ಕೇಳಿ ಸಂತೋಷಪಟ್ಟು, ಧರ್ಮರಾಜನ ಆಜ್ಞೆಯಂತೆ ಯಾಗಕಾರ್ಯದಲ್ಲಿ ಸಮರ್ಥರಾದ ಬ್ರಾಹ್ಮಣರನ್ನು ಮುಂದಿಟ್ಟುಕೊಂಡು, ಬುದ್ಧಿಶಾಲಿಗಳಾದ ಸ್ಥಪತಿ (ಶಿಲ್ಪಿ) ಗಳೊಡನೆ ಯಾಗಸ್ಥಳವನ್ನು ಗೊತ್ತುಮಾಡುವುದಕ್ಕಾಗಿ ಹೊರಟನು. ಹೀಗೆ ಹೊರಟ ಭೀಮಸೇನನು ಒಂದು ಶುದ್ಧವಾದ ಸ್ಥಳವನ್ನು ನಿರ್ಣಯಿಸಿ, ಅಲ್ಲಿ ರಮ್ಯವಾದ ಅನೇಕ ಪ್ರಾಕಾರಗಳಿಂದಲೂ, ಅಂದವಾದ ಬೀದಿಗಳಿಂದಲೂ, ಉಪ್ಪರಿಗೆಗಳಿಂದಲೂ ತುಂಬಿದ ರತ್ನಖಚಿತವಾದ ನೆಲಗಟ್ಟುಗಳುಳ್ಳ ಯಾಗಶಾಲೆಯನ್ನು ಮಾಡಿಸಿದನು. ಹಾಗೆಯೇ ಅದಕ್ಕೆ ಸೇರಿದಂತೆ ಪತ್ನೀಶಾಲೆ, ಆಗ್ನೀಧ್ರಶಾಲೆ, ಇವುಗಳನ್ನೂ, ಒಳ್ಳೇ ಸುವರ್ಣರತ್ನಗಳಿಂದ ಅಲಂಕರಿಸಲ್ಪಟ್ಟ ಸದಸ್ಸನ್ನೂ ವಿಧ್ಯುಕ್ತವಾಗಿ ಅಳೆದು ನಿರ್ಮಿಸುವಂತೆ ಮಾಡಿದನು. ಮತ್ತು ಸಮೃದ್ಧಿಯಾಗಿ ಸುವರ್ಣನಾಣ್ಯಗಳನ್ನು ಕೊಟ್ಟು, ಅಚ್ಚಬಂಗಾರದಿಂದ ನಿರ್ಮಿತವಾದ ರತ್ನಖಚಿತವಾದ ಸ್ತಂಭಗಳಿಂದಲೂ, ಸುವರ್ಣಚಿತ್ರಿತಗಳಾದ ದೊಡ್ಡ ಹೊರಬಾಗಿಲುಗಳಿಂದಲೂ, ವಿಶಾಲವಾದ ಸಭಾಮಂಟಪಗಳನ್ನು ಮಾಡಿಸಿ, ಹಲವು ದೇಶಗಳಿಂದ ಯಜ್ಞಕ್ಕಾಗಿ ಕರೆಸಲ್ಪಟ್ಟ ರಾಜರಿಗೂ, ರಾಜಪತ್ನಿಯರಿಗೂ, ಬ್ರಾಹ್ಮಣರಿಗೂ ಅನೇಕ ವಸತಿಗಳನ್ನು ಕಲ್ಪಿಸಿಕೊಟ್ಟನು. ಮತ್ತು ಯುಧಿಷ್ಠಿರನ ಆಜ್ಞೆಯಂತೆ ತಮ್ಮಲ್ಲಿ ವೈರವಿಲ್ಲದ ದೇಶದೇಶದ ರಾಜರಿಗೆಲ್ಲ ದೂತರಮೂಲಕವಾಗಿ

ಆಹ್ವಾನಗಳನ್ನೂ ಕಳುಹಿಸಿದನು. ಈ ಸಂಗತಿಯನ್ನು ಕೇಳಿದೊಡನೆ ಅನೇಕದೇಶದ ರಾಜರು ಯುಧಿಷ್ಠಿರನಿಗೆ ಪ್ರಿಯವನ್ನುಂಟುಮಾಡಬೇಕೆಂಬ ಉದ್ದೇಶದಿಂದ ರತ್ನಗಳನ್ನೂ, ಕನ್ಯಾರತ್ನಗಳನ್ನೂ, ಕುದುರೆಗಳನ್ನೂ, ಆಯುಧಗಳನ್ನೂ ಕಾಣಿಕೆಯಾಗಿ ತೆಗೆದುಕೊಂಡು ಹೊರಟು ಬಂದರು. ಆ ಯಾಗಶಾಲೆಯಲ್ಲಿ ತಮತಮಗೆ ಏರ್ಪಟ್ಟಿರುವ ಬಿಡಾರಗಳಿಗೆ ಬಂದು ನೆರೆಯುವ ಆ ರಾಜರ ಸಂತೋಷಕೋಲಾಹಲಗಳು ಸಮುದ್ರಘೋಷದಂತೆ ಆಕಾಶವನ್ನೆಲ್ಲ ವ್ಯಾಪಿಸಿತು. ಭೀಮನು ಬ್ರಾಹ್ಮಣರು ಬರುವುದನ್ನು ಕೇಳಿ ಅವರನ್ನಿದಿರುಗೊಂಡು ನಮಸ್ಕರಿಸಿ, ಅವರವರಿಗೆ ತಕ್ಕ ಸ್ಥಾನಗಳನ್ನು ನಿರ್ಣಯಿಸಿಕೊಟ್ಟನು. ಯುಧಿಷ್ಠಿರನು ಆಯಾ ಬ್ರಾಹ್ಮಣರ ಅಂತಸ್ತಿಗೆ ತಕ್ಕಂತೆ ಅವರವರಿಗೆ ಅನ್ನ ಪಾನ ಶಯನಾಸನಗಳನ್ನು ಕೊಡುವಂತೆ ಆಜ್ಞಾಪಿಸಿದನು. ಅವರೆಲ್ಲರ ವಾಹನಗಳಿಗೂ ವಿಶಾಲವಾದ ಲಾಯಗಳನ್ನೂ, ಧಾನ್ಯ, ಕಬ್ಬು, ಹಾಲು, ಬೆಣ್ಣೆ, ತುಪ್ಪ, ಮೊದಲಾದ ಗೋರಸಗಳು, ಇವನ್ನೆಲ್ಲ ಒದಗಿಸುವಂತೆ ನಿಯಮಿಸಿದನು. ಆಯಾ ವರ್ಣದವರೆಲ್ಲ ಅವರವರ ಅಂತಸ್ಥಿಗೆ ತಕ್ಕಂತೆ ಯಥೋಚಿತವಾಗಿ ಪೂಜಿಸಲ್ಪಟ್ಟು ಬೇರೆಬೇರೆ ಸ್ಥಳಗಳಲ್ಲಿ ಇಳಿದರು. ಆ ಧರ್ಮರಾಜನ ಯಾಗಕ್ಕಾಗಿ ಬ್ರಹ್ಮವಾದಿಗಳಾದ ಅನೇಕ ಮುನಿಗಣಗಳೂ, ಇನ್ನೂ ಇತರ ಬ್ರಾಹ್ಮಣಶ್ರೇಷ್ಠರೂ ಬಂದು ನೆರೆದಿದ್ದರು. ಯುಧಿಷ್ಠಿರನು ಅವರೆಲ್ಲರೂ ತಮ್ಮತಮ್ಮ ನಿಯತಸ್ಥಳಗಳಿಗೆ ಹೋಗುವವರೆಗೂ ಅವರನ್ನು ತಾನೇ ಹಿಂಬಾಲಿಸಿದನು. ಬಡಗಿಗಳು ಮೊದಲಾದ ಶಿಲ್ಪಿಗಳೆಲ್ಲ ಯಾಗಕ್ಕೆ ಬೇಕಾದ ಕಾರ್ಯಗಳೆಲ್ಲವನ್ನೂ ಮಾಡಿ ಮುಗಿಸಿ ಧರ್ಮರಾಜನಿಗೆ ತಿಳಿಸಿದರು. ಅವೆಲ್ಲವನ್ನೂ ಧರ್ಮರಾಜನು ಆದರದಿಂದ ಕೇಳಿ, ತನ್ನ ತಮ್ಮಂದಿರೊಡನೆ ಬಹಳ ಸಂತೋಷದಿಂದಿದ್ದನು. ಯಾಗಕಾರ್ಯವು ಪ್ರಾರಂಭಿಸಿದೊಡನೆ, ಶಾಸ್ತ್ರಜ್ಞರೂ, ವಾದನಿಪುಣರೂ ಆದ ವಿದ್ವಾಂಸರು, ಒಬ್ಬರನ್ನೊಬ್ಬರು ವಾದದಲ್ಲಿ ಜಯಿಸಬೇಕೆಂಬ ಹಠದಿಂದ ಧರ್ಮರಾಜನಮುಂದೆ ಶಾಸ್ತ್ರವಾದಗಳನ್ನು ಮಾಡುತ್ತಿದ್ದರು. ಅಲ್ಲಿಗೆ ಬಂದಿದ್ದ ಅರಸರೆಲ್ಲರೂ ಇಂದ್ರಯಾಗದಲ್ಲಿ ಹೇಗೋ ಹಾಗೆ, ಭೀಮಸೇನನು ಈ ಧರ್ಮರಾಜನ ಯಾಗಕ್ಕಾಗಿ ಮಾಡಿದ್ದ ಉತ್ತಮ ಸಂಭಾರಗಳನ್ನು

ನೋಡಿ ಆಶ್ಚರ್ಯಭರಿತರಾದರು. ಸುವರ್ಣಮಯವಾದ ತೋರಣದ್ವಾರಗಳು! ದಿವ್ಯ ಶಯನಾಸನಗಳು! ಉತ್ತಮವಾದ ಕ್ರೀಡಾಸ್ಥಳಗಳು! ಅಪರಿಮಿತವಾದ ರತ್ನಸಮೂಹಗಳು! ದೊಡ್ಡದೊಡ್ಡ ಬಿಂದಿಗೆಗಳು! ಪಾತ್ರೆಗಳು! ಕಡಾಯಿಗಳು! ಕಲಶಗಳು! ಶ್ರಾವೆಗಳು! ಇವೆಲ್ಲವನ್ನೂ ಸುವರ್ಣಮಯವಾಗಿಯೇ ಮಾಡಿಸಿದ್ದನು. ಅಲ್ಲಿ ಆ ರಾಜರಿಗೆ ಸುವರ್ಣರತ್ನಖಚಿತಗಳಲ್ಲದ ಒಂದುವಸ್ತುವಾದರೂ ಕಣ್ಣಿಗೆ ಬಿಳಲಿಲ್ಲ. ಅಲ್ಲಿ ಶಾಸ್ತ್ರೋಕ್ತರೀತಿಯಲ್ಲಿ ಮರಗಳಿಂದ ಮಾಡಲ್ಪಟ್ಟು, ಚಿನ್ನದ ಕಟ್ಟುಗಳಿಂದಕೂಡಿ, ಒಳ್ಳೇ ಕಾಲನಿಯಮದಿಂದ ನಿಲ್ಲಿಸಲ್ಪಟ್ಟ ಯೂಪಗಳು ಕಂಗೊಳಿಸುತ್ತಿರುವುವು. ಹೋಮಾರ್ಥವಾಗಿ ಅಲ್ಲಿ ಸ್ಥಲಜಲಚರಳಾದ ಜಂತುಗಳನ್ನು ತಂದಿರುವರು. ಹಸುಗಳೂ, ಎಮ್ಮೆಗಳೂ, ವಯಸ್ಕರಾದ ವೃದ್ಧಸ್ತ್ರೀಯರೂ, ಜಲಜಂತುಗಳೂ, ದುಷ್ಟಮೃಗಗಳೂ, ಪಕ್ಷಿಗಳೂ, ಜರಾಯುಜಗಳೂ, ಅಂಡಜಗಳೂ, ಸ್ವೇದಜಗಳೂ, ಉದ್ಭಿಜ್ಜಗಳೂ, ಬೆಟ್ಟದ ತಪ್ಪಲಲ್ಲಿಯೂ, ನದೀತೀರದಲ್ಲಿಯೂ ಕಾಣುವ ಪ್ರಾಣಿಗಳೂ ತರಲ್ಪಟ್ಟಿರುವುವು. ಅಲ್ಲಿಗೆ ಸೇರಿದ ರಾಜರೆಲ್ಲರೂ ಹೀಗೆ ಪಶುಗಳಿಂದಲೂ, ಗೋವುಗಳಿಂದಲೂ, ಧನಧಾನ್ಯಗಳಿಂದಲೂ ಕೂಡಿ, ಸಂತೋಷಜನಕವಾದ ಆ ಯಾಗಶಾಲೆಯನ್ನು ನೋಡಿ ಬಹಳ ಆಶ್ಚರ್ಯಗೊಂಡರು. ಅಲ್ಲಿ ಬ್ರಾಹ್ಮಣರಿಗೂ, ವೈಶ್ಯರಿಗೂ ಹಲವು ಬಗೆಯ ಭೋಜ್ಯಗಳನ್ನೂ, ರುಚಿಕರವಾದ ಪರಮಾನ್ನಗಳನ್ನೂ, ವಿಶೇಷವಾಗಿ ಸಿದ್ಧಪಡಿಸಿದ್ದರು. ಆ ಯಾಗದಲ್ಲಿ ಲಕ್ಷ ಬ್ರಾಹ್ಮಣರಿಗೆ ಸಂತರ್ಪಣೆಯಾದಮೇಲೆ, ಮೇಘಸಮಾನಧ್ವನಿಯುಳ್ಳ ದುಂದುಭಿಯ ಘೋಷವೊಂದು ಮೊಳಗುವುದು. ಹೀಗೆ ಪ್ರತಿದಿನವೂ, (ಆ ದುಂದುಭಿಯು) ಎಡೆಬಿಡದೆ ಶಬ್ದಮಾಡುತ್ತಿತ್ತು. ಈ ರೀತಿಯಲ್ಲಿ ಧರ್ಮರಾಜನ ಯಾಗವು ಸಂಭ್ರಮದಿಂದ ನಡೆಯುತ್ತಿರುವಾಗ, ಜನರು ಪರ್ವತಾಕಾರವಾದ ಮಧುರಾನ್ನರಾಶಿಯನ್ನೂ, ಮೊಸರಿನ ಕಾಲುವೆಗಳನ್ನೂ, ತುಪ್ಪದ ಮಡುಗಳನ್ನೂ ಕಂಡರು. ಅನೇಕ ದೇಶಗಳನ್ನೊಳಕೊಂಡ ಜಂಬೂದ್ವೀಪವೆಲ್ಲವೂ, ಆ ಯಾಗಭೂಮಿಯಲ್ಲಿಯೇ ಬಂದು ನೆರೆದಂತೆ ತೋರಿತು. ಆ ಯಾಗಕ್ಕಾಗಿ ನಾನಾಜಾತಿಯವರು ಧನಗಳನ್ನೆತ್ತಿಕೊಂಡು ತಮ್ಮತಮ್ಮ ದೇಶಗಳಿಂದ ಬಂದರು. ಅಲ್ಲಿ ಪುಷ್ಪಹಾರಗಳನ್ನೂ, ದಿವ್ಯವಾದ ರತ್ನ

ಕುಂಡಲಗಳನ್ನೂ ಧರಿಸಿರುವ ರಾಜರೆಲ್ಲರೂ ನೂರು ಸಾವಿರ ಲೆಕ್ಕ ದಿಂದ ಅಲ್ಲಿ ಸೇರಿದ ಬ್ರಾಹ್ಮಣರನ್ನು ಉಪಚರಿಸಿದರು. ಪರಿಚಾರಕರು ರಾಜಯೋಗ್ಯವಾದ ಅನ್ನಪಾನಗಳನ್ನು ಬ್ರಾಹ್ಮಣರಿಗೆ ಬಡಿಸಿದರು.

ಇದು ಎಂಭತ್ತಾರನೆಯ ಅಧ್ಯಾಯವು.

ಕೃಷ್ಣನು ಬಲರಾಮಾದಿಗಳೊಡನೆ ಹಸ್ತಿನಾಪುರಕ್ಕೆ ಬಂದುದು. ಅರ್ಜುನನು ಯಾಗಕ್ಕಾಗಿ ಬಂದ ಹಲವು ರಾಜರಿಗೂ, ಬಭ್ರುವಾಹನನಿಗೂ ತಕ್ಕ ಮರ್ಯಾದೆಮಾಡುವ ವಿಷಯದಲ್ಲಿ ಯುಧಿಷ್ಠಿರನಿಗೆ ಹೇಳಿಕಳುಹಿಸಿದುದು.

ಯುಧಿಷ್ಠಿರನು ಅನೇಕರಾಜರು ನೆರೆದುದನ್ನು ನೋಡಿ ಸಂತೋಷದಿಂದ ಭೀಮನನ್ನು ಕುರಿತು 'ಹಲವುಮಂದಿ ಉತ್ತಮ ರಾಜರು ಇಲ್ಲಿ ನೆರೆದಿರುವರು. ಇವರೆಲ್ಲರನ್ನೂ ಪೂಜಿಸು' ಎಂದನು. ಒಡನೆಯೇ ಭೀಮಸೇನನು ನಕುಲಸಹದೇವರೊಡನೆ ಅವರೆಲ್ಲರನ್ನೂ ಸತ್ಕರಿಸಿದನು. ಆಮೇಲೆ ಕೃಷ್ಣನು ಬಲರಾಮನನ್ನು ಮುಂದಿಟ್ಟುಕೊಂಡು, ಯುಯುಧಾನನು, ಪ್ರದ್ಯುಮ್ನನು, ಗದನು, ನಿಶಠನು, ಸಾಂಬನು, ಕೃತವರ್ಮನು, ಮುಂತಾದ ವೃಷ್ಣಿಗಳೆಲ್ಲರೊಡನೆ ಧೃತರಾಷ್ಟ್ರನ ಬಳಿಗೆ ಬಂದನು. ಭೀಮಸೇನನು ಅವರೆಲ್ಲರನ್ನೂ ಉಚಿತರೀತಿಯಲ್ಲಿ ಪೂಜಿಸಿದಮೇಲೆ, ಅವರೆಲ್ಲರೂ ರತ್ನಮಯಗಳಾದ ತಮ್ಮತಮ್ಮ ಬಿಡಾರಗಳನ್ನು ಪ್ರವೇಶಿಸಿದರು. ಕೃಷ್ಣನುಮಾತ್ರ ಯುಧಿಷ್ಠಿರನ ಬಳಿಯಲ್ಲಿ ಮಾತನಾಡುತ್ತಿದ್ದು, ಅರ್ಜುನನು ಅನೇಕಯುದ್ಧಗಳನ್ನು ಮಾಡಿ ಶ್ರಮಪಟ್ಟು ಬಂದುದನ್ನು ತಿಳಿಸಿದನು. ಆಗ ಯುಧಿಷ್ಠಿರನು ಅರ್ಜುನನ ವಿಷಯವೇನೆಂದು ತಿರುಗಿತಿರುಗಿ ಪ್ರಶ್ನಿಸಲು, ಕೃಷ್ಣನು "ರಾಜಾ! ಅನೇಕ ಯುದ್ಧಗಳಲ್ಲಿ ಶ್ರಮಪಟ್ಟು ಬರುತ್ತಿರುವ ಅರ್ಜುನನನ್ನು ದ್ವಾರಕಾವಾಸಿಯಾದ ನನ್ನ ಆಪ್ತನೊಬ್ಬನು ಈಗಲೇ ನೋಡಿದನಂತೆ. ಈಗ ಅರ್ಜುನನು ಸಮೀಪದಲ್ಲಿ ಬರುತ್ತಿರುವುದಾಗಿ ಅವನು ತಿಳಿಸಿದನು. ಇನ್ನು ನೀನು ಅಶ್ವಮೇಧಯಾಗವನ್ನು ಆರಂಭಿಸಲು ತಕ್ಕ ಕಾರ್ಯಗಳನ್ನು ಮಾಡು" ಎಂದನು.

ಆದನ್ನು ಕೇಳಿ ಯುಧಿಷ್ಠಿರನು 'ಓ ಮಾಧವಾ! ಭಾಗ್ಯವಶದಿಂದ ಅರ್ಜುನನು ಕ್ಷೇಮವಾಗಿ ಹಿಂತಿರುಗಿ ಬಂದನು. ಸೇನಾಮುಖದಲ್ಲಿದ್ದ ಅರ್ಜುನನನು ಆ ನಿನ್ನ ಮಿತ್ರನ ಮೂಲಕವಾಗಿ ಹೇಳಿಕಳುಹಿಸಿದ ವಾಕ್ಯಗಳೇನಾದರೂ ಇದ್ದರೆ ನನಗೆ ತಿಳಿಸಬೇಕೆಂದು ಕೋರುವೆನು' ಎಂದನು. ಆದಕ್ಕೆ ಕೃಷ್ಣನು 'ಓ ರಾಜಾ! ಆ ಮನುಷ್ಯನು ನನ್ನೊಡನೆ ಅರ್ಜುನನು ಹೀಗೆ ತಿಳಿಸಿದುದಾಗಿ ಹೇಳಿದನು. 'ಅಲ್ಲಿಗೆ ಎಲ್ಲಾ ಅರಸರೂ ಬರುವರು. ಬರುವ ಹಿರಿಯರೆಲ್ಲರನ್ನೂ ಉಚಿತರೀತಿಯಲ್ಲಿ ಪೂಜಿಸಬೇಕು. ಇದನ್ನು ಮುಖ್ಯವಾಗಿ ನೀವು ಎಚ್ಚರದಿಂದ ಗಮನಿಸಬೇಕು. (ಹಿಂದೆ ರಾಜಸೂಯಯಾಗದಲ್ಲಿ) ನಡೆದಂತಹ ಕೆಡಕು ಸಂಭವಿಸುವುದಕ್ಕೆ ಅವಕಾಶಕೊಡದಂತೆ, ಅಣ್ಣನಾದ ಯುಧಿಷ್ಠಿರನಿಗೆ ತಿಳಿಸಿ, ಅದಕ್ಕೆ ನೀನೂ ಅನುಮತಿಸಬೇಕು. ರಾಜರಲ್ಲಿ ದ್ವೇಷದಿಂದ ತಿರುಗಿ ಜನರು ಸಾಯದಂತಾಗಲಿ' ಎಂಬೀ ವಾಕ್ಯಗಳನ್ನು ಹೇಳಿಕಳುಹಿಸಿರುವನು. ಓ ಕುಂತೀಪುತ್ರಾ! ಆ ಮನುಷ್ಯನು ಈ ವಾಕ್ಯಗಳನ್ನು ತಿಳಿಸಿ ತಿರುಗಿ ಬೇರೊಂದು ಮುಖ್ಯವಿಚಾರವನ್ನು ಸೂಚಿಸಿರುವನು. ಅದನ್ನೂ ಹೇಳುವೆನು ಕೇಳು. 'ಮಣಲೂರುಪುರದರಸನೂ, ನನ್ನ ಪ್ರಿಯಪುತ್ರನೂ, ಮಹಾವೀರ್ಯಶಾಲಿಯೂ ಆದ ಬಭ್ರುವಾಹನನೂ ನಮ್ಮ ಯಾಗಕ್ಕೆ ಬರುವನು. ಆತನು ನನ್ನಲ್ಲಿ ಅಸಾಧಾರಣ ಭಕ್ತಿವಿಶ್ವಾಸಗಳನ್ನಿಟ್ಟಿರುವನು. ಆದುದರಿಂದ ನೀನು ನನಗಾಗಿ ಆತನಿಗೆ ವಿಧ್ಯುಕ್ತರೀತಿಯಲ್ಲಿ ಮರ್ಯಾದೆ ಮಾಡಬೇಕು' ಎಂದು ಹೇಳಿಕಳುಹಿಸಿರುವನು' ಎಂದನು. ಇವುಗಳೆಲ್ಲವನ್ನೂ ಕೇಳಿ ಧರ್ಮರಾಜನು ಅರ್ಜುನನನ್ನು ಕೊಂಡಾಡಿದನು.

ಇದು ಎಂಭತ್ತೇಳನೆಯ ಅಧ್ಯಾಯವು.



ಯುಧಿಷ್ಠಿರನು ತಮ್ಮಲ್ಲಿ ನಾಲ್ವರಿಗಿಂತಲೂ ಅರ್ಜುನನು ಅಧಿಕಕಷ್ಟಕ್ಕೊಳಗಾಗಲು, ಅತನ ದೇಹದಲ್ಲಿ ಯಾವ ದುರ್ಲಕ್ಷಣಗಳಿರುವುವೆಂದು ಕೇಳಲು ಕೃಷ್ಣನು ಅದನ್ನು ತಿಳಿಸಿದುದು. ಅರ್ಜುನನು ಕುದುರೆಯೊಡನೆ ಹಿಂತಿರುಗಿ ಬಂದುದು.

ಆಗ ತಿರುಗಿ ಯುಧಿಷ್ಠಿರನು 'ಓ ಕೃಷ್ಣಾ! ನಿನ್ನ ಹಿತವಾಕ್ಯಗಳನ್ನು ಕೇಳಿದೆನು. ಇವುಗಳನ್ನು ನಮಗೆ ಉಪದೇಶಿಸಲು ಅರ್ಹನೂ ನೀನೇ! ಅಮೃತದಂತೆ ಮಧುರವೂ, ಪುಣ್ಯಕರವೂ ಆದ ನಿನ್ನ ವಾಕ್ಯಗಳು ನನ್ನ ಮನಸ್ಸನ್ನು ಆನಂದಪಡಿಸುತ್ತಿರುವುವು. ಅರ್ಜುನನಿಗೆ ಅಲ್ಲಲ್ಲಿ ರಾಜರೊಡನೆ ಅನೇಕ ಯುದ್ಧಗಳು ಸಂಭವಿಸಿದುವೆಂದು ಕೇಳಿದೆನು. ಮಹಾಬುದ್ಧಿಶಾಲಿಯಾದ ಅರ್ಜುನನು ಯಾವ ಕಾರಣದಿಂದ ಹೀಗೆ ಮೇಲೆಮೇಲೆ ಕಷ್ಟಕ್ಕೆ ಗುರಿಯಾಗುತ್ತಿರುವನೋ ಎಂದು ನನ್ನ ಮನಸ್ಸು ತವಕಪಡುತ್ತಿರುವುದು. ಜನಾರ್ದನಾ! ಆ ಅರ್ಜುನನ ವಿಷಯದಲ್ಲಿ ಏಕಾಂತವಾಗಿ ಈಗ ನಾನು ನಿನ್ನೊಡನೆ ಆಲೋಚಿಸಬೇಕಾಗಿದೆ. ಆ ಪಾಂಡುಪುತ್ರನಿಗೆ ಯಾವಾಗಲೂ ಇಂತಹ ಸಂಕಟಗಳು ಪ್ರಾಪ್ತವಾಗುತ್ತಿರುವುದಲ್ಲಾ! ಸಕಲ ಶುಭಲಕ್ಷಣಗಳಿಂದ ಕೂಡಿದ ಆತನ ಶರೀರದಲ್ಲಿ (ಹೀಗೆ) ಅಡಿಗಡಿಗೆ ದುಃಖಗಳನ್ನನುಭವಿಸಲು ಯಾವ ದುರ್ಲಕ್ಷಣಗಳಿರುವುವು? ಆತನೇನೋ ಎಡೆಬಿಡದೆ ಕಷ್ಟಗಳನ್ನೇ ಅನುಭವಿಸುತ್ತಿರುವನು. ಆತನ ಶರೀರದಲ್ಲಿ ನನಗೆ ಯಾವ ದುರ್ಲಕ್ಷಣವೂ ಕಾಣಲಿಲ್ಲ. ನಾನು ತಿಳಿಯಬಹುದಾದರೆ, ನನಗೆ ಅವೆಲ್ಲವನ್ನೂ ವಿಸ್ತರಿಸಿ ಹೇಳು' ಎಂದನು.

ಅದನ್ನು ಕೇಳಿ ಸರ್ವಾಂತರ್ಯಾಮಿಯಾದ ಕೃಷ್ಣನು ಸ್ವಲ್ಪಹೊತ್ತು ಧ್ಯಾನಿಸಿ, ಆಮೇಲೆ ಯುಧಿಷ್ಠಿರನನ್ನು ಕುರಿತು 'ಓ ರಾಜಾ! ಅರ್ಜುನನಿಗೆ ಮೊಳಕಾಲಿನ ಕೆಳಗೆ ಹಿಂಭಾಗದಲ್ಲಿರುವ ಮಾಂಸಭಾಗಗಳು (ಪಿಂಡಿಕೆ) ಬಹಳ ಉಬ್ಬಿರುವುವು. ಅದುಹೊರತು ಅವನ ದೇಹದಲ್ಲಿ ಬೇರೆ ಯಾವ ಕೆಟ್ಟಲಕ್ಷಣವೂ ಇಲ್ಲ. ಇದರಿಂದಲೇ ಈತನು ಯಾವಾಗಲೂ ಮಾರ್ಗಸಂಚಾರದಲ್ಲಿಯೇ ಇರುವನು. ದುಃಖಪ್ರಾಪ್ತಿಗೆ ಕಾರಣ

ವಾದ ಬೇರೆ ಯಾವ ಲಕ್ಷಣವನ್ನೂ ನಾನು ಈತನಲ್ಲಿ ಕಾಣಲಿಲ್ಲ' ಎಂದನು. ಆಗ ಧರ್ಮರಾಜನು 'ಓ ಕೃಷ್ಣಾ! ಹೌದು! ಅದು ವಾಸ್ತವವೇ!' ಎಂದನು. ಆಗ ದ್ರೌಪದಿಯು ಅಸಮಾಧಾನಸೂಚಕವಾದ ಕಡೆಗಣ್ಣಿನಿಂದ ಕೃಷ್ಣನನ್ನು ನೋಡಿದಳು. ಆಗ ಕೃಷ್ಣನು ಪತಿಯಾದ ಅರ್ಜುನನ ವಿಷಯದಲ್ಲಿ ಆಕೆಗಿರುವ ಪ್ರೀತಿಯನ್ನು ತಿಳಿದುಕೊಂಡನು. ಭೀಮನೇ ಮೊದಲಾದ ಇತರ ಕುರುಕುಲಶ್ರೇಷ್ಠರೂ, ಋತ್ವಿಕ್ಕುಗಳೂ ವಿಚಿತ್ರವೂ, ಶುಭಕರವೂ ಆದ ಆ ಧನಂಜಯನ ಈ ವೃತ್ತಾಂತವನ್ನು ಕೇಳಿ ಸಂತೋಷಪಟ್ಟರು. ಅವರೆಲ್ಲರೂ ಅರ್ಜುನನ ಸಾಹಸಗಳನ್ನು ಕುರಿತು ಮಾತನಾಡುತ್ತಿರುವಾಗ, ಅರ್ಜುನನಿಂದ ಕಳುಹಿಸಲ್ಪಟ್ಟ ದೂತನೊಬ್ಬನು ಬಂದು ಯುಧಿಷ್ಠಿರನಿಗೆ ನಮಸ್ಕರಿಸಿ 'ಅರ್ಜುನನು ಬಂದುಬಿಟ್ಟ'ನೆಂದು ತಿಳಿಸಿದನು. ಆ ಮಾತನ್ನು ಕೇಳಿ ಧರ್ಮರಾಜನು ಆನಂದಬಾಷ್ಪವನ್ನು ಸುರಿಸುತ್ತ, ಆ ಪ್ರಿಯವಾಕ್ಯವನ್ನು ತಿಳಿಸಿದುದಕ್ಕಾಗಿ ಆ ದೂತನಿಗೆ ಹೇರಳವಾಗಿ ದ್ರವ್ಯವನ್ನು ಕೊಟ್ಟನು. ಮಾರನೆಯ ದಿನವೇ ಅರ್ಜುನನು ಬರುತ್ತಿರುವ ಸಂಭ್ರಮದ ಕೋಲಾಹಲವು ಕೇಳಿಸಿತು. ಉಚ್ಚೈಶ್ರವಸ್ಸಿಗೆ ಸಮಾನವಾದ ಯಜ್ಞಾಶ್ವದಮೇಲೆ ಎತ್ತಿ ಹಿಡಿದ ಧ್ವಜದಂತೆ ದೊಡ್ಡ ಧೂಳು ಕಾಣಿಸಿತು. ಅದನ್ನು ನೋಡಿ ಅಲ್ಲಲ್ಲಿ ಪುರಜನರು 'ಪಾರ್ಥಾ! ದೈವಕೃಪೆಯಿಂದ ನೀನು ಕ್ಷೇಮದಿಂದಿರುವೆ! ಯುಧಿಷ್ಠಿರನು ಧನ್ಯನಾದನು. ಆಹಾ! ಅರ್ಜುನನುಹೊರತು ಬೇರೆ ಯಾವನುತಾನೇ ಯುದ್ಧದಲ್ಲಿ ಎಲ್ಲಾ ರಾಜರನ್ನೂ ಗೆದ್ದು, ಯಜ್ಞಾಶ್ವವನ್ನು ಭೂಮಂಡಲದಲ್ಲೆಲ್ಲಾ ಸುತ್ತಿಸಿಕೊಂಡು ಹಿಂತಿರುಗಿ ಬರಬಲ್ಲನು? ಹಿಂದಿದ್ದ ಸಗರಾದಿ ಮಹಾತ್ಮರೂ ಇಂತಹ ಕಾರ್ಯವನ್ನು ಮಾಡಿದುದಾಗಿ ನಾವು ಕೇಳಿಲ್ಲ. ಓ ಕುರುಕುಲೋತ್ತಮಾ! ನೀನು ಯಾವ ಅಮಾನುಷಕಾರ್ಯಗಳನ್ನು ಮಾಡಿದೆಯೋ, ಅಂತಹ ಸಾಹಸಕಾರ್ಯಗಳನ್ನು ಇನ್ನುಮುಂದೆ ಜನಿಸುವವರಾರೂ ಮಾಡಲಾರರು' ಎಂದು ಹೇಳುತ್ತಿದ್ದರು. ಅರ್ಜುನನು ಕಿವಿಗಿಂಪಾದ ಆ ಸ್ತುತಿವಾಕ್ಯಗಳನ್ನು ಕೇಳುತ್ತ, ಯಾಗಶಾಲೆಗೆ ಪ್ರವೇಶಿಸಿದನು. ಆಗ ಮಂತ್ರಿಸಮೇತನಾದ ಯುಧಿಷ್ಠಿರನೂ, ಕೃಷ್ಣನೂ ಧೃತರಾಷ್ಟ್ರನನ್ನು ಮುಂದೆಬಿಟ್ಟುಕೊಂಡು, ಆ ಅರ್ಜುನನನ್ನು ಇದಿರುಗೊಳ್ಳುವುದಕ್ಕೆ

ಹೊರಟರು. ಅರ್ಜುನನು ಮೊದಲು ಪಿತನಾದ ಧೃತರಾಷ್ಟ್ರನಿಗೂ, ಆಮೇಲೆ ಅಣ್ಣನಾದ ಧರ್ಮರಾಜನಿಗೂ ಪಾದವಂದನವನ್ನು ಮಾಡಿ, ಭೀಮನೇ ಮೊದಲಾದವರನ್ನು ಚೆನ್ನಾಗಿ ಆದರಿಸಿ, ಕೃಷ್ಣನನ್ನೂ ಅಪ್ಪಿಕೊಂಡನು. ಆಮೇಲೆ ಅವರಿಂದ ತಾನೂ ಪೂಜಿತನಾಗಿ ವಿಧ್ಯುಕ್ತರೀತಿಯಲ್ಲಿ ಎಲ್ಲರನ್ನೂ ಪೂಜಿಸಿ ಆನಂದದಿಂದಿದ್ದನು.

ಇದು ಎಂಭತ್ತೆಂಟನೆಯ ಅಧ್ಯಾಯವು.

ಬಭ್ರುವಾಹನನು ತನ್ನ ತಾಯಿಯರೊಡನೆ ಯಾಗಕ್ಕೆ ಬಂದುದು. ವ್ಯಾಸನ ಆಜ್ಞೆಯಂತೆ ಧರ್ಮರಾಜನು ಅಶ್ವಮೇಧ ಯಾಗವನ್ನು ಪ್ರಾರಂಭಿಸಿದುದು.

ಆವೇಳೆಗೆ ಸರಿಯಾಗಿ ಬಭ್ರುವಾಹನನೂ ತನ್ನ ಇಬ್ಬರು ತಾಯಿಯರೊಡನೆ ಕುರುರಾಜ್ಯಕ್ಕೆ ಹೊರಟುಬಂದನು. ಮಹಾಬಾಹುಬಲವುಳ್ಳ ಆತನು ತನ್ನ ಹಿರಿಯರಾದ ಕೌರವರನ್ನೂ, ಇತರ ರಾಜರನ್ನೂ ವಿಧ್ಯುಕ್ತರೀತಿಯಲ್ಲಿ ನಮಸ್ಕರಿಸಿದನು. ಅವರೆಲ್ಲರೂ ಆತನನ್ನು ಕೊಂಡಾಡಿದರು. ಆಮೇಲೆ ಆತನು ತನ್ನ ಅಜ್ಜಿಯಾದ ಕುಂತಿಯ ಬಿಡಾರಕ್ಕೆ ಹೋಗಿ, ಅಲ್ಲಿ ಆಕೆಗೂ ನಮಸ್ಕರಿಸಿದನು. ಹಾಗೆಯೇ ಉಲೂಪಿ ಚಿತ್ರಾಂಗದೆಯರೂ ಕುಂತಿಗೂ, ದ್ರೌಪದಿಗೂ ಲಜ್ಜೆಯಿಂದ ತಲೆಬಾಗಿದರು. ಆಮೇಲೆ ಕ್ರಮವಾಗಿ ಸುಭದ್ರೆಯು ಮತ್ತು ಇತರಕುಲಸ್ತ್ರೀಯರ ಬಳಿಗೆಲ್ಲ ಹೋಗಿ, ಅವರನ್ನು ನೋಡಿದಳು. ಆಮೇಲೆ ಕುಂತಿಯೂ, ದ್ರೌಪದಿಯೂ, ಸುಭದ್ರೆಯೂ, ಇನ್ನೂ ಇತರ ಕೌರವ ಯಾದವ ಸ್ತ್ರೀಯರೂ, ಅವರಿಬ್ಬರಿಗೂ ನಾನಾಬಗೆಯ ರತ್ನಗಳನ್ನು ಬಹುಮಾನಿಸಿದರು. ಕುಂತಿಯು ಅವರಿಬ್ಬರನ್ನೂ ಪೂಜಿಸಿ, ಅವರಿಗಾಗಿ ದಿವ್ಯವಾದ ಶಯನಾಸನಗಳುಳ್ಳ ಬಿಡಾರಗಳನ್ನು ವಾಸಕ್ಕಾಗಿ ಏರ್ಪಡಿಸಿದಳು. ಬಭ್ರುವಾಹನನೂ ಅವರೆಲ್ಲರಿಂದ ಪೂಜಿತನಾಗಿ, ಧೃತರಾಷ್ಟ್ರನ ಬಳಿಗೆ ಹೋಗಿ ವಿಧ್ಯುಕ್ತರೀತಿಯಲ್ಲಿ ಆತನನ್ನು ವಂದಿಸಿದನು. ಹಾಗೆಯೇ ಯುಧಿಷ್ಠಿರನಿಗೂ, ಭೀಮನೇ ಮೊದಲಾದ ಇತರ ಪಾಂಡವರಿಗೂ ನಮಸ್ಕರಿಸಿದನು. ಅವರೂ ಆತನನ್ನು ಮೈದಡವಿ,

ವಿಧ್ಯುಕ್ತರೀತಿಯಲ್ಲಿ ಪೂಜಿಸಿ, ಸಂತೋಷದಿಂದ ಆತನಿಗೆ ಅಧಿಕವಾಗಿ ದ್ರವ್ಯವನ್ನು ಬಹುಮಾನಿಸಿಕೊಟ್ಟರು. ಆಮೇಲೆ ಅವನು ಶ್ರೀಕೃಷ್ಣನಬಳಿಗೆ ಪ್ರದ್ಯುಮ್ನಕುಮಾರನಂತೆ ವಿನಯದಿಂದ ಹೋದನು. ಆಗ ಕೃಷ್ಣನು ಅವನಿಗೆ ಲೋಕಪ್ರಸಿದ್ಧವಾಗಿ, ಸುವರ್ಣಾಲಂಕೃತಗಳಾದ ಉತ್ತಮಾಶ್ವಗಳನ್ನೇಲೆ ಹೂಡಿದ ಒಂದು ದಿವ್ಯರಥವನ್ನು ಕೊಟ್ಟನು. ಧರ್ಮರಾಜ ಭೀಮಾರ್ಜುನ ನಕುಲ ಸಹದೇವರೂ, ಒಬ್ಬೊಬ್ಬರಾಗಿ ಆ ಬಭ್ರುವಾಹನನನ್ನು ಗೌರವಿಸಿ, ಧನವನ್ನು ಉಡುಗೊರೆಯಾಗಿ ಕೊಟ್ಟರು. ಮಾರನೆಯ ದಿನದಲ್ಲಿ ಸತ್ಯವತೀಪುತ್ರನಾದ ವ್ಯಾಸನು ಯುಧಿಷ್ಠಿರನ ಬಳಿಗೆ ಬಂದು ಹೀಗೆ ಹೇಳುವನು.

'ಕುಂತೀಕುಮಾರಾ! ಈ ದಿನದಿಂದಹಿಡಿದು ನಿನಗೆ ಯಾಗಕಾಲವಲ್ಲವೆ? ಯಾಗಕ್ಕಾಗಿ ಗೊತ್ತುಮಾಡಿದ ಮುಹೂರ್ತವು ಬಂದಿತು. ಯಾಗಮಾಡಿಸತಕ್ಕ ಋತ್ವಿಕ್ಪುರೋಹಿತರು ತ್ವರೆಗೊಳಿಸುತ್ತಿರುವರು. ಹಲವು ಸೋಮಯಾಗಗಳುಳ್ಳ ಈ ಕ್ರತುವು ಅಹೀನವೆಂದೆನಿಸುವುದು. ಇದಕ್ಕೆ ಅಪರಿಮಿತವಾದ ಸುವರ್ಣವು ಬೇಕಾಗಿರುವುದರಿಂದ ಇದು ಬಹುಸುವರ್ಣಕವೆಂದೂ ಪ್ರಸಿದ್ಧವಾದುದು. ಮಹಾರಾಜಾ! ಈಗ ಈ ಯಾಗವನ್ನು ನೀನು ದೊಡ್ಡ ದಕ್ಷಿಣೆಗಳಿಂದ ಪ್ರಸಿದ್ಧವಾದುದನ್ನಾಗಿ ಮಾಡು. ನಿನಗೆ ಲಕ್ಷ್ಮೀಕಟಾಕ್ಷವೊದಗಲಿ! ಈ ಯಾಗಕ್ಕೆ ಬ್ರಾಹ್ಮಣರೇ ಕಾರಣರು. ನೀನು ಇದರಿಂದ ಅಧಿಕದಕ್ಷಿಣೆಗಳುಳ್ಳ ಮೂರು ಅಶ್ವಮೇಧಯಾಗಗಳನ್ನು ಪೂರೈಸಿ, ಜ್ಞಾತಿವಧೆಯಿಂದುಂಟಾದ ಪಾಪವನ್ನು ನೀಗುವೆ. ಅಶ್ವಮೇಧಯಾಗವನ್ನು ಮಾಡಿ ಅವಭೃಥಸ್ನಾನಮಾಡಿದರೆ ಅದು ಮಹಾ ಪರಿಶುದ್ಧವಾದುದು. ಪಾವನಕ್ಕೂ ಪರಮಪಾವನವಾದುದು' ಎಂದನು.

ವ್ಯಾಸಮುನಿಯ ಈ ಮಾತುಗಳನ್ನು ಕೇಳಿ ಯುಧಿಷ್ಠಿರನು ಆಗಲೇ ಯಾಗಕ್ಕಾಗಿ ದೀಕ್ಷೆವಹಿಸಿದನು. ಹೇರಳವಾದ ಅನ್ನದಾನದಿಂದಲೂ, ಮತ್ತು ದಕ್ಷಿಣೆಗಳಿಂದಲೂ, ಕೋರಿದವರಿಗೆ ಕೋರಿದ ವಸ್ತುಗಳನ್ನೆಲ್ಲ ಕೊಡುವ ಅಶ್ವಮೇಧವೆಂಬ ಮಹಾಯಾಗವನ್ನು ಆರಂಭಿಸಿದನು. ಆ

ಯಾಗದಲ್ಲಿ ವೇದವಿದರಾದ ಋತ್ವಿಕ್ಕುಗಳು ಕರ್ಮಗಳನ್ನು ಮಾಡಿಸಿದರು. ಶಾಸ್ತ್ರಜ್ಞರಾದ ಬ್ರಾಹ್ಮಣಶ್ರೇಷ್ಠರು ಕಾರ್ಯಕ್ರಮಗಳನ್ನು ಗಮನಿಸಿ ನೋಡುತ್ತ ತಿರುಗುತ್ತಿದ್ದರು. ಯಜ್ಞಕಾರ್ಯದಲ್ಲಿ ಯಾವ ಲೋಪವಾಗಲಿ, ದೋಷವಾಗಲಿ, ವ್ಯತ್ಯಾಸವಾಗಲಿ ಬಾರದಂತೆ ಬ್ರಾಹ್ಮಣೋತ್ತಮರು, ವಿಧ್ಯುಕ್ತಗಳಾದ ಕರ್ಮಗಳನ್ನು ಮಾಡಿಸುತ್ತಿದ್ದರು. ಸೋಮಯಾಗದಲ್ಲಿ ಮೊದಲು ಮಾಡುವ ಪ್ರವರ್ಗ್ಯವೆಂಬ ಹೋಮಕರ್ಮವನ್ನು ಮಾಡಿದರು. ಆಮೇಲೆ ಸೋಮಲತೆಯನ್ನು ಹಿಂಡುವ ಅಭಿಷವವೆಂಬ ಕರ್ಮವೂ ನಡೆಯಿತು. ಆಮೇಲೆ ಸೋಮಪಾನಮಾಡಿದವರಲ್ಲಿ ಶ್ರೇಷ್ಠರೂ, ಶಾಸ್ತ್ರಾನುಯಾಯಿಗಳೂ ಆದ ವಿಪ್ರೋತ್ತಮರು, ಕ್ರಮವಾಗಿ ಸವನ (ವಿವಿಧ ಹೋಮಗಳು) ಕಾರ್ಯಗಳನ್ನೆಲ್ಲ ನಡೆಸಿದರು. ಆ ಯಾಗಕಾಲದಲ್ಲಿ ಕೃಪಣನೂ, ದರಿದ್ರನೂ, ಹಸಿದಿರುವವನೂ, ದುಃಖಿತನೂ, ಅಜ್ಞನೂ ಯಾವನೊಬ್ಬನೂ ಇರಲಿಲ್ಲ. ಭೀಮನು ಯುಧಿಷ್ಠಿರಾಜ್ಞೆಯಂತೆ ಭೋಜನಾರ್ಥಿಗಳಿಗೆ ಭೋಜನವನ್ನು ಮಾಡಿಸುತ್ತಿದ್ದನು. ಇಟ್ಟಿಗೆಗಳಿಂದ ಸ್ಥಂಡಿಲಗಳನ್ನು ರಚಿಸುವುದರಲ್ಲಿ ಸಮರ್ಥರಾದ ಋತ್ವಿಕ್ಕುಗಳು, ಒಂದೊಂದು ದಿನವೂ ಶಾಸ್ತ್ರದಲ್ಲಿ ಕಂಡಂತೆ ಎಲ್ಲಾ ಕಾರ್ಯಗಳನ್ನೂ ಮಾಡಿದರು. ಆ ಯಾಗಸದಸ್ಸಿನಲ್ಲಿ ವೇದವೇದಾಂಗಗಳನ್ನರಿಯದವನಾಗಲಿ, ವ್ರತಹೀನನಾಗಲಿ, ಉಪಾಧ್ಯಾಯನಲ್ಲದವನಾಗಲಿ, ವಾದಕ್ಕೆ ತಕ್ಕ ಪಾಂಡಿತ್ಯವಿಲ್ಲದವನಾಗಲಿ ಒಬ್ಬನಾದರೂ ಸದಸ್ಯನಾಗಿರಲಿಲ್ಲ. ಯೂಪಗಳನ್ನು ನಾಟುವ ಸಮಯವು ಬಂದಾಗ, ಋತ್ವಿಕ್ಕುಗಳು ಆರಾರು ಸಂಖ್ಯೆಯಿಂದ ಬಿಲ್ವ, ಖದಿರ, ಪಲಾಶ ಯೂಪಗಳನ್ನೂ, ಎರಡು ದೇವದಾರು ಯೂಪಗಳನ್ನೂ ಶ್ಲೇಷ್ಮಾತಕಯೂಪವನ್ನೂ ನಾಟಿ ನಿಲ್ಲಿಸಿದರು. ಋತ್ವಿಕ್ಕುಗಳು ಶಾಸ್ತ್ರವಿಧಿಗನುಸಾರವಾಗಿ ಅವನ್ನು ನಾಟಿದಮೇಲೆ, ಭೀಮಸೇನನು ಧರ್ಮರಾಜನ ಆಜ್ಞೆಯಂತೆ ಅಲಂಕಾರಾರ್ಥವಾಗಿ ಇನ್ನೂ ಹಲವು ಸುವರ್ಣಯೂಪಗಳನ್ನೂ ಮಾಡಿಸಿದನು. ವಸ್ತ್ರಾಲಂಕೃತಗಳಾದ ಆ ಯೂಪಗಳು ಮಹೇಂದ್ರನನ್ನು ಸಪ್ತರ್ಷಿಗಳೊಡನೆ ಹಿಂಬಾಲಿಸುವ ದೇವತೆಗಳಂತೆ ಪ್ರಕಾಶಿಸಿದುವು. ಆ ಯಾಗದಲ್ಲಿ ಚಯನಕಾರ್ಯಕ್ಕಾಗಿ ಸುವರ್ಣಮಯವಾದ ಇಟ್ಟಿಗೆಗಳು ಮಾಡಲ್ಪಟ್ಟು, ಅದು ಸೃಷ್ಟಿಕರ್ತನಾದ ದಕ್ಷನ ಯಾಗದಲ್ಲಿದ್ದ

ಚಯನದಂತೆ ಪ್ರಕಾಶಿಸಿತು. ಹದಿನೆಂಟು ಮೊಳದುದ್ದವೂ, ಸುವರ್ಣಮಯವಾದ ರೆಕ್ಕೆಗಳೂ, ತ್ರಿಕೋಣಗಳೂ ಉಳ್ಳ ಗರುಡಾಕೃತಿಯ ನಾಲ್ಕು ಚಯನಗಳನ್ನು ಏರ್ಪಡಿಸಿದ್ದರು. ಆಮೇಲೆ ಶಾಸ್ತ್ರಜ್ಞರು ಯಜ್ಞವಿಧಿಗನುಸಾರವಾಗಿ, ಬೇರೆಬೇರೆ ದೇವತೆಗಳನ್ನುದ್ದೇಶಿಸಿ ಯಜ್ಞಪಶುಗಳಿಗಾಗಿ ವಿವಿಧಪಕ್ಷಿಜಾತಿಗಳನ್ನೂ, ಮೃಗಜಾತಿಗಳನ್ನೂ ಸಿದ್ಧಪಡಿಸಿದರು. ಅಗ್ನಿಚಯವೆಂಬ ಕರ್ಮಕ್ಕಾಗಿ ವಿಧ್ಯುಕ್ತವಾದ ರೀತಿಯಲ್ಲಿ ವೃಷಭಗಳನ್ನೂ, ಜಲಚರಪ್ರಾಣಿಗಳನ್ನೂ ಕಟ್ಟಿದರು. ಮುನ್ನೂರು ಪಶುಗಳೂ, ಒಂದು ದಿವ್ಯಾಶ್ವವೂ ಯೂಪಗಳಿಗೆ ಕಟ್ಟಲ್ಪಟ್ಟುವು. ಧರ್ಮರಾಜನ ಆ ಯಾಗಭೂಮಿಯು, ಪ್ರತ್ಯಕ್ಷವಾಗಿ ಬಂದು ನೆರೆದ ದೇವರ್ಷಿಗಳಿಂದಲೂ, ಅಪ್ಸರಸ್ಸುಗಳ ಸಮೂಹಗಳಿಂದಲೂ ಗಂಧರ್ವ, ಕಿನ್ನರ ಕಿಂಪುರುಷರ ಸಮೂಹಗಳಿಂದಲೂ ತುಂಬಿದ್ದಿತು. ಆದರ ನಾಲ್ಕು ಕಡೆಗಳಲ್ಲಿಯೂ ತಪಸ್ಸಿದ್ಧರಾದ ಬ್ರಾಹ್ಮಣರ ವಾಸಸ್ಥಳಗಳಿದ್ದುವು. ಆ ಯಾಗಸದಸ್ಸಿನಲ್ಲಿ ಸಮಸ್ತಶಾಸ್ತ್ರಜ್ಞರೂ, ಯಜ್ಞಕಾರ್ಯದಲ್ಲಿ ನಿಪುಣರೂ ಆದ ವ್ಯಾಸಮಹರ್ಷಿಯ ಶಿಷ್ಯರೆಲ್ಲರೂ ಸಿದ್ಧರಾಗಿದ್ದರು. ತುಂಬುರು ನಾರದರೂ, ನೃತ್ಯಗಾನವಿಶಾರದರಾದ ವಿಶ್ವಾವಸು, ಚಿತ್ರಸೇನಾದಿ ಗಂಧರ್ವರೂ, ಆ ಯಾಗಕರ್ಮಗಳಲ್ಲಿ ಸಂದರ್ಭವು ಸಿಕ್ಕಿದಾಗಲೆಲ್ಲ, ತಮ್ಮ ಗಾನನರ್ತನಗಳಿಂದ ಸದಸ್ಯರನ್ನು ಸಂತೋಷಗೊಳಿಸುತಿದ್ದರು.

ಇದು ಎಂಭತ್ತೊಂಭತ್ತನೆಯ ಅಧ್ಯಾಯವು.

ಯುಧಿಷ್ಠಿರನು ಯಾಗವು ಮುಗಿದಮೇಲೆ ರಾಜರಿಗೆ ಮರ್ಯಾದೆಗಳನ್ನು ಮಾಡಿ ಅವರನ್ನು ಅವರವರ ಊರುಗಳಿಗೆ ಕಳುಹಿಸಿದುದು.

ಬ್ರಾಹ್ಮಣರು ವಿಧ್ಯುಕ್ತರೀತಿಯಲ್ಲಿ ಇತರಪಶುಗಳನ್ನು ಸಂಸ್ಕರಿಸಿದ ಮೇಲೆ, ಶಾಸ್ತ್ರವಿಧಿಗನುಸಾರವಾಗಿ ಪ್ರಧಾನ ಯಜ್ಞಾಶ್ವವನ್ನು ವಧಿಸಿದರು. ಇದಾದಮೇಲೆ, ಮಂತ್ರ ದ್ರವ್ಯ ಶ್ರದ್ಧೆಗಳೆಂಬ ತ್ರಿಕಲೆಗಳಿಂದ ಕೂಡಿದ ನಿರ್ಮಲಚಿತ್ತವುಳ್ಳ ದ್ರೌಪದಿಯನ್ನು ಅವರ ಪಕ್ಕದಲ್ಲಿ ಕುಳಿ

ರಿಸಿದರು. ಯಾಜಕರು ಶಾಸ್ತ್ರವಿಧಿಗನುಸಾರವಾಗಿ ಆ ಕುದುರೆಯ ವಪೆಯನ್ನೆತ್ತಿ, ಏಕಾಗ್ರಚಿತ್ತದಿಂದ ವಿಧ್ಯುಕ್ತರೀತಿಯಲ್ಲಿ ಪಕ್ವಮಾಡಿದರು. ಆ ವಪೆಯನ್ನು ಬೇಯಿಸುವಾಗ ಧರ್ಮರಾಜನು ತನ್ನ ತಮ್ಮಂದಿರೊಡನೆ ಸಕಲ ಪಾಪಗಳನ್ನೂ ನೀಗಿಸತಕ್ಕ ಅದರ ಹೊಗೆಯ ವಾಸನೆಯನ್ನು ವಿಹಿತರೀತಿಯಲ್ಲಿ ಆಘ್ರಾಣಿಸಿದನು. ಆ ಕುದುರೆಯ ಮಿಕ್ಕ ಅವಯವಗಳನ್ನು ಪಂಡಿತರಾದ ಹದಿನಾರುಮಂದಿ ಋತ್ವಿಕ್ಕುಗಳು ಒಟ್ಟುಗೂಡಿ ಅಗ್ನಿಯಲ್ಲಿ ಹೋಮಮಾಡಿದರು. ವ್ಯಾಸನೇ ಶಿಷ್ಯಸಮೇತನಾಗಿದ್ದು ಯುಧಿಷ್ಠಿರನ ಶ್ರೇಯಸ್ಸಿಗಾಗಿ ಅವನಿಂದ ಯಾಗಕಾರ್ಯವನ್ನು ಮಾಡಿಸಿದನು. ಯಾಗವು ಮುಗಿದಮೇಲೆ ಧರ್ಮರಾಜನು ಸದಸ್ಯರಿಗೆ ಸಹಸ್ರಕೋಟಿ ನಿಷ್ಕಗಳನ್ನೂ, ವ್ಯಾಸನಿಗೂ, ನಾಲ್ವರು ಋತ್ವಿಕ್ಕುಗಳಿಗೂ ಭೂಮಿಯನ್ನೇ ದಾನಮಾಡಿದನು. ವ್ಯಾಸನು ಆ ಭೂಮಿಯನ್ನು ಸ್ವೀಕರಿಸಿ, 'ಓ ರಾಜೋತ್ತಮಾ! ಈ ಭೂಮಿಯೆಲ್ಲವನ್ನೂ ನಿನಗೇ ಹಿಂತಿರುಗಿ ಕೊಟ್ಟಿರುವೆನು. ಇದಕ್ಕೆ ತಕ್ಕ ಬೆಲೆಯನ್ನು ನನಗೆ ಕೊಟ್ಟುಬಿಡು. ಬ್ರಾಹ್ಮಣರು ಧನಾಪೇಕ್ಷಿಗಳಲ್ಲವೆ?' ಎಂದನು. ಆಗ ಚತುರನಾದ ಧರ್ಮರಾಜನು ತನ್ನ ಸಹೋದರರೊಡನೆ ಎಲ್ಲಾ ರಾಜಶ್ರೇಷ್ಠರ ಮುಂದೆ ಆ ಬ್ರಾಹ್ಮಣರನ್ನು ಕುರಿತು 'ಓ ಬ್ರಾಹ್ಮಣೋತ್ತಮರೇ! ಅಶ್ವಮೇಧವೆಂಬ ಈ ಮಹಾಯಾಗಕ್ಕೆ ಈ ಭೂಮಿಯನ್ನೇ ದಕ್ಷಿಣೆಯಾಗಿ ಕೊಟ್ಟಿರುವೆನು. ಅರ್ಜುನನಿಂದ ಜಯಿಸಲ್ಪಟ್ಟ ಈ ಭೂಮಿಯನ್ನು ನಾನು ಋತ್ವಿಕ್ಕುಗಳಿಗಾಗಿ ಕೊಟ್ಟುಬಿಟ್ಟು ನಾನು ಕಾಡಿಗೆ ಹೋಗುವೆನು. ನೀವೇ ನಿಮ್ಮಲ್ಲಿ ಈ ಭೂಮಿಯನ್ನು ವಿಭಾಗಿಸಿಕೊಳ್ಳಿರಿ. ಹೋತೃಗಳು ನಾಲ್ವರೆಂಬ ಲೆಕ್ಕವನ್ನನುಸರಿಸಿ, ಈ ಭೂಮಿಯನ್ನು ನಾಲ್ಕು ವಿಭಾಗಮಾಡಿಕೊಳ್ಳಿರಿ. ಓ ಬ್ರಾಹ್ಮಣೋತ್ತಮರೇ! ಬ್ರಾಹ್ಮಣರ ಸ್ವತ್ತನ್ನು ಹಿಂತಿರುಗಿ ತೆಗೆದುಕೊಳ್ಳುವುದರಲ್ಲಿ ನನಗೆ ಇಷ್ಟವಿಲ್ಲ. ನನ್ನ ಸಹೋದರರ ಅಭಿಮತವೂ ಇದೇ!' ಎಂದನು. ಒಡನೆಯೇ ಆತನ ಸಹೋದರರೂ, ದ್ರೌಪದಿಯೂ 'ಇದು ನಿಜವು' ಎಂದರು. ಅವರ ದೃಢಬುದ್ಧಿಯು ಅಲ್ಲಿದ್ದವರಿಗೆ ಆಶ್ಚರ್ಯವನ್ನುಂಟುಮಾಡಿತು. ಆಕಾಶದಲ್ಲಿ 'ಭಲೆ! ಭಲೆ!' ಎಂಬ ಸಾಧುವಾದವು ಕೇಳಿಸಿತು. ಬ್ರಾಹ್ಮಣಸಮೂಹಗಳಲ್ಲಿ ಪ್ರಶಂಸಾ

ಕೋಲಾಹಲಶಬ್ದವು ಮೊಳಗಿತು. ತಿರುಗಿ ಕೃಷ್ಣದ್ವೈಪಾಯನನು ಬ್ರಾಹ್ಮಣಗೋಷ್ಠಿಯಲ್ಲಿ ಯುಧಿಷ್ಠಿರನನ್ನು ಶ್ಲಾಘಿಸುತ್ತ 'ನೀನೇನೋ ಈ ಭೂಮಿಯನ್ನು ನನಗೆ ದಾನಮಾಡಿದುದಾಯಿತಲ್ಲವೆ? ಇದನ್ನು ನಾನಾಗಿ ನಿನಗೆ ಹಿಂತಿರುಗಿ ಕೊಡುವೆನು. ಬ್ರಾಹ್ಮಣರಿಗೆ ನಿನ್ನಲ್ಲಿರುವ ಸುವರ್ಣವನ್ನು ಕೊಟ್ಟುಬಿಡು. ಭೂಮಿಯು ನಿನಗೇ ಇರಲಿ' ಎಂದನು. ಆಗ ಕೃಷ್ಣನು ಯುಧಿಷ್ಠಿರನನ್ನು ಕುರಿತು 'ಓ ರಾಜಾ! ನೀನು ವ್ಯಾಸ ಮಹರ್ಷಿಯು ಹೇಳುವಂತೆಯೇ ನಡೆಸಬೇಕು' ಎಂದನು.

ಇದನ್ನು ಕೇಳಿ ಯುಧಿಷ್ಠಿರನು, ತನ್ನ ಸಹೋದರರೊದನೆ ಬಹಳ ಸಂತೋಷಗೊಂಡು, ಮೊದಲಿಗಿಂತಲೂ ತ್ರಿಗುಣವಾಗಿ ಕೋಟಿಕೋಟಿ ಲೆಕ್ಕದ ಹಸುಗಳನ್ನು ದಕ್ಷಿಣೆಯಾಗಿ ಕೊಟ್ಟನು. ಜನಮೇಜಯರಾಜಾ! ಮರುತ್ತರಾಜನಿಗೆ ಸಮಾನವಾಗಿ ಧರ್ಮರಾಜನು ಮಾಡಿದ ಅಂತಹ ಯಜ್ಞಕಾರ್ಯವನ್ನು, ಈ ಲೋಕದಲ್ಲಿ ಬೇರೆ ಯಾವ ಅರಸನೂ ಮಾಡಲಾರನು. ವ್ಯಾಸನು ಆ ಧನವನ್ನೆಲ್ಲ ತೆಗೆದು ಋತ್ವಿಕ್ಕುಗಳಿಗೆ ಹಂಚಿಕೊಟ್ಟನು. ಅವರೆಲ್ಲರೂ ಅದನ್ನು ನಾಲ್ಕು ವಿಭಾಗ ಮಾಡಿಕೊಂಡರು. ಹೀಗೆ ಯುಧಿಷ್ಠಿರನು ಸುವರ್ಣವನ್ನು ಭೂಮಿಗೆ ಬೆಲೆಯಾಗಿ ಕೊಟ್ಟು, ಪಾಪನಿವೃತ್ತಿಮಾಡಿಕೊಂಡು, ಸ್ವರ್ಗವನ್ನು ಸಾಧಿಸಿ, ತನ್ನ ಸಹೋದರರೊಡನೆ ಸಂತೋಷದಿಂದಿದ್ದನು. ಋತ್ವಿಕ್ಕುಗಳುಕೂಡ ಆ ಸುವರ್ಣರಾಶಿಯನ್ನು ಅಲ್ಲಿದ್ದ ಅನೇಕ ಬ್ರಾಹ್ಮಣರಿಗೆ ಸಂತೋಷದಿಂದ ಹಂಚಿಕೊಟ್ಟರು. ಆಮೇಲೆ ಬ್ರಾಹ್ಮಣರೆಲ್ಲರೂ ಯುಧಿಷ್ಠಿರನ ಅನುಮತಿಯನ್ನು ಪಡೆದು, ಸುವರ್ಣಾಭರಣಗಳು, ತೋರಣಗಳು, ಯೂಪಗಳು, ಬಿಂದಿಗೆಗಳು, ಶಿಲೆಗಳು ಇವುಗಳೆಲ್ಲವನ್ನೂ ತಮ್ಮಲ್ಲಿ ವಿಭಾಗಿಸಿಕೊಂಡರು. ಬ್ರಾಹ್ಮಣರಿಗೆ ಕೊಟ್ಟಮೇಲೆ ಉಳಿದ ಧನವನ್ನೆಲ್ಲ ಕ್ಷತ್ರಿಯರೂ, ವೈಶ್ಯರೂ, ಶೂದ್ರವರ್ಗದವರೂ, ಇತರ ಮ್ಲೇಚ್ಛಜಾತಿಯವರೂ ತೆಗೆದುಕೊಂಡರು. ಅವರವರ ಪಾಲಿಗೆ ಬಂದ ಸುವರ್ಣವನ್ನು (ಎಲ್ಲರೂ) ಅನೇಕ ದಿನಗಳವರೆಗೂ ಸಾಗಿಸುತ್ತಿದ್ದರು. ಧನದಿಂದ ತೃಪ್ತರಾದ ಆ ಬ್ರಾಹ್ಮಣರೆಲ್ಲರೂ ಸಂತೋಷದಿಂದ ತಮ್ಮತಮ್ಮ ಗೃಹಗಳಿಗೆ ಹೊರಟರು. ವ್ಯಾಸನು ತನ್ನ

ಪಾಲಿಗೆ ಬಂದ ಅಪರಿಮಿತವಾದ ಸುವರ್ಣವನ್ನೆಲ್ಲ ಆಗ ತನ್ನ ಪಾದ ವಂದನಕ್ಕಾಗಿ ಬಂದ ಕುಂತಿಗೆ ಕೊಟ್ಟುಬಿಟ್ಟನು. ಕುಂತಿಯು ತನ್ನ ಮಾವನು ತನಗೆ ಪ್ರೀತಿಯಿಂದ ಕೊಟ್ಟ ಆ ಧನವನ್ನು ಸ್ವೀಕರಿಸಿ, ಸಂತೋಷಪೂರ್ವಕವಾಗಿ ಆ ಧನದಿಂದ ಅನೇಕ ಪುಣ್ಯಕಾರ್ಯಗಳನ್ನು ಮಾಡಿಸಿದಳು. ಯುಧಿಷ್ಠಿರನು ಅವಭೃಥವನ್ನು ಮುಗಿಸಿದಮೇಲೆ, ನಿರ್ದೋಷಿಯಾಗಿ, ಎಲ್ಲರಿಂದಲೂ ಪೂಜಿತನಾಗಿ ದೇವತೆಗಳೊಡನೆ ಮಹೇಂದ್ರನು ಹೇಗೋ ಹಾಗೆ ತನ್ನ ಸಹೋದರರೊಡನೆ ಪ್ರಕಾಶಿಸಿದನು. ಕ್ಷತ್ರಿಯ ಸಮೂಹಗಳಿಂದ ಪರಿವೃತರಾದ ಪಾಂಡವರು ನಕ್ಷತ್ರಗಳ ಮಧ್ಯದಲ್ಲಿರುವ ಗ್ರಹಗಳಂತೆ ಪ್ರಕಾಶಿಸಿದರು. ಆಮೇಲೆ ಯುಧಿಷ್ಠಿರನು ಯಜ್ಞಕ್ಕಾಗಿ ಕರೆಸಲ್ಪಟ್ಟ ರಾಜರಿಗೆ ನಾನಾಬಗೆಯ ರತ್ನಗಳನ್ನೂ, ಆನೆ ಕುದುರೆಗಳನ್ನೂ, ಅಲಂಕಾರಗಳನ್ನೂ, ಸ್ತ್ರೀಯರನ್ನೂ, ವಸ್ತ್ರಗಳನ್ನೂ, ಸುವರ್ಣಗಳನ್ನೂ ಅಪರಿಮಿತವಾಗಿ ಕೊಡುತ್ತ ಕುಬೇರನಂತೆ ಕಾಣಿಸಿದನು. ಆಮೇಲೆ ಧರ್ಮರಾಜನು ವೀರನಾದ ಬಭ್ರುವಾಹನನನ್ನು ಬರಮಾಡಿಕೊಂಡು, ಆತನಿಗೆ ಅತ್ಯಧಿಕ ಧನವನ್ನು ಕೊಟ್ಟು ಅವನನ್ನು ಹಿಂತಿರುಗಿ ಕಳುಹಿಸಿಕೊಟ್ಟನು. ದುಶ್ಶಲೆಯು ಮುಮ್ಮಗನನ್ನು, ಆ ಸಹೋದರಿಯಲ್ಲಿ ತನಗಿದ್ದ ಪ್ರೀತಿಯಿಂದ, ಆತನ ತಂದೆಯ ರಾಜ್ಯದಲ್ಲಿ ಸ್ಥಾಪನ ಮಾಡಿಸಿದನು. ಹೀಗೆಯೇ ಯುಧಿಷ್ಠಿರನು ಎಲ್ಲಾ ರಾಜರನ್ನೂ ಬೇರೆ ಬೇರೆಯಾಗಿ ಪೂಜಿಸಿ ಕಳುಹಿಸಿದಮೇಲೆ ಮಹಾತ್ಮನಾದ ಶ್ರೀಕೃಷ್ಣನನ್ನೂ, ಬಲರಾಮನನ್ನೂ, ಪ್ರದ್ಯುಮ್ನನೇ ಮುಂತಾದ ಇತರ ಸಾವಿರಾರುಮಂದಿ ವೃಷ್ಣಿಕುಲ ವೀರರನ್ನೂ ಉಚಿತರೀತಿಯಲ್ಲಿ ಪೂಜಿಸಿದನು. ಹೀಗೆ ಹೇರಳವಾದ ಅನ್ನದಾನ, ಧನದಾನ, ರತ್ನದಾನಗಳಿಂದಲೂ, ಸುರೆ, ಮತ್ತು ಮೈರೇಯಗಳೆಂಬ ಮದ್ಯರಸಸಮುದ್ರಗಳಿಂದಲೂ, ಆ ಧರ್ಮರಾಜನ ಯಾಗವು ಅತಿಸಂಭ್ರಮದಿಂದ ನಡೆಯಿತು.

ಓ ಭರತಕುಲೋತ್ತಮಾ! ಆ ಯಾಗದಲ್ಲಿ ಎಲ್ಲೆಲ್ಲಿ ನೋಡಿದರೂ ತುಪ್ಪದ ಮಡುಗಳೂ, ಅನ್ನರಾಶಿಯ ಬೆಟ್ಟಗಳೂ, ರಸಾಯನದ ನದಿಗಳೂ, ಪ್ರವಹಿಸುತ್ತಿದ್ದುವು. ಅಲ್ಲಿ ಆಗಾಗ ಸಿದ್ಧಪಡಿಸಲ್ಪಡುವ, ಮತ್ತು ಅಲ್ಲಲ್ಲಿ

ಭುಜಿಸಲ್ಪಡುತ್ತಿರುವ ಭಕ್ಷ್ಯ, ಖಾಂಡವ, ರಾಗಗಳೆಂಬ ಪಾಕವಿಶೇಷಗಳಿಗೂ, ಮಾಂಸಕ್ಕಾಗಿ ವಧಿಸಲ್ಪಡುತ್ತಿದ್ದ ಪ್ರಾಣಿಗಳಿಗೂ ಮಿತಿಯಿರಲಿಲ್ಲ. ಆಗ ಆ ಯಾಗಶಾಲೆಯಲ್ಲಿ, ತಿಂದು ಕುಡಿದು ಮತ್ತೇರಿದವರೂ, ಮೈಮರೆತವರೂ, ಸಂತೋಷಗೊಂಡವರೂ, ಲಕ್ಷಣವತಿಯರಾದ ಯುವತಿಯರೂ ಎಲ್ಲೆಲ್ಲಿಯೂ ಕಾಣಿಸುತ್ತಿದ್ದರು. ಮೃದಂಗ ಶಂಖಗಳ ಧ್ವನಿಗಳಿಂದ ಅದು ಮನಸ್ಸಿಗೆ ಆನಂದವನ್ನುಂಟುಮಾಡುತ್ತಿತ್ತು. ಆ ಯಾಗದಲ್ಲಿ ಎಲ್ಲಾ ಕಡೆಯೂ, 'ಕೊಡಿರಿ! ಇನ್ನೂ ಕೊಡಿರಿ! ಭುಜಿಸಿರಿ! ಭುಜಿಸಿರಿ! ಎಂಬ ಶಬ್ದವು ಹಗಲೂ, ರಾತ್ರಿಯೂ ಎಡೆಬಿಡದೆ ಕೇಳಿಸುತ್ತಿದ್ದಿತು. ಮಹೋತ್ಸವದಲ್ಲಿ ಹೇಗೋ ಹಾಗೆ ಸಂತೋಷ ಕೋಲಾಹಲಗಳನ್ನು ಮಾಡುತ್ತಿರುವ ಜನಗಳಿಂದ ತುಂಬಿದ ಆ ಯಾಗವೈಭವವನ್ನು ಕುರಿತು, ಹಲವು ದೇಶಗಳಲ್ಲಿ ಜನರು ಆಡಿಕೊಳ್ಳುತ್ತಿದ್ದರು. ಯುಧಿಷ್ಠಿರನು ಧನಧಾರೆಗಳನ್ನೂ, ರತ್ನ ಸಮೂಹಗಳನ್ನೂ, ರಸಗಳನ್ನೂ ತೃಪ್ತಿಯಾಗುವವರೆಗೂ ಸುರಿದು, ತನ್ನ ಪಾಪಗಳೆಲ್ಲವನ್ನೂ ನೀಗಿ, ಕೃತಾರ್ಥನಾಗಿ ಯಾಗಶಾಲೆಯಿಂದ ಪಟ್ಟಣಕ್ಕೆ ಹಿಂತಿರುಗಿದನು' ಎಂದನು.

ಇದು ತೊಂಭತ್ತನೆಯ ಅಧ್ಯಾಯವು.

ನಕುಲಾಖ್ಯಾನವು. ಸುವರ್ಣಪಾರ್ಶ್ವವುಳ್ಳ ಒಂದು ಮುಂಗುಸಿಯು ಬಿಲದಿಂದ ಬಂದು, ಆ ಯಾಗವನ್ನು ನಿಂದಿಸುತ್ತ, ಉಂಛವೃತ್ತಿಬ್ರಾಹ್ಮಣನೊಬ್ಬನು ಕೊಟ್ಟ ಹಿಟ್ಟಿನ ದಾನವೇ ಅದಕ್ಕಿಂತ ಮೇಲೆಂದು ಕೊಂಡಾಡಿದುದು.

ಆಗ ಜನಮೇಜಯನು ಧರ್ಮರಾಜನ ಯಾಗದಲ್ಲಿ ಬೇರೆ ಯಾವುದಾದರೂ ವಿಶೇಷವಿದ್ದರೆ ಅದನ್ನು ತಿಳಿಸಬೇಕೆಂದು ಕೇಳಲು, ವೈಶಂಪಾಯನನು "ರಾಜಶ್ರೇಷ್ಠನೇ! ಆ ಅಶ್ವಮೇಧ ಮಹಾಯಾಗವು ಮುಗಿದೊಡನೆ ನಡೆದ ಒಂದು ದೊಡ್ಡ ಆಶ್ಚರ್ಯವಿಷಯವನ್ನು ತಿಳಿಸುವೆನು ಕೇಳು. ಧರ್ಮರಾಜನು ಬ್ರಾಹ್ಮಣಶ್ರೇಷ್ಠರನ್ನೂ, ಜ್ಞಾತಿಗಳನ್ನೂ, ಬಂಧುಗಳನ್ನೂ, ದೀನರನ್ನೂ, ಕುರುಡರನ್ನೂ, ಅನಾಥ

ರನ್ನೂ ತೃಪ್ತಿಪಡಿಸಿದಮೇಲೆ, ತಿರುಗಿತಿರುಗಿ ಅರ್ಥಿಗಳಾರಾದರೂ ಇದ್ದರೆ ದಾನಮಾಡುವುದಾಗಿ ಎಲ್ಲಾ ದಿಕ್ಕುಗಳಲ್ಲಿಯೂ ಸಾರಿಸುತ್ತಿದ್ದನು. ಆಗ ಧರ್ಮರಾಜನ ತಲೆಯಮೇಲೆ ಪುಷ್ಪವರ್ಷವು ಸುರಿಯುತ್ತಿದ್ದಿತು. ಇಷ್ಟರಲ್ಲಿಯೇ ಸುವರ್ಣಪಾರ್ಶ್ವವುಳ್ಳ ಒಂದು ಮುಂಗುಸಿಯು ಸಮೀಪದಲ್ಲಿದ್ದ ಒಂದು ಬಿಲದಿಂದ ಹೊರಗೆ ಬಂದು, ಸಿಡಿಲಿನಂತೆ ಒಂದು ದೊಡ್ಡ ಧ್ವನಿಯನ್ನು ಹೊರಡಿಸಿತು. ಹೀಗೆ ಮೃಗಪಕ್ಷಿಗಳೆಲ್ಲ ಹೆದರುವಂತೆ ಪ್ರಬಲ ಧ್ವನಿಯನ್ನು ಮಾಡಿ, ಸದಸ್ಯರೆಲ್ಲರ ದೃಷ್ಟಿಯನ್ನೂ ತನ್ನ ಕಡೆಗೆ ಆಕರ್ಷಿಸಿಕೊಂಡಮೇಲೆ, ಆ ಮುಂಗುಸಿಯು ಮನುಷ್ಯರಂತೆ ಮಾತಾಡಲಾರಂಭಿಸಿ ' ಓ ರಾಜರೇ ! ನಿಮ್ಮ ಈ ಯಾಗವು ಕುರುಕ್ಷೇತ್ರದಲ್ಲಿ *ಉಂಛವೃತ್ತಿಯಿಂದ ಜೀವಿಸುತ್ತಿದ್ದ ಕೇವಲ ಬಡಬ್ರಾಹ್ಮಣನೊಬ್ಬನು ಮಾಡಿದ ಒಂದು ಸೇರು ಹಿಟ್ಟಿನ ದಾನಕ್ಕೆ ಎಂದಿಗೂ ಸಮವಾಗಲಾರದು ' ಎಂದು ಹೇಳಿತು. ಮುಂಗುಸಿಯ ಆ ವಾಕ್ಯವನ್ನು ಕೇಳಿ, ಅಲ್ಲಿ ನೆರೆದಿದ್ದ ಎಲ್ಲಾ ಬ್ರಾಹ್ಮಣಶ್ರೇಷ್ಠರೂ ವಿಸ್ಮಿತರಾದರು. ಅವರೆಲ್ಲರೂ ಆ ಮುಂಗುಸಿಯ ಸಮೀಪಕ್ಕೆ ಬಂದು, ಅದನ್ನು ಕುರಿತು ' ಎಲೆ ಪ್ರಾಣಿಯೇ ! ಸಾಧುಗಳು ಸೇರಿರುವ ಈ ಯಾಗಕ್ಕೆ ನೀನು ಎಲ್ಲಿಂದ ಬಂದೆ ? ನಿನ್ನ ಮಹಿಮೆಯೆಂತದು ? ನಿನಗೆ ತಿಳಿದ ವಿದ್ಯೆಯಾವುದು ? ನಿನಗೆ ಆಧಾರವಾವುದು ? ನಮ್ಮ ಯಾಗವನ್ನು ನಿಂದಿಸುತ್ತಿರುವ ನಿನ್ನ ನಿಜವನ್ನು ನಾವು ತಿಳಿಯುವ ಬಗೆ ಹೇಗೆ ? ಯಾಗಕ್ಕೆ ಬೇಕಾದ ಸಕಲ ಸಂಭಾರಗಳನ್ನೂ ಒದಗಿಸಿ ನಾವು ಶಾಸ್ತ್ರವಿಧಿಯನ್ನು ತಪ್ಪದೆ ಈ ಯಾಗವನ್ನು ಮುಗಿಸಿದೆವು. ಶಾಸ್ತ್ರವನ್ನೂ, ನ್ಯಾಯವನ್ನೂ ಅನುಸರಿಸಿ ನಾವು ಮಾಡಬೇಕಾದುದನ್ನೆಲ್ಲ ಮಾಡಿದೆವು. ಈ ಯಾಗದಲ್ಲಿ ಪೂಜನೀಯರಾದವರೆಲ್ಲರೂ ಶಾಸ್ತ್ರನಿಯಮದಂತೆ ತಪ್ಪದೆ ಪೂಜಿಸಲ್ಪಟ್ಟರು. ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಆಹುತಿಯನ್ನೂ, ಹೋಮವನ್ನೂ ನಡೆಸಿದೆವು. ದಾನಮಾಡಬೇಕಾದುದನ್ನೆಲ್ಲ ದಾನಮಾಡಿದೆವು. ನಾನಾಬಗೆಯ ದಾನಗಳಿಂದ ಬ್ರಾಹ್ಮಣರನ್ನೂ, ಒಳ್ಳೆಯ ಯುದ್ಧದಿಂದ ಕ್ಷತ್ರಿಯರನ್ನೂ, ಶ್ರಾದ್ಧಗಳಿಂದ ಪಿತಾಮಹರನ್ನೂ, ರಕ್ಷಣೆಯಿಂದ ವೈಶ್ಯರನ್ನೂ, ವಸ್ತ್ರಗಳಿಂದ ಉತ್ತಮಸ್ತ್ರೀಯ

---

* ಉದಿರಿದ ಧಾನ್ಯವನ್ನು ಒಂದೊಂದಾಗಿ ಆರಿಸುವುದು.

ರನ್ನೂ, ಕರುಣೆಯಿಂದ ಶೂದ್ರರನ್ನೂ, ದಾನಕೊಟ್ಟು ಮಿಕ್ಕ ವಸ್ತುಗಳಿಂದ ಇತರ ಸಾಮಾನ್ಯ ಜನರನ್ನೂ ಸಂತೋಷಪಡಿಸಿದೆವು. ಯುಧಿಷ್ಠಿರನ ಶುದ್ಧತೆಯಿಂದ ಜ್ಞಾತಿಗಳನ್ನೂ, ಪುಣ್ಯಕರವಾದ ಹವಿಸ್ಸುಗಳಿಂದ ದೇವತೆಗಳನ್ನೂ, ರಕ್ಷಣೆಗಳಿಂದ ಶರಣಾಗತರನ್ನೂ ಸಂತೋಷಪಡಿಸಿದೆವು. ಬ್ರಾಹ್ಮಣರಮೇಲೆ ಆಣೆಯಿಟ್ಟು ಕೇಳುವೆವು. ಈ ಯಾಗದಲ್ಲಿ ಲೋಪವೇನಿದ್ದರೂ ಬ್ರಾಹ್ಮಣರಾದ ನಮ್ಮಲ್ಲಿ ಕರುಣೆಯಿಟ್ಟು ತಿಳಿಸು. ನೀನು ಕಂಡಿದ್ದರೂ, ಕೇಳಿದ್ದರೂ ಇದರಲ್ಲಿರುವ ದೋಷವೇನೆಂಬುದನ್ನು ಯಥಾವತ್ತಾಗಿ ತಿಳಿಸು. ನೀನು ಸತ್ಯವಾದಿಯಂತೆಯೂ, ಮಹಾಜ್ಞಾನಿಯಂತೆಯೂ ತೋರುತ್ತಿರುವೆ. ನಿನ್ನ ಆಕಾರವೂ ಸುಂದರವಾಗಿರುವುದು. ಅಲ್ಲದೆ ಈಗ ಬ್ರಾಹ್ಮಣರ ಗುಂಪಿನಲ್ಲಿರುವೆ. ನೀನು ಬಾಯಿಂದಾಡಿ ತಿಳಿಸಲು ಶಕ್ತನಾಗಿಯೂ ಇರುವೆ. ಬೇಗನೆ ತಿಳಿಸು' ಎಂದು ಕೇಳಿದರು. ಅದನ್ನು ಕೇಳಿ ಆ ಮುಂಗಸಿಯು ನಗುತ್ತ 'ನಾನು ಹೇಳುವ ಮಾತು ಸುಳ್ಳಲ್ಲ. ಗರ್ವದಿಂದ ಹೇಳಿದುದೂ ಅಲ್ಲ. ನಿಜವಾಗಿ ನಿಮ್ಮ ಈ ಯಾಗವು ಉಂಛವೃತ್ತಿಬ್ರಾಹ್ಮಣನು ಕೊಟ್ಟ ಒಂದುಸೇರು ಹಿಟ್ಟಿಗೆ ಸಮಾನವಾಗಲಾರದು. ನಾನು ಅವಶ್ಯವಾಗಿ ಇದರ ನಿಜಾಂಶವನ್ನು ನಿಮಗೂ ತಿಳಿಸದೆ ತೀರದು. ಸಾವಧಾನವಾಗಿ ಗಮನಿಸಿ ಕೇಳಿರಿ. ಕುರುಕ್ಷೇತ್ರದಲ್ಲಿ ಕಾಡಿನಲ್ಲಿ ಬಿದ್ದ ಕಾಳುಗಳನ್ನಾರಿಸಿ ತಂದು, ಉಂಛವೃತ್ತಿಯಿಂದ ಜೀವಿಸುತ್ತಿದ್ದ ಬ್ರಾಹ್ಮಣನೊಬ್ಬನು, ತನ್ನ ಪತ್ನೀಪುತ್ರ ಪೌತ್ರರೊಡನೆ ಸ್ವರ್ಗಕ್ಕೆ ಹೋದುದನ್ನು ನಾನೇ ಕಣ್ಣಾರೆ ನೋಡಿಬಂದಿರುವೆನು. ಆಶ್ಚರ್ಯಕರವೂ, ಉತ್ತಮವೂ ಆದ ಆ ಚರಿತ್ರೆಯನ್ನೂ, ಆ ಸಂದರ್ಭದಲ್ಲಿಯೇ ಈ ನನ್ನ ಶರೀರದಲ್ಲಿ ಕೆಲವು ಭಾಗವು ಸುವರ್ಣಮಯವಾದ ರೀತಿಯನ್ನೂ ತಿಳಿಸುವೆನು ಕೇಳಿರಿ' ಎಂದಿತು.

ಇದು ತೊಂಭತ್ತೊಂದನೆಯ ಅಧ್ಯಾಯವು.



ಬ್ರಾಹ್ಮಣನು ಧರ್ಮದೇವತೆಗೆ ಒಂದು ಸೇರು ಹಿಟ್ಟನ್ನು ದಾನಮಾಡಿದುದರ ಮಹಿಮೆಯನ್ನು ತಿಳಿಸಿ, ಮುಂಗುಸಿಯು ಕಣ್ಮರೆಯಾದುದು.

'ಓ ಬ್ರಾಹ್ಮಣರೇ! ಒಬ್ಬ ಬ್ರಾಹ್ಮಣನು ನ್ಯಾಯರೀತಿಯಲ್ಲಿ ಸಂಪಾದಿಸಿದುದನ್ನು ದಾನಮಾಡಿದುದರಿಂದ ಪಡೆದ ಉತ್ತಮಫಲವನ್ನೂ, ಧರ್ಮಸೂಕ್ಷ್ಮವನ್ನೂ ನಿಮಗೆ ತಿಳಿಸುವೆನು ಕೇಳಿರಿ. ಧರ್ಮಜ್ಞರಾದ ಅನೇಕ ಮಹಾತ್ಮರಿಂದ ತುಂಬಿ, ಧರ್ಮಕ್ಷೇತ್ರವೆನಿಸಿದ, ಕುರುಕ್ಷೇತ್ರದಲ್ಲಿ ಹಿಂದೆ ಬ್ರಾಹ್ಮಣನೊಬ್ಬನು *ಕಪೋತವೃತ್ತಿಯನ್ನು ಅನುಸರಿಸಿ ಜೀವನಮಾಡುತ್ತಿದ್ದನು. ಆತನು ಶುದ್ಧವಾದ ನಡತೆಯುಳ್ಳವನು. ಧಾರ್ಮಿಕನು! ಜಿತೇಂದ್ರಿಯನು! ತನ್ನ ಪತ್ನೀ ಪುತ್ರ ಪೌತ್ರರೊಡನೆ ವಾಸಮಾಡುತ್ತ ಅಲ್ಲಿ ತಪಸ್ಸುಮಾಡುತ್ತಿದ್ದನು. ಆ ಬ್ರಾಹ್ಮಣನು ಯಾವಾಗಲೂ ಅವರೊಡನೆ †ಹಗಲಿನ ಆರನೆಯ ಭಾಗದಲ್ಲಿ ಭುಜಿಸುತ್ತಿದ್ದನು. ಕೆಲವು ದಿವಸಗಳು ಆತನಿಗೆ ಆ ಆರನೆಯ ಕಾಲದಲ್ಲಿಯೂ ಆಹಾರವು ದೊರಕುತ್ತಿರಲಿಲ್ಲ. ಆಗ ಆ ಬ್ರಾಹ್ಮಣನು ತಿರುಗಿ ಮರುದಿನದ ಆರನೆಯ ಕಾಲದಲ್ಲಿಯೇ ಭುಜಿಸುತ್ತಿದ್ದನು. ಹೀಗಿರುವಾಗ ಭಯಂಕರವಾದ ದುರ್ಭಿಕ್ಷವು ತಲೆದೋರಿತು. ಕಪೋತಧರ್ಮವನ್ನು ಅನುಸರಿಸಿದ್ದ ಆತನಿಗೆ ಸಂಗ್ರಹಿಸಿಟ್ಟ ಧಾನ್ಯವೂ ಇಲ್ಲದಿದ್ದಿತು. ಆಗ ಓಷಧಿಗಳೂ, ಬೀಜಗಳೂ ಹಾಗೆಯೇ ಒಣಗಿ, ಆತನಿಗೆ ಆಹಾರವಸ್ತುವೇ ದೊರೆಯದಂತಾಯಿತು. ಸಕಾಲಕ್ಕೆ ಆತನಿಗೆ ಭೋಜನವಿಲ್ಲದೆ ಹೋಯಿತು. ಆಗ ಆ ಬ್ರಾಹ್ಮಣನು ಹಸಿವನ್ನು ತಡೆಯಲಾರದೆ, ಒಮ್ಮೆ ಶುಕ್ಲಪಕ್ಷದ ಮಧ್ಯಾಹ್ನಕಾಲದಲ್ಲಿ ಸೂರ್ಯನು ತಪಿಸುತ್ತಿರುವಾಗ ಉಂಛವೃತ್ತಿಗಾಗಿ ಹೊರಟನು. ಮೊದಲೇ ತಪಸ್ಸಿನಿಂದ ಕಂದಿ ಕೃಶನಾಗಿದ್ದ ಆ ಬ್ರಾಹ್ಮಣನಿಗೆ, ಬಿಸಿಲಿನ ತಾಪ

---

* ಉಂಛವೃತ್ತಿ, ಕಪೋತವೃತ್ತಿಗಳೆರಡೂ ಒಂದೇ! ಆದರೆ ಕಪೋತವೃತ್ತಿಯಲ್ಲಿ ಆಯ್ದುತಂದ ಕಾಳುಗಳನ್ನು ಮರುದಿನಕ್ಕಾಗಿ ಸಂಗ್ರಹಿಸಿಡಬಾರದು. ಉಂಛವೃತ್ತಿಗೆ ಆ ನಿಯಮವಿಲ್ಲ.

† ಹಗಲನ್ನು ಎಂಟುಭಾಗಮಾಡಿ, ಅದರಲ್ಲಿ ಆರನೆಯ ಭಾಗವೆಂದರ್ಥವು. ಹದಿನೆಂಟೂಮುಕ್ಕಾಲು ಗಳಿಗೆಗೆಮೇಲೆ ಇಪ್ಪತ್ತೆರಡೂವರೆ ಗಳಿಗೆಯೊಳಗಿನ ಕಾಲವು.

ವೊಂದು ಕಡೆ! ಹಸಿವೊಂದು ಕಡೆ! ಇವುಗಳಿಂದ ಆವನು ಮತ್ತಷ್ಟು ಬಳಲಿದನು. ಎಷ್ಟು ಹುಡುಕಿದರೂ ಆ ಬ್ರಾಹ್ಮಣನಿಗೆ ಉಂಛವು ದೊರೆಯಲಿಲ್ಲ. ಆ ಬ್ರಾಹ್ಮಣೋತ್ತಮನು ತನ್ನ ಪರಿಜನರೊಡನೆ ಅತ್ಯಂತ ಕಷ್ಟದಿಂದ ಹೇಗೋ ಪ್ರಾಣಧಾರಣೆಮಾಡಿಕೊಂಡು ಆ ದಿನವನ್ನು ಕಳೆದನು. ಆ ತಪಸ್ವಿಯು (ಮರುದಿನ) ಆರನೆಯ ಕಾಲವು ಕಳೆಯುವಷ್ಟರಲ್ಲಿ, ಒಂದು ಸೇರು ಯವಧಾನ್ಯವನ್ನು ಹೇಗೋ ಸಂಪಾದಿಸಿತಂದನು. ಆತನ ಮನೆಯವರೆಲ್ಲರೂ ಆ ಧಾನ್ಯವನ್ನರೆದು ಹಿಟ್ಟುಮಾಡಿದರು. ಆಮೇಲೆ ಅವರು ತಮ್ಮ ಜಪಹೋಮಾದಿ ನಿತ್ಯಾಹ್ನಿಕಗಳನ್ನು ವಿಧ್ಯುಕ್ತರೀತಿಯಲ್ಲಿ ಮಾಡಿ, ಆ ಹಿಟ್ಟನ್ನು ಸಮವಾಗಿ ನಾಲ್ಕುಪಾಲು ಮಾಡಿಟ್ಟುಕೊಂಡು, ತಿನ್ನುವಸಮಯಕ್ಕೆ ಸರಿಯಾಗಿ, ಒಬ್ಬ ಬ್ರಾಹ್ಮಣನು ಭೋಜನಾರ್ಥಿಯಾಗಿ ಬಂದನು. ಆ ಅತಿಥಿಯನ್ನು ಕಂಡು ಅವರಿಗೆ ಅತ್ಯಾನಂದವಾಯಿತು. ಆ ಕುಟುಂಬದವರೋ ಶುದ್ಧಮನಸ್ಕರು! ಇಂದ್ರಿಯಗಳನ್ನಡಗಿಸಿದವರು! ಶ್ರದ್ಧಾಳುಗಳು! ಮನೋನಿಗ್ರಹವುಳ್ಳವರು! ಸಾಧುಗಳು! ಮಾತ್ಸರ್ಯರಹಿತರು! ಗರ್ವ ಮದ ಕ್ರೋಧಗಳನ್ನು ಬಿಟ್ಟವರು! ಧರ್ಮಜ್ಞರು! ಅಂತಹ ಆ ಗೃಹಸ್ಥರು, ಬಂದ ಆ ಅತಿಥಿಯನ್ನು ನಮಸ್ಕರಿಸಿ, ಅವನ ಯೋಗಕ್ಷೇಮಗಳನ್ನು ವಿಚಾರಿಸಿದರು. ಒಬ್ಬರಿಗೊಬ್ಬರು (ಸಮವಾದ) ತಮ್ಮ ಬ್ರಹ್ಮಚರ್ಯವಿಚಾರವನ್ನೂ ಗೋತ್ರವನ್ನೂ ತಿಳಿಸಿಕೊಂಡರು. ಆಮೇಲೆ ಆ ಉಂಛವೃತ್ತಿಬ್ರಾಹ್ಮಣನು, ಹಸಿದುಬಂದ ಆ ಅತಿಥಿಯನ್ನು ಆಶ್ರಮಕ್ಕೆ ಕರೆತಂದು 'ಇದೋ! ನಿನಗೆ ಅರ್ಘ್ಯವು. ಇದು ಪಾದ್ಯವು. ಇದು ಆಸನವು. ಇದು ಶುದ್ಧವಾಗಿ ನಿಯಮದಿಂದ ಸಂಪಾದಿಸಲ್ಪಟ್ಟ ಹಿಟ್ಟು! ಇವುಗಳೆಲ್ಲವನ್ನೂ ಸ್ವೀಕರಿಸು. ನಿನಗೆ ಮಂಗಳವಾಗಲಿ' ಎಂದು ಹೇಳಿ, ತನ್ನ ಪಾಲಿಗೆ ಬಂದ ಕಾಲುಭಾಗದ ಹಿಟ್ಟನ್ನು ಆ ಅತಿಥಿಗೆ ಕೊಟ್ಟುಬಿಟ್ಟನು. ಆ ಕಾಲುಸೇರು ಹಿಟ್ಟನ್ನೂ ಒಬ್ಬನೇ ಭುಜಿಸಿದರೂ ಆ ಅತಿಥಿಗೆ ತೃಪ್ತಿಯಾಗಲಿಲ್ಲ. ಉಂಛವೃತ್ತಿಬ್ರಾಹ್ಮಣನು ಇನ್ನೂ ಹಸಿದಿರುವ ಬ್ರಾಹ್ಮಣನನ್ನು ನೋಡಿ, 'ಅಯ್ಯೋ! ಇನ್ನು ಈತನನ್ನು ತೃಪ್ತಿಪಡಿಸುವುದು ಹೇಗೆ?' ಎಂದು ಚಿಂತಿಸುತ್ತಿದ್ದನು. ಆಗ ಆತನ ಪತ್ನಿಯು 'ನನ್ನ ಭಾಗವನ್ನೂ ಅವನಿಗೇ ಕೊಟ್ಟುಬಿಡು. ಆ ಬ್ರಾಹ್ಮಣನು ತೃಪ್ತಿಹೊಂದಿ

ಸಂತೋಷದಿಂದ ಹೋಗಲಿ' ಎಂದಳು. ಆಗ ಆ ಉಂಛವೃತ್ತಿಬ್ರಾಹ್ಮಣನು ಅವಳು ಬಹುದಿನಗಳಿಂದ ಆಹಾರವಿಲ್ಲದೆ ಬಹಳವಾಗಿ ಹಸಿವುಗೊಂಡಿರುವುದನ್ನು ತಿಳಿದು, ಆ ಹಿಟ್ಟನ್ನು ತೆಗೆದು ಅತಿಥಿಗೆ ಕೊಡಲು ಇಷ್ಟಪಡಲಿಲ್ಲ. ವಯಸ್ಸು ಕಳೆದವಳಾಗಿ, ಆಹಾರವಿಲ್ಲದೆ ಹಸಿವಿನಿಂದಲೂ ಪೀಡಿತಳಾಗಿ, ದೇಹದಲ್ಲಿ ಅಸ್ಥಿ ಚರ್ಮಗಳು ಮಾತ್ರ ಉಳಿದು, ಕೇವಲ ಶೋಚನೀಯಸ್ಥಿತಿಯಲ್ಲಿದ್ದು, ನಿಶ್ಪ್ರಾಣಳಾಗಿ ನಡುಗುತ್ತಿದ್ದ ಆಕೆಯನ್ನು ನೋಡಿ 'ಓ ಕೋಮಲಾಂಗೀ! ಕ್ರಿಮಿ ಕೀಟ ಮೃಗ ಪಕ್ಷ್ಯಾದಿ ಜಂತುಗಳಿಗೆಕೂಡ ಪತ್ನಿಯರು ಪ್ರೇಮದಿಂದ ಪೋಷಿಸಲ್ಪಡುವುದಕ್ಕೆ ಯೋಗ್ಯರು. ಹೀಗಿರುವಾಗ ನೀನು ಹೀಗೆ ಹೇಳುವುದು ಸರಿಯಲ್ಲ. ಲೋಕದಲ್ಲಿ ಹೆಂಡತಿಯ ದಯೆಗೆ ಪಾತ್ರನಾಗಿ, ಅವಳಿಂದ ರಕ್ಷಿಸಲ್ಪಡುವ, ಅಥವಾ ಅವಳ ಪೋಷಣೆಗೊಳಗಾದ ಪುರುಷನಿಗೆ ಇಹಲೋಕದಲ್ಲಿ ಕೀರ್ತಿಯೂ ಇಲ್ಲ, ಪರಲೋಕದಲ್ಲಿ ಸದ್ಗತಿಯೂ ಇಲ್ಲವೆಂದು ತಿಳಿ. ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳಿಗೆ ಸಂಬಂಧಪಟ್ಟ ಕಾರ್ಯಗಳೂ, ಅತಿಥಿಸೇವೆಯೂ, ಕುಲವೃದ್ಧಿಯೂ, ಪಿತೃಗಳಿಗೂ, ತನಗೂ ವಿಧ್ಯುಕ್ತವಾದ ಧರ್ಮವೂ, ಪುರುಷರಿಗೆ ಪತ್ನಿಯ ಅಧೀನವಾಗಿರುವುವು. ಹೆಂಡತಿಯನ್ನು ರಕ್ಷಿಸುವುದಕ್ಕೂ, ಅದಕ್ಕೆ ಬೇಕಾದ ಕಾರ್ಯಗಳನ್ನು ಮಾಡುವುದಕ್ಕೂ ಶಕ್ತಿಯಿಲ್ಲದ ಪುರುಷನು, ಅಪಕೀರ್ತಿಗೂ, ನರಕಕ್ಕೂ ಗುರಿಯಾಗುವನು' ಎಂದನು. ಅದನ್ನು ಕೇಳಿ ಆಕೆಯು 'ನಾಥಾ! ಧರ್ಮಾರ್ಥಗಳು ನಮ್ಮಿಬ್ಬರಿಗೂ ಸಮಾನವಲ್ಲವೆ? ಆದುದರಿಂದ ನನಗಾಗಿ ಕೊಟ್ಟಿರುವ ಈ ನಾಲ್ಕನೆಯ ಒಂದು ಭಾಗದ ಹಿಟ್ಟನ್ನೂ ಉಪಯೋಗಿಸು. ಕೃಪೆಮಾಡು. ಸ್ತ್ರೀಯರಿಗೆ ಸತ್ಯ, ಕಾಮ, ಧರ್ಮಗಳೂ, ಗುಣಗಳಿಂದ ಆರ್ಜಿಸಿದ ಸ್ವರ್ಗವೂ, ಬೇರೆ ಅಪೇಕ್ಷೆಗಳೂ ಪತಿಯನ್ನಾಶ್ರಯಿಸಿರುವುವು. ಮಾತಾಪಿತೃಗಳ ಶುಕ್ಲಶೋಣಿತಗಳಲ್ಲಿ ಜನಿಸಿದ (ಸ್ತ್ರೀಯರಿಗೆ) ಪತಿಯೇ ಉತ್ತಮದೈವವು. ಸ್ತ್ರೀಯರಿಗೆ ಕಾಮಸುಖವೂ, ಪುತ್ರಪ್ರಾಪ್ತಿ ಮುಂತಾದುವೂ ಪತಿಯ ಅನುಗ್ರಹದಿಂದಲೇ ಉಂಟಾಗುವುವು. ನೀನು ನನ್ನನ್ನು ಪಾಲಿಸುತ್ತಿರುವುದರಿಂದ ಪತಿಯೆಂದೂ, ನನ್ನನ್ನು ಪೋಷಿಸುತ್ತಿರುವುದರಿಂದ ಭರ್ತನೆಂದೂ, ನನಗೆ ಪುತ್ರನನ್ನು ಕೊಡುವುದರಿಂದ ವರದಾಯಕನೆಂದೂ ಕರೆಯಲ್ಪಡುವೆ.

ಆದುದರಿಂದ ನನ್ನ ಭಾಗದ ಹಿಟ್ಟನ್ನೂ ಈತನಿಗೆ ಕೊಡು. ನೀನೂ ವಯೋವೃದ್ಧನಾಗಿ, ಜರೆಯಿಂದ ಜೀರ್ಣನಾಗಿರುವೆ. ಕ್ಷುದ್ಬಾಧೆಯಿಂದ ಪೀಡಿತನಾಗಿರುವೆ. ನಿನಗೆ ದೇಹಬಲವು ಕಡಿಮೆಯಾಗಿ, ಉಪವಾಸಾದಿ ವ್ರತಗಳಿಂದ ಬಹು ಕೃಶನಾಗಿರುವೆ' ಎಂದಳು. ಆಮೇಲೆ ಆ ಬ್ರಾಹ್ಮಣನು ತನ್ನ ಪತ್ನಿಯ ಭಾಗದ ಹಿಟ್ಟನ್ನೂ ತೆಗೆದು 'ಓ ಬ್ರಾಹ್ಮಣಾ! ಸಾಧುಶ್ರೇಷ್ಠಾ! ಈ ಹಿಟ್ಟನ್ನೂ ಸ್ವೀಕರಿಸು' ಎಂದನು. ಆ ಅತಿಥಿಬ್ರಾಹ್ಮಣನು ಅದನ್ನೂ ತೆಗೆದು ತಿಂದನು. ಆದರೂ, ಆತನಿಗೆ ಹಸಿವು ಅಡಗಲಿಲ್ಲ. ಉಂಛವೃತ್ತಿಯ ಬ್ರಾಹ್ಮಣನಿಗೆ ಆತನನ್ನು ನೋಡಿ ವ್ಯಾಕುಲವುಂಟಾಯಿತು. ಆಗ ಆ ಬ್ರಾಹ್ಮಣನ ಮಗನು 'ಅಪ್ಪಾ! ನೀನು ನನ್ನ ಭಾಗದ ಹಿಟ್ಟನ್ನೂ ತೆಗೆದು ಈ ಅತಿಥಿಗೆ ಕೊಡು. ಇದು ನನಗೆ ಬಹುಪುಣ್ಯಕರವೆಂದೆಣಿಸುವೆನು. ವೃದ್ಧವಯಸ್ಕನಾದ ಪಿತನನ್ನು ಕಷ್ಟದಿಂದ ಕಾಪಾಡುವುದೇ ಪುತ್ರನಿಗೆ ಉಚಿತಧರ್ಮವು. ಪ್ರಯತ್ನಪಟ್ಟು ಯಾವಾಗಲೂ ನಿನ್ನನ್ನು ಕಾಪಾಡುತ್ತಿರುವುದೇ ನನ್ನ ಕರ್ತವ್ಯವು. ಈ ಶ್ರುತಿವಾಕ್ಯವು ಲೋಕವಿದಿತವಾದುದು. ಪ್ರಾಣವನ್ನು ಧರಿಸಿಕೊಂಡಲ್ಲವೇ ನಿನ್ನಿಂದ ತಪಸ್ಸುಮಾಡಲು ಸಾಧ್ಯವು. ಪ್ರಾಣಿಗಳ ಶರೀರದಲ್ಲಿ ಪ್ರಾಣವುಳಿಯುವಂತೆ ಮಾಡುವುದು ಉತ್ತಮಧರ್ಮವಲ್ಲವೆ?' ಎಂದನು. ಅದಕ್ಕೆ ತಂದೆಯು 'ಮಗೂ! ಒಂದುವೇಳೆ ನೀನು ಸಾವಿರವರ್ಷಗಳು ಕಳೆದವನಾಗಿದ್ದರೂ, ನನ್ನ ಭಾಗಕ್ಕೆ ಬಾಲಕನೇ! ಪಿತನು ಪುತ್ರನನ್ನುಂಟುಮಾಡಿ ಆ ಪುತ್ರನಿಂದಲೇ ಕೃತಕೃತ್ಯನಾಗಬೇಕು. ಮಕ್ಕಳಿಗೆ ಹಸಿವು ಹೆಚ್ಚೆಂಬುದನ್ನು ನಾನು ಬಲ್ಲೆನು. ವಯಸ್ಕನಾದ ನಾನು ಹೇಗೋ ಪ್ರಾಣವನ್ನು ಧರಿಸಬಲ್ಲೆನು. ಮಗೂ! ನೀನು ಬಲಶಾಲಿಯಾಗಿರಬೇಕು. ನನಗೆ ವಯಸ್ಸು ಹೆಚ್ಚಾಗಿರುವುದರಿಂದ ಕ್ಷುದ್ಬಾಧೆಯು ಅಷ್ಟು ಅಧಿಕವಾಗಿಲ್ಲ. ನಾನು ದೀರ್ಘಕಾಲ ತಪಸ್ಸುಮಾಡಿರುವೆನು. ನನಗೆ ಮರಣಭಯವಿಲ್ಲ' ಎಂದನು. ಆಗ ಪುತ್ರನು 'ನಾನು ನಿಮ್ಮ ಪುತ್ರನಲ್ಲವೇ? ಪಿತನನ್ನು ಕಾಪಾಡುವುದರಿಂದಲೇ ಪುತ್ರನೆನಿಸುವನು. ತಂದೆಯೇ ಪುತ್ರನಾಗಿ ಜನಿಸುವುದಾಗಿ ಹೇಳುವರು. ಆದುದರಿಂದ ನೀನು ನಿನ್ನಿಂದಲೇ ರಕ್ಷಿಸಿಕೊಂಡಂತಾಗುವುದು' ಎಂದನು. ಪಿತನು 'ಪುತ್ರಾ!

ನೀನು ರೂಪ, ಶೀಲ, ಇಂದ್ರಿಯನಿಗ್ರಹಗಳಲ್ಲಿ ನನಗೆ ಸಮಾನನಾಗಿರುವೆ. ನಾನು ನಿನ್ನನ್ನು ಹಲವು ಬಗೆಗಳಲ್ಲಿ ಪರೀಕ್ಷಿಸಿದೆನು. ಆಗಲಿ! ನಿನ್ನ ಭಾಗದ ಹಿಟ್ಟನ್ನೂ ತೆಗೆದುಕೊಡುವೆನು' ಎಂದು ಸಂತೋಷದಿಂದ ನಗುತ್ತ ಅದನ್ನೂ ಆ ಅತಿಥಿಬ್ರಾಹ್ಮಣನಿಗೇ ಕೊಟ್ಟನು. ಆದರೆ ಆ ಬ್ರಾಹ್ಮಣನಿಗೆ ಆ ಹಿಟ್ಟನ್ನು ತಿಂದರೂ ತೃಪ್ತಿಯಾಗಲಿಲ್ಲ. ಉಂಛವೃತ್ತಿಯ ಬ್ರಾಹ್ಮಣ ನಿಗೆ ಅದರಿಂದ ಲಜ್ಜೆಯಾಯಿತು. ಸಮೀಪದಲ್ಲಿದ್ದ ಆತನ ಸೊಸೆಯು, ಅತಿಥಿಬ್ರಾಹ್ಮಣನಿಗೆ ಪ್ರಿಯವನ್ನುಂಟುಮಾಡುವ ಉದ್ದೇಶದಿಂದ ಮಾವ ನನ್ನು ಕುರಿತು 'ಓ ಆರ್ಯ! ನಿನ್ನ ಪುತ್ರನಿಂದ ನನಗೆ ಪುತ್ರನಾಗಬೇಕು. ನನ್ನ ಭಾಗದ ಹಿಟ್ಟನ್ನೂ ತೆಗೆದು ಈ ಬ್ರಾಹ್ಮಣನಿಗೆ ಕೊಡು. ನಿನ್ನ ಅನುಗ್ರಹದಿಂದ ನನಗೆ ಅಕ್ಷಯವಾದ ಲೋಕಗಳು ದೊರಕುವುವು. ಪಿತ ನು ಯಾವ ಲೋಕಗಳಲ್ಲಿ ನಿರುಪದ್ರವನಾಗಿ ಸುಖಿಸುವನೋ, ಅಂತಹ ಲೋಕಗಳೆಲ್ಲವನ್ನೂ ಆತನು ಪುತ್ರನಿಂದಲೇ ಪಡೆಯುವನು. ಧರ್ಮ ಕಾಮಾರ್ಥಗಳು ಮೂರು, ತ್ರೇತಾಗ್ನಿಗಳು ಮೂರು, ಪುತ್ರ ಪೌತ್ರ ಪ್ರಪೌ ತ್ರರೆಂಬವರು ಮೂವರು, ಮೂರು ಮೂರು ಸಂಖ್ಯೆಯುಳ್ಳ ಈ ವರ್ಗ ತ್ರಯಗಳೂ ನಾಶರಹಿತವಾದ ಸ್ವರ್ಗಕ್ಕೆ ಕಾರಣಗಳು. ಪುತ್ರನು ಪಿತೃಗ ಳನ್ನು ಋಣಬಾಧೆಯಿಂದ ವಿಮುಕ್ತರನ್ನಾಗಿ ಮಾಡುವನೆಂದು ಕೇಳಿರು ವೆನು. ಪುತ್ರ ಪೌತ್ರರಿಂದಲೇ ಆತನು ನಿಜವಾಗಿಯೂ ಉತ್ತಮಲೋಕ ಗಳನ್ನು ಪಡೆಯುವನು' ಎಂದಳು. ಆಗ ಮಾವನು 'ಓ ವ್ರತಾಚಾರ ಶೀಲಳೇ! ಬಿಸಿಲುಗಾಳಿಗಳ ಬಾಧೆಯಿಂದ ರೂಪುಗೆಟ್ಟು, ಕೃಶಳಾದ ನೀನು ಹಸಿದಿರುವುದನ್ನು ನೋಡುತ್ತಿರುವಾಗ, ನಾನು ಧರ್ಮವನ್ನು ಮೀರಿ ನಿನ್ನಿಂದ ಹಿಟ್ಟನ್ನು ಹೇಗೆ ತೆಗೆದುಕೊಳ್ಳಲಿ? ಓ ಕಲ್ಯಾಣೀ! ನೀನು ಹೀಗೆ ಹೇಳುವುದು ಯುಕ್ತವಲ್ಲ. ವ್ರತ, ಶೀಲ, ತಪಸ್ಸುಗಳಲ್ಲಿ ನೆಲೆಗೊಂಡು ಕಷ್ಟ ದಿಂದ ಜೀವಿಸುತ್ತ, ಈ ಆರನೆಯಕಾಲಕ್ಕೂ ಆಹಾರವಿಲ್ಲದ ನಿನ್ನನ್ನು ನಾನು ಹೇಗೆ ನೋಡಲಿ? ಕೋಮಲಾಂಗಿಯಾಗಿ, ಕ್ಷುದ್ಬಾಧೆಯಿಂದ ತಪಿ ಸುತ್ತಿರುವ ನೀನು ಯಾವಾಗಲೂ ನನ್ನಿಂದ ರಕ್ಷಿಸಲ್ಪಡತಕ್ಕವಳಲ್ಲವೇ? ಈಗಲೇ ನೀನು ಉಪವಾಸದಿಂದ ಕಷ್ಟಕ್ಕೆ ಗುರಿಯಾಗಿರುವೆ' ಎಂದನು. ಆಗ ಸೊಸೆಯು 'ಪ್ರಭೂ! ನೀನು ನನ್ನ ಗುರುವಿಗೆ ಗುರುವೂ, ನನ್ನ

ಪಾಲಿನ ದೈವಕ್ಕೆ ದೈವವೂ ಆಗಿರುವುದರಿಂದ ದೇವದೇವನಾಗಿರುವೆ. ಆದುದರಿಂದ ನೀನು ಈ ನನ್ನ ಭಾಗದ ಹಿಟ್ಟನ್ನೂ ತೆಗೆದುಕೊಡು. ಈ ಶರೀರವೂ, ಪ್ರಾಣವೂ, ಧರ್ಮವೂ ಗುರುಸೇವೆಗಾಗಿಯೇ ಇರುವುವು. ನಿನ್ನ ದಯೆಯಿಂದಲೇ ನಾವು ಉತ್ತಮಲೋಕಗಳನ್ನು ಪಡೆಯಬೇಕು. ತನ್ನ ರಕ್ಷಣೆಗೊಳಗಾದವಳೆಂದಾಗಲಿ, ತನ್ನಲ್ಲಿ ಭಕ್ತಿಯುಳ್ಳವಳೆಂದಾಗಲಿ, ನಿನ್ನಿಂದ ಕಾಪಾಡಲ್ಪಡತಕ್ಕವಳೆಂದಾಗಲಿ ಭಾವಿಸಿ, ಈ ಹಿಟ್ಟನ್ನು ತೆಗೆದುಕೋ ' ಎಂದಳು. ಆಗ ಮಾವನು ' ಮಗೂ ! ಪತಿವ್ರತೆಯಾದ ನೀನು ಯಾವಾಗಲೂ ಇಂತಹ ಶೀಲಸ್ವಭಾವಗಳಿಂದ ಪ್ರಕಾಶಿಸುವೆ. ನೀನು ಧರ್ಮವ್ರತನಿಯಮಗಳನ್ನು ಹಿಡಿದು ಗುರುಸೇವೆಯಲ್ಲಿ ಆಸಕ್ತಳಾಗಿರುವೆ. ಓ ಭಾಗ್ಯಶಾಲಿನಿ ! ಆದುದರಿಂದ ನಿನ್ನನ್ನು ಧರ್ಮಾಚರಣೆಯುಳ್ಳವರಲ್ಲಿ ಒಬ್ಬಳನ್ನಾಗಿ ಭಾವಿಸಿ, ನಿನ್ನ ಭಾಗದ ಹಿಟ್ಟನ್ನೂ ತೆಗೆದುಕೊಡುವೆನು. ನಿನ್ನನ್ನು ವಂಚಿಸಲಾರೆನು ' ಎಂದು ಹೇಳಿ ಆ ಹಿಟ್ಟನ್ನೂ ತೆಗೆದು, ಅದನ್ನೂ ಬ್ರಾಹ್ಮಣನಿಗೆ ಕೊಟ್ಟನು. ಅದನ್ನು ತಿಂದಮೇಲೆ ಅತಿಥಿಬ್ರಾಹ್ಮಣನು ತೃಪ್ತನಾಗಿ ಸಂತೋಷಗೊಂಡನು. ಧರ್ಮಸ್ವರೂಪಿಯಾದ ಆ ಅತಿಥಿಬ್ರಾಹ್ಮಣನು ಆಗ ಉಂಛವೃತ್ತಿಯ ಬ್ರಾಹ್ಮಣನನ್ನು ಕುರಿತು ಹೀಗೆ ಹೇಳುವನು.

ಓ ಬ್ರಾಹ್ಮಣೋತ್ತಮಾ ! ಪರಿಶುದ್ಧವೂ, ನ್ಯಾಯ ನೀತಿಧರ್ಮಗಳಿಂದ ಸಂಪಾದಿಸಿದುದೂ ಆದ ಆಹಾರವಸ್ತುವನ್ನು ನಿನ್ನ ಶಕ್ತಿಗೆ ಮೀರಿ ದಾನಮಾಡಿದೆ. ಅದರಿಂದ ನಾನು ಪ್ರೀತನಾದೆನು. ಅದೋ ! ನಿನ್ನ ದಾನವನ್ನು ಸ್ವರ್ಗದಲ್ಲಿ ದೇವತೆಗಳೂ ಉಚ್ಚಧ್ವನಿಯಿಂದ ಹೇಳಿ ಕೊಂಡಾಡುತ್ತಿರುವರು. ಆಕಾಶದಿಂದ ನೆಲದಮೇಲೆ ಬೀಳುತ್ತಿರುವ ಈ ಪುಷ್ಪವರ್ಷವನ್ನು ನೋಡು. ಬ್ರಾಹ್ಮಣೋತ್ತಮಾ ! ದೇವರ್ಷಿಗಳೂ, ದೇವತೆಗಳೂ, ಗಂಧರ್ವರೂ, ದೇವತೆಗಳ ಪರಿಜನರೂ, ದೇವದೂತರೂ, ಬ್ರಹ್ಮರ್ಷಿಗಳೂ, ಬ್ರಹ್ಮಲೋಕವಾಸಿಗಳೂ ವಿಮಾನದಲ್ಲಿ ಕುಳಿತು ನಿನ್ನ ದಾನವನ್ನು ನೋಡಿ ಸಂತೋಷಗೊಂಡು ನಿನ್ನ ದರ್ಶನಕ್ಕಾಗಿ ನಿರೀಕ್ಷಿಸುತ್ತಿರುವರು. ಇನ್ನು ನೀವೆಲ್ಲರೂ ಸ್ವರ್ಗಕ್ಕೆ ಹೊರಡಿರಿ. ನಿನ್ನ ಬ್ರಹ್ಮಚರ್ಯದಿಂದಲೂ, ದಾನ, ಯಜ್ಞ, ತಪಸ್ಸುಗಳಿಂದಲೂ, ಶುದ್ಧವಾದ ಧರ್ಮದಿಂದಲೂ ಪಿತೃಲೋಕ

ದಲ್ಲಿರುವ ನಿನ್ನ ಪಿತೃಗಳೆಲ್ಲರೂ ಉದ್ಧೃತರಾದರು. ಮುಂದೆ ನಿನ್ನ ಸಂತತಿ ಯವರೂ ಸದ್ಗತಿಗೆ ಹೋಗುವರು. ಆದುದರಿಂದ ಈಗಲೇ ನೀನು ಸ್ವರ್ಗಕ್ಕೆ ಹೊರಡು. ಓ ವ್ರತನಿಷ್ಠಾ! ನೀನು ಬಹಳ ಶ್ರದ್ಧೆಯಿಂದ ತಪಸ್ಸು ಮಾಡುತ್ತಿರುವೆ. ನಿನ್ನ ಈ ಆಚರಣೆಗಳಿಂದ ದೇವತೆಗಳೂ ತೃಪ್ತರಾದರು. ನೀನು ಈ ಕಷ್ಟಕಾಲದಲ್ಲಿಯೂ ಶುದ್ಧಮನಸ್ಸಿನಿಂದ ಈ ಹಿಟ್ಟೆಲ್ಲವನ್ನೂ ಕೊಟ್ಟುದರಿಂದ ಸ್ವರ್ಗವನ್ನು ಸಂಪಾದಿಸಿದಂತಾಯಿತು! ಹಸಿವು ಜ್ಞಾನವನ್ನು ನೀಗಿಸುವುದು! ಧರ್ಮಬುದ್ಧಿಯನ್ನು ತಪ್ಪಿಸುವುದು! ಹಸಿವಿನಿಂದ ಬುದ್ಧಿಮಂಕಾದವನಿಗೆ ಧೈರ್ಯವೂ ಹೋಗುವುದು! ಯಾವನು ಹಸಿವನ್ನು ಜಯಿಸುವನೋ, ಆತನು ಸ್ವರ್ಗವನ್ನು ಜಯಿಸಿದಂತೆಯೇ! ಯಾವಾಗ ದಾನದಲ್ಲಿ ಆಸಕ್ತಿಯಿರುವುದೋ ಆಗ ಧರ್ಮವು ಕೆಡುವುದಿಲ್ಲ. ನೀನಾದರೋ ಪುತ್ರವಾತ್ಸಲ್ಯವನ್ನೂ, ಪತ್ನೀಪ್ರೀತಿಯನ್ನೂ ಬಿಟ್ಟು, ಧರ್ಮವೇ ದೊಡ್ಡದೆಂದು ಭಾವಿಸಿ, ಆಶಾಮೋಹಗಳನ್ನು ಎಣಿಸದಿದ್ದೆ. ಮನುಷ್ಯರಿಗೆ ದ್ರವ್ಯವು ದೊರೆಯುವುದೇ ದುರ್ಲಭವು. ಅದರಲ್ಲಿಯೂ ಸತ್ಪಾತ್ರದಾನವು ಇನ್ನೂ ದುರ್ಲಭವು. ದಾನಕ್ಕೂ ತಕ್ಕ ಕಾಲವು ದೊರೆಯುವುದು ಇನ್ನೂ ಕಷ್ಟವು. ಶ್ರದ್ಧೆಯಿರುವುದು ಮತ್ತೂ ಕಷ್ಟವು. ಇಷ್ಟಸಂಗವೆಂಬ ಅಗುಳಿಯಿಂದಲೂ, ಲೋಭವೆಂಬ ಕೀಲಿನಿಂದಲೂ, ರಾಗವೆಂಬ ಮುಚ್ಚಳದಿಂದಲೂ ಕೂಡಿ ದುರ್ಗಮವಾದ ಸ್ವರ್ಗದ ಬಾಗಿಲು ಬಹಳ ಸೂಕ್ಷ್ಮವಾದುದು. ಮೋಹವುಳ್ಳ ಸಾಮಾನ್ಯಜನರಿಗೆ ಅದು ಕಾಣಿಸದು. ಕೋಪವನ್ನೂ, ಇಂದ್ರಿಯಗಳನ್ನೂ ಜಯಿಸಿದವರೂ, ತಪೋನಿಷ್ಠರೂ, ಶಕ್ತ್ಯನುಸಾರವಾಗಿ ದಾನಮಾಡುವವರೂ ಮಾತ್ರ ಅದನ್ನು ಕಾಣಬಲ್ಲರು. ಸಾವಿರವನ್ನು ಕೊಡಲು ಶಕ್ತಿಯುಳ್ಳವನು ನೂರನ್ನು ಕೊಟ್ಟರೂ, ನೂರನ್ನು ಕೊಡಲು ಶಕ್ತಿಯುಳ್ಳವನು ಹತ್ತನ್ನು ಕೊಟ್ಟರೂ, ಶಕ್ತ್ಯನುಸಾರವಾಗಿ ಬರೀನೀರನ್ನು ಕೊಟ್ಟರೂ ಎಲ್ಲರೂ ಸಮಾನಫಲವನ್ನೇ ಪಡೆಯುವರು. ಹಿಂದೆ ರಂತಿದೇವನೆಂಬ ಅರಸನು ತನ್ನಲ್ಲಿ ಏನೂ ಇಲ್ಲದೆ ಹೋದಾಗ, ಶುದ್ಧಮನಸ್ಸಿನಿಂದ ನೀರನ್ನು ದಾನಮಾಡಿ, ಅದರಿಂದಲೇ ಅತ್ಯುತ್ತಮಗತಿಯನ್ನು ಪಡೆದನು. ಧರ್ಮದೇವತೆಯು ನ್ಯಾಯಲಬ್ಧವೂ, ಶ್ರದ್ಧೆಯಿಂದ ಪರಿಶುದ್ಧವೂ ಆದ ಸಣ್ಣ ದಾನಗಳಿಂದ ಸಂತೋಷಿಸುವಷ್ಟು

ದೊಡ್ಡ ದಾನಗಳಿಂದ ಸಂತೋಷಿಸುವುದಿಲ್ಲ. ನೃಗನೆಂಬ ಅರಸನು ಬ್ರಾಹ್ಮಣರಿಗೆ ಒಂದುಸಾವಿರ ಗೋವುಗಳನ್ನು ದಾನಮಾಡಿದರೂ, ಅದರಲ್ಲಿ ಇತರರಿಗೆ ಸಂಬಂಧಪಟ್ಟ ಗೋವೊಂದನ್ನು ಕೊಟ್ಟು ನರಕಕ್ಕೆ ಗುರಿಯಾದನು. ಉಶೀನರದೇಶದ ರಾಜನೂ, ಒಳ್ಳೆಯ ವ್ರತನಿಷ್ಠನೂ ಆದ ಶಿಬಿಯೆಂಬವನು, ತನ್ನ ದೇಹದ ಮಾಂಸವನ್ನೇ ಕೊಟ್ಟುದರಿಂದ ಪುಣ್ಯಶಾಲಿಗಳಿಗುಂಟಾಗುವ ಲೋಕಗಳನ್ನು ಸೇರಿ, ಸ್ವರ್ಗದಲ್ಲಿ ಸಂತೋಷದಿಂದಿರುವನು. ಮನುಷ್ಯರಿಗೆ ಸಂಪತ್ತಿನಿಂದ ಸಾಧಿಸಿದ ಪುಣ್ಯವೂ, ಹಲವು ಬಗೆಯ ಯಾಗಗಳಿಂದೊದಗುವ ಪುಣ್ಯವೂ, ನ್ಯಾಯರೀತಿಯಿಂದ ಸಂಪಾದಿಸಿದ ವಸ್ತುಗಳನ್ನು ತಮ್ಮ ಶಕ್ತ್ಯನುಗುಣವಾಗಿ ದಾನಮಾಡಿ ಸಂಪಾದಿಸಿದ ಪುಣ್ಯಕ್ಕೆ ಸಮವಾಗಲಾರದು ಮನುಷ್ಯನಿಗೆ ಕೋಪವು ದಾನಫಲವನ್ನು ಕೆಡಿಸುವುದು. ಲೋಭವು ಸ್ವರ್ಗಪ್ರಾಪ್ತಿಯನ್ನು ತಪ್ಪಿಸುವುದು. ನ್ಯಾಯಮಾರ್ಗದಲ್ಲಿ ಜೀವಿಸುತ್ತ ದಾನಕ್ರಮವನ್ನು ತಿಳಿದವನು ತಪಸ್ಸಿನಿಂದ ಸ್ವರ್ಗವನ್ನು ಪಡೆಯುವನು. ಒಬ್ಬನು ಅಪರಿಮಿತವಾದ ದಕ್ಷಿಣೆಗಳನ್ನು ಕೊಟ್ಟು, ಅನೇಕ ರಾಜಸೂಯಯಾಗಗಳನ್ನು ಮಾಡಿದರೂ, ಹಲವು ಅಶ್ವಮೇಧಗಳನ್ನು ಮಾಡಿದರೂ, ಈಗ ನೀನು ಪಡೆದುದಕ್ಕೆ ಸಮಾನವಾದ ಫಲವನ್ನು ಪಡೆಯಲಾರನು. ನೀನು ಒಂದುಸೇರು ಹಿಟ್ಟಿನಿಂದ ಅಕ್ಷಯವಾದ ಬ್ರಹ್ಮಲೋಕವನ್ನು ಸಂಪಾದಿಸಿದೆ. ಓ ಬ್ರಾಹ್ಮಣಾ! ಇನ್ನು ನೀನು ರಜೋಗುಣರಹಿತನಾಗಿ ಸುಖದಿಂದ ಬ್ರಹ್ಮಲೋಕವನ್ನು ಸೇರು. ನಿಮ್ಮೆಲ್ಲರಿಗಾಗಿ ಅದೋ! ಆಗಲೇ ದಿವ್ಯವಾದ ವಿಮಾನವು ಬಂದಿರುವುದು. ನಿಮ್ಮ ಇಷ್ಟಾನುಸಾರವಾಗಿ ಅದನ್ನೇರಿ ಹೊರಡಿರಿ. ನನ್ನನ್ನು ಚೆನ್ನಾಗಿ ನೋಡಿರಿ! ನಾನೇ ಧರ್ಮದೇವತೆ! ನೀನು ಕಷ್ಟವನ್ನು ಗಣಿಸದೆ, ಈ ಲೋಕದಲ್ಲಿ ಕೀರ್ತಿಯನ್ನು ಆರ್ಜಿಸಿದೆ. ಇನ್ನು ನೀನು ನಿನ್ನ ಹೆಂಡತಿ, ಮಗು, ಸೊಸೆಯರೊಡನೆ ಸ್ವರ್ಗಕ್ಕೆ ಹೊರಡು' ಎಂದನು. ಧರ್ಮದೇವತೆಯು ಹೀಗೆ ಹೇಳಲು, ಆ ಬ್ರಾಹ್ಮಣನು ಹೆಂಡತಿಯೊಡನೆಯೂ, ಮಗನೊಡನೆಯೂ, ತನ್ನ ಸೊಸೆಯೊಡನೆಯೂ ವಿಮಾನವನ್ನೇರಿ ಸ್ವರ್ಗಕ್ಕೆ ಹೊರಟನು.

ಹೀಗೆ ಧರ್ಮಜ್ಞನಾದ ಆ ಬ್ರಾಹ್ಮಣನು ಸ್ವರ್ಗಕ್ಕೆ ಹೊರಟಕೂಡಲೆ, ನಾನು ಬಿಲದಿಂದ ಹೊರಗೆ ಬಂದೆನು. ಅಲ್ಲಿದ್ದ ಹಿಟ್ಟಿನ ಸುವಾಸನೆ,

ನೀರಿನ ಪ್ರೋಕ್ಷಣೆ, ಅಲ್ಲಿನ ದಿವ್ಯಪುಷ್ಪಗಳ ಮತ್ತು ಆ ಸಾಧುಬ್ರಾಹ್ಮಣನು ದಾನಮಾಡಿದ ಹಿಟ್ಟಿನ ಕಣಗಳ ಸ್ಪರ್ಶ, ಇವುಗಳಿಂದಲೂ, ಆತನ ತಪೋಮಹಿಮೆಯಿಂದಲೂ ನನ್ನ ತಲೆಯು ಸುವರ್ಣಮಯವಾಯಿತು. ಸತ್ಯಸಂಧನಾದ ಆ ಬ್ರಾಹ್ಮಣನ ಹಿಟ್ಟಿನದಾನದ ಪ್ರಭಾವದಿಂದಲೂ, ಆತನ ತಪಸ್ಸಿನಿಂದಲೂ ನನ್ನ ಅರ್ಧಶರೀರವೂ ಸುವರ್ಣಮಯವಾಯಿತು. ನನ್ನ ಮೈಯಲ್ಲಿರುವ ಬಹಳ ವಿಶಾಲವಾದ ಈ ಸುವರ್ಣಭಾಗಗಳನ್ನು ನೋಡಿರಿ. ಓ ಬ್ರಾಹ್ಮಣರೇ ! ನನ್ನ ದೇಹದ ಉಳಿದ ಭಾಗವೂ ಅದೇರೀತಿಯಲ್ಲಿ ಹೇಗೆ ಸ್ವರ್ಣಮಯವಾಗುವುದೆಂದು ನಾನು ಅಡಿಗಡಿಗೆ ಸಂತೋಷದಿಂದ, ತಪೋವನಗಳಲ್ಲಿಯೂ, ಯಾಗಪ್ರದೇಶಗಳಲ್ಲಿಯೂ ಸಂಚರಿಸುತ್ತಿರುವೆನು. ಧೀಮಂತನೂ, ಕುರುಕುಲರಾಜನೂ ಆದ ಈ ಯುಧಿಷ್ಠಿರನು ಯಾಗಮಾಡುತ್ತಿರುವುದನ್ನು ಕೇಳಿ, ಎಷ್ಟೋ ಆಸೆಯಿಂದ ಇಲ್ಲಿಗೆ ಬಂದೆನು. ಆದರೆ ಇಲ್ಲಿ ನನ್ನ ದೇಹವು ಸುವರ್ಣಮಯವಾಗಲಿಲ್ಲ. ಅದಕ್ಕಾಗಿಯೇ ನಾನು ನಗುತ್ತ ' ಈ ಯಾಗವು ಒಂದುಸೇರು ಹಿಟ್ಟಿನ ದಾನಕ್ಕೆ ಎಂದಿಗೂ ಸಮಾನವಾಗಲಾರದು' ಎಂದು ಹೇಳಿದೆನು. ಒಂದುಸೇರು ಹಿಟ್ಟಿನಿಂದ ಚೆಲ್ಲಿದ ಪುಡಿಗಳಿಂದ ನನ್ನ ಮೈ ಬಂಗಾರವಾಯಿತು. ಆದುದರಿಂದಲೇ ಈ ದೊಡ್ಡ ಯಾಗವು ಆ ಹಿಟ್ಟಿನ ಪುಡಿಗೂ ಸಮಾನವಾಗಲಾರದೆಂದೆಣಿಸಿರುವೆನು' ಎಂದು ಆ ಮುಂಗುಸಿಯು ಹೇಳಿ, ಅವರ ಕಣ್ಣಿಗೆ ಕಾಣದಂತೆ ಹೊರಟುಹೋಯಿತು. ಆ ಬ್ರಾಹ್ಮಣರೂ ತಮ್ಮತಮ್ಮ ಸ್ಥಳಗಳಿಗೆ ಹೊರಟುಹೋದರು. ಓ ಶತ್ರುನಾಶಕಾ ! ಅಶ್ವಮೇಧವೆಂಬ ಆ ಮಹಾಯಾಗದಲ್ಲಿ ನಡೆದ ಈ ಆಶ್ಚರ್ಯವಿಷಯಗಳೆಲ್ಲವನ್ನೂ ನಿನಗೆ ತಿಳಿಸಿದೆನು. ಆದುದರಿಂದ ನೀನು ಈ ಯಾಗದ ವಿಷಯದಲ್ಲಿ ಸ್ವಲ್ಪವೂ ಗರ್ವಪಡಬೇಡ. ಸಹಸ್ರಕೋಟಿ ಋಷಿಗಳು ತಪಸ್ಸಿನಿಂದಲೇ ಸ್ವರ್ಗವನ್ನು ಸೇರಿರುವರು. ಸಮಸ್ತಭೂತಗಳಲ್ಲಿ ದ್ರೋಹವಿಲ್ಲದಿರುವುದು, ಸಂತುಷ್ಟಿ, ಶೌಶೀಲ್ಯ, ಋಜುತ್ವ, ತಪಸ್ಸು, ಮನೋನಿಗ್ರಹ, ಸತ್ಯ, ದಾನ, ಯಜ್ಞ, ಇವೆಲ್ಲ ಸಮಾನಫಲವುಳ್ಳವುಗಳೇ ! ' ಎಂದನು.

ಇದು ತೊಂಭತ್ತೆರಡನೆಯ ಅಧ್ಯಾಯವು.



ಸತ್ಯ, ದಾನ, ತಪಸ್ಸುಗಳಿಂದಲೇ ಸ್ವರ್ಗಾದಿಗಳು ಲಭಿಸುವುದರಿಂದ, ಜೀವಹಿಂಸೆಗೆ ಕಾರಣವಾದ ಯಾಗವು ಅಷ್ಟೇನೂ ಪ್ರಶಸ್ತವಲ್ಲವೆಂಬ ಆ ಮುಂಗಸಿಯ ಅಭಿಪ್ರಾಯವನ್ನು ವೈಶಂಪಾಯನನು ಜನಮೇಜಯನಿಗೆ ವಿವರಿಸಿದುದು.

ಜನಮೇಜಯನು 'ಓ ಪ್ರಭೂ! ರಾಜರು ಯಾಗಶೀಲರು. ಮಹರ್ಷಿಗಳು ತಪಶ್ಶೀಲರು. ಬ್ರಾಹ್ಮಣರು ಶಮದಮಾದಿಗಳಲ್ಲಿಯೂ, ಶಾಂತಿಯಲ್ಲಿಯೂ ನಿರತರು. ಆದುದರಿಂದ ಯಜ್ಞಫಲಗಳಿಗೆ ಸಮಾನವಾದ ಫಲವನ್ನು ಕೊಡುವುದು ಈ ಪ್ರಪಂಚದಲ್ಲಿ ಯಾವುದೂ ಇರುವಂತೆ ತೋರಲಿಲ್ಲ. ಅನೇಕರಾಜರು ಯಾಗಗಳಿಂದ ದೇವತೆಗಳನ್ನು ಪೂಜಿಸಿ, ಈ ಲೋಕದಲ್ಲಿ ದೊಡ್ಡ ಕೀರ್ತಿಯನ್ನು ಪಡೆದು, ಮೃತರಾದಮೇಲೆ ಸ್ವರ್ಗವನ್ನೂ ಸೇರಿರುವರು. ಸಹಸ್ರಾಕ್ಷನಾದ ದೇವೇಂದ್ರನುಕೂಡ ಭೂರಿದಕ್ಷಿಣೆಯ ಯಾಗಗಳಿಂದಲೇ ದೇವರಾಜ್ಯವನ್ನು ಪಡೆದನು. ಈಗ ಭೀಮಾರ್ಜುನರೊಡಗೂಡಿದ ಯುಧಿಷ್ಠಿರನು, ಸಂಪತ್ತಿನಲ್ಲಿಯೂ, ಪರಾಕ್ರಮದಲ್ಲಿಯೂ ದೇವೇಂದ್ರನಿಗೆ ಸಮಾನನಲ್ಲವೆ? ಹಾಗಿರುವಾಗ ಆ ಮುಂಗುಸಿಯು, ಮಹಾತ್ಮನಾದ ಆ ಧರ್ಮರಾಜನ ಅಶ್ವಮೇಧಮಹಾಯಾಗವನ್ನು ಯಾವ ಕಾರಣದಿಂದ ನಿಂದಿಸಿತು?' ಎಂದು ಕೇಳಲು, ವೈಶಂಪಾಯನನು 'ಓ ಜನಾಧಿಪಾ! ಶ್ರೇಷ್ಠವಾದ ಆ ಯಾಗವಿಧಿಯನ್ನೂ, ಅದರ ಫಲವನ್ನೂ ಯಥಾವತ್ತಾಗಿ ಕೇಳು. ಯಾಗಮಾಡುತ್ತಿದ್ದ ದೇವೇಂದ್ರನಿಗೆ ಎಲ್ಲಾ ಮಹರ್ಷಿಗಳೂ ಇದೇ ವಿಚಾರವನ್ನು ಹಿಂದೆಯೂ ತಿಳಿಸಿರುವರು. ಆ ಮಹಾಯಜ್ಞವು ನಡೆಯುತ್ತಿದ್ದ ಕಾಲದಲ್ಲಿ ಋತ್ವಿಕ್ಕುಗಳು ಕರ್ಮಗಳಲ್ಲಿ ಆಸಕ್ತರಾಗಿದ್ದರು. ಅಗ್ನಿಯಲ್ಲಿ ಹೋತೃವಿನಿಂದ ಹೋಮಮಾಡಲ್ಪಡುತ್ತಿದ್ದಿತು. ದೇವತೆಗಳು ಆಹ್ವಾನಮಾಡಲ್ಪಡುತ್ತಿದ್ದರು. ಶ್ರೇಷ್ಠರಾದ ಋಷಿಗಳು ನೆರೆದಿದ್ದರು. ಯಾಗದಲ್ಲಿ ಶ್ರದ್ಧೆಯುಳ್ಳವರೂ, ವೇದಜ್ಞರೂ, ಒಳ್ಳೇ ಶುಭಲಕ್ಷಣವುಳ್ಳವರೂ, ನಿರಾಯಾಸವಾಗಿ ಚಟುವಟಿಕೆಯಿಂದ ಯಾಗಕರ್ಮಗಳನ್ನು ಮಾಡಿಸುವವರೂ, ಅಧ್ವರ್ಯುಗಳಲ್ಲಿ ಶ್ರೇಷ್ಠರೂ ಆದ ಬ್ರಾಹ್ಮಣರು ಆ ಸಮಯದಲ್ಲಿ ಯಜ್ಞಪಶುಗಳನ್ನು ಹಿಡಿದಿದ್ದರು.

ಆಗ ಆ ಮಹರ್ಷಿಗಳಿಗೆ ಆ ಪಶುಗಳಲ್ಲಿ ಕರುಣೆ ಹುಟ್ಟಿತು. ತಪೋಧನರಾದ ಆ ಋಷಿಗಳು ಆ ಪಶುಗಳನ್ನು ನೋಡಿ, ಇಂದ್ರನ ಬಳಿಗೆ ಬಂದು 'ಇಂತಹ ಯಾಗವಿಧಿಯು ಶ್ರೇಯಸ್ಕರವಲ್ಲ. ಧರ್ಮಚಿಂತನೆಯಲ್ಲಿರುವ ನಿನಗೆ ಇದು ಅಜ್ಞಾನದ ಕಾರ್ಯವು. ಇಂದ್ರಾ! ಯಾಗದಲ್ಲಿ ಪಶುಗಳನ್ನೇ ಉಪಯೋಗಿಸಬೇಕೆಂದು ಶಾಸ್ತ್ರದಲ್ಲಿ ವಿಧಿಸಿಲ್ಲ. ನೀನು ಈಗ ಯಜ್ಞವನ್ನು ಮಾಡುವುದು ಧರ್ಮಸಂಪಾದನೆಗಲ್ಲವೆ? ಈ ಪ್ರಾಣಿಹಿಂಸೆಯಿಂದ ನೀನು ಅಧರ್ಮವನ್ನೇ ಮಾಡಿದಂತಾಗುವುದು. ಪ್ರಾಣಿಹಿಂಸೆಯು ಧರ್ಮವೆಂದು ಎಲ್ಲಿಯೂ ಹೇಳಿಲ್ಲ. ನಿನಗೆ ಸಮ್ಮತಿಯಿದ್ದರೆ, ಋತ್ವಿಕ್ಕುಗಳು ಮಂತ್ರವಿಧಿಯಿಂದಲೇ ಯಾಗವನ್ನು ಮುಗಿಸಿಬಿಡಲಿ. ಮಂತ್ರವಿಧಿಯಲ್ಲಿ ಸೂಚಿತವಾದ ಯಾಗದಿಂದಲೇ ನಿನಗೆ ಮಹಾಪುಣ್ಯವು ಲಭಿಸುವುದು. ಮೂರುವರ್ಷದವರೆಗೆ ಪೂರ್ತಿಯಾಗಿ ವಿಧ್ಯುಕ್ತರೀತಿಯಲ್ಲಿ ಆ ಯಾಗವನ್ನು ಮಾಡಿ ಮುಗಿಸು. ಆಲೋಚಿಸಿನೋಡಿದರೆ, ಅದೇ ಧರ್ಮವೆಂದು ನಮಗೆ ತೋರುವುದು' ಎಂದರು. ಅಹಂಕಾರ ಮೋಹಗಳಿಗೊಳಗಾದ ದೇವೇಂದ್ರನಾದರೋ, ತತ್ವಜ್ಞರಾದ ಆ ಋಷಿಗಳು ಹೇಳಿದ ವಾಕ್ಯವನ್ನು ಅಂಗೀಕರಿಸಲಿಲ್ಲ. ಇಂದ್ರನ ಆ ಯಜ್ಞಕಾಲದಲ್ಲಿ, ತಾಪಸರಲ್ಲಿಯೇ 'ಯಾಗವನ್ನು ಜಂಗಮಗಳಿಂದ ಮಾಡಿಸುವುದೇ? ಸ್ಥಾವರಗಳಿಂದ ಮಾಡಿಸುವುದೇ?' ಎಂಬ ದೊಡ್ಡ ವಿವಾದವುಂಟಾಯಿತು.

ತತ್ವಜ್ಞರೂ, ವಾದಗಳಲ್ಲಿ ಸುಶಿಕ್ಷಿತರೂ ಆದ ಆ ಋಷಿಗಳು ಆಮೇಲೆ ಇಂದ್ರನ ಸಮ್ಮತಿಯಿಂದ ವಸುವೆಂಬ ರಾಜನನ್ನು ಕುರಿತು 'ಓ ಪ್ರಾಜ್ಞಾ! ಧರ್ಮವಿಚಾರದಲ್ಲಿ ನಮಗೆ ಒಂದು ಸಂದೇಹವಿರುವುದು. ಆ ವಿಷಯದಲ್ಲಿ ನೀನು ಯಥಾರ್ಥವನ್ನು ತಿಳಿಸು. ಓ ರಾಜೋತ್ತಮಾ! ಯಾಗಗಳ ವಿಚಾರದಲ್ಲಿ ಶಾಸ್ತ್ರನಿಯಮವು ಹೇಗೆ? ಶ್ರೇಷ್ಠವಾದ ಪಶುಗಳಿಂದಲೇ ಯಾಗಮಾಡಬೇಕೇ? ಅಥವಾ ಇನ್ನೂ ಮೊಳೆಯದ ಬೀಜಗಳಿಂದ ಯಾಗಮಾಡಬೇಕೇ?' ಎಂದು ಕೇಳಿದರು. ಆಗ ಆ ವಸುವು ಬಲಾಬಲಗಳನ್ನು ಆಲೋಚಿಸಿದೆ, ತತ್ಕಾಲಕ್ಕೆ ಸಿಕ್ಕಿದುದನ್ನು ತಂದು ಯಾಗಮಾಡಬಹುದು' ಎಂದನು. ಚೇದಿದೇಶದರಸನಾದ ಆತನು ಈ ವಿಷಯದಲ್ಲಿ

ಹೀಗೆ ಸುಳ್ಳುಹೇಳಿದುದರಿಂದ, ಪಾತಾಳಕ್ಕೆ (ಅಧೋಗತಿಗೆ) ಹೋದನು. ಸ್ವಯಂಭುವಾದ ಬ್ರಹ್ಮದೇವನು ಹೊರತು, ಇತರರು ಅನೇಕ ವಿಷಯುಗಳನ್ನು ಅರಿತಿದ್ದರೂ, ಸಂದೇಹವಿಷಯುಗಳಲ್ಲಿ ತಮಗೆ ತೋರಿದಂತೆ ತಾವೇ ಯಾವ ತೀರ್ಮಾನವನ್ನೂ ಹೇಳಬಾರದು. ಅಂತವರು ಎಷ್ಟೇ ದೊಡ್ಡ ದಾನಗಳನ್ನು ಮಾಡಿದ್ದರೂ, ಅವು ಅವರನ್ನು ಉದ್ಧರಿಸದೆ ನಶಿಸುವುವು. ಅಧರ್ಮಪ್ರವರ್ತಕನೂ, ಹಿಂಸಕನೂ, ದುರ್ಬುದ್ಧಿಯೂ ಆದವನಿಗೆ ದಾನಫಲದಿಂದ ಇಹಪರಗಳಲ್ಲಿ ಯಾವ ಮೇಲ್ಮೆಯೂ ಇಲ್ಲ. ಕೀರ್ತಿಯೂ ಇಲ್ಲ. ಅನ್ಯಾಯಾರ್ಜಿತವಾದ ಹಣವನ್ನು ಧರ್ಮಾಪೇಕ್ಷೆಯಿಂದ ದಾನಮಾಡಿದರೂ ಅವನು ಧರ್ಮದ ಫಲವನ್ನು ಪಡೆಯಲಾರನು. ಕಪಟಬುದ್ಧಿಯಿಂದಾಗಲಿ, ಪಾಪಬುದ್ಧಿಯಿಂದಾಗಲಿ ದಾನಮಾಡುವವನೂ, ಜನರಿಗೆ ತನ್ನಲ್ಲಿ ನಂಬಿಕೆ ಹುಟ್ಟಿಸುವುವಕ್ಕಾಗಿ ಬ್ರಾಹ್ಮಣರಿಗೆ ದಾನಮಾಡುವವನೂ, ಪಾಪಮಾರ್ಗದಿಂದ ಧನವನ್ನು ಆರ್ಜಿಸಿ ಅದನ್ನು ದಾನಮಾಡುವವನೂ, ರಾಗಮೋಹಗಳುಳ್ಳವನೂ ಕಡೆಗೆ ದುರ್ಗತಿಗೆ ಗುರಿಯಾಗುವನಲ್ಲದೆ, ಆ ದಾನದಿಂದ ಫಲವನ್ನು ಪಡೆಯಲಾರನು. ಲೋಭಮೋಹಗಳಿಗೊಳಗಾಗಿ ಧನವನ್ನು ಸಂಗ್ರಹಿಸಿಡುವುದರಲ್ಲಿಯೇ ಬುದ್ಧಿಯುಳ್ಳವನಾಗಿ, ಹಾಗೆ ಸಂಗ್ರಹಿಸಿದ ಧನದಿಂದ ಪಶುವಧರೂಪವಾದ ಯಜ್ಞವನ್ನು ಮಾಡುವವನೂ, ಅದೇ ಪಾಪಬುದ್ಧಿಯಿಂದ ಧನವನ್ನು ಗಳಿಸಿ ದಾನಮಾಡುವವನೂ, ಪರಲೋಕದಲ್ಲಿ ಆ ಯಾಗದ, ಮತ್ತು ದಾನಗಳ ಫಲವನ್ನು ಪಡೆಯಲಾರನು. ತಪೋಧನರೂ, ಧಾರ್ಮಿಕರೂ ತಮ್ಮತಮ್ಮ ಶಕ್ತ್ಯನುಸಾರವಾಗಿ, ಉಂಛವೃತ್ತಿಯಿಂದ ಸಂಪಾದಿಸಿದ ಕಾಳುಗಳನ್ನೋ, ಗಡ್ಡೆ ಗೆಣಸು ಸೊಪ್ಪುಗಳನ್ನೋ, ಫಲಗಳನ್ನೋ, ತೀರ್ಥಪಾತ್ರೆಯನ್ನೋ ದಾನಮಾಡಿದರೂ, ಅವರು ಸ್ವರ್ಗವನ್ನು ಸೇರುವರು. ದಾನ, ಪ್ರಾಣಿದಯೆ, ಬ್ರಹ್ಮಚರ್ಯೆ, ಸತ್ಯ, ಪಶ್ಚಾತ್ತಾಪ, ಧೈರ್ಯ, ಸಹನೆ, ಇವುಗಳೇ ಉತ್ತಮಧರ್ಮವೂ, ಮಹಾಯೋಗವೂ ಆಗಿವೆ. ಸನಾತನಧರ್ಮದ ಶಾಶ್ವತಫಲವೆಂಬುದೂ ಇದೇ! ಹಿಂದೆ ವಿಶ್ವಾಮಿತ್ರಾದಿ ರಾಜರಿದ್ದರೆಂದು ಕೇಳಿರುವೆವಲ್ಲವೆ? ವಿಶ್ವಾಮಿತ್ರನು, ಅಸಿತನು, ಜನಕರಾಜನು, ತಕ್ಷಸೇನನು, ಆರ್ಷ್ಟಿಷೇಣನು, ಸಿಂಧುದ್ವೀಪನು, ಇವರೇ ಮುಂತಾದ ರಾಜರೂ, ಇನ್ನೂ ತಪೋಧನರಾದ

ಅನೇಕರೂ, ಸತ್ಯವಾಕ್ಯಗಳಿಂದಲೂ, ನ್ಯಾಯರೀತಿಯಲ್ಲಿ ಆರ್ಜಿಸಿದುದನ್ನು ದಾನಮಾಡಿದುದರಿಂದಲೂ ಉತ್ತಮ ಸಿದ್ಧಿಯನ್ನು ಪಡೆದರು. ಓ ರಾಜಾ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಲ್ಲರೂ ದಾನಧರ್ಮಗಳೆಂಬ ಅಗ್ನಿಯಿಂದಲೇ ಶುದ್ಧರಾಗಿ ಸ್ವರ್ಗವನ್ನು ಸೇರಿರುವರು' ಎಂದನು.

ಇದು ತೊಂಭತ್ತುಮೂರನೆಯ ಅಧ್ಯಾಯವು.

---

ಪ್ರಾಣಿಗಳನ್ನು ಕೊಲ್ಲದೆ ಧ್ಯಾನ ದಾನಾದಿಗಳಿಂದಲೇ ಯಾಗ ಫಲವು ಲಭಿಸುವುದೆಂಬುದಕ್ಕೆ ಉದಾಹರಣೆಯಾಗಿ ಅಗಸ್ತ್ಯನು ಯಾಗಮಾಡಿದ ಕಥೆಯನ್ನು ಹೇಳುವನು.

ಆಗ ಜನಮೇಜಯನು 'ಮಹಾತ್ಮಾ! ಧರ್ಮರೀತಿಯಲ್ಲಿ ಸಂಪಾದಿಸಿದುದನ್ನು ದಾನಮಾಡುವುದರಿಂದಲೇ ಎಲ್ಲವೂ ಲಭಿಸುವುದಾದರೆ, ಆ ದಾನಕ್ರಮವನ್ನು ನನಗೆ ವಿವರಿಸಿ ತಿಳಿಸು. ನೀನು ಇಂತಹ ವಿಷಯಗಳನ್ನು ತಿಳಿಸುವುದರಲ್ಲಿ ಸಮರ್ಥನು. ಉಂಛವೃತ್ತಿಬ್ರಾಹ್ಮಣನು ಹಿಟ್ಟನ್ನು ದಾನಮಾಡಿದುದರಿಂದಲೇ ಮಹಾಫಲವು ಲಭಿಸಿತೆಂದು ನೀನು ತಿಳಿಸಿದೆಯಷ್ಟೆ. ಅದು ನಿಜವೆಂಬುದರಲ್ಲಿ ಸಂದೇಹವಿರದು. ಯಾಗಗಳಲ್ಲಿ ಎಲ್ಲಕ್ಕಿಂತಲೂ ಶ್ರೇಷ್ಠವೆನಿಸಿ ಉತ್ತಮಫಲವನ್ನು ಕೊಡುವುದು ಯಾವುದು?' ಎಂದು ಕೇಳಲು ವೈಶಂಪಾಯನನು ಹೇಳುವನು.

'ಓ ರಿಪುಭಯಂಕರಾ! ಈ ವಿಷಯದಲ್ಲಿ ಹಿಂದೆ ಅಗಸ್ತ್ಯನ ಮಹಾಯಾಗದಲ್ಲಿ ನಡೆದ ಪುರಾತನವಾದ ಇತಿಹಾಸವೊಂದನ್ನು ತಿಳಿಸುವೆನು ಕೇಳು. ಮಹಾತೇಜಸ್ವಿಯಾಗಿ, ಸಕಲ ಪ್ರಾಣಿಗಳಿಗೂ ಹಿತವನ್ನೇ ಕೋರುತಿದ್ದ ಅಗಸ್ತ್ಯನು, ಹನ್ನೆರಡುವರ್ಷಗಳಕಾಲಕ್ಕೆ ಮುಗಿಯುವ ಯಜ್ಞದೀಕ್ಷೆಯೊಂದನ್ನು ವಹಿಸಿದನು. ಆ ಮಹಾತ್ಮನ ಯಾಗದಲ್ಲಿ ನೆರೆದಿದ್ದ ಹೋತೃಗಳೆಲ್ಲ ಅಗ್ನಿಸಮಾನರಾಗಿದ್ದರು. ಆ ಯಾಗದಲ್ಲಿ ಕೇವಲ ಫಲಾಹಾರಿಗಳು ಕೆಲವರು, ಬರೀ ಗಡ್ಡೆ ಗೆಣಸುಗಳನ್ನೇ ಭುಜಿಸುವವರು ಕೆಲವರು, ಅಶ್ಮಕುಟ್ಟರು (ಕಲ್ಲಿನಿಂದಮಾತ್ರ ಆಹಾರವನ್ನು ಪುಡಿಮಾಡಿ

ಭುಜಿಸುವವರು) [1] ಮರೀಚಿಪರು, [2] ಪರಿಪೃಷ್ಟಿಕರು, [3] ವೈಘಸಿಕರು, [4] ಪ್ರಸಂಖ್ಯಾನರು, ಯತಿಗಳು, ಭಿಕ್ಷುಕರು, ಇವರೆಲ್ಲರೂ ನೆರೆದಿದ್ದರು. ಧರ್ಮವನ್ನು ಪ್ರತ್ಯಕ್ಷವಾಗಿ ನೋಡಿದವರೂ, ಕೋಪಗಳನ್ನೂ, ಇಂದ್ರಿಯ ಗಳನ್ನೂ ಜಯಿಸಿದವರೂ, ಮನಸ್ಸನ್ನಡಗಿಸಿದವರೂ, ಹಿಂಸಾದಿಗಳ ನ್ನು ತ್ಯಜಿಸಿದವರೂ, ಯಾವಾಗಲೂ ಶುದ್ಧವಾದ ಆಚರಣೆಯಲ್ಲಿ ನೆಲೆ ಗೊಂಡವರೂ, ಇಂದ್ರಿಯಚಾಪಲ್ಯಕ್ಕೊಳಗಾಗದವರೂ ಆದ ಮಹರ್ಷಿ ಗಳು ನೆರೆದಿದ್ದರು. ಅವರೆಲ್ಲರೂ ದೇವತೆಗಳ ತೃಪ್ತಿಗಾಗಿ ಆ ಯಾಗವನ್ನು ನಡೆಸಿದರು. ಅಗಸ್ತ್ಯನು ತನ್ನ ಶಕ್ತಿಗನುಸಾರವಾಗಿ ಆ ಯಾಗಕ್ಕೆ ಬೇಕಾದ ಅನ್ನವೆಲ್ಲವನ್ನೂ ಸಂಪಾದಿಸಿದನು. ಆಗ ಆ ಯಾಗಕರ್ಮದಲ್ಲಿ ಯಾವುದು ನಡೆಯತಕ್ಕುದೋ, ಯಾವುದು ಯೋಗ್ಯವಾದುದೋ ಅವೆ ಲ್ಲವೂ ನಡೆಯಿತು. ಹಾಗೆ ಅನೇಕಋಷಿಗಳಿಂದ ನೆರವೇರಿಸಲ್ಪಡುವ ಆ ಯಾಗಕಾಲದಲ್ಲಿ ದೇವೇಂದ್ರನುಮಾತ್ರ ಮಳೆ ಸುರಿಸಲಿಲ್ಲ. ಆಗ ಆ ಯಜ್ಞ ಕ್ಕಾಗಿ ಸೇರಿದ ನಿರ್ಮಲಚಿತ್ತರಾದ ಮುನಿವರರು ಹೀಗೆ ಮಾತನಾಡಿಕೊಂ ಡರು. 'ಯಾಗಮಾಡುತ್ತಿರುವ ಈ ಅಗಸ್ತ್ಯನೋ, ಶ್ರದ್ಧಾಪೂರ್ವಕವಾಗಿ ಅನ್ನವನ್ನು ಕೊಡುತ್ತಿರುವನು. ಆದರೂ ಇಂದ್ರನು ಮಳೆಯನ್ನು ಸುರಿಸ ಲಿಲ್ಲ. ಅನ್ನವು ಹೇಗುಂಟಾಗುವುದು? ಅಗಸ್ತ್ಯನ ಈ ಮಹಾಯಾಗವೋ ಹನ್ನೆರಡುವರ್ಷಗಳಕಾಲ ನಡೆಯಬೇಕಾಗಿರುವುದು. ದೇವೇಂದ್ರನು ಈ ಹನ್ನೆರಡುವರ್ಷಗಳಕಾಲವೂ ಮಳೆ ಸುರಿಸುವುದಾಗಿ ತೋರಲಿಲ್ಲ. ನೀವೆ ಲ್ಲರೂ ಈ ವಿಷಯವನ್ನು ಆಲೋಚಿಸಿ, ಮಹಾತಪಸ್ವಿಯಾದ ಈ ಅಗಸ್ತ್ಯ ಮುನಿಯಲ್ಲಿ ಹೇಗಾದರೂ ಅನುಗ್ರಹವನ್ನು ತೋರಿಸಬೇಕು' ಎಂದರು.

ಒಡನೆಯೇ ಅಗಸ್ತ್ಯಮುನಿಯು ಅವರಿಗೆ ತಲೆಬಾಗಿ 'ಇಂದ್ರನು ಹನ್ನೆರಡುವರ್ಷಗಳವರೆಗೆ ಮಳೆ ಸುರಿಸದಿದ್ದರೆ ನಾನು ಮನಸ್ಸಂಕಲ್ಪಮಾತ್ರ

---

1. ಚಂದ್ರಕಿರಣವನ್ನು ಪಾನಮಾಡುತ್ತ ತೃಪ್ತಿಪಡೆಯುವವರು, ಸೂರ್ಯಕಿರಣ ವನ್ನು ಪಾನಮಾಡುವವರು ಎಂದೂ ಉಂಟು.

2. ಇತರರು ನಿರ್ಭಂಧಿಸಿ ಪ್ರಾರ್ಥಿಸಿ ಕೊಡುವುದನ್ನೇ ತೆಗೆದುಕೊಳ್ಳತಕ್ಕವರು.

3. ಹಿರಿಯರಿಗೆ ಬಡಿಸಿ ಮಿಕ್ಕುದನ್ನು ತಿನ್ನುವವರು.

4. ತತ್ಕಾಲಕ್ಕೆ ಬೇಕಾದಷ್ಟನ್ನೇ ಮಾತ್ರ ಪರಿಗ್ರಹಿಸುವವರು.

ದಿಂದಲೇ ಎಲ್ಲಾ ದೇವತೆಗಳನ್ನೂ ತೃಪ್ತಿಗೊಳಿಸುವ ಚಿಂತಾಯಜ್ಞವನ್ನು ಮಾಡುವೆನು. ಇದೂ ಒಂದು ಸನಾತನವಿಧಿ. ಇಂದ್ರನು ಹನ್ನೆರಡು ವರ್ಷಗಳು ಮಳೆ ಸುರಿಸದಿದ್ದರೆ, ನಾನು *ಸ್ಪರ್ಶಯಜ್ಞವನ್ನು ಮಾಡುವೆನು. ಇಂದ್ರನು ದ್ವಾದಶವರ್ಷಗಳು ಮಳೆ ಸುರಿಸದಿದ್ದರೆ ನಾನು ವ್ರತಗಳನ್ನನುಷ್ಠಿಸಿ ಶರೀರಕ್ಲೇಶಗಳಿಂದಲೇ ಈ ಯಾಗವನ್ನು ಮುಗಿಸುವೆನು. ನಾನು ಬೀಜಯಜ್ಞಗಳನ್ನು ಅನೇಕವರ್ಷಗಳಿಂದ ಅನುಷ್ಠಿಸಿರುವೆನು. ಬೀಜಗಳಿಂದಲೇ ಹಿತವನ್ನುಂಟುಮಾಡುವೆನು. ನನ್ನ ಈ ಯಜ್ಞಕ್ಕೆ ಹೇಗೂ ವಿಘ್ನವು ಬರಲಾರದು. ಈಗ ದೇವೇಂದ್ರನು ಮಳೆಯನ್ನು ಸುರಿಸಿದರೆ ಸುರಿಸಲಿ! ಸುರಿಸದಿದ್ದರೆ ಹೋಗಲಿ! ನನ್ನ ಈ ಯಾಗವೇನೋ ಎಂದಿಗೂ ವ್ಯರ್ಥವಾಗತಕ್ಕುದಲ್ಲ. ಅಲ್ಲದೆ ಇಂದ್ರನು ಸ್ವೇಚ್ಛೆಯಿಂದ ನನ್ನ ಪ್ರಾರ್ಥನೆಯನ್ನು ನೆರವೇರಿಸದಿದ್ದರೆ ನಾನೇ ಇಂದ್ರನಾಗುವೆನು. ನಾನೇ ಪ್ರಜೆಗಳನ್ನೂ ರಕ್ಷಿಸುವೆನು. ಯಾವನು ಯಾವತರದ ಆಹಾರದಿಂದುಂಟಾದನೋ ಆತನು ಹಾಗೆಯೇ ಆಗುವನು. ನಾನು ಇನ್ನೂ ಮಹಾವಿಶೇಷ ಕಾರ್ಯಗಳನ್ನೂ ಮಾಡುವೆನು. ಈಗ ತ್ರಿಲೋಕದಲ್ಲಿರುವ ಸುವರ್ಣಗಳೂ, ದೊರೆಯಲಸಾಧ್ಯವಾದ ಇತರಧನಗಳೂ ತಾವಾಗಿ ಇಲ್ಲಿಗೆ ಬರಲಿ. ದೇವಲೋಕದ ಅಪ್ಸರಸ್ಸಮೂಹಗಳೂ, ಗಂಧರ್ವರೂ, ಕಿನ್ನರರೂ, ವಿಶ್ವಾವಸುಗಳೂ, ಇನ್ನೂ ಇತರರೂ ನನ್ನ ಯಾಗಕ್ಕೆ ಬರಲಿ. ಉತ್ತರಕುರುದೇಶಗಳಲ್ಲಿರುವ ಧನವೆಲ್ಲವೂ ತಾನಾಗಿ ಈ ಯಾಗಕ್ಕೆ ಬರಲಿ. ಸ್ವರ್ಗವೂ, ಸ್ವರ್ಗವಾಸಿಗಳೂ, ಧರ್ಮವೂ ತಾವಾಗಿ ಇಲ್ಲಿಗೆ ಬರಲಿ' ಎಂದನು. ಹೀಗೆ ಹೇಳಿದೊಡನೆಯೇ ಜ್ವಲಿಸುವ ಅಗ್ನಿಗೆ ಸಮಾನವಾದ ತೇಜಸ್ಸುಳ್ಳವನೂ, ಮಹಾಪರಾಕ್ರಮಿಯೂ ಆದ ಆ ಅಗಸ್ತ್ಯಋಷಿಯ ತಪೋಮಹಿಮೆಯಿಂದ, ಅವೆಲ್ಲವೂ ಹಾಗೆಯೇ ನಡೆದುವು. ಆಗ ಆ ಮುನಿವರರೆಲ್ಲರೂ ಆತನ ತಪೋಬಲವನ್ನು ಕಂಡು ಸಂತೋಷಪಟ್ಟು ಆಶ್ಚರ್ಯದಿಂದ ಹೀಗೆಂದು ಹೇಳುವರು. 'ಮಹಾತ್ಮಾ! ನಿನ್ನ ಮಾತಿಗೆ ನಾವು ಸಂತೋಷಪಟ್ಟೆವು. ನಾವು ಇನ್ನುಮೇಲೆ ತಪೋವನವನ್ನೂ ಅಪೇ

---

* ಸಂಪಾದಿಸಿದ ವಸ್ತುವನ್ನು ವೆಚ್ಚಮಾಡದೆ ಅದನ್ನು ಮುಟ್ಟುವುದರಿಂದಲೇ ತೃಪ್ತಿಪಡಿಸುವುದು.

ಕ್ಷಿಸುವುದಿಲ್ಲ. ಈ ಯಾಗಗಳಿಂದಲೇ ಸಂತುಷ್ಟರಾದೆವು. ನಾವೂ ಹೀಗೆಯೇ ನ್ಯಾಯರೀತಿಯಲ್ಲಿ ದೊರೆತ ವಸ್ತುವಿನಿಂದ ಯಾಗದೀಕ್ಷೆಗಳನ್ನು ಕೋರುವೆವು. ಹಾಗೆಯೇ ಹೋಮಗಳನ್ನೂ, ಇನ್ನೂ ಇತರ ಕರ್ಮಗಳನ್ನೂ ನಾವು ನ್ಯಾಯಲಬ್ಧವಾದ ವಸ್ತುಗಳಿಂದಲೇ ನಡೆಸಲೆಳಸುವೆವು. ನ್ಯಾಯವಾದ ಬ್ರಹ್ಮಚರ್ಯದಿಂದಲೇ ವೇದಾಧ್ಯಯನವನ್ನು ಬಯಸುವೆವು. ನಾವು ಇನ್ನುಮೇಲೆ ನ್ಯಾಯರೀತಿಯಿಂದಲೇ ಗೃಹತ್ಯಾಗ ಮಾಡಿ ತಪೋವನವನ್ನಾಶ್ರಯಿಸಿ ತಪೋನಿರತರಾಗುವೆವು. ಧರ್ಮಮಾರ್ಗಗಳಿಂದ ಯಾಗಮಾಡುವೆವು. ಓ ಪ್ರಭೂ! ಅಹಿಂಸಾತ್ಮಕವಾದ ಈ ಮಾರ್ಗವನ್ನು ಬಯಸಿದ ನೀನು ಯಾಗಗಳಲ್ಲಿ ಈ ಅಹಿಂಸೆಯನ್ನೇ ಯಾವಾಗಲೂ ಉಪದೇಶಿಸುತ್ತಿರು. ಆದರಿಂದಲೇ ನಾವು ಸಂತುಷ್ಟರಾಗುವೆವು. ಈ ಯಾಗವು ಮುಗಿದೊಡನೆ ನಿನ್ನ ಅನುಮತಿಯನ್ನು ಪಡೆದು ಈ ಪ್ರದೇಶದಿಂದ ಹೊರಡುವೆವು' ಎಂದರು. ಇಷ್ಟರಲ್ಲಿ ದೇವೇಂದ್ರನೂ ಆ ಅಗಸ್ತ್ಯನ ತಪೋಮಹಿಮೆಯನ್ನು ಕಂಡು ಮಳೆಯನ್ನು ಸುರಿಸಿದನು. ಆತನ ಯಾಗವು ಮುಗಿಯುವವರೆಗೂ ಇಂದ್ರನು ದೊಡ್ಡ ಮಳೆಯನ್ನು ಸುರಿಸುತಿದ್ದನು. ಆಮೇಲೆ ಆತನು ಬೃಹಸ್ಪತಿಯೊಡನೆ ತಾನೇ ನೇರವಾಗಿ ಬಂದು, ಆ ಅಗಸ್ತ್ಯನನ್ನು ಸಂತೋಷಪಡಿಸಿದನು. ಅಗಸ್ತ್ಯನದ ಸಂತೋಷಗೊಂಡು, ಯಾಗವು ಮುಗಿದೊಡನೆ ಆ ಮಹಾಮುನಿಗಳನ್ನೆಲ್ಲ ವಿಧ್ಯುಕ್ತರೀತಿಯಲ್ಲಿ ಪೂಜಿಸಿ ಕಳುಹಿಸಿದನು' ಎಂದನು.

ಇದು ತೊಂಭತ್ತುನಾಲ್ಕನೆಯ ಅಧ್ಯಾಯವು.

---

## ಮುಂಗುಸಿಯ ವೃತ್ತಾಂತವು.

ಮುಂಗುಸಿಯ ವೇಷದಿಂದ ಬಂದು ಮನುಷ್ಯನಂತೆ ಮಾತನಾಡಿದವನು ಯಾರೆಂದು ಜನಮೇಜಯನು ಕೇಳಲು, ವೈಶಂಪಾಯನನು "ಓ ರಾಜಾ! ಈ ವಿಷಯವಾಗಿ ನೀನು ಮೊದಲು ನನ್ನನ್ನು ಕೇಳಲಿಲ್ಲ. ನಾನೂ ಹೇಳಲಿಲ್ಲ. ಆ ಮುಂಗುಸಿಯು ಯಾರೆಂಬುದನ್ನೂ, ಅದು ಮನು

ಷ್ಯನಂತೆ ಮಾತನಾಡಿದುದರ ಕಾರಣವನ್ನೂ ತಿಳಿಸುವೆನು ಕೇಳು. ಹಿಂದೆ ಜಮದಗ್ನಿಯು ಶ್ರಾದ್ಧಮಾಡಬೇಕೆಂದು ನೆನೆಸಿದನು. ಹೋಮಧೇನುವು ಬಂದಿತು. ಅದನ್ನು ತಾನೇ ಕರೆದು, ಕರೆದ ಹಾಲನ್ನು ಶುದ್ಧವಾದ ಒಂದು ಹೊಸಪಾತ್ರೆಯಲ್ಲಿಟ್ಟನು. ಆಗ ಕೋಪವೆಂಬುದು ಮುಂಗುಸಿಯ ರೂಪವನ್ನು ಧರಿಸಿ ಆ ಪಾತ್ರೆಯನ್ನು ಮಗುಚುತ್ತ ತನ್ನಲ್ಲಿತಾನು 'ಈಗ ನಾನು ಇವನಿಗೆ ಅಪ್ರಿಯಕಾರ್ಯವನ್ನು ಮಾಡಿದರೆ, ಈತನೇನು ಮಾಡುವನೋ ನೋಡಬೇಕು' ಎಂದು ಆಲೋಚಿಸಿ, ಆ ಋಷಿಶ್ರೇಷ್ಠ ನನ್ನು ಪರೀಕ್ಷಿಸುವ ಉದ್ದೇಶದಿಂದ ಆ ಹಾಲನ್ನು ಕುಡಿದೂಬಿಟ್ಟಿತು. ಆಗ ಮುನಿಯು ಕೋಪವೇ ಹೀಗೆ ಮಾಡಿರುವುದೆಂದು ತಿಳಿದು, ಅದಕ್ಕಾಗಿ ತಾನು ಕೋಪಿಸಿಕೊಳ್ಳದೆಯೇ ಇದ್ದನು. ಆಮೇಲೆ ಆ ಕೋಪವು ಬ್ರಾಹ್ಮ ಣವೇಷವನ್ನು ಧರಿಸಿ (ಆತನನ್ನು ಕುರಿತು) 'ಓ ಭೃಗುಶ್ರೇಷ್ಠಾ! ನಾನು ನಿನ್ನಿಂದ ಜಿತನಾದೆನು. ಇದರಿಂದ ಭೃಗುಕುಲದಲ್ಲಿ ಹುಟ್ಟಿದವರು ಮಹಾ ಕೋಪಿಷ್ಠರೆಂಬ ವಾಕ್ಯವೂ ಸುಳ್ಳಾಯಿತು. ಹೀಗೆ ಸಹನೆಯುಳ್ಳವನೂ, ಮಹಾತ್ಮನೂ ಆದ ನಿನಗೆ ನಾನು ವಶನಾದೆನು. ನಿನ್ನ ತಪಸ್ಸಿಗೆ ನಾನು ಭಯಪಡುತ್ತಿರುವೆನು. ನನ್ನಲ್ಲಿ ಕೃಪೆಯಿಡು' ಎಂದಿತು. ಅದಕ್ಕೆ ಜಮ ದಗ್ನಿಯು 'ಓ ಕ್ರೋಧವೇ! ನಾನು ನಿನ್ನನ್ನು ಪ್ರತ್ಯಕ್ಷವಾಗಿ ನೋಡಿದಂ ತಾಯಿತು. ಇನ್ನು ನೀನು ನಿಶ್ಚಿಂತನಾಗಿ ಹೋಗು. ನೀನು ಈಗ ನನಗೆ ಅಪಕಾರವನ್ನು ಮಾಡಲಿಲ್ಲ. ನನಗೆ ಕೋಪವಿಲ್ಲ. ಯಾರಿಗಾಗಿ ನಾನು ಈ ಹಾಲನ್ನು ಅಪೇಕ್ಷಿಸಿದೆನೋ, ಆ ಪಿತೃಗಳು ಮಹಾಭಾಗ್ಯಶಾಲಿಗಳು. ಅವರಿಂದ ನೀನು ಇದನ್ನು ತಿಳಿ. ನೀನು ಹೋಗಬಹುದು' ಎಂದನು. ಅದನ್ನು ಕೇಳಿದೊಡನೆ ನಡುಗುತ್ತ, ಕೋಪವು ಅಲ್ಲಿಯೇ ಅದೃಶ್ಯವಾ ವಾಯಿತು. ಪಿತೃಗಳ ಶಾಪದಿಂದ ಅದು ಮುಂಗುಸಿಯಾಯಿತು. ಆಗ ಕೋಪವು ಶಾಪವಿಮೋಚನೆಯನ್ನು ಬೇಡಲು, ಆ ಪಿತೃಗಳು 'ನೀನು ಧರ್ಮವನ್ನು ನಿಂದಿಸಿದಾಗ ಶಾಪವಿಮೋಚನೆಯನ್ನು ಪಡೆಯುವೆ' ಎಂದ ರು. ಆಮೇಲೆ ಆ ಕೋಪವು ಯಾಗಭೂಮಿಗಳಲ್ಲಿಯೂ, ಧರ್ಮಾರಣ್ಯ ದಲ್ಲಿಯೂ ಧರ್ಮವನ್ನು ನಿಂದಿಸುತ್ತ, ಸಂಚರಿಸಿಕೊಂಡಿದ್ದು ಧರ್ಮರಾ ಜನ ಯಾಗಕ್ಕೆ ಬಂದಿತು. ಅದು ಬ್ರಾಹ್ಮಣನು ಮಾಡಿದ ಒಂದುಸೇರು

ಹಿಟ್ಟಿನ ದಾನವನ್ನೇ ಹೊಗಳುತ್ತ, ಧರ್ಮರಾಜನನ್ನು ದೂಷಿಸಿ, ಶಾಪ ವಿಮೋಚನೆಯನ್ನು ಹೊಂದಿತು. ಧರ್ಮವೇ ಯುಧಿಷ್ಠಿರಸ್ವರೂಪವಲ್ಲವೆ? ಮಹಾತ್ಮನಾದ ಯುಧಿಷ್ಠಿರನ ಯಾಗದಲ್ಲಿ ನಡೆದ ಈ ಸಂಗತಿಯನ್ನು ನಾವು ನೋಡುತ್ತಿರುವಾಗಲೇ ಆ ಮುಂಗುಸಿಯು ಕಣ್ಮರೆಯಾಯಿತು' ಎಂದನು.

ಇದು ತೊಂಭತ್ತೈದನೆಯ ಅಧ್ಯಾಯವು.

**ಇಲ್ಲಿಗೆ ಅನುಗೀತಾಪರ್ವವು ಮುಗಿದುದು.**



# *ವೈಷ್ಣವಧರ್ಮಪರ್ವವು.

ಯುಧಿಷ್ಠಿರನು ವೈಷ್ಣವ ಧರ್ಮಗಳನ್ನು ತಿಳಿಸಬೇಕೆಂದು ಕೃಷ್ಣನನ್ನು ಪ್ರಾರ್ಥಿಸಿದುದು. ಇದನ್ನು ಕೇಳಬೇಕೆಂದು ವಸಿಷ್ಠಾದಿಗಳೆಲ್ಲರೂ ಬಂದು ಸೇರಿದುದು. ಕೃಷ್ಣನು ವೈಷ್ಣವಧರ್ಮದ ಪ್ರಭಾವವನ್ನೂ, ತನ್ನ ಮಹಿಮೆಯನ್ನೂ ತಿಳಿಸಿದುದು.

ಆಗ ಜನಮೇಜಯರಾಜನು "ಓ ಮುನೀಂದ್ರಾ! ಅಶ್ವಮೇಧವು ನಡೆದಮೇಲೆ ನನ್ನ ತಾತನಾದ ಯುಧಿಷ್ಠಿರನು ಕೃಷ್ಣನಲ್ಲಿ ಯಾವ ಧರ್ಮ ಸೂಕ್ಷ್ಮಗಳನ್ನು ಕೇಳಿ ತಿಳಿದನೋ ಅದನ್ನು ನನಗೆ ವಿವರಿಸಬೇಕು" ಎನಲು, ವೈಶಂಪಾಯನನು ಹೇಳತೊಡಗಿದನು. 'ರಾಜಾ! ಕೇಳು! ಯುಧಿಷ್ಠಿರನು ಅಶ್ವಮೇಧದ ಕೊನೆಯ ಅಂಗವನ್ನು ಮುಗಿಸಿ, ಅವಭೃಥ ಸ್ನಾನವನ್ನು ಮಾಡಿದಮೇಲೆ, ಕೃಷ್ಣನ ಬಳಿಗೆ ಬಂದು ನಮಸ್ಕರಿಸಿ

* ಈ ಪರ್ವವು ಮೊತ್ತಕ್ಕೆ ಎಂದರೆ, ಇಲ್ಲಿಂದ ಮುಂದಿನ ೨೩ ಅಧ್ಯಾಯಗಳೂ ದಾಕ್ಷಿಣಾತ್ಯಕೋಶಗಳಲ್ಲಿ ಮಾತ್ರ ಇವೆ. ಉತ್ತರದೇಶದ ಪ್ರತಿಗಳಲ್ಲಿಲ್ಲ. ಆದರೂ ಇದರೊಳಗಿನ ಅನೇಕ ಶ್ಲೋಕಗಳು ಬೇರೆ ಅನೇಕ ಕಡೆಗಳಲ್ಲಿ ಪ್ರಮಾಣವಾಗಿ ಎತ್ತಲ್ಪಟ್ಟಿರುವುದರಿಂದ ಇವು ಇಲ್ಲಿರಬೇಕಾದುದೇ.

ಹೀಗೆಂದು ಪ್ರಶ್ನೆಮಾಡುವನು. “ ಹೇ ಭಗವನ್ ! ವೈಷ್ಣವಧರ್ಮಗಳನ್ನು ನಡೆಸುವುದರ ಫಲವೇನು? ಅವಕ್ಕೆ ಆಧಾರಗಳಾವುವು? ಯಾವ ಧರ್ಮವನ್ನು ಮುಂದಿಟ್ಟುಕೊಂಡು ನೀನು ಅವುಗಳನ್ನು ನಿರ್ಣಯಿಸಿರುವೆ? ಈ ಅಂಶಗಳನ್ನೆಲ್ಲ ತಿಳಿಯಬೇಕೆಂದಿರುವೆನು. ನೀನು ಈ ವಿಷಯದಲ್ಲಿ ನನ್ನನ್ನು ಅನುಗ್ರಹಿಸಬಹುದಾದರೆ, ನಿನಗೆ ನನ್ನಲ್ಲಿ ಪ್ರೀತಿಯಿರುವುದಾದರೆ, ಆ ಧರ್ಮಗಳನ್ನು ನಾನೂ ಕೇಳಬಹುದಾಗಿದ್ದರೆ, ಅವುಗಳನ್ನು ನನಗೆ ತಿಳಿಸಬೇಕು. ದೇವಾ! ನಿನ್ನ ಬಾಯಿಂದ ಸಾಕ್ಷಾತ್ತಾಗಿ ಹೊರಟ ಆ ಧರ್ಮಗಳು ಅತಿಪವಿತ್ರಗಳೆನಿಸಿಕೊಂಡು, ಸಮಸ್ತಪಾಪಗಳನ್ನೂ ನೀಗಿಸತಕ್ಕವುಗಳಾಗಿ, ಎಲ್ಲಾ ಧರ್ಮಗಳಿಗಿಂತಲೂ ಮೇಲಾದುದೆಂಬುದರಲ್ಲಿ ಸಂದೇಹವಿಲ್ಲ. ಬ್ರಹ್ಮಹತ್ಯೆ, ಗೋಹತ್ಯೆ, ಮಾತೃಹತ್ಯೆ, ಗುರುದಾರಪರಿಗ್ರಹ, ಶಿಶುಹತ್ಯೆ, ಕೃತಘ್ನತೆ, ಸುರಾಪಾನ, ವೇದವಿಕ್ರಯ, ಮಿತ್ರರಲ್ಲಿ ವಿಶ್ವಾಸಘಾತುಕತೆ, ವೀರಕ್ಷತ್ರಿಯವಧೆ, ಭ್ರೂಣಹತ್ಯೆ, ತಪೋವಿಕ್ರಯ, ದಾನವಿಕ್ರಯ, ಆತ್ಮವಿಕ್ರಯ, ಹೀನವೃತ್ತಿಯಿಂದ ಜೀವಿಕೆ, ಇತರರಿಗೆ ಕೆಡುಕನ್ನೇ ಮಾಡುವ ಬುದ್ಧಿ, ರಹಸ್ಯವಾದ ವಂಚನೆ, ಡಾಂಭಿಕತೆ, ಪರದೂಷಣೆ, ಹಾಲು ಮೊಸರು ಮುಂತಾದ ಗೋರಸಗಳನ್ನು ಬದಲಾಯಿಸಿ, ಅದರಿಂದ ಜೀವನಮಾಡುವುದು, ವೇದಗಳನ್ನು ಕೆಡಿಸುವುದು, ಶೂದ್ರಾದಿನೀಚಜಾತಿಯವರಲ್ಲಿ ಸೇವೆಮಾಡುವುದು, ಕದಿಯುವುದು, ಪುರೋಹಿತನಾಗಿ ದ್ರವ್ಯವನ್ನು ಸಂಪಾದಿಸುವುದು, ಇತರರು ಸಂಗ್ರಹಿಸಿಟ್ಟುದನ್ನು ಅಪಹರಿಸುವುದು, ಸ್ತ್ರೀಹತ್ಯೆ, ಪರಸ್ತ್ರೀಗಮನ, ಮುಂತಾದ ಇನ್ನೂ ಅನೇಕ ಪಾಪಗಳಿಂದ ಬಿಡಿಸಿ ಮುಕ್ತಿಯನ್ನು ಹೊಂದಿಸಲು ಈ ವೈಷ್ಣವಧರ್ಮಗಳೇ ಮೇಲಾದುವೆಂದು ಕೇಳಿರುವೆನು. ಆದುದರಿಂದ ಆ ಧರ್ಮಗಳನ್ನು ನಿನ್ನಿಂದ ಕೇಳಬೇಕೆಂಬ ಕುತೂಹಲವಿದೆ” ಎಂದನು. ಧರ್ಮರಾಜನು ಈ ಪ್ರಶ್ನೆಯನ್ನು ಮಾಡಿದುದನ್ನು ತಿಳಿದು, ವಸಿಷ್ಠಾದಿಮಹರ್ಷಿಗಳೂ, ಜ್ಞಾನಿಗಳೂ, ಭಗವದ್ಭಕ್ತರೂ ಕೃಷ್ಣನ ಮುಖದಿಂದ ಸಾಕ್ಷಾತ್ತಾಗಿ ಹೊರಡುವ ಆ ಉತ್ತಮಧರ್ಮಗಳನ್ನು ತಾವೂ ಕೇಳಬೇಕೆಂಬ ಕುತೂಹಲದಿಂದ ಆ ಸಭೆಯಲ್ಲಿ ಬಂದು ನೆರೆದರು. ಹೀಗೆ ಸಭೆಯು ಕೂಡಿದಮೇಲೆ ಧರ್ಮರಾಜನು ತಿರುಗಿ ಕೃಷ್ಣನನ್ನು ಕುರಿತು ‘ ವಾಸುದೇವಾ ! ನಾನು ನಿಜವಾದ

ಭಕ್ತಿಯಿಂದ ನಿನ್ನ ಪಾದವನ್ನಾಶ್ರಯಿಸಿದವನು. ಓ ಭಕ್ತವತ್ಸಲಾ! ನಾನು ನಿನಗೆ ಪ್ರಿಯಭಕ್ತನೆಂಬುದು ನಿನಗೆ ತಿಳಿದಿದ್ದರೆ, ನಾನೂ ನಿನ್ನ ಅನುಗ್ರಹಕ್ಕೆ ಪಾತ್ರನಾಗಬಹುದಾದರೆ, ಆ ಧರ್ಮರಹ್ಯಗಳನ್ನೆಲ್ಲ ನನಗೆ ತಿಳಿಸಬೇಕು. ಇದುವರೆಗೆ ನಾನು ಮನು, ವಸಿಷ್ಠ, ಕಶ್ಯಪ, ಗರ್ಗ, ಗೌತಮ, ಗೋಪಾಲಕ, ಪರಾಶರ, ಮೈತ್ರೇಯ, ಉಮೆ, ಮಾಹೇಶ್ವರ, ನಂದಿ, ಬ್ರಹ್ಮ, ಸುಬ್ರಹ್ಮಣ್ಯ, ಧೂಮಾಯನ, ಕಾಂಡವೈಶ್ವಾನರ, ಭಾರ್ಗವ, ಯಾಜ್ಞವಲ್ಕ್ಯ, ಮಾರ್ಕಂಡೇಯ, ಭಾರದ್ವಾಜ, ಬೃಹಸ್ಪತಿ, ಕುಣಿ, ಕುಣಿಬಾಹು, ವಿಶ್ವಾಮಿತ್ರ, ಸುಮಂತು, ಜೈಮಿನಿ, ಶಕುನಿ, ಪುಲಸ್ತ್ಯ, ಪುಲಹ, ಪಾವಕ, ಅಗಸ್ತ್ಯ, ಮೌದ್ಗಲ್ಯ, ಶಾಂಡಿಲ್ಯ, ಶಲಭಾಲಯ, ವಾಲಖಿಲ್ಯರೇ ಮೊದಲಾದ ಮಹರ್ಷಿಗಳಿಂದ ನಿರ್ಣಯಿಸಲ್ಪಟ್ಟ ವಿಧವಿಧ ಧರ್ಮಗಳನ್ನೂ, ಹಾಗೆಯೇ ಸಪ್ತರ್ಷಿಗಳಿಂದ ನಿರ್ಣಯಿಸಲ್ಪಟ್ಟ ಧರ್ಮಗಳನ್ನೂ ಕೇಳಿರುವೆನು. ಅಲ್ಲದೆ ಆಪಸ್ತಂಬರು, ಶಂಖಲಿಖಿತರು, ಪ್ರಜಾಪತಿ, ಯಮ, ಮಹೇಂದ್ರ, ವ್ಯಾಘ್ರಪಾದ, ವ್ಯಾಸ, ನಾರದ, ವಿಭಂಡಕರೇ ಮೊದಲಾದ ಮಹಾತ್ಮರು ವಿಧಿಸಿದ ಧರ್ಮಗಳನ್ನೂ ಕೇಳಿರುವೆನು. ಮತ್ತು ಕಾಪೋತಧರ್ಮಗಳನ್ನೂ, ವಿದುರವಾಕ್ಯಗಳನ್ನೂ ಅಂಗಿರಸ್ಸು, ಭೃಗು, ಇವರು ನಿರ್ಣಯಿಸಿದ ಧರ್ಮಗಳನ್ನೂ, ಕ್ರೌಂಚ ಧರ್ಮಗಳನ್ನೂ ಕೇಳಿರುವೆನು. ಮತ್ತು ಮೃದಂಗ, ಸೂರ್ಯ, ಹಾರೀತಕ, ಪಿಶಂಗ, ಕತಪ, ಸುಬಾಲಕ, ಉದ್ದಾಲಕ, ಉಶನಸ್ಸು, ವೈಶಂಪಾಯನರೇ ಮೊದಲಾದವರು ಹೇಳಿದ ಧರ್ಮನಿರ್ಣಯಗಳನ್ನೂ, ಇನ್ನೂ ಬೇರೆ ಬೇರೆಯವರು ನಿರ್ಣಯಿಸಿದ ಧರ್ಮಗಳನ್ನೂ ಅನೇಕವಾಗಿ ನಾನು ಕೇಳಿ ತಿಳಿದಿರುವೆನು. ಆದರೇನು? ನಿನ್ನ ಬಾಯಿಂದ ಸಾಕ್ಷಾತ್ತಾಗಿ ಹೊರಡತಕ್ಕ ಧರ್ಮಗಳು ಎಲ್ಲಕ್ಕಿಂತಲೂ ಪವಿತ್ರತಮಗಳೆಂದು ನನಗೆ ತೋರಿದೆ. ಆದುದರಿಂದ ನಿನ್ನಲ್ಲಿ ಮರೆಹೊಕ್ಕ ನಿನ್ನ ಭಕ್ತನಾದ ನನಗೆ, ನಿನಗೆ ಸಂಬಂಧಪಟ್ಟ ಆ ಪವಿತ್ರಧರ್ಮಗಳನ್ನು ತಿಳಿಸಬೇಕು'' ಎಂದನು. ಈ ಮಾತನ್ನು ಕೇಳಿ ಕೃಷ್ಣನು ಸಂತೋಷದಿಂದ 'ಓ ಧರ್ಮಪುತ್ರಾ! ಧರ್ಮಶ್ರವಣದಲ್ಲಿ ಇಂತಹ ಶ್ರದ್ಧೆಯುಳ್ಳ ನಿನಗೆ ಲೋಕದಲ್ಲಿ ದುರ್ಲಭವಾದುದೊಂದೂ ಇಲ್ಲ. ಅಷ್ಟೇಕೆ? ಇಂತಹ ಧರ್ಮಗಳನ್ನು ಕಿವಿಯಿಂದ ಕೇಳಿದರೂ,

ಧರ್ಮಮಾಡುವವರನ್ನು ಕಣ್ಣಿಂದ ನೋಡಿದರೂ, ಬಾಯಿಂದಾಡಿದರೂ, ಆ ಧರ್ಮಗಳನ್ನು ಪ್ರಶಂಸೆಮಾಡಿದರೂ, ಅದು ಮನುಷ್ಯನಿಗೆ ಇಂದ್ರಪದ ವಿಯನ್ನು ಕೈಗೂಡಿಸುವುದು. ಲೋಕದಲ್ಲಿ ಮನುಷ್ಯನಿಗೆ ಧರ್ಮವೇ ತಂದೆ! ಧರ್ಮವೇ ತಾಯಿ! ಧರ್ಮವೇ ಪ್ರಭು! ಧರ್ಮವೇ ಸುಹೃತ್ತು! ಧರ್ಮವೇ ಸಹೋದರನು! ಧರ್ಮವೇ ಮನುಷ್ಯನಿಗೆ ಇಷ್ಟಮಿತ್ರನೂ, ಸ್ವಾಮಿಯೆಂದೂ ತಿಳಿ. ಧರ್ಮದಿಂದಲೇ ಅರ್ಥಕಾಮಗಳೂ, ಸುಖಭೋಗಗಳೂ, ಐಶ್ವರ್ಯವೂ, ಸದ್ಗತಿಯೂ ಉಂಟಾಗುವುವು. ಶುದ್ಧವಾದ ಧರ್ಮವು ಮಹಾಭಯದಿಂದ ತಪ್ಪಿಸುವುದು. ಮನುಷ್ಯನಿಗೆ ಬ್ರಾಹ್ಮಣ ಜನ್ಮವಾಗಲಿ, ದೇವಗತಿಯಾಗಲಿ ಧರ್ಮದಿಂದಲೇ ಲಭಿಸುವುದು. ಧರ್ಮವು ಮನುಷ್ಯನನ್ನು ಪಾವನಗೊಳಿಸುವುದು. ಕಾಲಗತಿಯಿಂದ ಮನುಷ್ಯನಿಗೆ ಪಾಪವು ಕ್ಷೀಣಿಸುತ್ತಬಂದಮೇಲೆಯೇ ಅವನಿಗೆ ಧರ್ಮವನ್ನು ಮಾಡಬೇಕೆಂಬ ಬುದ್ಧಿಯು ಹುಟ್ಟುವುದು. ಸಾವಿರಾರು ಜನ್ಮಗಳನ್ನೆತ್ತಿದಮೇಲೆಯೂ ನರಜನ್ಮವು ಲಭಿಸುವುದು ದುರ್ಲಭವು. ಅಂತಹ ಉತ್ತಮವಾದ ಮನುಷ್ಯಜನ್ಮವು ದೊರೆತಿರುವಾಗಲೂ ಧರ್ಮವನ್ನು ಮಾಡದವನು ತನ್ನಿಂದತಾನೇ ವಂಚಿತನಾಗಿ ಕೆಡುವನು. ಕುತ್ಸಿತರಾಗಿಯೂ, ದರಿದ್ರರಾಗಿಯೂ, ಕುರೂಪಿಗಳಾಗಿಯೂ, ವ್ಯಾಧಿಗ್ರಸ್ತರಾಗಿಯೂ, ಇತರರ ದ್ವೇಷಕ್ಕೆ ಪಾತ್ರರಾಗಿಯೂ ಇರುವವರಾರೋ, ಅವರು ಪೂರ್ವಜನ್ಮದಲ್ಲಿ ಧರ್ಮವನ್ನು ಮಾಡಿದವರಲ್ಲವೆಂದು ತಿಳಿಯಬೇಕು. ದೀರ್ಘಾಯುಷ್ಮಂತರೂ, ಶೂರರೂ, ಪಂಡಿತರೂ, ಸುಖಿಗಳೂ, ಆರೋಗದೃಢಕಾಯರೂ, ರೂಪವಂತರೂ ಆದವರು, ಪೂರ್ವದಲ್ಲಿ ಉತ್ತಮಧರ್ಮಗಳನ್ನು ನಡೆಸಿದವರು. ಆದುದರಿಂದ ಮಾಡಿದ ಧರ್ಮವು ಉತ್ತಮಗತಿಯನ್ನು ಹೊಂದಿಸುವುದು. ಅಧರ್ಮವು ತಿರ್ಯಗ್ಜನ್ಮದಲ್ಲಿ ತಳ್ಳುವುದು. ಓ ಧರ್ಮಪುತ್ರಾ! ನೀನು ಕೇಳಿದ ಉತ್ತಮವಾದ ಧರ್ಮವನ್ನು ತಿಳಿಸುವೆನು ಸಾವಧಾನವಾಗಿ ಕೇಳು. ನೀನು ನನಗೆ ಪರಮಪ್ರಿಯನು. ಇದರಮೇಲೆ ನನ್ನನ್ನು ಮರೆಹೊಕ್ಕವನು ನಿನಗೆ ಎಷ್ಟೇ ರಹಸ್ಯವಾದ ಪರಮಾರ್ಥವನ್ನಾದರೂ ತಿಳಿಸಬಹುದು. ಇನ್ನು ಈ ಧರ್ಮವನ್ನು ಹೇಳುವುದೇನು ದೊಡ್ಡದು? ಮೊದಲು ನನ್ನ ತತ್ವವನ್ನು ತಿಳಿಸುವೆನು ಕೇಳು. ನಾನು

ಈ ಮನುಷ್ಯಜನ್ಮವನ್ನು ನನ್ನ ಸ್ವೇಚ್ಛೆಯಿಂದ ನಾನೇ ನನ್ನಲ್ಲಿ ಕಲ್ಪಿಸಿಕೊಂಡಿರುವೆನು. ಧರ್ಮಸಂಸ್ಥಾಪನಾರ್ಥವಾಗಿಯೂ, ದುಷ್ಟರನ್ನಡಗಿಸುವುದಕ್ಕಾಗಿಯೂ ಹೀಗೆ ಮನುಷ್ಯತ್ವವನ್ನಂಗೀಕರಿಸಿರುವ ನನ್ನನ್ನು ಯಾರು ತಿರಸ್ಕಾರಭಾವದಿಂದ ತಿಳಿಯುವರೋ, ಅವರು ಎಂದೆಂದಿಗೂ, ಸಂಸಾರದಲ್ಲಿಯೇ ಮುಳುಗಿ, ತಿರ್ಯಗ್ಜನ್ಮಗಳಲ್ಲಿ ಹುಟ್ಟುತ್ತಲೇ ಇರುವರು. ಹಾಗಿಲ್ಲದೆ ಯಾರು ತಮ್ಮ ಜ್ಞಾನಚಕ್ಷುಸ್ಸಿನಿಂದ ಸಮಸ್ತಭೂತಗಳಲ್ಲಿಯೂ ನಾನಿರುವುದನ್ನು ಕಾಣುವರೋ, ಅಂತವರು ನನ್ನ ಭಕ್ತರು. ಅವರ ಮನಸ್ಸು ಯಾವಾಗಲೂ ನನ್ನಲ್ಲಿಯೇ ನೆಲೆಸಿರುವುದು. ಅಂತವರನ್ನು ನನ್ನ ಬಳಿಗೆ ಕರೆದುಕೊಳ್ಳುವೆನು. ನನ್ನ ಭಕ್ತರಿಗೆ ಎಂದಿಗೂ ನಾಶವಿಲ್ಲ. ಅವರಿಗೆ ಪಾಪಸಂಬಂಧವಿಲ್ಲ! ಮನುಷ್ಯಜಾತಿಯಲ್ಲಿ ಅವರ ಜನ್ಮವೇ ಸಫಲವಾದುದು. ನನ್ನ ಭಕ್ತರಾದವರಿಗೆ ಅನೇಕ ಪಾಪಗಳ ಸಂಬಂಧವಿದ್ದರೂ, ತಾವರೆಯೆಲೆಯಲ್ಲಿ ನೀರು ಹೇಗೋ ಹಾಗೆ ಆ ಪಾಪವೊಂದೂ ಅವರನ್ನು ಅಂಟಲಾರದು. ಹಿಂದೆ ಸಾವಿರಾರು ಜನ್ಮಗಳಲ್ಲಿ ತಪೋನಿರತರಾಗಿ, ಆತ್ಮಶುದ್ಧಿಯನ್ನು ಹೊಂದಿದವರಿಗೆಮಾತ್ರವೇ ನನ್ನಲ್ಲಿ ಭಕ್ತಿಯುಂಟಾಗುವುದು. ಉತ್ತಮರಹಸ್ಯವೂ, ಅಚಲವೂ, ಕೂಟಸ್ಥವೂ, ಅಕ್ಷಯವೂ ಆದ ನನ್ನ ನಿಜವು ನನ್ನ ಭಕ್ತರಿಗೆ ತಿಳಿಯುವಂತೆ ದೇವತೆಗಳಿಗೂ ತಿಳಿಯಲಾರದು. ಇದಲ್ಲದೆ ಅವತಾರಗಳ ಮೂಲಕವಾಗಿ ತೋರುವ ನನ್ನ ಇತರ ರೂಪಗಳನ್ನೂ ಸಮಸ್ತ ಭೂತಗಳೂ, ತಮ್ಮತಮ್ಮ ಕೋರಿಕೆಗಳಿಗಾಗಿ ಪೂಜಿಸುವುವು. ಹಿಂದೆ ಕಳೆದುಹೋದ ಅಥವಾ ಮುಂದೆ ನಡೆಯುವ ಸಾವಿರಾರುಕೋಟಿ ಕಲ್ಪಗಳಲ್ಲಿಯೂ, ದೇವತೆಗಳಿಗೆಮಾತ್ರ ಗೋಚರಿಸುವ ಆ ದಿವ್ಯರೂಪವನ್ನು ನಾನು ಇಲ್ಲಿಯೇ ತೋರಿಸಬಲ್ಲೆನು. ಉತ್ಪತ್ತಿ, ಸ್ಥಿತಿ (ಲಯ) ಮೋಕ್ಷಗಳೆಲ್ಲಕ್ಕೂ ಕಾರಣನಾದ ನನ್ನ ನಿಜವನ್ನು ಯಾವನು ತಿಳಿದು ನನ್ನಲ್ಲಿ ಮರೆಹುಗುವನೋ, ಅವನನ್ನು ನಾನು ಅನುಗ್ರಹಿಸಿ ಸಂಸಾರದಿಂದ ಬಿಡಿಸುವೆನು. ನಾನೇ ದೇವತೆಗಳಿಗೆಲ್ಲ ಆದಿ! ಬ್ರಹ್ಮಾದಿಗಳೂ ನನ್ನಿಂದ ಸೃಷ್ಟಿಸಲ್ಪಟ್ಟವರು. ನಾನೇ ನನ್ನ ಮಾಯೆಯಾದ ಪ್ರಕೃತಿಯನ್ನು ಹಿಡಿದು ಜಗತ್ತನ್ನು ಸೃಷ್ಟಿಸುವೆನು. ತಪಸ್ಸೇ ಮೂಲವಾಗಿ ಉಳ್ಳ ಅವ್ಯಕ್ತವೂ ನಾನೇ! ರಜೋಗುಣಮಧ್ಯದಲ್ಲಿ ನೆಲೆ

ಗೊಂಡ ಆಬ್ರಹ್ಮಸ್ತಂಬಪರ್ಯಂತವಾದ ಜಗತ್ತೂ ನಾನೇ. ಲೋಭರಹಿತವಾಗಿ ಎಲ್ಲಕ್ಕೂ ಮೇಲೆನಿಸಿದ ಸತ್ವಗುಣವೂ ನಾನೇ. ಸ್ವರ್ಗವೇ ನನ್ನ ಶಿರಸ್ಸು. ಚಂದ್ರಸೂರ್ಯರಿಬ್ಬರೂ ನನ್ನ ಕಣ್ಣುಗಳು. ಗೋವುಗಳು, ಅಗ್ನಿ, ಬ್ರಾಹ್ಮಣನು, ಈ ಮೂವರೂ ನನ್ನ ಮುಖವು. ವಾಯುವು ನನ್ನ ಉಸಿರಾಟವು. ಎಂಟು ದಿಕ್ಕುಗಳೂ ನನ್ನ ಎಂಟು ತೋಳುಗಳು. ನಕ್ಷತ್ರಗಳು ನನ್ನ ಆಭರಣಗಳು. ಸರ್ವಭೂತಗಳಿಗೂ ಅವಕಾಶವನ್ನು ಕೊಡತಕ್ಕ ಅಂತರಿಕ್ಷವು ನನ್ನ ಎದೆ. ಮೇಘಗಳ ಮತ್ತು ವಾಯುವಿನ ಮಾರ್ಗವೇ ನನ್ನ ಉದರವು. ಸಮುದ್ರದ್ವೀಪಾದಿಗಳೊಡಗೂಡಿ, ಎಲ್ಲವನ್ನೂ ಹೊತ್ತಿರುವ ಭೂಮಂಡಲವೇ ನನ್ನ ಪಾದಗಳು. ನಾನು ಆಕಾಶದಲ್ಲಿ ಒಂದೇ ಗುಣವುಳ್ಳವನಾಗಿಯೂ, ಜಲದಲ್ಲಿ ನಾಲ್ಕು ಗುಣಗಳುಳ್ಳವನಾಗಿಯೂ, ಭೂಮಿಯಲ್ಲಿ ಪಂಚಮಹಾಭೂತಗಳಲ್ಲಿರುವ ಶಬ್ದವೇ ಮೊದಲಾದ ಐದು ಗುಣಗಳಿಂದಲೂ ಕೂಡಿದವನಾಗಿಯೂ ತನ್ಮಾತ್ರಸಂಜ್ಞನಾಗಿ ನೆಲೆಸಿರುವೆನು. ನಾನು ಸಾವಿರ ತಲೆಗಳುಳ್ಳವನು. ನನಗೆ ಸಾವಿರ ಮುಖಗಳು. ಸಾವಿರ ಕಣ್ಣುಗಳು! ಸಹಸ್ರಪಾದಗಳು! ಸಹಸ್ರ ಬಾಹುಗಳು! ಸಹಸ್ರ ಉದರಗಳು! ಸಾವಿರ ತೊಡೆಗಳು! ನಾನು ಸಮಸ್ತ ಭೂಮಿಯನ್ನೂ ಎಲ್ಲಾ ಕಡೆಯೂ ಆವರಿಸಿಕೊಂಡು, ಅವೆಲ್ಲಕ್ಕೂ ಹತ್ತಂಗುಲಗಳು ಮೀರಿ ನಿಂತವನು. ನಾನು ಸರ್ವಭೂತಗಳ ಆತ್ಮಕ್ಕೂ ಅಂತರಾತ್ಮನಾಗಿರುವುದರಿಂದ ಸರ್ವವ್ಯಾಪಿಯೆನಿಸಿರುವೆನು. ನಾನು ಅಚಿಂತ್ಯನು! ಅನಂತನು! ಮುಪ್ಪಿಲ್ಲದವನು! ಜನ್ಮವಿಲ್ಲದವನು! ನನಗಿಂತಲೂ ಮೊದಲು ಯಾವುದೂ ಇಲ್ಲ. ನಾನು ಯಾರಿಗೂ ವಧ್ಯನಲ್ಲ. ನನ್ನನ್ನು ಅಳತೆಯಿಡಲು ಸಾಧ್ಯವಲ್ಲ ನಾನು ಅವ್ಯಯನು. ನಾನು ಗುಣ (ಹೇಯಗುಣ) ರಹಿತನು. ಗೂಢವಾಗಿ ಅಡಗಿರತಕ್ಕವನು. ದ್ವಂದ್ವವಿಲ್ಲದವನು! ಮಮಕಾರವಿಲ್ಲದವನು! ಅಂಶವಿಭಾಗವಾಗಲಿ, ವಿಕಾರವಾಗಲಿ ಇಲ್ಲದವನು! ಮೋಕ್ಷಕ್ಕೆ ನಾನೇ ಮೂಲಕಾರಣನು! ಸುಧೆ, ಸ್ವಧೆ, ಸ್ವಾಹಾಕಾರಗಳೆಲ್ಲವೂ ನಾನೇ! ನಾನೇ ನನ್ನ ತೇಜಸ್ಸಿನಿಂದಲೂ, ಸಂಕಲ್ಪದಿಂದಲೂ ಸ್ವೇದಜಾದಿ ಚತುರ್ವಿಧ ಪ್ರಾಣಿಗಳನ್ನೂ ಸ್ನೇಹಪಾಶಗಳೆಂಬ ಹಗ್ಗಗಳಿಂದ ಕಟ್ಟಿ, ನನ್ನ ಮಾಯೆಯಿಂದ ಧರಿಸುತ್ತಿರುವೆನು. ನಾಲ್ಕು

ಆಶ್ರಮಧರ್ಮಗಳೂ ನಾನೇ! ಚಾತುರ್ಹೋತ್ರಗಳ ಫಲವನ್ನು ಭುಜಿಸ ತಕ್ಕವನೂ ನಾನೇ! ವಾಸುದೇವಾದಿ ಚತುರ್ಮೂರ್ತಿಗಳೂ, ಚತುರ್ಯಜ್ಞಗಳೂ ನನ್ನ ಸ್ವರೂಪಗಳೇ! ಚತುರಾಶ್ರಮಗಳನ್ನುಂಟುಮಾಡಿದವನೂ ನಾನೇ! ಪ್ರಳಯಕಾಲಗಳಲ್ಲಿ ನಾನೇ ಸಮಸ್ತ ಜಗತ್ತನ್ನೂ ನನ್ನ ಗರ್ಭದಲ್ಲಿ ಉಡುಗಿಸಿಟ್ಟುಕೊಂಡು, ನಾನೊಬ್ಬನಾಗಿ, ಯೋಗಶಯನದಲ್ಲಿ ಮಲಗಿರುವೆನು. ಸಹಸ್ರಯುಗಪರ್ಯಂತವಾದ ಬ್ರಹ್ಮದೇವನ ಒಂದು ರಾತ್ರಿಯವರೆಗೆ ಮಹಾಸಮುದ್ರದಲ್ಲಿದ್ದು, ಆಮೇಲೆ ತಿರುಗಿ ಸ್ಥಾವರ ಜಂಗಮಗಳಾದ ಪ್ರಾಣಿಗಳನ್ನು ಸಂಹರಿಸತಕ್ಕವನೂ ನಾನೇ. ಆಮೇಲೆ ಸೃಷ್ಟಿಸತಕ್ಕವನೂ ನಾನೇ. ಭೂತಗಳು ನನ್ನ ಮಾಯೆಯಿಂದ ಮೋಹಿತಗಳಾಗಿ ನನ್ನನ್ನು ತಿಳಿಯಲಾರವು. ಎಲ್ಲರಿಂದ ಯಾವಾಗಲೂ ಹುಡಕಲ್ಪಡುವ ನಾನು ಬೀಸಿದ ಮಾಯೆಯೆಂಬ ಕತ್ತಲೆಯು, ನಂದಿದ ದೀಪದ ಗತಿಯು ಹೇಗೋ ಹಾಗೆ ಯಾರಿಗೂ ತಿಳಿಯಲಾರದು. ರಾಜೇಂದ್ರಾ! ನಾನಿಲ್ಲದ ಸ್ಥಳವೊಂದಾದರೂ ಇಲ್ಲ. ನನ್ನಲ್ಲಿ ನೆಲೆಗೊಂಡಿಲ್ಲದ ಭೂತವೂ ಯಾವುದೂ ಇಲ್ಲ. ಸ್ಥೂಲವೂ, ಸೂಕ್ಷ್ಮವೂ ಎನಿಸಿದ ಈ ಜಗತ್ತು ಎಲ್ಲಿಯವರೆಗಿರುವುದೋ, ಅಲ್ಲಿಯವರೆಗೆ ನಾನು ಅವಕ್ಕೆಲ್ಲ ಜೀವಭೂತನಾಗಿಯೇ ಅದರೊಳಗೆ ಅಡಗಿರುವೆನು. ಇನ್ನ ಹೆಚ್ಚುಮಾತುಗಳಿಂದೇನು? ಸತ್ಯವನ್ನು ಒಂದೇ ಮಾತಿನಲ್ಲಿ ತಿಳಿಸುವೆನು. ಹಿಂದೆ ಕಳೆದುಹೋದುದು, ಮುಂದೆ ಬರುವುದು ಅವೆಲ್ಲವೂ ನಾನೇ. ಎಲ್ಲಾ ಭೂತಗಳೂ ನನ್ನಿಂದಲೇ ಸೃಷ್ಟವಾಗಿ, ನನ್ನ ವಿಕಾರವಾಗಿಯೇ ಇದ್ದರೂ, ನನ್ನ ಮಾಯೆಯಿಂದ ಮೋಹಿತವಾಗಿ, ನನ್ನನ್ನೇ ತಿಳಿಯಲಾರದಿರುವುವು. ದೇವಾಸುರ ಮನುಷ್ಯರೊಡಗೂಡಿದ ಜಗತ್ತೆಲ್ಲ ನನ್ನಿಂದಲೇ ಹುಟ್ಟಿ, ಕೊನೆಗೆ ನನ್ನಲ್ಲಿಯೇ ಲಯಹೊಂದುವುದು.

ಇದು ತೊಂಭತ್ತಾರನೆಯ ಅಧ್ಯಾಯವು.



## ಕೃಷ್ಣನು ಯುಧಿಷ್ಠಿರನಿಗೆ ಚಾತುರ್ವರ್ಣ್ಯಧರ್ಮಗಳನ್ನು ತಿಳಿಸಿದುದು.

ಓ ಜನಮೇಜಯರಾಜಾ! ಹೀಗೆ ಕೃಷ್ಣನು ತನ್ನಿಂದ ಉಂಟಾದ ಸಮಸ್ತಜಗತ್ತಿನ ವಿವರವನ್ನೂ ಹೇಳಿದಮೇಲೆ, ಆಯಾಜಾತಿಯವರು ಅನುಸರಿಸಬೇಕಾದ ಪವಿತ್ರ ಧರ್ಮಗಳನ್ನೆಲ್ಲ ಹೇಳತೊಡಗಿದನು. 'ಓ ಧರ್ಮರಾಜಾ! ಪಾಪನಾಶಕಗಳಾದ ಧರ್ಮಗಳ ಫಲವನ್ನು ಹೇಳುವೆನು ಕೇಳು. ಯಾವನು ಶುದ್ಧನಾಗಿ, ಏಕಾಗ್ರತೆಯಿಂದ ಧ್ಯಾನಪರನಾಗಿದ್ದು, ಸ್ವರ್ಗವನ್ನೂ, ಯಶಸ್ಸನ್ನೂ, ಆಯುಸ್ಸನ್ನೂ ಕೊಡತಕ್ಕ ಮತ್ತು ಎಲ್ಲರಿಗೂ ಅವಶ್ಯವಾಗಿ ತಿಳಿಯಬೇಕಾದ ಧರ್ಮವನ್ನು ಕೇಳುವನೋ, ಅವನಿಗೆ, ವಿಶೇಷವಾಗಿ ನನ್ನಲ್ಲಿ ಭಕ್ತಿಯುಳ್ಳವರಿಗೆ, ಪೂರ್ವಾರ್ಜಿತವಾದ ಸಮಸ್ತ ಪಾಪವೂ ಬಿಟ್ಟುಹೋಗುವುದು' ಎಂದನು. ಕೃಷ್ಣನ ಬಾಯಿಂದ ಈ ಮಾತು ಹೊರಟೊಡನೆ, ಅಲ್ಲಿ ನೆರೆದಿದ್ದ, ದೇವರ್ಷಿಗಳು, ಬ್ರಹ್ಮಋಷಿಗಳು, ಗಂಧರ್ವರು, ಅಪ್ಸರಸ್ಸುಗಳು, ಯಕ್ಷರು, ಭೂತಗಳು, ಗ್ರಹಗಳು, ವಾಲಖಿಲ್ಯಮುನಿಗಳು, ಮಹಾತ್ಮರೂ, ತತ್ವಜ್ಞಾನಿಗಳೂ ಆದ ಯೋಗಿಗಳು, ಭಗವದ್ಭಕ್ತರು, ಪಂಚಕಾಲಗಳಲ್ಲಿಯೂ ಉಪಾಸನಮಾಡತಕ್ಕವರು, ಇವರೆಲ್ಲರೂ ಸಂತೋಷಗೊಂಡು, ಭಗವಂತನ ಬಾಯಿಂದ ಸಾಕ್ಷಾತ್ತಾಗಿ ಹೊರಡುವ ವೈಷ್ಣವಧರ್ಮವನ್ನು ಕೇಳಬೇಕೆಂದು ಆ ಕೃಷ್ಣನ ಮುಂದೆ ನಮಸ್ಕರಿಸಿದರು.

ಶ್ರೀಕೃಷ್ಣನ ದಿವ್ಯದೃಷ್ಟಿಯಿಂದಲೇ ಸಮಸ್ತ ಪಾಪಗಳೂ ನೀಗಿ ಪವಿತ್ರವೆನಿಸಿದ ಆ ಋಷಿಸಮೂಹಗಳನ್ನೂ, ದೇವತೆಗಳನ್ನೂ ನೋಡಿ ಧರ್ಮರಾಜನು, ಸಂತೋಷದಿಂದ ಕೃಷ್ಣನ ಪಾದಗಳನ್ನು ಹಿಡಿದು ನಮಸ್ಕರಿಸಿ, ಹೀಗೆಂದು ಪ್ರಶ್ನೆಮಾಡಿದನು. "ಓ ಕೇಶವಾ! ನಿನ್ನಿಂದ ಸೃಷ್ಟಿಸಲ್ಪಟ್ಟ ಮನುಷ್ಯವರ್ಗದಲ್ಲಿ ಬ್ರಾಹ್ಮಣನಿಗೆ ಲಭಿಸುವ ಗತಿಯಾವುದು? ಕ್ಷತ್ರಿಯನಿಗೂ, ವೈಶ್ಯನಿಗೂ ಶೂದ್ರನಿಗೂ ಉಂಟಾಗುವ ಬೇರೆಬೇರೆ ಗತಿಗಳಾವುವು? ಬ್ರಾಹ್ಮಣನು ಯಮಲೋಕದಲ್ಲಿ ಯಮಪಾಶದಿಂದ ಬಿಗಿಯಲ್ಪಡುವ ಕಾರಣವಾವುದು? ಹಾಗೆಯೇ ಕ್ಷತ್ರಿಯ ವೈಶ್ಯ ಶೂದ್ರರೂ

ಯಾವಯಾವ ಕಾರಣಗಳಿಂದ ಯಮಲೋಕದಲ್ಲಿ ಬಂಧಿಸಲ್ಪಡುವರು? ಓ ಲೋಕನಾಥಾ! ಕರ್ಮಗಳ ಫಲಗಳನ್ನು ನನಗೆ ತಿಳಿಸಬೇಕು' ಎಂದನು.

ಯುಧಿಷ್ಠಿರನು ಹೀಗೆಂದು ಪ್ರಶ್ನೆಮಾಡಿದಮೇಲೆ ಕೃಷ್ಣನು ಚತುರ್ವರ್ಣದವರಿಗೂ ಅವರವರ ಕರ್ಮಗಳಿಂದುಂಟಾಗತಕ್ಕ ಸಂಸಾರಗತಿಗಳನ್ನು ವಿವರಿಸತೊಡಗಿದನು. ಓ ರಾಜೇಂದ್ರಾ! ಬ್ರಾಹ್ಮಣಾದಿವರ್ಣಕ್ರಮಗಳಿಂದ ಅವರವರ ಧರ್ಮಗಳನ್ನು ತಿಳಿಸುವೆನು ಕೇಳು. ಬ್ರಾಹ್ಮಣನು ಸ್ವಧರ್ಮವನ್ನು ಸರಿಯಾಗಿ ಅನುಷ್ಠಿಸುತ್ತ ಬಂದರೆ, ಲೇಶಮಾತ್ರವೂ ದುಷ್ಕೃತ್ಯಕ್ಕೆ ಅವಕಾಶವಿರದು. ಶಿಖೆಯನ್ನೂ, ಯಜ್ಞೋಪವೀತವನ್ನೂ (ಜುಟ್ಟು, ಜನಿವಾರಗಳನ್ನು) ಧರಿಸಿರುವುದು, ಪ್ರತಿದಿನವೂ ತಪ್ಪದೆ ಸಂಧ್ಯೋಪಾಸನೆ, ಹೋಮ, ಪೂರ್ಣಾಹುತಿ, ವೈಶ್ವದೇವ, ಅತಿಥಿಪೂಜೆ, ವೇದಾಧ್ಯಯನ, ಜಪ ಯಜ್ಞಗಳನ್ನು ಬಿಡದೆ ನಡೆಸುವುದು, ಶೂದ್ರಭೋಜನಗಳನ್ನು ವರ್ಜಿಸುವುದು, ಡಂಭಕ್ಕೂ ಅಸತ್ಯಕ್ಕೂ ಹೋಗದೆ, ಸ್ವದಾರನಿರತನಾಗಿ, ಪಂಚಯಜ್ಞಗಳನ್ನು ನಡೆಸುವುದು, ಇವೆಲ್ಲಾ ಬ್ರಾಹ್ಮಣಕೃತ್ಯಗಳು. ಅವರು ಹೋಮಮಾಡತಕ್ಕ ಮೂರು ಅಗ್ನಿಗಳೇ ಅವರ ಪಾಪಗಳನ್ನೆಲ್ಲಾ ದಹಿಸುವುವು. ಅಂತವರು ಬ್ರಹ್ಮಲೋಕವನ್ನು ಸೇರುವರು. ಅಲ್ಲಿ ಅವರು ಬ್ರಹ್ಮನ ಗಾಯಕರಾದ ಗಂಧರ್ವರಿಂದ ಸ್ತುತಿಸಲ್ಪಡುತ್ತ ಬ್ರಹ್ಮನಿಂದಲೂ ಪೂಜಿತರಾಗಿ ಪ್ರಳಯಕಾಲದವರೆಗೆ ಬ್ರಹ್ಮಲೋಕದಲ್ಲಿ ಸಂಚರಿಸುವರು.

ಕ್ಷತ್ರಿಯನೂಕೂಡ ರಾಜ್ಯದಲ್ಲಿ ನೆಲೆಗೊಂಡು, ಸ್ವಧರ್ಮಗಳನ್ನು ರಕ್ಷಿಸುತ್ತ ಪ್ರಜೆಗಳನ್ನು ಕ್ಷೇಮದಿಂದ ಕಾಪಾಡಬೇಕು. ಪ್ರಜೆಗಳ ಆದಾಯದಲ್ಲಿ ಆರನೆಯ ಒಂದು ಭಾಗವನ್ನುಮಾತ್ರ ತಾನು ಗ್ರಹಿಸಿ, ಅದರಿಂದ ತೃಪ್ತನಾಗಿರಬೇಕು. ಯಜ್ಞದಾನಗಳನ್ನು ನಡೆಸಬೇಕು. ಸ್ವಪತ್ನಿಯಲ್ಲಿ ತೃಪ್ತನಾಗಿರಬೇಕು. ಶಾಸ್ತ್ರದ ಕಟ್ಟಿಗೆ ಒಳಪಟ್ಟು, ತತ್ವಜ್ಞನಾಗಿ, ಪ್ರಜೆಗಳ ಕ್ಷೇಮಕಾರ್ಯದಲ್ಲಿಯೇ ನಿರತನಾಗಿರಬೇಕು. ಬ್ರಾಹ್ಮಣರ ಕೋರಿಕೆಗಳನ್ನು ನೆರವೇರಿಸಬೇಕು. ಸೇವಕರನ್ನು ಚೆನ್ನಾಗಿ ಪೋಷಿಸಬೇಕು. ಸತ್ಯವನ್ನು ಬಿಟ್ಟಗಲದೆ, ಶುಚಿಯಾಗಿ. ಆಸೆಯನ್ನೂ, ಡಂಭ

ವನ್ನೂ ಬಿಟ್ಟಿರುವ ಕ್ಷತ್ರಿಯನು ಕೂಡ ದೇವತೆಗಳಿಗೆ ಲಭಿಸುವ ಉತ್ತಮ ಗತಿಯನ್ನು ಹೊಂದುವನು. ಅಲ್ಲಿ ಅಪ್ಸರಸ್ಸುಗಳಿಂದಲೂ, ಗಂಧರ್ವರಿಂದಲೂ ಉಪಚರಿಸಲ್ಪಡುತ್ತ, ಇಂದ್ರನಿಂದಲೂ ಪೂಜಿತನಾಗಿ, ಮಹಾ ತೇಜಸ್ಸಿನಿಂದ ಬೆಳಗುವನು. ಹೀಗೆ ಮೂವತ್ತು ಚತುರ್ಯುಗಗಳವರಿಗೆ ದೇವತೆಗಳಂತೆ ಸ್ವರ್ಗದಲ್ಲಿ ವಿಹರಿಸುತ್ತಿದ್ದು, ಆಮೇಲೆ ತಿರುಗಿ ಮನುಷ್ಯ ಲೋಕದಲ್ಲಿ ನಾಲ್ಕು ವೇದಗಳನ್ನೂ ತಿಳಿದ ಬ್ರಾಹ್ಮಣನಾಗಿ ಜನಿಸುವನು.

ವೈಶ್ಯನಾದವನು ಕೃಷಿ, ಗೋರಕ್ಷಣೆ, ಇವುಗಳಲ್ಲಿ ನಿರತನಾಗಿ, ಧರ್ಮಮಾರ್ಗವನ್ನೇ ಅನುಸರಿಸುತ್ತ, ದಾನ ಧರ್ಮಗಳಲ್ಲಿ ಶ್ರದ್ಧೆಯುಳ್ಳವನಾಗಿ ಬ್ರಾಹ್ಮಣರನ್ನು ಆರಾಧಿಸುತ್ತಿರಬೇಕು. ಸತ್ಯಸಂಧನೂ, ಶುಚಿಯೂ ಆಗಿದ್ದು, ಲೋಭ ಡಂಭಗಳನ್ನೂ, ಹಿಂಸಾದ್ರೋಹಗಳನ್ನೂ ಬಿಟ್ಟು, ಋಜು ಸ್ವಭಾವವುಳ್ಳವನಾಗಿ, ಸ್ವಪತ್ನಿಯಲ್ಲಿ ಮಾತ್ರ ನಿರತನಾಗಿ, ವರ್ತಕಧರ್ಮಗಳನ್ನು ಬಿಡದೆ, ದೇವತೆಗಳನ್ನೂ, ಅತಿಥಿಗಳನ್ನೂ ಪೂಜಿಸತಕ್ಕ ವೈಶ್ಯನು ಸ್ವರ್ಗವನ್ನು ಹೊಂದುವನು. ಅಲ್ಲಿ ಅಪ್ಸರಸ್ಸುಗಳಿಂದ ಸೇವಿಸಲ್ಪಡುತ್ತ ನಾಲ್ವತ್ತೈದು ಚತುರ್ಯುಗಗಳವರೆಗೆ ಸಂತೋಷದಿಂದಿದ್ದು, ಆಮೇಲೆ ತಿರುಗಿ ಭೂಲೋಕದಲ್ಲಿ ಒಳ್ಳೆಯ ವೀರ್ಯವಂತನಾದ ಕ್ಷತ್ರಿಯನಾಗಿ ಹುಟ್ಟುವನು. ಅವನು ಈ ಕ್ಷತ್ರಿಯಜನ್ಮದಲ್ಲಿ ಐವತ್ತುಕೋಟಿ ಸುವರ್ಣಗಳಿಂದಲೂ, ಅಸಂಖ್ಯಾತ ರತ್ನಗಳಿಂದಲೂ, ಆನೆ ಕುದುರೆ ಮೊದಲಾದ ಚತುರಂಗ ಸೈನ್ಯಗಳಿಂದಲೂ ಕೂಡಿದವನಾಗಿ, ರಾಜಭೋಗಗಳನ್ನೆಲ್ಲಾ ಅನುಭವಿಸುವನು.

ನಾಲ್ಕನೆಯ ವರ್ಣದವನಾದ ಶೂದ್ರನು, ಇತರ ಮೂರುವರ್ಣದವರಿಗೂ, ವಿಶೇಷವಾಗಿ ಬ್ರಾಹ್ಮಣರಿಗೂ, ಶುಶ್ರೂಷೆಯನ್ನು ಮಾಡುತ್ತ, ದಾಸನಂತಿರಬೇಕು. ಅವರು ತನ್ನನ್ನು ಕೇಳದಿದ್ದಾಗಲೂ ಸಮಯೋಚಿತಗಳಾದ ವಸ್ತುಗಳನ್ನು ಅವರಿಗೆ ತಾನಾಗಿ ತಂದೊದಗಿಸಿ, ಸತ್ಯವನ್ನೂ, ಶುಚಿತ್ವವನ್ನೂ ಬಿಡದೆ, ಗುರುಗಳನ್ನೂ, ದೇವತೆಗಳನ್ನೂ ಪೂಜಿಸುತ್ತ, ಪರಸ್ತ್ರೀಯರಿಗೂ, ಪರಸ್ವತ್ತಿಗೂ ಆಸೆಪಡದೆ, ಪರಹಿಂಸೆಯನ್ನೂ ಮಾಡದೆ, ತನ್ನ ಕೈಕೆಳಗಿನ ಆಳುಗಳನ್ನು ಚೆನ್ನಾಗಿ ಪೋಷಿಸುತ್ತ, ಪ್ರಾಣಿಗಳಿಗೆ

ಅಭಯುವನ್ನು ಕೊಡತಕ್ಕ ಶೂದ್ರನೂ ಕೂಡ ಇತರ ವರ್ಣದವರಂತೆ ಸ್ವರ್ಗವನ್ನು ಸೇರುವನು. ಅಂತಹ ಸ್ವಧರ್ಮನಿರತನಾದ ಶೂದ್ರನು ಕೋಟಿವರ್ಷಗಳವರೆಗೆ ಸ್ವರ್ಗಲೋಕದಲ್ಲಿ ಸುಖದಿಂದಿದ್ದು, ಆಮೇಲೆ ತಿರುಗಿ ಭೂಲೋಕದಲ್ಲಿ ಧನವಂತನಾದ ವೈಶ್ಯನಾಗಿ ಹುಟ್ಟುವನು.

ಓ ಧರ್ಮರಾಜಾ! ಹೀಗೆ ಸ್ವಧರ್ಮಕ್ಕಿಂತಲೂ ಜನರಿಗೆ ಮುಕ್ತಿ ಕಾರಣವಾದುದು ಬೇರೊಂದಿಲ್ಲ. ಪಾಪಗಳಿಂದ ನೀಗಿಸತಕ್ಕುದೂ, ಬಿಡಿಸ ತಕ್ಕುದೂ, ಸ್ವಧರ್ಮಕ್ಕಿಂತಲೂ ಬೇರೊಂದಿಲ್ಲ. ಆದುದರಿಂದ ಈ ಲೋಕ ದಲ್ಲಿ ಮನುಷ್ಯಜನ್ಮವನ್ನು ಹೊಂದಿದಮೇಲೆ ಯಾವಾಗಲೂ ಸ್ವಧರ್ಮವನ್ನು ಬಿಡದೆ ನಡೆಸುತ್ತಿರಬೇಕು. ಧರ್ಮದಲ್ಲಿ ಶ್ರದ್ಧೆಯುಳ್ಳವರಿಗೆ ಲೋಕದಲ್ಲಿ ಯಾವುದೂ ದುರ್ಲಭವಲ್ಲ. ಬ್ರಹ್ಮನು ಯಾರುಯಾರಿಗೆ ಯಾವಯಾವ ಧರ್ಮವನ್ನು ವಿಧಿಸುವನೋ, ಅದನ್ನು ಅವನು ಸರಿಯಾಗಿ ನಡೆಸಿಕೊಂಡು ತನ್ನ ಪಾಪವನ್ನು ನೀಗಿಸಿಕೊಳ್ಳಬೇಕು. ಯಾವನೂ ಸ್ವಧರ್ಮವನ್ನು ತಪ್ಪಿಹೋಗಬಾರದು. ಅದರಿಂದಲೇ ಅವನು ಒಳ್ಳೆಯ ಸಿದ್ಧಿಯನ್ನು ಹೊಂದುವನು. ಸ್ವಧರ್ಮವು ಹೀನವೆಂದು ತೋರಿದರೂ, ಅದರಿಂದಲೇ ಅವನ ಪಾಪವು ನೀಗುವುದು. ಉತ್ತಮವಾದರೂ ಇತರಧರ್ಮವು ಪಾಪವನ್ನು ಹೆಚ್ಚಿಸುವುದು" ಎಂದನು.

ಆಗ ಧರ್ಮರಾಜನು ಕೃಷ್ಣನನ್ನು ಕುರಿತು "ಓ ದೇವಾ! ಪುಣ್ಯ ಪಾಪ ಕರ್ಮಗಳ ಕ್ಷಯವೃದ್ಧಿಗಳು ಹೇಗಾಗುವುವೆಂಬುದನ್ನು ನಿನ್ನಿಂದ ಕೇಳಬೇಕೆಂದಿರುವೆನು" ಎನಲು, ಕೃಷ್ಣನು "ಓ ರಾಜೇಂದ್ರಾ! ಆ ಸನಾತ ನವಾದ ಧರ್ಮಸೂಕ್ಷ್ಮವನ್ನೇ ನಿನಗೆ ತಿಳಿಸುವೆನು ಕೇಳು. ಅದು ಸುಲಭ ವಾಗಿ ತಿಳಿಯತಕ್ಕುದಲ್ಲ. ಮಹಾಜನರು ಕೂಡ ಅದರಲ್ಲಿ ಏನೂ ತಿಳಿಯು ದಂತೆ ಮರುಳಾಗುವರು. ಸ್ವಭಾವದಲ್ಲಿ ತಣ್ಣಗಿರುವ ನೀರು ಉಷ್ಣ ಸಂಬಂಧದಿಂದ ಹೇಗೆ ಕ್ಷಣಮಾತ್ರದಲ್ಲಿ ಬಿಸಿಯಾಗಿ, ತನ್ನ ಉಷ್ಣವನ್ನು ಕಳೆದುಕೊಳ್ಳುವುದೋ, ಮತ್ತು ಬಿಸಿಯಾದ ನೀರಿಗೆ ತಣ್ಣಗಿರುವ ನೀರಿನ ಸಂಪರ್ಕದಿಂದ ಅದರಲ್ಲಿರುವ ಉಷ್ಣವು ಹೇಗೆ ನೀಗುವುದೋ, ಹಾಗೆಯೇ ಪುಣ್ಯವಾಗಲಿ ಪಾಪವಾಗಲಿ ಅಧಿಕವಾಗಿದ್ದು, ಅದಕ್ಕೆ ವಿರುದ್ಧಗುಣ

ವುಳ್ಳುದು ಸ್ವಲ್ಪವಾಗಿದ್ದಾಗ, ಪ್ರಬಲವಾದುದು ಸ್ವಲ್ಪವಾದುದನ್ನು ಶೀಘ್ರದಲ್ಲಿಯೇ ನೀಗಿಸಿಬಿಡುವುದು. ಈ ವಿಷಯದಲ್ಲಿ ಸ್ವಲ್ಪವಾದರೂ ಸಂದೇಹವೇ ಬೇಡ. ಈ ಪುಣ್ಯಪಾಪಗಳೆರಡೂ ಸಮಪ್ರಮಾಣದಲ್ಲಿದ್ದಾಗ ಅವುಗಳಲ್ಲಿ ಗುಪ್ತವಾಗಿ ಮರೆಸಿಡಲ್ಪಟ್ಟುದು ಪ್ರಬಲವಾಗುವುದು. ಪ್ರಕಟಮಾಡಲ್ಪಟ್ಟುದು ತಗ್ಗುವುದು. ಪಾಪಕಾರ್ಯವು ಬಾಯಿಂದ ಹೇಳಿಕೊಳ್ಳುವುದರಿಂದಲೂ, ಪಶ್ಚಾತ್ತಾಪಪಡುವುದರಿಂದಲೂ ನಶಿಸುವುದು. ಇದೇ ವಿಧವಾಗಿ ಮಾಡಿದ ಧರ್ಮವನ್ನು ಬಾಯಿಂದಾಡಿದರೂ, ಪಶ್ಚಾತ್ತಾಪಪಟ್ಟರೂ ಅದು ನಿಷ್ಫಲವಾಗುವುದು. ಆದುದರಿಂದ ಓ ರಾಜಾ! ಸರ್ವಪ್ರಯತ್ನದಿಂದಲೂ ಮಾಡಿದ ಪಾಪವನ್ನು ಮರೆಸಿಡಬಾರದು. ಅದನ್ನು ಇತರರಿಗೆ ತಿಳಿಸಿ ತಾನೂ ಪಶ್ಚಾತ್ತಾಪಪಡಬೇಕು. ತಾನು ಮಾಡಿದ ದಾನ ಧರ್ಮಗಳನ್ನು ಇತರರಿಗೆ ತಿಳಿಸದೆ ಮರೆಸಿಡಬೇಕು. ಇದೇ ಧರ್ಮಸೂಕ್ಷ್ಮವು.

ಇದು ತೊಂಭತ್ತೇಳನೆಯ ಅಧ್ಯಾಯವು



{ ಕೃಷ್ಣನು ಧರ್ಮರಾಜನಿಗೆ ಅಧರ್ಮಲಕ್ಷಣಗಳನ್ನೂ, ಸಾತ್ವಿಕಾದಿ ಮೂರುಬಗೆಯ ದಾನಗಳನ್ನೂ, ದಾನಪಾತ್ರ ಲಕ್ಷಣಗಳನ್ನೂ ತಿಳಿಸಿದುದು. }

ಧರ್ಮರಾಜನು ಕೃಷ್ಣನನ್ನು ತಿರುಗಿ ಪ್ರಶ್ನೆಮಾಡುವನು. "ಓದೇವಾ! ಎಂಥವನ ಜನ್ಮಗಳು ವ್ಯರ್ಥವೆನಿಸುವುವು? ಯಾವ ದಾನಗಳು ನಿರರ್ಥಕಗಳೆನಿಸುವುವು? ಮನುಷ್ಯರಿಗೆ ಜೀವನಗಳು ಯಾವ ಕಾರಣದಿಂದ ವ್ಯರ್ಥವೆನಿಸುವುವು? ಮನುಷ್ಯನು ಕೊಟ್ಟ ದಾನದ ಫಲವನ್ನು ಈ ಲೋಕದಲ್ಲಿ ಹೇಗೆ ಅನುಭವಿಸುವನು? ಮನುಷ್ಯನು ಗರ್ಭದಲ್ಲಿಯೂ, ಬಾಲ್ಯ ಯೌವನವಾರ್ಧಕಗಳಲ್ಲಿಯೂ ಅನುಭವಿಸುವ ಸುಖದುಃಖಗಳಾವುವು? ಸಾತ್ವಿಕ, ರಾಜಸ, ತಾಮಸಗಳೆಂಬ ಮೂರುಬಗೆಯ ದಾನಗಳ ಸ್ವರೂಪವೆಂತದು? ಇವುಗಳಲ್ಲಿ ಎಂತಹ ದಾನವು ತೃಪ್ತಿಕರವಾದುದು? ದಾನಗಳಲ್ಲಿ ಉತ್ತಮವಾವುದು? ಅದರ ಫಲವೇನು? ಉತ್ತಮ ಮಧ್ಯಮಾಧಮಗತಿಗಳನ್ನು ಹೊಂದಿಸತಕ್ಕ ಬೇರೆಬೇರೆ ದಾನಗಳಾವುವು! ಇವನ್ನೆಲ್ಲಾ ಸಾರವಾಗಿ

ಯೂ, ಪವಿತ್ರವಾಗಿಯೂ ಇರುವ ನಿನ್ನ ವಾಕ್ಯದಿಂದಲೇ ಕೇಳಬೇಕೆಂಬ ಕುತೂಹಲವು ನನಗೆ ಅಧಿಕವಾಗಿರುವುದು'' ಎಂದನು, ಆಗ ಕೃಷ್ಣನು ಅವನು ಕೇಳಿದ ಧರ್ಮಗಳನ್ನೆಲ್ಲಾ ಉಪದೇಶಿಸತೊಡಗಿ "ರಾಜೇಂದ್ರಾ! ಲೋಕದಲ್ಲಿ ಮನುಷ್ಯನಿಗೆ ಹದಿನಾಲ್ಕು ತರದ ಜನ್ಮಗಳೂ, ಐವತ್ತೈದುಬಗೆಯ ದಾನಗಳೂ, ಆರುಬಗೆಯ ಜೀವಿತಗಳೂ ವ್ಯರ್ಥವೆನಿಸುವುವು. ಅವನ್ನೆಲ್ಲಾ ಕ್ರಮವಾಗಿ ಹೇಳುವೆನು ಕೇಳು. ಧರ್ಮವನ್ನು ಕೆಡಿಸತಕ್ಕವನ ಜನ್ಮವು ವ್ಯರ್ಥವು? ಹಾಗೆಯೇ ಲುಬ್ಧರು, ಪಾಪಶೀಲರು, ತಮಗೆ ತಾವೇ ಅಡಿಗೆಮಾಡಿ ಊಟಮಾಡತಕ್ಕವರು, ಪರಸ್ತ್ರೀಯರಲ್ಲಿ ಆಸೆಪಡತಕ್ಕವರು,ಅಡಿಗೆಯಲ್ಲಿ ಭೇದಬುದ್ಧಿಯನ್ನು ತೋರಿಸತಕ್ಕವರು,ಸತ್ಯವನ್ನು ಬಿಟ್ಟವರು, ಬಂಧುಗಳೆಲ್ಲರೂ ಕಷ್ಟಪಡುವಾಗ ತಾವುಮಾತ್ರ ಮೃಷ್ಟಾನ್ನವನ್ನು ಭುಜಿಸತಕ್ಕವರು, ತಂದೆ, ತಾಯಿ, ಉಪಾಧ್ಯಾಯ, ಗುರು, ಮಾವ, ಅತ್ತೆ, ಇಂಥವರನ್ನು ಹಿಂಸಿಸುವವರು, ಅಥವಾ ನಿಂದಿಸುವವರು,ಬ್ರಾಹ್ಮಣ ಜನ್ಮದಲ್ಲಿ ಹುಟ್ಟಿ ಸಂಧ್ಯೋಪಾಸನೆಯನ್ನು ಮಾಡದವರು, ಸ್ವಾಹಾಕಾರ, ಸ್ವಧಾಕಾರಗಳಿಲ್ಲದೆ ಶೂದ್ರಾನ್ನವನ್ನು ಭುಜಿಸತಕ್ಕವರು, ನನ್ನನ್ನಾಗಲಿ, ರುದ್ರನನ್ನಾಗಲಿ, ಬ್ರಹ್ಮನನ್ನಾಗಲಿ, ಕೊನೆಗೆ ಬ್ರಾಹ್ಮಣರನ್ನಾಗಲಿ ಭಕ್ತಿಯಿಂದ ಭಾವಿಸದ ನಾಸ್ತಿಕರಾದ ನರಾಧಮರು, ಇವರ ಜನ್ಮವೆಲ್ಲವೂ ವ್ಯರ್ಥವೆಂದು ತಿಳಿ.

ಇನ್ನು ದಾನ ವಿಷಯಗಳನ್ನು ಹೇಳುವೆನು ಕೇಳು. ಅಶ್ರದ್ಧೆಯಿಂದಲಾಗಲಿ, ಅವಮಾನಪೂರ್ವಕವಾಗಿಯಾಗಲಿ, ಡಂಭಕ್ಕಾಗಿಯಾಗಲಿ ಕೊಡತಕ್ಕ ದಾನಗಳು ವ್ಯರ್ಥವೆನಿಸುವುವು. ಹಾಗೆಯೇ ಪಾಷಂಡಿಗಳಿಗೂ, ಶೂದ್ರಾನ್ನವನ್ನು ಭುಜಿಸತಕ್ಕವನಿಗೂ ಮಾಡಿದ ದಾನಗಳು ವ್ಯರ್ಥವು. ದಾನ ಮಾಡಿದಮೇಲೆ ಅದನ್ನು ಬಾಯಿಂದ ಹೇಳಿಕೊಂಡರೆ ಆ ದಾನವೂ ವಿಫಲವೆನಿಸುವುದು. ಕೋಪದಿಂದ ಮಾಡಿದ ದಾನವೂ ವ್ಯರ್ಥವು. ಕೊಟ್ಟಮೇಲೆ ಮನಸ್ಸಿನಲ್ಲಿ ಪಶ್ಚಾತ್ತಾಪಪಟ್ಟರೂ ಆ ದಾನವು ವ್ಯರ್ಥವಾಗುವುದು. ಡಂಭದಿಂದಾಗಲಿ, ಅಸತ್ಯದಿಂದಾಗಲಿ, ಚೌರ್ಯದಿಂದಾಗಲಿ, ಬ್ರಾಹ್ಮಣನಿಂದ ಕಿತ್ತುಕೊಂಡಾಗಲಿ, ಸಂಪಾದಿಸಿ ತಂದು ಮಾಡಿದ ದಾನ

ಗಳು ವ್ಯರ್ಥವೆನಿಸುವುವು. ನಿಂದಿತನಿಂದ ಸಂಪಾದಿಸಿ ತಂದ ದಾನವೂ ವ್ಯರ್ಥವು. ಬ್ರಾಹ್ಮಣರಲ್ಲಿ ಪತಿತನಿಗೂ, ವೇದವನ್ನು ಓದದವನಿಗೂ, ಎಲ್ಲರಲ್ಲಿಯೂ ಯಾಚಿಸತಕ್ಕವನಿಗೂ ಕೊಟ್ಟ ದಾನಗಳು ವ್ಯರ್ಥವು. ವ್ರಾತ್ಯರಿಗೂ, ಆರೂಢಪತಿತರಿಗೂ, (ಉತ್ತಮಕುಲದಲ್ಲಿ ಹುಟ್ಟಿ ಕರ್ಮಗಳನ್ನು ಬಿಟ್ಟವನು) ವ್ಯಭಿಚಾರಿಣಿಯಾದ ಸ್ತ್ರೀಯ ಪತಿಗೂ, ಹೆಂಡತಿಯ ತಂದೆಯ ಸಂಪಾದನೆಯಿಂದ ಜೀವಿಸತಕ್ಕವನಿಗೂ, ಹಳ್ಳಿಯವರಿಗೆ ಪೌರೋಹಿತ್ಯವನ್ನು ಮಾಡಿಸಿ ಜೀವಿಸತಕ್ಕವನಿಗೂ, ಕೃತಘ್ನನಿಗೂ, ಉಪಪಾತಕಿಗೂ, ವೇದವಿಕ್ರಯಮಾಡತಕ್ಕವನಿಗೂ, ಹೆಂಡತಿಗೆ ವಶನಾದವನಿಗೂ, ರಾಜಸೇವಕನಿಗೂ, ಗಣಕ (ಶಾನುಭೋಗ)ನಿಗೂ ಕೊಟ್ಟ ದಾನಗಳು ವಿಫಲಗಳು. ಕೊಟ್ಟ ದಾನವನ್ನು ಲೆಕ್ಕಹಾಕಿ ನೋಡತಕ್ಕವನಿಗೂ, ಋತುವಾದಮೇಲೆ ಮದುವೆಯಾದ ಸ್ತ್ರೀಯ ಪತಿಗೂ, ಆಯುಧದಿಂದ ಜೀವಿಸತಕ್ಕವನಿಗೂ, ಕೆಲಸಮಾಡಿ ವೇತನವನ್ನು ತೆಗೆಯತಕ್ಕವನಿಗೂ, ಹಾವು ಹಿಡಿಯತಕ್ಕವನಿಗೂ, ಪೌರೋಹಿತ್ಯ, ವೈದ್ಯವೃತ್ತಿ, ವ್ಯಾಪಾರ, ದುರ್ಮಂತ್ರ, ಶೂದ್ರಸೇವೆ. ಸಂಬಳಕ್ಕಾಗಿ ದೇವರ ಪೂಜೆಮಾಡುವುದು, ದೇವದ್ರವ್ಯದಿಂದ ಜೀವನಮಾಡುವುದು, ಚಿತ್ರಕೆಲಸದಿಂದ ಜೀವಿಸುವುದು, ನರ್ತನದಿಂದ ಜೀವಿಸುವುದು, ಮಾಂಸವಿಕ್ರಯದಿಂದ ಜೀವಿಸುವುದು, ಇಂತಹ ವೃತ್ತಿಯುಳ್ಳತಕ್ಕವರಿಗೆ ಕೊಟ್ಟ ದಾನವು ವ್ಯರ್ಥವೆನಿಸುವುದು. ಸೇವಕನಿಗೆ ಕೊಟ್ಟ ದಾನವೂ ವಿಫಲವು. ಹೆಸರಿಗೆಮಾತ್ರ ಬ್ರಾಹ್ಮಣನೆನಿಸಿಕೊಂಡವನಿಗೂ, ಹೀನದೇಶದಲ್ಲಿ ವಾಸಿಸುವವನಿಗೂ, ಬಡ್ಡಿಯಿಂದ ಜೀವಿಸುವವನಿಗೂ, ಆಚಾರವಿಲ್ಲದವನಿಗೂ, ಅಗ್ನಿಹೋತ್ರವಿಲ್ಲದವನಿಗೂ, ಸಂಧ್ಯೋಪಾಸನವಿಲ್ಲದವನಿಗೂ, ಶೂದ್ರರ ಗ್ರಾಮದಲ್ಲಿ ವಾಸಮಾಡತಕ್ಕವನಿಗೂ ಕೊಟ್ಟ ದಾನಗಳು ವ್ಯರ್ಥವು. ಸುಳ್ಳುವೇಷವನ್ನು ಹಾಕಿದವನಿಗೂ, ಸಿಕ್ಕಿದ ಕಡೆಯಲ್ಲ ತಿನ್ನುವವನಿಗೂ, ನಾಸ್ತಿಕನಿಗೂ, ಧರ್ಮವಿಕ್ರಯಿಗೂ ಅಲ್ಪಸ್ವಭಾವವುಳ್ಳವನಿಗೂ, ಸುಳ್ಳುಸಾಕ್ಷಿ ಹೇಳುವವನಿಗೂ, ಗ್ರಾಮಸ್ಥರನ್ನು ಮೋಸಮಾಡಿ ಜೀವಿಸತಕ್ಕವನಿಗೂ ಕೊಡತಕ್ಕ ದಾನಗಳೆಲ್ಲ ವ್ಯರ್ಥಗಳೆನಿಸುವುವು. ಈ ಮೇಲೆ ಹೇಳಿದವರೆಲ್ಲರೂ ಬ್ರಾಹ್ಮಣಜಾತಿಯಲ್ಲಿ ಹೀನರು. ಆಶಾಪಾಶಾದಲ್ಲಿ ಬಿದ್ದು, ಬ್ರಾಹ್ಮಣಾಧಮ

ರೆನಿಸಿಕೊಂಡ ಇಂಥವರು ದಾನ ತೆಗೆಯುವುದರಿಂದ, ತಮ್ಮನ್ನೂ, ದಾನಕೊಟ್ಟವರನ್ನೂ ಅಧೋಗತಿಗೆ ಬೀಳಿಸುವರಲ್ಲದೆ ಉದ್ಧರಿಸಲಾರರು. ಎಷ್ಟೇ ವಿಶೇಷವಾದ ದಾನಗಳನ್ನು ಮಾಡಿದರೂ,ಮೇಲೆಹೇಳಿದಂಥವರಿಗೆ ಮಾಡಿದ ದಾನವು ಭಸ್ಮಾಹುತಿಯಂತೆ ವ್ಯರ್ಥವಾಗುವುದು. ಒಂದುವೇಳೆ ಈ ದಾನಗಳಿಂದ ಏನಾದರೂ ಅಲ್ಪಸ್ವಲ್ಪ ಫಲವುಂಟಾಗುವುದಾದರೂ, ರಾಕ್ಷಸರೂ, ಪಿಶಾಚರೂ, ಸಂತೋಷದಿಂದ ಅದನ್ನು ಅಪಹರಿಸಿಕೊಂಡು ಹೋಗುವರು.

ಇನ್ನು ಎಂಥವರ ಜೀವನವು ವ್ಯರ್ಥವೋ ಅದನ್ನೂ ತಿಳಿಸುವೆನು ಕೇಳು. ಯಾರು ನನ್ನನ್ನಾಗಲಿ, ಶಂಕರನನ್ನಾಗಲಿ, ಬ್ರಾಹ್ಮಣರನ್ನಾಗಲಿ ಪೂಜಿಸುವುದಿಲ್ಲವೋ, ಅಂಥವರ ಜೀವನವು ವ್ಯರ್ಥವು. ಯಾರು ಯುಕ್ತಿ ಶಾಸ್ತ್ರಗಳಲ್ಲಿ ನಿರತರಾಗಿ, ದುರ್ಬುದ್ಧಿಯುಳ್ಳವರ ಮಾರ್ಗವನ್ನೇ ಹಿಡಿಯುವರೋ, ಯಾರು ಆಚಾರಹೀನರೋ, ಯಾರು ದೇವನಿಂದಕರೋ ಅವರ ಜೀವನಗಳು ವ್ಯರ್ಥವು. ಯಾವ ನರಾಧಮರು ಪ್ರಾಜ್ಞರಿಂದ ರಚಿಸಲ್ಪಟ್ಟ ಶಾಸ್ತ್ರಗಳನ್ನು ಓದಿಯೂ, ಯಜ್ಞಗಳನ್ನೂ, ಬ್ರಾಹ್ಮಣರನ್ನೂ ನಿಂದಿಸುವರೋ, ಅಂಥವರ ಜೀವನವು ವ್ಯರ್ಥವು. ಯಾರು ಆಚಾರಹೀನರಾಗಿ, ದುರ್ಗೆಯನ್ನೂ, ಕುಮಾರಸ್ವಾಮಿಯನ್ನೂ, ಅಗ್ನಿ, ವಾಯು, ಸೂರ್ಯ, ಜಲದೇವತೆಗಳನ್ನೂ, ತಂದೆ ತಾಯಿಗಳನ್ನೂ, ಗುರುವನ್ನೂ, ಇಂದ್ರಚಂದ್ರರನ್ನೂ ನಿಂದಿಸುವರೋ, ಅಂಥವರ ಜೀವನವು ವ್ಯರ್ಥವು. ಶ್ರೀಮಂತನಾಗಿದ್ದುಕೊಂಡು ದಾನಧರ್ಮಗಳನ್ನು ಮಾಡದವನೂ, ತಾನೊಬ್ಬನೇ ಮೃಷ್ಟಾನ್ನವನ್ನು ಭುಜಿಸತಕ್ಕವನೂ ವ್ಯರ್ಥಜೀವನವುಳ್ಳವನೆನಿಸುವನು.

ಓ ಧರ್ಮರಾಜಾ ! ಇನ್ನು ನಿನಗೆ ದಾನಫಲಗಳ ಕಾಲವನ್ನು ತಿಳಿಸುವೆನು ಕೇಳು. ಮನುಷ್ಯನು ತಮೋಗುಣವುಳ್ಳ ಮನಸ್ಸಿನಿಂದ ಕೊಡತಕ್ಕ ದಾನದ ಫಲವನ್ನು ಗರ್ಭಕಾಲದಲ್ಲಿ ಅನುಭವಿಸುವನು. ಈರ್ಷ್ಯೆ, ಮಾತ್ಸರ್ಯ, ಇವುಗಳೊಡಗೂಡಿ ಡಂಭಕ್ಕಾಗಿಯೂ, ಸ್ವಪ್ರಯೋಜನಕ್ಕಾಗಿಯೂ ದಾನಮಾಡಿದವನು ಅದರ ಫಲವನ್ನು ಬಾಲ್ಯದಲ್ಲಿ ಅನುಭವಿಸುವನು. ರೋಗಗಳಿಂದ ಪೀಡಿತನಾಗಿ, ತಾನು ಭೋಗಗಳನ್ನು

ಅನುಭವಿಸಲಾರದುದಕ್ಕಾಗಿ ದಾನಮಾಡಿದವನು, ಮುಪ್ಪಿನಲ್ಲಿ ಅದರ ಫಲವನ್ನು ಅನುಭವಿಸುವನು. ಶ್ರದ್ಧೆಯುಳ್ಳವನಾಗಿ, ಶುಚಿಯಾಗಿ, ಮನಸ್ಸನ್ನೂ, ಇಂದ್ರಿಯಗಳನ್ನೂ ಪ್ರಸನ್ನವಾಗಿಟ್ಟುಕೊಂಡು ದಾನಮಾಡಿದವನು ಯೌವನದಲ್ಲಿ ಅದರ ಫಲವನ್ನು ಅನುಭವಿಸುವನು. ಶ್ರದ್ಧೆಯಿಂದಲೂ, ಭಕ್ತಿಯಿಂದಲೂ, ಸತ್ಪಾತ್ರದೆಡೆಗೆ ತಾನಾಗಿ ತೆಗೆದುಕೊಂಡು ಹೋಗಿ ಕೊಡಲ್ಪಟ್ಟ ದಾನವು ಮರಣಾಂತದವರೆಗೆ,ಎಲ್ಲಾ ಕಾಲಗಳಲ್ಲಿಯೂ ಫಲಗಳನ್ನು ಕೊಡುವುದು. ದಾನಫಲ, ದಾನಗತಿ, ಇವುಗಳೊಳಗೆಲ್ಲ ಸಾತ್ವಿಕ, ರಾಜಸ, ತಾಮಸಗಳೆಂಬ ಮೂರುಬಗೆಯುಂಟು. ಅದನ್ನೂ ತಿಳಿಸುವೆನು ಕೇಳು. ಪ್ರತ್ಯುಪಕಾರಾಪೇಕ್ಷೆಯಿಲ್ಲದೆ, ದಾನಮಾಡಬೇಕೆಂಬ ಉದ್ದೇಶದಿಂದಲೇ ಉತ್ತಮನಾದ ಬ್ರಾಹ್ಮಣನಿಗೆ ಕೊಟ್ಟ ದಾನವು ಸಾತ್ವಿಕದಾನವೆನಿಸುವುದು. ಶ್ರೋತ್ರಿಯನೂ, ದರಿದ್ರನೂ, ಬಹುಮಂದಿ ಪರಿವಾರಗಳುಳ್ಳವನೂ ಆದವನಿಗೆ ಕೊಟ್ಟ ದಾನವೂ ಸಾತ್ವಿಕವೆನಿಸುವುದು. ವೇದಾಕ್ಷರಗಳನ್ನು ತಿಳಿಯದವನಿಗೂ, ಹಿಂದೆ ತನಗೇನಾದರೂ ಉಪಕಾರವನ್ನು ಮಾಡಿದವನಿಗೂ, ಹಣವಿರತಕ್ಕವನಿಗೂ ಕೊಡತಕ್ಕ ದಾನವು ರಾಜಸವೆನಿಸುವುದು. ತನ್ನೊಡನೆ ಬಂಧುತ್ವಸಂಬಂಧವುಳ್ಳವನಿಗೂ, ಕುಡಿತ ಮುಂತಾದವುಗಳಿಂದ ಮತ್ತೇರಿದವನಿಗೂ,ಸ್ವಧರ್ಮದಲ್ಲಿ ಲಕ್ಷ್ಯವಿಲ್ಲದವನಿಗೂ ಕೊಟ್ಟ ದಾನವು ರಾಜಸವೆನಿಸುವುದು. ಫಲಾಪೇಕ್ಷೆಯನ್ನಿಟ್ಟುಕೊಂಡು ಯೋಗ್ಯವಲ್ಲದ ಪಾತ್ರಕ್ಕೆ ಕೊಟ್ಟ ದಾನವೂ ರಾಜಸವು. ವೈಶ್ಯ ದೇವವನ್ನೂ ವೇದಾಧ್ಯಯನವನ್ನೂ ಮಾಡದವರಿಗೂ, ಜಾರಸ್ವಭಾವವುಳ್ಳವರಿಗೂ ಕೊಟ್ಟ ದಾನವು ತಾಮಸವು. ಕೋಪದಿಂದಲೂ, ತಿರಸ್ಕಾರದಿಂದಲೂ, ಕಷ್ಟದಿಂದಲೂ, ಅವಮಾನಪೂರ್ವಕವಾಗಿಯೂ ಕೊಡತಕ್ಕ ದಾನವು ತಾಮಸವೆನಿಸುವುದು. ತನ್ನಲ್ಲಿ ಸೇವೆಮಾಡುವುದಕ್ಕಾಗಿ ಕೊಟ್ಟ ದಾನವೂ ತಾಮಸವೆನಿಸುವುದು. ದೇವತೆಗಳು,ಪಿತೃಗಳು, ಮಹರ್ಷಿಗಳು, ಅಗ್ನಿದೇವತೆಗಳು, ಇವರು ಸಾತ್ವಿಕ ದಾನದಿಂದ ಸಂತೋಷಿಸುವರು. ದೈತ್ಯದಾನವರೂ, ಗ್ರಹಗಳೂ, ಯಕ್ಷರಾಕ್ಷಸರೂ, ಪಿತೃಗಳಿಂದಲೂ ದೇವತೆಗಳಿಂದಲೂ ನಿರಾಕರಿಸಲ್ಪಟ್ಟ ರಾಜಸದಾನಗಳನ್ನು ಗ್ರಹಿಸಿ, ಸಂತೋಷಿಸುವರು. ಭೂತ ಪ್ರೇತ ಪಿಶಾಚಗಳು ಮೊದಲಾಗಿ ಪಾಪಜನ್ಮವುಳ್ಳವರು,

ತಾಮಸ ದಾನವನ್ನು ಹೊಂದಿ ತೃಪ್ತಿಗೊಳ್ಳುವರು. ಇನ್ನು ಮೂರು ಬಗೆಯ ದಾನಗತಿಗಳನ್ನು ತಿಳಿಸುವೆನು ಕೇಳು. ಸಾತ್ವಿಕ,ರಾಜಸ, ತಾಮಸ, ದಾನಗಳಿಂದ ಮನುಷ್ಯನು ಹೊಂದತಕ್ಕ ಗತಿಗಳು, ಕ್ರಮವಾಗಿ ಉತ್ತಮ, ಮಧ್ಯಮಾಧಮಗಳೆಂದು ಮೂರುಬಗೆಯಾಗಿರುವುವು. ಸತ್ಪಾತ್ರವಿದ್ದಲ್ಲಿಗೆ ತಾನಾಗಿ ತೆಗೆದುಕೊಂಡುಹೋಗಿ ಕೊಡತಕ್ಕ ದಾನದಿಂದ ಉತ್ತಮಗತಿಯು ಲಭಿಸುವುದು. ಅತಿಥಿಗಳನ್ನು ತನ್ನಲ್ಲಿ ಕರೆಸಿಕೊಂಡು ಕೊಟ್ಟ ದಾನದಿಂದ ಲಭಿಸತಕ್ಕ ಗತಿಯು ಮಧ್ಯಮವು. ತನ್ನಲ್ಲಿ ಬಂದು ಯಾಚಿಸಿದವನಿಗೆ ಕೊಡತಕ್ಕ ದಾನದಿಂದ ಲಭಿಸತಕ್ಕ ಗತಿಯು ಅಧಮವೆನಿಸುವುದು. ಈ ಮೂರು ಗತಿಗಳಿಗೂ ಕ್ರಮವಾಗಿ, ದೇವ, ಮನುಷ್ಯ, ತಿರ್ಯಗ್ಗತಿಗಳೆಂದು ಹೆಸರು. ಸತ್ಪಾತ್ರವೆನಿಸಿಕೊಂಡು, ಸನ್ಮಾರ್ಗದಲ್ಲಿ ವರ್ತಿಸುತ್ತ ಅಗ್ನಿಹೋತ್ರಿಗಳಾದ ಬ್ರಾಹ್ಮಣರಿಗೆ ಕೊಟ್ಟ ದಾನವು ಅಕ್ಷಯವೆನಿಸುವುದು. ಓ ಧರ್ಮಪುತ್ರಾ! ಆದುದರಿಂದ ನೀನು ಬಡವರಾದ ಶ್ರೋತ್ರಿಯರಿಗೆ ಅನ್ನ ವಸ್ತ್ರಗಳನ್ನು ಕೊಟ್ಟು ಸಂತೋಷಗೊಳಿಸು. ಶ್ರೀಮಂತರಾದ ಬ್ರಾಹ್ಮಣರಿಗೆ ಚೋರಾದಿಭಯಗಳಿಲ್ಲದಂತೆ ಅವರನ್ನು ಚೆನ್ನಾಗಿ ರಕ್ಷಿಸು. ಹಣವಿಲ್ಲದ ದರಿದ್ರರನ್ನು ವಿವಿಧ ದಾನಗಳಿಂದ ತೃಪ್ತಿಗೊಳಿಸುತ್ತಿರು. ಔಷಧದಿಂದ ರೋಗವಿದ್ದವನಿಗೆ ಪ್ರಯೋಜನವೇ ಹೊರತು ವ್ಯಾಧಿಯಿಲ್ಲದವನಿಗೆ ಅದರಿಂದ ಫಲವೇನು? ದಾನಕೊಟ್ಟವನ ಪಾಪಗಳೆಲ್ಲಾ ಅದನ್ನು ತೆಗೆದುಕೊಂಡವನಲ್ಲಿ ಸೇರುವುದು. ದಾನವನ್ನು ತೆಗೆದುಕೊಂಡವನ ಪುಣ್ಯಕ್ಕೆ ದಾನ ಕೊಟ್ಟವನು ಪಾತ್ರನಾಗುವನು. ಆದುದರಿಂದ ಪರಲೋಕದಲ್ಲಿ ಶ್ರೇಯಸ್ಸನ್ನು ಬಯಸತಕ್ಕವನು ದಾನಗಳನ್ನು ಮಾಡಬೇಕು. ವೇದಾಧ್ಯಯನಗಳನ್ನು ಮಾಡಿ ಶುದ್ಧನಾಗಿ,ಶೂದ್ರಾನ್ನವನ್ನು ಭುಜಿಸದ ಸದ್ಬ್ರಾಹ್ಮಣನಿಗೆ ಕೊಟ್ಟ ದಾನವು, ಬಚ್ಚಿಟ್ಟ ನಿಕ್ಷೇಪದಂತೆ ಕಾಲಾಂತರಕ್ಕೆ ಶ್ರೇಯಸ್ಕರವಾದುದರಿಂದ, ಉತ್ತಮವಾದ ಆ ದಾನವೆಂಬ ನಿಧಿಯನ್ನು ಪ್ರಯತ್ನದಿಂದ ರಕ್ಷಿಸಿಡಬೇಕು. ಯಾವನ ಸ್ತ್ರೀಯು ತನ್ನ ಪತಿಯು ತಿಂದು ಮಿಕ್ಕ ಅನ್ನವನ್ನು ಸಾವಿರಭಾಗ್ಯವು ತನಗೆ ಲಭಿಸಿದಂತೆ ಆದರಿಸಿ ಸ್ವೀಕರಿಸುವಳೋ, ಅಂತವರನ್ನೇ ನೀನು ಕರೆದು ನಿಮಂತ್ರಿಸು. ಬಹಳ ಬಡವರಾದ ಕುಲೀನರನ್ನು ಕರೆದು, ಅವರನ್ನು ನಿರಾಶರನ್ನಾಗಿ ಕಳುಹಿಸಬೇಡ.

ಹೇಗಾದರೂ ಮಾಡಿ ಅವರನ್ನು ತೃಪ್ತಿಗೊಳಿಸಿ ಕಳುಹಿಸು. ನನ್ನಲ್ಲಿ ಭಕ್ತಿಯಿಟ್ಟು, ನನ್ನನ್ನೇ ನಂಬಿ, ನನ್ನನ್ನೇ ಪೂಜಿಸುತ್ತ, ನನ್ನ ನಿಯಮಗಳನ್ನು ಅನುಸರಿಸಿದ ಸಾಧುಗಳನ್ನು ನೀನು ಪೂಜಿಸು. ಅಂತವರನ್ನು ಉದ್ಧರಿಸುವುದಕ್ಕಾಗಿ ನಾನು ಉಭಯಸಂಧ್ಯೆಗಳಲ್ಲಿಯೂ ಅವರೊಡನೆ ಸಾನ್ನಿಧ್ಯಮಾಡುತ್ತಿರುವೆನು. ಇದು ನನ್ನ ದೃಢವಾದ ವ್ರತವು. ನನ್ನ ಭಕ್ತರ ಆತ್ಮಶುದ್ಧಿಗಾಗಿ ಪ್ರತಿದಿನವೂ ಸಂಧ್ಯಾಕಾಲದಲ್ಲಿ ಅಷ್ಟಾಕ್ಷರ ಮಂತ್ರವನ್ನು ಜಪಿಸುತ್ತಿರಬೇಕು. ಈ ಅಷ್ಟಾಕ್ಷರಮಂತ್ರವು ಸಮಸ್ತ ಬ್ರಾಹ್ಮಣರಿಗೂ ಪಾಪನಿವಾರಕವಾದುದರಿಂದ, ಇದನ್ನು ಬ್ರಾಹ್ಮಣನು ಜಪಿಸಬೇಕಾದುದವಶ್ಯವು. ದೈವ ಪಿತೃ ಕಾರ್ಯಗಳಲ್ಲಿ ಶ್ರದ್ಧೆಯಿಂದ ಬ್ರಾಹ್ಮಣನನ್ನು ನಿಮಂತ್ರಿಸಬೇಕು. ಶ್ರಾದ್ಧಕಾರ್ಯದಲ್ಲ ನಿಮಂತ್ರಿತನಾದ ಬ್ರಾಹ್ಮಣನಿಗೆ ಜುಗುಪ್ಸೆಯನ್ನುಂಟುಮಾಡಿದರೆ, ಅದು ಆ ಶ್ರಾದ್ಧವನ್ನು ಅಗ್ನಿಯಂತೆ ದಹಿಸಿಬಿಡುವುದು. ಭಾರತವೂ, ಮನುಧರ್ಮಶಾಸ್ತ್ರವೂ, ಅಂಗಗಳೊಡಗೂಡಿದ ವೇದವೂ, ವೈದ್ಯಶಾಸ್ತ್ರವೂ, ನನ್ನ ಆಜ್ಞೆಯಿಂದ ಏರ್ಪಟ್ಟವುಗಳು. ಅವುಗಳನ್ನು ಯುಕ್ತಿವಾದಗಳಿಂದ ದೂಷಿಸಬಾರದು. ಧರ್ಮಜ್ಞನು ದೇವಕಾರ್ಯಗಳಲ್ಲಿ ಬ್ರಾಹ್ಮಣರನ್ನು ಪರೀಕ್ಷಿಸಬಾರದು. ಅದರಿಂದ ಬಹಳ ದೋಷವುಂಟು. ಅವರನ್ನು ಅವಮಾನಪಡಿಸಿದವನು ಕತ್ತೆ, ನಾಯಿ, ಮೊದಲಾದ ಹೀನಜನ್ಮಗಳನ್ನು ಹೊಂದುವನು. ಶ್ರೋತ್ರಿಯನಾದ ಬ್ರಾಹ್ಮಣನ ನಿಂದೆಯಿಂದ ಶುನಕಜನ್ಮವೂ, ಅವನ ತಿರಸ್ಕಾರದಿಂದ ಖರಜನ್ಮವೂ, ಅವನನ್ನು ಅವಮಾನಪಡಿಸುವುದರಿಂದ ಕ್ರಿಮಿಜನ್ಮವೂ, ಅವನಲ್ಲಿ ಮಾತ್ಸರ್ಯದಿಂದ ಕೀಟ ಜನ್ಮವೂ ಬರುವುದೆಂದು ಹೇಳುವರು. ನಿಮಂತ್ರಿತರಾದ ಬ್ರಾಹ್ಮಣರು, ಸಚ್ಚರಿತ್ರವುಳ್ಳವರಾಗಿರಲಿ, ಕೆಟ್ಟ ನಡತೆಯುಳ್ಳವರಾಗಿರಲಿ, ಏನೂ ತಿಳಿಯದ ಪ್ರಾಕೃತರಾಗಿರಲಿ, ಸಂಸ್ಕಾರಹೊಂದಿದವರಾಗಿರಲಿ, ಹೊರಕ್ಕೆ ಹೇಗಿದ್ದರೂ, ಅವರು ಬೂದಿಮುಚ್ಚಿದ ಕೆಂಡದಂತೆ ಇರಬಹುದಾದುದರಿಂದ ಅವರನ್ನು ಅವಮಾನಪಡಿಸಬಾರದು. ಕ್ಷತ್ರಿಯನೂ, ಸರ್ಪವೂ, ಓದಿದ ಬ್ರಾಹ್ಮಣರೂ, ಎಷ್ಟೇ ಕೃಶರಾಗಿ ದುರ್ಬಲರಂತೆ ತೋರಿದರೂ, ಅವರನ್ನು ಅವಮಾನಪಡಿಸಬಾರದು. ಇವು ಮೂರೂ ತನಗೆ ಅವಮಾನವುಂಟಾದಾಗ ಕಾರಣಭೂತನಾದವನನ್ನು ದಹಿಸಿಬಿಡುವುವು.

ಬ್ರಾಹ್ಮಣನು ಅಗ್ನಿಗೆ ಸಮಾನನು. ಕುರೂಪಿಗಳಾಗಲಿ, ಕುಳ್ಳರಾಗಲಿ, ಗೂನರಾಗಲಿ, ಕುರುಡರಾಗಲಿ ಬ್ರಾಹ್ಮಣರನ್ನು ವೇದಪಾರಂಗತರಾದ ಇತರರೊಡನೆ ಸೇರಿಸಿ, ದೇವ ಪಿತೃ ಕಾರ್ಯಗಳಲ್ಲಿ ನಿಯೋಗಿಸಬಹುದು. ಬ್ರಾಹ್ಮಣರನ್ನು ಕೋಪಗೊಳಿಸಬಾರದು, ಅವರಿಗೆ ಕೇಡನ್ನು ಮಾಡಬಾರದು. ಅವರಿಗೆ ಕೋಪವೇ ಆಯುಧವು! ಅವರಿಗೆ ಶಸ್ತ್ರಗಳೇನೂ ಬೇಕಾದುದಿಲ್ಲ. ಕೋಪದಿಂದಲೇ ಅವರು ಇತರರನ್ನು ನಾಶಮಾಡಬಲ್ಲರು. ಜಾತಿ ಮಾತ್ರದಿಂದಲೇ ಬ್ರಾಹ್ಮಣನು ದೈವವೆನಿಸುವನು, ಏಕೆಂದರೆ, ಧರ್ಮವೆಂಬ ಭಂಡಾರವನ್ನು ರಕ್ಷಿಸತಕ್ಕವನು ಬ್ರಾಹ್ಮಣನೇ! ಆದರಲ್ಲಿಯೂ ತಪ್ಪದೆ ಸಂಧ್ಯಾವಂದನಾದಿ ಕಾರ್ಯಗಳನ್ನು ಮಾಡತಕ್ಕ ಬ್ರಾಹ್ಮಣನ ವಿಷಯದಲ್ಲಿ ಹೇಳಬೇಕಾದುದೇನು ? ಬ್ರಾಹ್ಮಣರ ಮೂಲಕವಾಗಿಯೇ ದೇವತೆಗಳೂ, ಪಿತೃಗಳೂ, ಹವ್ಯಕವ್ಯಗಳನ್ನು ಸ್ವೀಕರಿಸುವರು. ಬ್ರಾಹ್ಮಣನ ಉತ್ಪತ್ತಿಯೇ ಧರ್ಮದ ಶಾಶ್ವತರೂಪವೆನಿಸುವುದು. ಅವನು ಧರ್ಮಕ್ಕಾಗಿಯೇ ಹುಟ್ಟಿದವನು. ಅವನೇ ಬ್ರಹ್ಮತ್ವವನ್ನು ಹೊಂದಿಸಲು ಸಮರ್ಥನು. ಬ್ರಾಹ್ಮಣನು ತನ್ನದನ್ನೇ ಭುಜಿಸುವನು! ತನ್ನದನ್ನೇ ಉಡುವನು! ತನ್ನದನ್ನೇ ಕೊಡುವನು! ಬ್ರಾಹ್ಮಣನಲ್ಲಿ ಹಿಂಸಾಸ್ವಭಾವವೂ, ಕ್ರೂರಸ್ವಭಾವವೂ ಇಲ್ಲದುದರಿಂದ, ಇತರರಿಗೆ ಅವನ ಸ್ವತ್ತನ್ನು ಕಿತ್ತುಕೊಂಡು ಅನುಭವಿಸುವುದು ಸುಲಭವು. ಓ ರಾಜಾ! ಬ್ರಾಹ್ಮಣರು ಯಾವಾಗಲೂ ನನ್ನಲ್ಲಿ ಭಕ್ತಿಯುಳ್ಳವರು. ದುರ್ಜ್ಞೇಯನೂ, ನಿಷ್ಕಲನೂ ಆದ ನನ್ನನ್ನು ಆರಣ್ಯಕವೆಂಬ ಉಪನಿಷತ್ತಿನಲ್ಲಿ ಚೆನ್ನಾಗಿಯಾರು ಕಾಣಬಲ್ಲರೋ ಅವರನ್ನು ನೀನು ವಿಶೇಷವಾಗಿ ಗೌರವಿಸಬೇಕು. ಯಾವ ಸಂದರ್ಭದಲ್ಲಿಯೂ ಅವಮಾನಗೊಳಿಸಬಾರದು. ಸ್ವಗೃಹದಲ್ಲಿಯಾಗಲಿ, ಪ್ರವಾಸದಲ್ಲಿಯಾಗಲಿ, ಹಗಲು ಅಥವಾ ರಾತ್ರಿಯಾಗಲಿ, ಕಾಲದೇಶವಿಚಾರವಿಲ್ಲದೆ ನನ್ನಲ್ಲಿ ಭಕ್ತಿಯುಳ್ಳ ಬ್ರಾಹ್ಮಣರನ್ನು ನೀನು ಪೂಜಿಸುತ್ತಿರಬೇಕು. ನಿನಗೆ ಬ್ರಾಹ್ಮಣನಿಗಿಂತಲೂ ಮೇಲಾದ ದೈವವಾಗಲಿ, ಗುರುವಾಗಲಿ, ಬಂಧುವಾಗಲಿ, ನಿಧಿಯಾಗಲಿ, ಪುಣ್ಯವಾಗಲಿ, ಪುಣ್ಯತೀರ್ಥವಾಗಲಿ, ಪವಿತ್ರವಸ್ತುವಾಗಲಿ ಬೇರೊಂದಿಲ್ಲ. ಬ್ರಾಹ್ಮಣರಿಗಿಂತಲೂ ನಿನಗೆ ಬೇರೆ ಧರ್ಮವಿಲ್ಲ. ಬ್ರಾಹ್ಮಣರಿಗಿಂತಲೂ ನಿನಗೆ ಬೇರೆ ಗತಿಯಿಲ್ಲ. ಪಾಪಕರ್ಮಗಳಿಂದ ನರಕದಲ್ಲಿ

ಬೀಳತಕ್ಕ ಮನುಷ್ಯನನ್ನುಕೂಡ ಉತ್ತಮ ಪಾತ್ರವೆನಿಸಿದ ಬ್ರಾಹ್ಮಣನು ಆ ನರಕದಿಂದ ರಕ್ಷಿಸಬಲ್ಲನು. ಅಗ್ನಿಹೋತ್ರಗಳನ್ನು ತಪ್ಪದೆ ನಡೆಸುತ್ತ, ಶೂದ್ರಾನ್ನವನ್ನು ತ್ಯಜಿಸಿ, ಶಾಂತಚಿತ್ತರಾಗಿಯೂ ಇದ್ದು, ನನ್ನಲ್ಲಿ ಭಕ್ತಿಯುಳ್ಳ ಬ್ರಾಹ್ಮಣರಿಗೆ ಕೊಟ್ಟುದು ಅಕ್ಷಯವೆನಿಸುವುದು. ನನ್ನಲ್ಲಿ ಭಕ್ತಿಯುಳ್ಳ ಬ್ರಾಹ್ಮಣನನ್ನು ದಾನಾದಿಗಳಿಂದ ಸತ್ಕರಿಸಿದರೂ, ನಮಸ್ಕರಿಸಿದರೂ, ಆದರಿಸಿದರೂ, ಸಂಭಾಷಣೆಮಾಡಿದರೂ, ಕೊನೆಗೆ ಕಣ್ಣಿಂದ ನೋಡಿದರೂ ಸದ್ಗತಿಯುಂಟು. ನನ್ನನ್ನು ಯಾರು ಕೀರ್ತಿಸುವರೋ, ಯಾರು ಧ್ಯಾನಿಸುವರೋ, ಯಾರು ನಮಸ್ಕರಿಸುವರೋ, ಅಂಥವರನ್ನು ಸ್ಪರ್ಶಿಸಿದರೂ, ನೋಡಿದರೂ, ಅವರು ಸಮಸ್ತಪಾಪಗಳಿಂದ ಮುಕ್ತರಾಗುವರು. ನನ್ನ ಭಕ್ತರಾಗಿ, ನನ್ನನ್ನೇ ಸ್ತುತಿಸುತ್ತ, ನನ್ನಲ್ಲಿಯೇ ನಿರತರಾದ ಶ್ರೋತ್ರಿಯರೂ, ಉಭಯಕುಲದಿಂದಲೂ ಶುದ್ಧರೂ, ಶೂದ್ರಾನ್ನ ಸ್ಪರ್ಶವಿಲ್ಲದವರೂ ಆದ ಬ್ರಾಹ್ಮಣರು ದರ್ಶನಮಾತ್ರದಿಂದಲೇ ಇತರರನ್ನು ಪವಿತ್ರಮಾಡುವರು. ಯಾವನು ನನ್ನ ಭಕ್ತರಾದ ಬ್ರಾಹ್ಮಣರಿದ್ದಲ್ಲಿಗೆ ತಾನಾಗಿಯೇ ತೆಗೆದುಕೊಂಡುಹೋಗಿ ದಾನಮಾಡುವನೋ, ಆ ದಾನವು ಕೋಟಿಫಲಗಳನ್ನು ಕೊಡುವುದು. ಎಚ್ಚರದಲ್ಲಿಯೂ, ನಿದ್ರೆಯಲ್ಲಿಯೂ ಮನೆಯಲ್ಲಿಯೂ, ಪ್ರವಾಸಕಾಲದಲ್ಲಿಯೂ ಕೂಡ ನನ್ನನ್ನು ಮರೆಯದೆ ಹೃದಯದಲ್ಲಿಟ್ಟಿರುವ ಬ್ರಾಹ್ಮಣನು, ದರ್ಶನ, ಸ್ಪರ್ಶನಾದಿಗಳಿಂದಲೇ ಇತರರನ್ನು ಪವಿತ್ರಮಾಡುವನು. ಓ ಧರ್ಮಪುತ್ರಾ! ಹೀಗೆ ನನ್ನಲ್ಲಿ ಭಕ್ತಿಯುಳ್ಳವರೂ, ಶುದ್ಧಾತ್ಮರೂ ಆದ ಬ್ರಾಹ್ಮಣರಿಗೆ ಯಾವಾಗ, ಯಾವ ಕಾಲದಲ್ಲಿ, ಯಾವ ದಾನವನ್ನು ಮಾಡಿದರೂ ಆದು ಸ್ವರ್ಗಕ್ಕೆ ಮಾರ್ಗವೆಂದು ತಿಳಿ. ಇದು ತೊಂಭತ್ತೊಂಟನೆಯ ಅಧ್ಯಾಯವು.

{ ಕೃಷ್ಣನು ಯುಧಿಷ್ಠಿರನಿಗೆ ಬೀಜಕ್ಷೇತ್ರಗಳ ಶುದ್ಧಾಶುದ್ಧತ್ವವನ್ನೂ, ಗಾಯಿತ್ರೀ ಮಹಿಮೆಯನ್ನೂ ವಿವರಿಸಿದುದು }

ಜನಮೇಜಯರಾಜಾ! ಹೀಗೆ ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ಬಗೆಯ ದಾನಗಳ ರೀತಿಯನ್ನೂ, ಅವುಗಳ ಫಲವನ್ನೂ ಕೇಳಿದ

ಧರ್ಮರಾಜನು, ಕೃಷ್ಣನ ಬಾಯಿಂದ ಹೊರಡುವ ಧರ್ಮಶ್ರವಣಗಳಲ್ಲಿ ತೃಪ್ತಿಯಿಲ್ಲದೆ ತಿರುಗಿ ಪ್ರಶ್ನೆಮಾಡುವನು. ಓ ಕೇಶವಾ! ಮನುಷ್ಯನು ಜನ್ಮವೆತ್ತುವುದರಲ್ಲಿ ಬೀಜಕ್ಷೇತ್ರಗಳ (ತಂದೆ ತಾಯಿಗಳ) ಶುದ್ಧಿಯೆಂಬುದು ಹೇಗೆ? ಅದರ ಲಕ್ಷಣಗಳೇನು? ಬೀಜ ದೋಷದಿಂದ ಹುಟ್ಟುವ ಮನುಷ್ಯರ ಸ್ಥಿತಿಯೇನು? ಆಚಾರದೋಷಗಳಾವುವು? ಬ್ರಾಹ್ಮಣರಲ್ಲಿರುವ ವಿಶೇಷವೇನು? ಅವರಲ್ಲಿ ಕಂಡುಬರುವ ಗುಣದೋಷಗಳಾವುವು? ನಾಲ್ಕು ವರ್ಣದವರಲ್ಲಿ ಎಲ್ಲರಿಂದಲೂ ದಾನಾದಿಗಳನ್ನು ತೆಗೆಯತಕ್ಕ ಬ್ರಾಹ್ಮಣರು, ತಾವೂ ಸದ್ಗತಿಯನ್ನು ಹೊಂದಿ, ಇತರರನ್ನೂ ಉದ್ಧರಿಸುವುದೆಂದರೆ ಹೇಗೆ? ಇವನ್ನೆಲ್ಲಾ ನಿನ್ನ ಭಕ್ತನಾದ ನನಗೆ ವಿವರಿಸಿ ಹೇಳಬೇಕು. ನಿನಗೆ ನಮಸ್ಕಾರವು ಎಂದನು. ಅದಕ್ಕಾ ಕೃಷ್ಣನು“ ಓ ಪಾಂಡುಕುಮಾರಾ! ಲೋಕದ ಸ್ಥಿತಿಗೂ, ವಿನಾಶಕ್ಕೂ ಕಾರಣವಾದ ಬೀಜಕ್ಷೇತ್ರಗಳ ಶುದ್ಧಾಶುದ್ಧತ್ವವನ್ನು ತಿಳಿಸುವೆನು ಕೇಳು. ಯಾವ ಬ್ರಾಹ್ಮಣನು ಬ್ರಹ್ಮಚರ್ಯವು ಕೆಡದಂತೆ ಶುದ್ಧನಾಗಿರುವನೋ, ಅವನು ಶುದ್ಧವಾದ ಬೀಜವೆನಿಸುವನು. ಹಾಗೆಯೇ ಉಭಯಕುಲಶುದ್ಧಳಾಗಿ, ಋತುವಾಗುವ ಮೊದಲೇ ಬ್ರಾಹ್ಮ ಮೊದಲಾದ ಯಾವುದಾದರೂ ಒಂದು ಶಾಸ್ತ್ರವಿಧಿಯಿಂದ ವಿವಾಹಿತಳಾದ ಕನ್ನಿಕೆಯು ಶುದ್ಧವಾದ ಕ್ಷೇತ್ರವೆನಿಸುವಳು. ಯಾವಳು ಮನಸ್ಸಿನಿಂದಾಗಲಿ, ಕೃತ್ಯದಿಂದಾಗಲಿ, ಪರಪುರುಷನ ಸಂಬಂಧವುಳ್ಳವಳಾಗಿದ್ದರೆ, ಅವಳು ಗರ್ಭಾದಾನಕ್ಕೆ ಯೋಗ್ಯಳಲ್ಲದ ಅಶುದ್ಧ ಕ್ಷೇತ್ರವೆನಿಸುವಳು. ಲೋಕದಲ್ಲಿ ಪಾಪಬುದ್ಧಿಯುಳ್ಳ ಯಾವನು ವ್ಯಭಿಚಾರದಲ್ಲಿ ಆಸೆಪಡುವನೋ, ಅವನು ತನಗೆ ಹಿಂದುಮುಂದಿನ ಹತ್ತುತಲೆಮೊರೆಯುವರನ್ನೂ ಅಧೋಗತಿಗೆ ಬೀಳಿಸುವನು, ವಿವೇಕಹೀನನಾದ ಯಾವನು ಅಶುದ್ಧಯೋನಿಯಲ್ಲಿ ತನ್ನ ವೀರ್ಯವನ್ನು ಬಿಡುವನೋ, ಆ ವೀರ್ಯದಿಂದ ಉಂಟಾದ ಬ್ರಾಹ್ಮಣನು ಆ ಜಾತಿಗೆ ಸೇರತಕ್ಕವನಲ್ಲ. ಅವನು ಜನ್ಮತ: ಬ್ರಾಹ್ಮಣನಾಗಿದ್ದುಕೊಂಡು ವೇದವೇದಾಂಗಗಳನ್ನೋದಿದವನಾದರೂ ಚಂಡಾಳನಂತೆ ತ್ಯಾಜ್ಯನು. ಸ್ತ್ರೀಯರಲ್ಲಿ ಮನೋವಾಕ್ಕಾಯಗಳಿಂದಲಾದರೂ ವ್ಯಭಿಚರಿಸುವವಳು ಕುಲವನ್ನೇ ಕೆಡಿಸುವಳು. ಅವಳಲ್ಲಿ ಜನಿಸಿದವನೂ ಚಂಡಾಲನೇ! ಇಂತಹ ದುಷ್ಟ

ಕ್ಷೇತ್ರದಲ್ಲಿ ಹುಟ್ಟಿದವನು, ದೇವಕಾರ್ಯ, ಪಿತೃಕಾರ್ಯ, ದಾನ, ಭೋಜನ ಸಹವಾಸ, ಸಂಭಾಷಣ, ಸಹಶಯನ, ಮೊದಲಾದುವುಗಳೊಂದಕ್ಕೂ ಯೋಗ್ಯನಲ್ಲ, ಆದುದರಿಂದ ವಿವೇಕಿಯಾದವನು ದುಷ್ಟಯೋನಿಯಲ್ಲಿ ಸಂಬಂಧವನ್ನು ಮಾಡಬಾರದು. ಮೋಹವಶನಾಗಿ ಅಂತಹ ಸಂಬಂಧವನ್ನು ಮಾಡತಕ್ಕವನು ಮೂರು ತಲೆಮೊರೆಗಳವರೆಗೆ ತನ್ನ ಕುಲವನ್ನೇ ಕೆಡಿಸುವನು. (ಕಾನೀನನು), ಮದುವೆಯಾಗದ ಕನ್ಯಾವಸ್ಥೆಯಲ್ಲಿ ಹೆಂಗಸಿನ ಗರ್ಭದಿಂದ ಹುಟ್ಟಿದವನು, * ಸಹೋಢನು, ಗಂಡನಿರುವಾಗ ಪರಪುರುಷನಿಗೆ ಹುಟ್ಟಿದವನು, ಗಂಡನು ತೀರಿಹೋದಮೇಲೆ ವೈಧವ್ಯ ದಶೆಯಲ್ಲಿ ಹುಟ್ಟಿದವನು,ಉತ್ತಮಕುಲದಲ್ಲಿ ಹುಟ್ಟಿ ಹೀನವೃತ್ತಿಯಲ್ಲಿರುವವನಿಗೆ ಹುಟ್ಟಿದವನು, ಪತಿತನ ಪುತ್ರನು, ಈ ಆರುಮಂದಿಯೂ ಶ್ವಪಚನಿಗಿಂತಲೂ ಕೀಳಾದ ಚಂಡಾಲರೆನಿಸುವರು. ಶೂದ್ರಾದಿ ಸ್ತ್ರೀಯರಲ್ಲಿ ಸ್ವೇಚ್ಛೆಯಿಂದ ಪ್ರವರ್ತಿಸಿ, ತನ್ನ ವೀರ್ಯವನ್ನು ನಷ್ಟಮಾಡಿಕೊಳ್ಳತಕ್ಕವನು ಅಶುದ್ಧವಾದ ಬೀಜನೆನಿಸುವನು. ಅಂಥವನ ಬೀಜವು ಶುದ್ಧಕ್ಷೇತ್ರಕ್ಕೆ ಯೋಗ್ಯವಲ್ಲ. ನಾಯಿಂದ ನಕ್ಕಲ್ಪಟ್ಟ ಶುದ್ಧವಾದ ಹವಿಸ್ಸಿನಂತೆ, ಆ ಕ್ಷೇತ್ರವೂ ಅವನಿಂದ ದೋಷಯುಕ್ತವಾಗುವುದು. ಹೀನಕ್ಷೇತ್ರದಲ್ಲಿ ಬಿತ್ತಿದ ಬ್ರಾಹ್ಮಣಬೀಜವು ಅಮೇಧ್ಯದ ಗುಳಿಯಲ್ಲಿ ಬಿದ್ದಂತೆ ಮಹಾವ್ಯಸನದಿಂದ ಹಾಹಾಕಾರವನ್ನು ಮಾಡುವುದು. ಆ ಗರ್ಭವು, ಕಾಮವಶನಾಗಿ ತನ್ನನ್ನು ಆ ಸ್ಥಿತಿಗೆ ತಂದ ಜನಕನನ್ನು ಪಾಪಿಯೆಂದೂ,ಅವನು ಶೀಘ್ರದಲ್ಲಿ ಅಧೋಗತಿಗೆ ಬೀಳಲೆಂದೂ ಶಪಿಸುತ್ತಲೇ ಇರುವುದು. ಶುಕ್ಲವೆಂಬುದು (ರೇತಸ್ಸು) ಆತ್ಮವೆಂದೂ, ಅದೇ ಮಹತ್ತಾದ ದೈವವೆಂದೂ ಎಣಿಸಲ್ಪಡುವುದು. ಆದುದರಿಂದ ಬ್ರಾಹ್ಮಣನು ಬ್ರಹ್ಮಚರ್ಯವನ್ನು ಹಿಡಿದು, ಸರ್ವಪ್ರಯತ್ನದಿಂದಲೂ ತನ್ನ ವೀರ್ಯವನ್ನು ಶುದ್ಧವಾಗಿಡಬೇಕು. ಆಯುಸ್ಸು, ತೇಜಸ್ಸು, ಬಲ, ವೀರ್ಯ, ಪ್ರಜ್ಞೆ, ಸಂಪತ್ತು, ಕೀರ್ತಿ, ಪುಣ್ಯ, ಇವೆಲ್ಲವೂ ಆ ಬ್ರಹ್ಮಚರ್ಯದಿಂದಲೇ ಲಭಿಸುವುವು. ಅಂಥವನೇ ನನ್ನ ಪ್ರೀತಿಯನ್ನು ಸಂಪಾದಿಸಬಲ್ಲನು. ತನ್ನ ಬ್ರಹ್ಮಚರ್ಯವನ್ನು ಸರಿಯಾಗಿ ನಡೆಸುತ್ತಿದ್ದು, ಆಮೇಲೆ ಗೃಹಸ್ಥಾ

---

*ಮೊದಲೇ ಗರ್ಭಿಣಿಯಾಗಿದ್ದವಳನ್ನು ವಿವಾಹಮಾಡಿಕೊಂಡವನಿಗೆ, ಆ ಗರ್ಭದಲಿ ಹುಟ್ಟಿದ ಮಗನು ಸಹೋಢನು.

ಶ್ರಮವನ್ನು ಹಿಡಿದು, ಪಂಚಯಜ್ಞಪರರಾಗಿರುವವರಿಂದಲೇ ಭೂಮಿಯಲ್ಲಿ ಧರ್ಮವು ನೆಲೆಗೊಳಿಸಲ್ಪಡುವುದು. ಪ್ರಾತಸ್ಸಾಯಂಕಾಲಗಳಲ್ಲಿ ನಿತ್ಯವೂ ಸಂಧ್ಯೋಪಾಸನೆಯನ್ನು ತಪ್ಪದೆ ಮಾಡುವವರು, ವೇದರೂಪವಾದ ತೆಪ್ಪ ದಿಂದ ತಾವೂ ಸಂಸಾರ ಸಮುದ್ರವನ್ನು ದಾಟಿ, ಇತರರನ್ನೂ ದಾಟಿಸುವರು. ವೇದಮಾತೆಯೆನಿಸಿಕೊಂಡ ಗಾಯಿತ್ರಿಯನ್ನು ಯಾವನು ಜಪಿಸುವನೋ, ಅವನು ಸಾಗರಾಂತವಾದ ಭೂಮಿಯನ್ನೆಲ್ಲ ದಾನತೆಗೆದರೂ ದೋಷಿಯಾಗ ಲಾರನು. ಅಂತವನಿಗೆ ಕೆಟ್ಟ ಸ್ಥಾನಗಳಲ್ಲಿರುವ ಸೂರ್ಯಾದಿಗ್ರಹಗಳೆಲ್ಲ ಶುಭ ಕಾರಿಗಳಾಗುವುವು. ಅವನು ಎಲ್ಲಿಗೆ ಹೋದರೂ ಭಯಂಕರಗಳಾದ ಭೂತ ಗ್ರಹ ಪಿಶಾಚಾದಿಗಳು ಅವನನ್ನು ಭಯಪಡಿಸಲಾರವು. ವೇದ ವ್ರತಗಳನ್ನು ಅನುಷ್ಠಿಸುವ ಬ್ರಾಹ್ಮಣರು ಎಲ್ಲವನ್ನೂ ಪರಿಶುದ್ಧವಾಗಿ ಮಾಡುವರು, ಗಾಯಿತ್ರಿಯು ನಾಲ್ಕು ವೇದಗಳಿಗಿಂತಲೂ ಮೇಲೆನಿಸುವುದು. ಹೆಸರಿಗೆ ಮಾತ್ರ ಬ್ರಾಹ್ಮಣನೆನಿಸಿಕೊಂಡು, ವ್ರತ ವೇದಾಧ್ಯಯನ ಕರ್ಮನಿಷ್ಠೆಗಳೊಂ ದೂ ಇಲ್ಲದವನಾಗಿದ್ದರೂ ಅವನು ಪೂಜ್ಯನೆನಿಸುವನು. ಹೀಗಿರುವಾಗ ಉಭಯಕಾಲಗಳಲ್ಲಿಯೂ ಸಂಧ್ಯೋಪಾಸನೆಯನ್ನು ಮಾಡುತ್ತ, ವೇದಾ ಧ್ಯಯನವನ್ನು ಮಾಡಿ, ಶುಚಿತ್ವ, ಮೃದುತ್ವ, ಋಜುತ್ವ, ದಾನ, ಶೀಲಾದಿ ಗಳಲ್ಲಿ ನಿರ್ದುಷ್ಟನಾಗಿರುವ ಬ್ರಾಹ್ಮಣನು ಪೂಜ್ಯನೆಂಬುದನ್ನು ಹೇಳ ಬೇಕಾದುದೇನು? ಬ್ರಾಹ್ಮಣನಲ್ಲಿ ಮೇಲೆ ಹೇಳಿದ ಶುಚಿತ್ವಶೀಲಾದಿ ಗುಣಗಳು ವೇದಾಧ್ಯಯನಕ್ಕಿಂತಲೂ ಮೇಲೆನಿಸುವುವೆಂದು ಮನುವು ಹೇಳಿರುವನು. ಯಾವ ಬ್ರಾಹ್ಮಣನು ವೇದವನ್ನೋದಿ, ಸ್ವಧರ್ಮ ನಿರತನಾಗಿ, ಆತ್ಮನಿಗ್ರಹವನ್ನು ಮಾಡಿ, "ಭೂರ್ಭುವಸ್ಸುವಃ" ಎಂಬ ಮಂ ತ್ರವನ್ನು ಜಪಿಸುವನೋ ಅವನೇ ವಿದ್ವಾಂಸನು. ಅವನೇ ಈ ಭೂಲೋಕ ದಲ್ಲಿ ದೇವತೆಯೆನಿಸುವನು. ನಿತ್ಯವೂ ಸಂಧ್ಯೋಪಾಸನೆಯನ್ನು ತಪ್ಪದೆ ಮಾಡುವ ಬ್ರಾಹ್ಮಣರು ಬ್ರಹ್ಮಲೋಕವನ್ನು ಸೇರುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಕೇವಲ ಗಾಯಿತ್ರಿಯೊಂದನ್ನುಮಾತ್ರ ಜಪಿಸುವವನಾ ದರೂ, ಇಂದ್ರಿಯಗಳನ್ನಡಗಿಸಿದ ಬ್ರಾಹ್ಮಣನು ಉತ್ತಮನೇ! ಹಾಗಿಲ್ಲದೆ ಸಿಕ್ಕಿದಕಡೆಯಲ್ಲಿ ತಿನ್ನುತ್ತ, ಜೀವನಕ್ಕಾಗಿ ತನಗೆ ತೋರಿದುದನ್ನೆಲ್ಲ ವಿಕ್ರ ಯಿಸುತ್ತಿರುವವನು ವೇದವೇದಾಂಗ ಪಾರಂಗತನೆನಿಸಿದ್ದರೂ ಅವನು

ಹೀನನೆನಿಸುವನು. ಓ ಧರ್ಮಪುತ್ರಾ! ಪೂರ್ವದಲ್ಲಿ ಬ್ರಹ್ಮನೇ ಮೊದಲಾಗಿ ಎಲ್ಲಾ ದೇವತೆಗಳೂ, ಋಷಿಗಳೂ ಸೇರಿ, ಗಾಯಿತ್ರಿಯನ್ನೂ, ಸಮಸ್ತ ವೇದಗಳನ್ನೂ ತ್ರಾಸಿನಲ್ಲಿ ತೂಗಿ ನೋಡಿದಾಗ, ನಾಲ್ಕು ವೇದಗಳಿಗಿಂತಲೂ ಗಾಯಿತ್ರಿಯೇ ಮೇಲೆನಿಸಿತು. ಎಲ್ಲಾ ಪುಷ್ಪಗಳಿಂದ ಭ್ರಮರಗಳು ಮಧುವನ್ನು ಸಂಗ್ರಹಿಸಿಡುವಂತೆ, ಸಮಸ್ತ ವೇದಗಳಿಂದ ಸಂಗ್ರಹಿಸಲ್ಪಟ್ಟ ಸಾರವೇ ಗಾಯಿತ್ರಿಯು. ನಾಲ್ಕು ವೇದಗಳಿಗೂ ಗಾಯಿತ್ರಿಯೇ ಪ್ರಾಣವೆನಿಸಿದೆ. ಸಾವಿತ್ರಿಯಿಲ್ಲದ ವೇದಗಳು ನಿರ್ಜೀವಗಳೇ! ಚತುರ್ವೇದಗಳನ್ನೋದಿದವನಾದರೂ ಶೀಲಭ್ರಷ್ಟನಾದವನು ಕುತ್ಸಿತನೆನಿಸುವನು. ವೇದಗಳನ್ನರಿಯದಿದ್ದರೂ ಗಾಯಿತ್ರಿಯನ್ನು ಜಪಿಸುವ ಶೀಲವಂತನು ಉತ್ತಮನೆನಿಸುವನು. ಆದುದರಿಂದ ಸಾವಿರ ಜಪಗಳಿಂದ ಉತ್ತಮವೂ, ನೂರು ಜಪಗಳಿಂದ ಮಧ್ಯಮವೂ, ಹತ್ತು ಜಪಗಳಿಂದ ಕೊನೆಯದೂ ಎನಿಸಿಕೊಂಡು ಸರ್ವಪಾಪಹರವಾದ ಗಾಯಿತ್ರಿಯನ್ನು ಜಪಿಸು'' ಎಂದನು. ಆಮೇಲೆ ಯುಧಿಷ್ಠಿರನು '' ಓ ತ್ರೈಲೋಕ್ಯನಾಥಾ! ಕೃಷ್ಣಾ! ನೀನು ಸಮಸ್ತಭೂತಗಳಿಗೂ ಆತ್ಮವೆನಿಸಿದವನು. ನಾನಾ ಯೋಗಗಳಿಂದ ಉಪಾಸಿಸಲ್ಪಡತಕ್ಕವನು. ನಾನಾ ಯೋಗಗಳಲ್ಲಿ ಪ್ರಿಯವುಳ್ಳವನು. ಅಂತಹ ನೀನು ಯಾವ ಕರ್ಮದಿಂದ ಸಂತೋಷಗೊಳ್ಳುವೆಯೋ'' ಅದನ್ನು ನನಗೆ ತಿಳಿಸಬೇಕು ಎನಲು, ಕೃಷ್ಣನು '' ಓ ಧರ್ಮರಾಜಾ! ಸಾವಿರಾರು ಭಾರದಷ್ಟು ಗುಗ್ಗುಳ ಮೊದಲಾದ ಸುಗಂಧ ದೀಪಗಳನ್ನು ನನ್ನ ಮುಂದೆ ಉರಿಸಿದರೂ, ಸಾವಿರಾರು ನಮಸ್ಕಾರಗಳನ್ನು ಮಾಡಿದರೂ, ಸಾವಿರಾರು ಖಂಡುಗದ ಅನ್ನವನ್ನು ನನಗೆ ನಿವೇದನಮಾಡಿದರೂ, ವೇದವಾಕ್ಯಗಳಿಂದ ನನ್ನನ್ನು ಸದಾಸ್ತುತಿಸಿದರೂ, ಉತ್ತಮಬ್ರಾಹ್ಮಣರನ್ನು ಸಂತೋಷಗೊಳಿಸದಿದ್ದವನ ವಿಷಯದಲ್ಲಿ ನಾನು ಸಂತೋಷಿಸಲಾರೆನು. ಬ್ರಾಹ್ಮಣರನ್ನು ಪೂಜಿಸಿದರೆ ನಾನು ಪೂಜಿತನಾಗುವೆನು. ಅವರನ್ನು ಕೋಪಗೊಳಿಸಿದರೆ ನಾನೂ ಕೋಪಗೊಳ್ಳುವೆನು. ಉತ್ತಮ ಬ್ರಾಹ್ಮಣರನ್ನು ಪೂಜಿಸತಕ್ಕವರಿಗೆಲ್ಲ ನಾನು ದಿಕ್ಕಾಗಿರುವೆನು. ನಾನೇ ಬ್ರಾಹ್ಮಣರೂಪದಿಂದ ಲೋಕದಲ್ಲಿ ವಸಿಸುವೆನು. ಆದುದರಿಂದ ನನ್ನಲ್ಲಿ ಮನಸ್ಸಿಟ್ಟು, ನಾನೇ ಎಂಬ ಭಾವದಿಂದ ಬ್ರಾಹ್ಮಣನನ್ನು ಪೂಜಿಸದರೆ, ಅಂಥವನನ್ನು ನಾನೂ ನನ್ನಂತೆಯೇ ಭಾವಿಸುವೆನು.

ಕುರುಡರಾಗಲಿ, ಕುರೂಪಿಗಳಾಗಲಿ, ಬ್ರಾಹ್ಮಣರನ್ನು ಅವಮಾನಪಡಿಸಬಾರದು. ಆ ಬ್ರಾಹ್ಮಣರು ನನ್ನ ರೂಪವೇ ಆಗಿರುವುದರಿಂದ, ಸಾಗರಾಂತವಾದ ಸಮಸ್ತಭೂಮಿಯಲ್ಲಿ ಎಲ್ಲಿದ್ದರೂ ಅವರನ್ನು ಪೂಜಿಸಿದುದರಿಂದ ನನ್ನನ್ನು ಪೂಜಿಸಿದಂತಾಗುವುದು. ಅಜ್ಞಾನಿಗಳನೇಕರು, ನಾನೇ ಉತ್ತಮಬ್ರಾಹ್ಮಣರೂಪದಿಂದ ಭೂಮಿಯಲ್ಲಿರುವುದನ್ನು ತಿಳಿಯದೆ, ಅವರನ್ನು ಅವಮಾನಗೊಳಿಸಿ ಧರ್ಮಭ್ರಷ್ಟರಾಗುವರು. ಉತ್ತಮಬ್ರಾಹ್ಮಣರ ಸಾಧುತ್ವವನ್ನು ನೋಡಿ, ತಮ್ಮ ಶುಶ್ರೂಷೆಯನ್ನು ಅವರಿಂದ ಮಾಡಿಸಿಕೊಳ್ಳುವರು. ಅವರನ್ನು ಸ್ವಕಾರ್ಯಕ್ಕಾಗಿ ನಿಯಮಿಸುವರು. ಇಂಥವರು ಸತ್ತಮೇಲೆ, ಶಿಲ್ಪಿಗಳು ನೂಲಿನ ಗುರುತನ್ನು ಹಿಡಿದು ಮರವನ್ನು ಕುಯ್ಯುವಂತೆ ಯಮದೂತರು, ಕುಯ್ಯುವರು. ಸಾಧುಬ್ರಾಹ್ಮಣರನ್ನು ಕೋಪದಿಂದಲೂ, ನಿಂದೆಯಿಂದಲೂ ಪರಾಭವಿಸಿ ಯಾವನು ಸಂತೋಷಪಡುವನೋ, ಅಂಥವನು ಸತ್ತಮೇಲೆ ಯಮಲೋಕದಲ್ಲಿ ಯಮನು ಅವನನ್ನು ನೆಲಕ್ಕೆ ಕೆಡಹಿ ಎದೆಯನ್ನು ಪಾದದಿಂದ ತುಳಿಯುವನು. ಉರಿಯುವ ಇಕ್ಕುಳಗಳಿಂದ ಅವನ ನಾಲಗೆಯನ್ನು ಕೀಳುವನು. ಉತ್ತಮ ಬ್ರಾಹ್ಮಣರನ್ನು ಯಾರು ಪಾಪಬುದ್ಧಿಯಿಂದ ನೋಡುವರೋ, ಬ್ರಹ್ಮದ್ವೇಷಿಗಳೂ, ವೇದಬಾಹ್ಯರೂ ಆದ ಅವರನ್ನು ಪರಲೋಕದಲ್ಲಿ ಭಯಂಕರ ರೂಪವುಳ್ಳ ಮತ್ತು ಹರಿತವಾದ ಕೊಕ್ಕುಳ್ಳ ಕ್ರೂರಪಕ್ಷಿಗಳು, ಯಮನ ಆಜ್ಞೆಯಿಂದ ಕಾಲಲ್ಲಿ ಮೆಟ್ಟಿ, ಕಣ್ಣುಗಳನ್ನು ಕೀಳುವುವು. ಸಾಧುಗಳಾದ ಉತ್ತಮ ಬ್ರಾಹ್ಮಣರನ್ನು ಹೊಡೆದರೂ, ರಕ್ತಗಾಯಮಾಡಿದರೂ, ಅವರ ಮೂಳೆಯನ್ನು ಮುರಿದರೂ, ಅವರ ಪ್ರಾಣವನ್ನು ಕಳೆದರೂ, ಅಂಥವನು ಹನ್ನೊಂದು ತಲೆಮೊರೆಗಳವರೆಗೆ ನರಕದಲ್ಲಿ, ಶೂಲಾರೋಪಣ, ಅಗ್ನಿತಾಪನ, ಮುಂತಾದ ಘೋರ ಶಿಕ್ಷೆಗಳಿಗೆಲ್ಲ ಗುರಿಯಾಗುವನು. ಅಂಥವನನ್ನು ತಲೆಕೆಳಗಾಗಿ ನೇತುಹಾಕಿ ಅನೇಕ ವರ್ಷಗಳವರೆಗೆ ಬೆಂಕಿಯಲ್ಲಿ ಬೇಯಿಸುವರು. ಅವನಿಗೆ ಎಂದೆಂದಿಗೂ ಆ ನರಕಶಿಕ್ಷೆಯಲ್ಲಿ ಬಿಡುಗಡೆಯಿಲ್ಲ. ಬ್ರಾಹ್ಮಣರನ್ನು ಕೊಲ್ಲುವ ಉದ್ದೇಶದಿಂದಿರತಕ್ಕವನೂ, ನೂರು ಸಾವಿರ ವರ್ಷಗಳವರೆಗೆ ತಾಮಿಸ್ರವೆಂಬ ನರಕದಲ್ಲಿ ಬೇಯಿಸಲ್ಪಡುವನು. ಸಾಧುವಾದ ಬ್ರಾಹ್ಮಣನಮೇಲೆ ಕೋಪಗೊಂಡು, ಬುದ್ಧಿಪೂರ್ವಕ

ವಾಗಿ ಅವನಿಗೆ ರಕ್ತಗಾಯುವಮಾಡತಕ್ಕವನು, ಇಪ್ಪತ್ತೊಂದು ನರಕಗಳಲ್ಲಿ ಯೂ ಕ್ರಮವಾಗಿ ಶಿಕ್ಷೆಯನ್ನನುಭವಿಸುವನು. ಆದುದರಿಂದ ಸಾಧುಗಳನ್ನು ಹಿಂಸಿಸಬಾರದು. ಅವರೊಡನೆ ಪರುಷ ವಾಕ್ಯವನ್ನಾಡಬಾರದು. ಅವರಲ್ಲಿ ಮರ್ಯ್ಯಾದೆವಿಾರಬಾರದು. ಯಾರು ಉತ್ತಮಬ್ರಾಹ್ಮಣರನ್ನು ಮೃದುವಾಕ್ಯದಿಂದ ಆದರಿಸಿ ಪೂಜಿಸುವರೋ, ಅಂಥವರಿಂದ ನಾನೂ ಪೂಜಿತನಾದಂತೆಯೂ, ಅವನನ್ನು ಹೆದರಿಸಿ ಕೋಪಗೊಳಿಸತಕ್ಕವರು ನನ್ನನ್ನು ಕೋಪಗೊಳಿಸಿದಂತೆಯೂ ತಿಳಿ. ಧೂಪ ಚಂದನಾದಿಗಳಿಂದ ಕಾಷ್ಠರೂಪವಾದ ನನ್ನ ಅರ್ಚಾಪ್ರತಿಮೆಯನ್ನು ಪೂಜಿಸಿದಮಾತ್ರಕ್ಕೆ ನನ್ನನ್ನು ಪೂಜಿಸಿದವನಾಗಲಾರನು. ಬ್ರಾಹ್ಮಣ ಪೂಜೆಯಿಂದಲೇ ನಾನು ಪೂಜಿತನಾಗುವೆನು. ಧರ್ಮಪುತ್ರಾ! ಅಷ್ಟೇಕೆ? ನಾನೂಕೂಡ ಬ್ರಾಹ್ಮಣಾನುಗ್ರಹದಿಂದಲೇ ಈ ಭೂಮಿಯನ್ನು ಧರಿಸುವೆನು. ಬ್ರಾಹ್ಮಣಾನುಗ್ರಹದಿಂದಲೇ ದೈತ್ಯರನ್ನೂ ಜಯಿಸುವೆನು. ಆ ಬ್ರಾಹ್ಮಣಾನುಗ್ರಹದಿಂದಲೇ ನಾನು ಸರ್ವಶಕ್ತನೆನಿಸುವೆನು. ಆ ಬ್ರಾಹ್ಮಣಾನುಗ್ರಹದಿಂದಲೇ ಬೇರೆಯವರಿಗೆ ನಾನು ದುರ್ಜಯನೆನಿಸಿರುವೆನು'' ಎಂದನು.

ಇದು ತೊಂಭತ್ತೊಂಭತ್ತನೆಯ ಅಧ್ಯಾಯವು.

{ ಕೃಷ್ಣನು ಯುಧಿಷ್ಠಿರನಿಗೆ ಪಾಪಿಗಳೂ, ಪುಣ್ಯಶೀಲರೂ, ಹೊಂದತಕ್ಕ ಯಮಪುರ ಮಾರ್ಗಾದಿಗಳನ್ನೂ, ಅವರು ಹೋಗತಕ್ಕ ರೀತಿಯನ್ನೂ ವಿವರಿಸಿದುದು. }

ಆಗ ಯುಧಿಷ್ಠಿರನು "ಓ ದೇವದೇವಾ! ನನಗೆ ಮತ್ತೊಂದು ವಿಷಯವನ್ನು ಕೇಳಬೇಕೆಂಬ ಉದ್ದೇಶವುಂಟು. ಮನುಷ್ಯಲೋಕಕ್ಕೂ, ಯಮಲೋಕಕ್ಕೂ ನಡುವೆ ಇರುವ ಅಂತರಾಳವೆಷ್ಟು? ಅದರ ಪ್ರಮಾಣವೇನು? ಆ ಮಾರ್ಗವೆಂತದು? ಅಲ್ಲಿರತಕ್ಕ ವಸ್ತುಗಳಾವುವು? ಯಾವ ರೀತಿಯಿಂದ ಮನುಷ್ಯರು ಅದನ್ನು ದಾಟುವರು. ಮನುಷ್ಯನು ಚರ್ಮಮಾಂಸಾಸ್ಥಿಗಳಿಂದ ಕೂಡಿದ ಪಂಚಭೂತಗಳಿಂದ ಏರ್ಪಟ್ಟ ಈ ಪಾರ್ಥಿವ ಶರೀರವನ್ನು ಬಿಟ್ಟು, ಅವೊಂದೂ ಇಲ್ಲದ ಪರಲೋಕಕ್ಕೆ ಹೋಗುವಾಗ

ತನ್ನ ಪುಣ್ಯ ಪಾಪಕರ್ಮಗಳಿಂದ ಅವನಿಗೆ ಸುಖದುಃಖಾನುಭವಗಳು ಹೇಗುಂಟಾಗುವುವು ? ಭಯಂಕರರೂಪವುಳ್ಳ ಯಮದೂತರು, ಭಯಂಕರ ಪಾಶಗಳಿಂದ ಬಿಗಿದು, ಆ ಜೀವವನ್ನು ಎಲ್ಲಿಗೆ ಎಳೆದುಕೊಂಡು ಹೋಗುವರು? ಕರ್ಮಗಳೆಂಬ ಪಾಶಗಳಿಂದ ಕಟ್ಟಿ, ಹೊಡೆದು, ಬಡಿದು, ಹಿಂಸಿಸಿ, ಎಳೆದುಕೊಂಡು ಹೋಗುವಾಗ, ಆ ಜೀವನು ತಾನು ಮಾಡಿದ ಪುಣ್ಯ ಪಾಪ ಕರ್ಮಗಳಿಗೆ ತಕ್ಕ ಸುಖದುಃಖಗಳನ್ನು ಅನುಭವಿಸುವ ಕ್ರಮಗಳೇನು ? ಯಮದೂತರು ಹೇಗೆ ಅವನನ್ನು ಸಾಗಿಸುವರು? ಅಲ್ಲಿ ಹೋದಮೇಲೆ ಈ ಜೀವಗಳು ಮಾಡತಕ್ಕ ಕೆಲಸವೇನು ? ದೇವಬ್ರಾಹ್ಮಣ ಪೂಜಿತರಾದ ಧರ್ಮಾತ್ಮರು ಹೇಗೆ ಸಾಗಿಸಲ್ಪಡುವರು. ಪಾಪಕರ್ಮಿಗಳು ನರಕಕ್ಕೆ ಹೋಗುವ ರೀತಿಯಾವುದು ? ಯಮಲೋಕಕ್ಕೆ ಹೋಗುವ ಜೀವನ ಸ್ವರೂಪವೆಂತದು? ಅವನ ಬಣ್ಣವಾವುದು? ಅವನ ಅಳತೆಯೆಷ್ಟು?ಇವನ್ನೆಲ್ಲಾ ನನಗೆ ತಿಳಿಸಬೇಕು'' ಎಂದನು. ಆಗ ಕೃಷ್ಣನು ''ಯುಧಿಷ್ಠಿರಾ ! ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳುವೆನು ಕೇಳು. ಮನುಷ್ಯಲೋಕಕ್ಕೂ, ಯಮಲೋಕಕ್ಕೂ ನಡುವೆ ಎಂಭತ್ತಾರುಸಾವಿರ ಯೋಜನಗಳ ದೂರವುಂಟೆಂದು ಹೇಳುವರು. ಆ ಯಮಲೋಕಕ್ಕೆ ಹೋಗುವ ದಾರಿಯಲ್ಲಿ ನೀರು, ನೆಳಲು, ಯಾವುದೂ ಇಲ್ಲ. ಒಂದು ವೃಕ್ಷವಾಗಲಿ, ಒಂದು ಕೊಳವಾಗಲಿ, ಒಂದು ಕೆರೆಯಾಗಲಿ, ಸೇದುವ ಬಾವಿಯಾಗಲಿ, ಮನೆಯಾಗಲಿ, ಮಂಟಪವಾಗಲಿ, ಅರವಟಿಗೆಯಾಗಲಿ, ಅನ್ನಛತ್ರವಾಗಲಿ ಯಾವುದೂ ಇಲ್ಲ. ನದಿಗಳಿಲ್ಲ! ಬೆಟ್ಟಗಳಿಲ್ಲ! ಭೂಮಿಯಲ್ಲಿಯಾದರೂ ಅಡಗಿಕೊಳ್ಳುವುದಕ್ಕೆಸಹ ಒಂದು ರಂಧ್ರವಿಲ್ಲ! ಗ್ರಾಮಗಳಿಲ್ಲ! ಋಷ್ಯಾಶ್ರಮಗಳಿಲ್ಲ! ಹೊಲಗದ್ದೆಗಳಾಗಲಿ, ತೋಟಗಳಾಗಲಿ ಕಾಡುಗಳಾಗಲಿ, ಯಾವುದೂ ಇಲ್ಲ. ಆ ದಾರಿಯಲ್ಲಿ ವಿಶ್ರಾಂತಿಗಾಗಿ ಕ್ಷಣಮಾತ್ರ ತಂಗುವುದಕ್ಕೂ ಆಶ್ರಯಸ್ಥಳವಿಲ್ಲ. ಪ್ರಾಣಿಗಳಿಗೆ ಮೃತ್ಯುಕಾಲವು ಬಂದು, ಮರಣಸಂಕಟದಿಂದ ಪೀಡಿಸಲ್ಪಡುತ್ತ, ದೇಹರಚನೆಯ ಆಧಾರಗಳೆಲ್ಲವೂ ಸಡಲುತ್ತ ಬಂದು, ಪ್ರಾಣವು ಕಂಠಗತವಾದ ಸ್ಥಿತಿಯಲ್ಲಿ ಸ್ವಾಧೀನತಪ್ಪಿದ ಜೀವನು, ಒಳಗಿರುವ ಒಂದು ವಾಯುವಿನ ಬಲದಿಂದ ಶರೀರದಿಂದ ಕದಲಿಸಲ್ಪಡುವನು.ಆ ಜೀವನು ಆರುಹೊದಿಕೆಗಳುಳ್ಳ ಶರೀರದಿಂದ ಗಾಳಿಯಾಗಿ ಹೊರಬಿದ್ದು, ಅದೇರೂಪವೂ, ಅದೇ

ಬಣ್ಣವೂ, ಅದೇ ಪ್ರಮಾಣವೂ ಉಳ್ಳದಾಗಿ ಕಣ್ಣಿಗೆ ಮಾತ್ರ ಕಾಣದಿರುವ ಬೇರೊಂದು ಶರೀರದಲ್ಲಿ ಯಾರಿಗೂ ತಿಳಿಯದಂತೆ ಪ್ರವೇಶಿಸುವನು. ಆಗ ಆ ಯಾತನಾಶರೀರದಲ್ಲಿ ಆತ್ಮನನ್ನು ಹೊಡೆದರೂ, ಬಡಿದರೂ, ಕಡಿದರೂ, ಸುಟ್ಟರೂ,ಅದು ನಾಶಹೊಂದುವುದಿಲ್ಲ. ಆಗ ನಾನಾತೆರದ ವಿಕಾರ ರೂಪವುಳ್ಳ ಯಮದೂತರು, ಯಮನ ಆಜ್ಞೆಯಿಂದ ಅವನನ್ನು ಎಳೆದು ಕೊಂಡು ಹೋಗುವರು. ಇವನು ಆಗ ಸ್ವಾಧೀನತಪ್ಪಿದವನಾಗಿ ಅವರ ಕೈಯಲ್ಲಿ ಸಿಕ್ಕಿಬಿದ್ದು ನರಳುವನು. ಭೂಮಿಯಲ್ಲ ಮಡದಿಮಕ್ಕಳೆಂಬ ಪಾಶ ದಿಂದ ಬಿಗಿಯಲ್ಪಟ್ಟು, ತಾನು ಮಾಡಿದ ಪುಣ್ಯ ಪಾಪಗಳೆಂಬ ಕರ್ಮಗಳಿಂದ ಬಿಡದೆ ಹಿಂಬಾಲಿಸಲ್ಪಡುತ್ತಿರುವ ಅವನು,ಯಮದೂತರ ಕೈಗೆ ಸಿಕ್ಕಿ, ಇತ್ತಲಾಗಿ ದುಃಖಿತರಾದ ಬಂಧುಗಳು ಗೋಳಿಡುತ್ತಿರುವಾಗಲೇ, ಅತ್ತಲಾಗಿ ತಾನು ದೀನಸ್ವರದಿಂದ ಕೂಗಿಕೊಳ್ಳುತ್ತ ಯಮಪುರಿಯ ಕಡೆಗೆ ಹೋಗುವನು. ಸಮಸ್ತ ಬಂಧುಜನಗಳನ್ನೂ ಬಿಟ್ಟು, ಎಲ್ಲದರಲ್ಲಿಯೂ ಆಸೆಯನ್ನು ತೊರೆದು ಮುಂದೆ ಸಾಗುವನು. ತಂದೆ, ತಾಯಿ, ಸಹೋದರರು, ಹೆಂಡಿರು, ಮಕ್ಕಳು, ಮಾವಂದಿರು,ಸ್ನೇಹಿತರು, ಮುಂತಾದವರೆಲ್ಲ ಸುಮ್ಮನೆ ರೋದನ ಮಾಡುತ್ತ ಅವನನ್ನು ಕೈ ಬಿಡುವರು. ದೀನರಾಗಿ ಕಣ್ಣೀರು ಬಿಡುತ್ತಿರುವ ಅವರ ಕಣ್ಣಿಗೆ ಕಾಣದೆಯೇ ಜೀವನು ಶರೀರವನ್ನು ಬಿಟ್ಟು ಗಾಳಿಯಾಗಿ ಹೊರಟುಹೋಗುವನು. ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜಗಳೆಂಬ ನಾಲ್ಕು ವಿಭಾಗಗಳುಳ್ಳ ಚರಾಚರ ಪ್ರಾಣಿಗಳೆಲ್ಲ,ಹೀಗೆಯೇ ತಮ್ಮ ಆಯುಃಕಾಲವು ಮುಗಿದೊಡನೆ, ತನ್ನ ಬಂಧುಬಳಗಗಳನ್ನೂ, ಭೋಗಗಳನ್ನೂ, ಧನವನ್ನೂ ಇಲ್ಲಿಯೇ ಬಿಟ್ಟು, ಆ ಯಮಪುರಿಯ ಮಾರ್ಗವನ್ನು ಹಿಡಿಯದೆ ತೀರದು. ಅದು ತಮಸ್ಸಿನಿಂದ ಮುಚ್ಚಲ್ಪಟ್ಟು, ಕೇವಲ ಅಂಧಕಾರಮಯವಾಗಿ, ಅತಿ ಭಯಂಕರವಾಗಿರುವುದು. ಪಾಪಮಾಡಿದವರಿಗೆ ಸದಾ ದುಃಖಪ್ರಚುರವಾಗಿ, ಮುಂದೆ ಸಾಗುವುದಕ್ಕೇ ಕಷ್ಟವಾಗಿರುವುದು. ಅದು ಸಹಾಯಶೂನ್ಯವಾಗಿ, ಎಷ್ಟು ನಡೆದರೂ ಕೊನೆಮುಟ್ಟದುದಾಗಿ, ಕಣ್ಣಿಂದ ನೋಡುವುದಕ್ಕೂ ಸಾಧ್ಯವಿಲ್ಲದಂತಿರುವುದು. ಋಷಿಗಳು ಪರಂಪರೆಯಾಗಿ ಅದರ ಸನ್ನಿವೇಶಗಳನ್ನು ಕಥಾಂತರಗಳಲ್ಲಿ ವರ್ಣಿಸುವಾಗ ಕಿವಿಯಿಂದ ಕೇಳುವಾಗಲೇ ಭಯವನ್ನುಂಟುಮಾಡುವುದು. ಈ

ಪ್ರಯಾಣವು ಯಾರಿಗೂ ತಪ್ಪಿದುದಲ್ಲ. ದೇವಾಸುರಮನುಷ್ಯರು, ಸ್ತ್ರೀ ಪುರುಷರು, ನಪುಂಸಕರು, ಬಾಲರು, ವೃದ್ಧರು, ಆಗಲೇ ಹುಟ್ಟಿದ ಶಿಶುಗಳು, ಇನ್ನೂ ಗರ್ಭದಲ್ಲಿರತಕ್ಕ ಶಿಶುಗಳು, ಮುಂತಾಗಿ ಜೀವಶಬ್ದವಾಚ್ಯರಾದವರು ಯಾರೇ ಆದರೂ ಆ ದಾರಿಯಲ್ಲಿ ಹೋಗಿಯೇ ತೀರಬೇಕು. ಅಲ್ಲಿ ಹೋಗುವುದಕ್ಕೆ ಪೂರ್ವಾಹ್ಣ, ಅಪರಾಹ್ಣ, ಸಂಧ್ಯೆ, ಪ್ರದೋಷ, ಅರ್ಧರಾತ್ರ, ಪ್ರಾತಃಕಾಲವೆಂಬ ಕಾಲಭೇದವಿಲ್ಲ. ಪ್ರವಾಸದಲ್ಲಿರಲಿ, ಕಾಡಿನಲ್ಲಿರಲಿ, ಬೆಟ್ಟವನ್ನೇರಿರಲಿ, ನೆಲದಲ್ಲಿರಲಿ, ಜಲದಲ್ಲಿರಲಿ, ಮನೆಯಲ್ಲಿರಲಿ, ಹೊಲಗದ್ದೆಗಳಲ್ಲಿರಲಿ, ಆಕಾಶದಲ್ಲಿರಲಿ, ಕುಳಿತಿರಲಿ, ನಿಂತಿರಲಿ, ಮಲಗಿರಲಿ, ಎಚ್ಚರದಲ್ಲಿರಲಿ, ನಿದ್ರಿಸುತ್ತಿರಲಿ, ಊಟಮಾಡುತ್ತಿರಲಿ, ಕುಡಿಯುತ್ತಿರಲಿ, ಈ ಯಾವ ಸ್ಥಿತಿಯಲ್ಲಿದ್ದರೂ ಆ ಪ್ರಯಾಣಕ್ಕೆ ಇದೊಂದೂ ಅಡ್ಡಿಯಾಗುವಹಾಗಿಲ್ಲ. ಕಾಲವು ಬಂದಾಗ ಎಲ್ಲರೂ ಆ ದಾರಿಯನ್ನು ಹಿಡಿದೇ ಹಿಡಿಯಬೇಕು. ಭಯಂಕರವಾದ ಯಮದೂತರು ಆ ದಾರಿಯಲ್ಲಿ ಎಳೆದುಕೊಂಡು ಹೋಗುವರು. ಆ ದಾರಿಯಲ್ಲಿ ಕೆಲವು ಕಡೆ ಭೀತಿ, ಕೆಲವುಕಡೆ ಮಂಕು, ಇನ್ನು ಕೆಲವು ಕಡೆ ಎಡವಿಬೀಳುವುದು, ಮತ್ತೆ ಕೆಲವುಕಡೆ ವೇದನೆಯಿಂದ ರೋದಿಸುವುದು, ಹೀಗೆ ವಿಧವಿಧವಾದ ಕಷ್ಟಗಳಿಂದ ದಾರಿ ಸಾಗಬೇಕು. ನಡುನಡುವೆ ಯಮದೂತರು ಭಯಪಡಿಸುವರು. ಕೆಲವು ಕಡೆ ದೇಹವನ್ನು ಬಿಗಿದು ಎಳೆಯುವರು. ಈ ಕಷ್ಟಗಳನ್ನೆಲ್ಲಾ ಸಹಿಸಿಕೊಂಡು ಆ ದಾರಿಯಲ್ಲಿ ಹೋಗಬೇಕು. ಲೋಭಬುದ್ಧಿಯಿಂದ ದಾನಮಾಡದವರು ಮುಳ್ಳುದಾರಿಯಮೇಲೆಯೂ, ಕಾದ ಮರಳಿನಿಂದ ದಹಿಸುವಂತಿರುವ ದಾರಿಯಲ್ಲಿಯೂ ಸಾಗಿಸಲ್ಪಡುವರು. ಧರ್ಮವನ್ನು ಮಾಡದವರು ಕಟ್ಟಿಗೆಗಗಳ ಮತ್ತು ಕಲ್ಲುಮಣ್ಣುಗಳ ಪೆಟ್ಟುಗಳಿಗೆ ಗುರಿಯಾಗಿ, ಚಾಟಿಗಳಿಂದಲೂ, ಅಂಕುಶಗಳಿಂದಲೂ, ದಂಡಗಳಿಂದಲೂ, ಉಳಿಗಳಿಂದಲೂ, ಕೊಳ್ಳಿಗಳಿಂದಲೂ ಭೇದಿಸಲ್ಪಡುತ್ತ, ಆ ದಾರಿಯಲ್ಲಿ ಸಾಗಿಸಲ್ಪಡುವರು. ಪ್ರಾಣಿವಧೆಯನ್ನು ಮಾಡಿದವರು, ಕೊಬ್ಬು, ರಕ್ತ, ಕೀವು ಮುಂತಾದುವುಗಳಿಂದ ತುಂಬಿದ ಬಾಯಿಂದಲೂ, ಅಂಗಾಂಗಗಳಲ್ಲಿ ಹುಣ್ಣುಗಳಿಂದಲೂ, ಸುಟ್ಟ ಗಾಯಗಳಿಂದ ಸುರಿಯುವ ಕೀವುಗಳಿಂದಲೂ ಕೂಡಿದವರಾಗಿ ಆ ದಾರಿಯಲ್ಲಿ ಸಾಗುವರು. ಮತ್ತು ಜೀವಘಾತುಕರು ಯಮ

ದೂತರ ಬಾಧೆಯನ್ನು ತಡೆಯಲಾರದೆ, ದೀನಧ್ವನಿಯಿಂದ ಕೂಗುತ್ತಲೂ, ನಡೆಯಲಾರದೆ ಅಲ್ಲಲ್ಲಿ ಬೀಳುತ್ತಲೂ, ನಡೆಯುವಾಗ ಕೈಕಾಲು ಮಂಡಿಗಳೆಲ್ಲ ಹರಿದು, ಕತ್ತು, ಕಿವಿ, ಮೂಗು ಮುಂತಾದ ಅವಯವಗಳೆಲ್ಲ ಕಿತ್ತು, ಆ ದಾರಿಯಲ್ಲಿ ಕಷ್ಟದಿಂದ ಸಾಗಬೇಕು. ಈ ಪ್ರಾಣಿಹಿಂಸಕರನ್ನು ಆ ದಾರಿಯಿಂದ ಕರೆದುಕೊಂಡು ಹೋಗುವಾಗ, ಯಮದೂತರು, ಶಕ್ತಿ, ತೋಮರ, ಭಿಂಡಿವಾಲ, ಶೂಲ ಮೊದಲಾದ ಆಯುಧಗಳಿಂದ ತಿವಿದು, ಇರಿದು ಹಿಂಸಿಸುತ್ತಿರುವರು. ಭೂಮಿಯಲ್ಲಿ ಇತರ ಪ್ರಾಣಿಗಳನ್ನು ಹಿಂಸೆ ಮಾಡಿದ ಪಾಪಿಗಳು, ಇಂತಹ ಕಷ್ಟಗಳನ್ನೆಲ್ಲಾ ಅನುಭವಿಸಿಕೊಂಡು ಹೋಗಬೇಕಾಗುವುದು. ಈ ಲೋಕದಲ್ಲಿ ಪ್ರಾಣಿಗಳನ್ನು ಕೊಂದು ಅದರ ಮಾಂಸವನ್ನು ತಿನ್ನತಕ್ಕವರು, ಆ ದಾರಿಯಲ್ಲಿ ನಾಯಿ, ಹುಲಿ, ತೋಳ, ಕಾಗೆ, ಹದ್ದು, ಮುಂತಾದ ಮಾಂಸಾಹಾರಿ ಪ್ರಾಣಿಗಳಿಂದಲೂ, ರಾಕ್ಷಸರಿಂದಲೂ, ಆಹಾರಕ್ಕಾಗಿ ಕಿತ್ತು ತಿನ್ನಲ್ಪಡುತ್ತ ಮುಂದೆಸಾಗುವರು. ಮತ್ತು ಕ್ರೂರವಾದ ಕಾಡೆಮ್ಮೆಗಳು, ಜಿಂಕೆಗಳು, ಹುಲ್ಲೆಗಳು, ಹಂದಿಗಳು, ಮುಂತಾದುವೆಲ್ಲಾ ಅವರನ್ನು ಕಡಿಯುವುವು. ಮಕ್ಕಳನ್ನು ಕೊಂದ ಪಾಪಿಗಳು ಆ ದಾರಿಯಲ್ಲಿ ಸಾಗುವಾಗ, ಸೂಜಿಯಂತೆ ಹರಿತವಾದ ಕೊಂಡಿಯುಳ್ಳ ಕಾಡುನೊಣಗಳು ಸುತ್ತಲೂ ಅವನನ್ನು ಮುತ್ತಿ, ಅವನ ದೇಹವನ್ನು ಕೀಳುವುವು. ತನ್ನಲ್ಲಿ ನಂಬಿಕೆಯುಳ್ಳ ಯಜಮಾನನನ್ನೂ, ಮಿತ್ರನನ್ನೂ, ಸ್ತ್ರೀಯನ್ನೂ ಕೊಂದ ಪಾಪಿಗಳನ್ನು ಆ ದಾರಿಯಲ್ಲಿ ಸಾಗಿಸುವಾಗ, ಯಮದೂತರು ನಾನಾವಿಧ ಶಸ್ತ್ರಗಳಿಂದ ಅವನ ದೇಹವನ್ನಿರಿಯುವರು. ಪ್ರಾಣಿಗಳನ್ನು ಕೊಂದು ತಿನ್ನುವವರೂ, ಅವುಗಳನ್ನು ಹಿಂಸಿಸುವವರೂ ಆ ದಾರಿಯಲ್ಲಿ ರಾಕ್ಷಸರಿಂದಲೂ, ನಾಯಿಗಳಿಂದಲೂ ಭಕ್ಷಿಸಲ್ಪಡುತ್ತ ಮುಂದೆ ಸಾಗುವರು. ಯಾರು ಈ ಲೋಕದಲ್ಲಿ ಇತರರ ಬಟ್ಟೆಗಳನ್ನಾಗಲಿ, ಹಾಸಿಗೆ ಹೊದಿಕೆಗಳನ್ನಾಗಲಿ ಕದಿಯುವರೋ, ಅವರು, ಆ ದಾರಿಯುದ್ದಕ್ಕೂ ಪಿಶಾಚಗಳಂತೆ ನಗ್ನರಾಗಿ ಮುಂದೆ ಸಾಗಬೇಕಾಗುವುದು. ಗೋವುಗಳನ್ನಾಗಲಿ, ಧಾನ್ಯವನ್ನಾಗಲಿ, ಧನವನ್ನಾಗಲಿ, ಹೊಲ ಗದ್ದೆ ಮನೆಗಳನ್ನಾಗಲಿ, ಯಾವನು ಅನ್ಯಾಯದಿಂದ ಅಪಹರಿಸುವನೋ, ಪರಸ್ವಾಪಹಾರಮಾಡಿದ ಆ ಪಾಪಿಯು, ಯಮಲೋಕಕ್ಕೆ ಹೋಗುವ ದಾರಿಯಲ್ಲಿ, ಕಲ್ಲು, ಮುಳ್ಳು,

ಕಟ್ಟಿಗೆ, ದೊಣ್ಣೆ, ಮುಂತಾದುವುಗಳಿಂದ ಬಾರಿಬಾರಿಗೂ ಹಿಂಸಿಸಲ್ಪಡುತ್ತ ಮೈಯ್ಯೆಲ್ಲಾ ಗಾಯಹೊಂದಿ ಸಾಗಬೇಕಾಗುವುದು. ಯಾರು ಬ್ರಾಹ್ಮಣ ಸ್ವತ್ತನ್ನು ಅನ್ಯಾಯವಾಗಿ ಅಪಹರಿಸುವರೋ, ಮತ್ತು ಯಾರು ಬ್ರಾಹ್ಮಣ ರನ್ನು ಹೊಡೆದು ಬೈದು ಭಂಗಿಸುವರೋ, ಅಂಥವರು ಯಮಪುರದ ದಾರಿ ಯಲ್ಲಿ ಹೋಗುವಾಗ, ಪಾಶಗಳಿಂದ ಬಿಗಿಯಲ್ಪಟ್ಟು, ಕಣ್ಣು, ಕಿವಿ, ನಾಲಗೆ, ಮೂಗು ಮುಂತಾದುವು ಕತ್ತರಿಸಲ್ಪಟ್ಟು, ಗಂಟಲೊಣಗಿ, ಕೀವು ರಕ್ತಗಳ ದುರ್ಗಂಧವುಳ್ಳವರಾಗಿ, ನರಿಗಳಿಂದ ಕಿತ್ತು ತಿನ್ನಲ್ಪಡುವರು. ಭಯಂಕರ ವೇಷವುಳ್ಳ ಚಂಡಾಳರಿಂದ ನಾನಾವಿಧವಾಗಿ ಹಿಂಸಿಸಲ್ಪಡುತ್ತ, ಕರುಣ ಧ್ವನಿಯಿಂದ ಕೂಗಿಕೊಳ್ಳುತ್ತ ಮುಂದೆ ಸಾಗುವರು. ನರಕಕ್ಕೆ ಹೋದ ಮೇಲೆಯೂ ಅಮೇಧ್ಯದ ಗುಂಡಿಯಲ್ಲಿ ತಳ್ಳಲ್ಪಟ್ಟು ಅನೇಕ ವರ್ಷ ಗಳವರೆಗೆ ಸಂಕಟಪಡುವರು. ಆ ನರಕಯಾತನೆಗಳು ಮುಗಿದಮೇಲೆ ಅವರು ತಿರುಗಿ ಭೂಲೋಕದಲ್ಲಿ ಅನೇಕಜನ್ಮಗಳವರೆಗೆ ಚಿರಂಡಿ ಮುಂ ತಾದ ಅಮೇಧ್ಯಗಳಲ್ಲಿ ಕ್ರಿಮಿಗಳಾಗಿ ಹುಟ್ಟಿ ಹಾಗೆಯೇ ಅನೇಕ ಜನ್ಮ ಗಳನ್ನು ಕಳೆಯುವರು. ಈ ಲೋಕದಲ್ಲಿ ಒಳ್ಳೆಯ ಶ್ರೀಮಂತನಾಗಿ ಹುಟ್ಟಿಯೂ, ಲೋಭಬುದ್ಧಿಯಿಂದ ಸತ್ಪಾತ್ರಗಳಿಗೆ ದಾನಮಾಡದೆ, ಕೇವಲ ಡಂಭಕ್ಕಾಗಿ ಅದನ್ನು ಪಯೋಗಿಸುತ್ತಿರುವವನು, ಯಮಪುರಕ್ಕೆ ಹೋಗುವ ದಾರಿಯಲ್ಲಿ ರಾಕ್ಷಸರಿಂದ ಕತ್ತಿನಲ್ಲಿ ಪಾಶವನ್ನು ಬಿಗಿದು ಹೊಡೆಯಲ್ಪ ಡುತ್ತ, ಹಸಿವು ಬಾಯಾರಿಕೆಗಳನ್ನು ತಡೆಯಲಾರದೆ ಕೂಗುತ್ತ ಮುಂದೆ ಸಾಗುವನು. ತನ್ನಲ್ಲಿದ್ದಾಗಲೂ ಇತರರಿಗೆ ದಾನಮಾಡದವನು, ಯಮಪುರಕ್ಕೆ ಹೋಗುವದಾರಿಯಲ್ಲಿ ಹಸಿವು ಬಾಯಾರಿಕೆಗಳಿಂದ ಬಾಯಿ, ಗಂಟಲು ದವಡೆಗಳೆಲ್ಲವೂ ಒಣಗಿ, ತನಗೆ ಕಾವಲಾದ ಯಮದೂತರನ್ನು ಕುರಿತು "ಅಯ್ಯಾ ನಾನು ನಡೆಯಲಾರೆನು! ಅನ್ನವನ್ನು ಕೊಡಿರಿ! ನೀರನ್ನು ಕೊಡಿರಿ!" ಎಂದು ಬಾರಿಬಾರಿಗೂ ಅರಚುತ್ತ ಮುಂದೆ ಸಾಗುವನು" ಎಂದನು.

ಕೃಷ್ಣನ ಬಾಯಿಂದ ಹೊರಟ ಈ ಭಯಂಕರವರ್ಣನೆಗಳನ್ನು ಕೇಳಿದೊಡನೆ, ಧರ್ಮರಾಜನು ಭಯದಿಂದ ಮೂರ್ಛಿತನಾಗಿ ಬಿದ್ದುಬಿಟ್ಟನು.

ಆಮೇಲೆ ಮೆಲ್ಲಗೆ ಚೇತರಿಸಿಕೊಂಡು, ನೀರಿನಿಂದ ಕಣ್ಣುಗಳನ್ನೊರಸಿಕೊಂಡು? "ಕೃಷ್ಣಾ! ಈ ನರಕಯಾತನೆಗಳನ್ನು ಕೇಳಿ ನಾನು ಬಹಳ ಭೀತನಾದೆನು. ಮನುಷ್ಯರು ಈ ನರಕಮಾರ್ಗಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಉಪಾಯವೇನೋ ಅದನ್ನೂ ನನಗೆ ತಿಳಿಸಬೇಕು"ಎಂದನು. ಆಗ ಕೃಷ್ಣನು "ಧರ್ಮಪುತ್ರಾ! ಅದಕ್ಕೂ ಉಪಾಯವಿಲ್ಲದೆ ಇಲ್ಲ. ಈ ಭೂಲೋಕದಲ್ಲಿ ಯಾರು ಧರ್ಮಶೀಲರಾಗಿ, ಜೀವಹಿಂಸೆಯಲ್ಲಿ ಪ್ರವರ್ತಿಸದೆ, ಗುರು ಶುಶ್ರೂಷೆಯನ್ನೂ, ದೇವ ಬ್ರಾಹ್ಮಣರ ಪೂಜೆಯನ್ನೂ ಮಾಡುತ್ತಿರುವರೋ, ಅವರು ತಮ್ಮ ಪತ್ನೀ ಪುತ್ರಾದಿ ಬಂಧುಗಳೊಡಗೂಡಿ ಆ ಕಷ್ಟ ಮಾರ್ಗವನ್ನು ಬಿಟ್ಟು ಸುಖವಾದ ಮಾರ್ಗದಲ್ಲಿ ಸಾಗುವರು. ಅವರು ಹೋಗತಕ್ಕ ರೀತಿಯನ್ನೂ ತಿಳಿಸುವೆನು ಕೇಳು. ವೇದಗಳನ್ನೋದಿ ಶ್ರೋತ್ರಿಯರೆನಿಸಿದ ಬ್ರಾಹ್ಮಣರನ್ನು ಅನ್ನದಾನಾದಿಗಳಿಂದ ಸಂತೋಷಪಡಿಸತಕ್ಕವರು ವಿಚಿತ್ರ ವಿಮಾನಗಳಿಂದ ಅಲ್ಲಿಗೆ ಸಾಗಿಸಲ್ಪಡುವರು. ಆ ದಾರಿಯುದ್ದಕ್ಕೂ ಅಪ್ಸರಸ್ಸುಗಳಿಂದ ಅವರು ವಿಧವಿಧವಾಗಿ ಉಪಚರಿಸಲ್ಪಡುವರು. ಹಾಗೆಯೇ ಯಾರು ತಮ್ಮ ಜೀವಿತಕಾಲದಲ್ಲಿ ನಿಷ್ಕಪಟವಾದ ಸತ್ಯವನ್ನೇ ನುಡಿಯುವರೋ, ಅವರು ಎತ್ತುಗಳನ್ನು ಕಟ್ಟಿದ ಬಿಳಿಯ ವಿಮಾನಗಳಿಂದ ಸಾಗುವರು. ಶ್ರೋತ್ರಿಯರಾದ ಬ್ರಾಹ್ಮಣರಿಗೆ ಗೋದಾನಾದಿಗಳನ್ನು ಮಾಡುವವರೂ ಅಂತಹ ವಿಮಾನಗಳಿಂದಲೇ ಸಾಗುವರು. ಅವರಿಗೆ ದಾರಿಯುದ್ಧಕ್ಕೂ, ಮತ್ತು ವೈವಸ್ವತನಗರವನ್ನು ಸೇರಿದಮೇಲೆಯೂ ಅಪ್ಸರಸ್ಸುಗಳೇ ಉಪಚರಿಸುವರು. ಯಾರು ಛತ್ರಗಳನ್ನೂ ಕಾಲ್ಜೋಡುಗಳನ್ನೂ, ಶಯನಾಸನಗಳನ್ನೂ, ವಸ್ತ್ರಾಭರಣಗಳನ್ನೂ ಶ್ರೋತ್ರಿಯರಾದ ಬ್ರಾಹ್ಮಣರಿಗೆ ದಾನಮಾಡುವರೋ, ಅವರೂಕೂಡ ದಿವ್ಯಾಲಂಕಾರಭೂಷಿತರಾಗಿ, ಸುವರ್ಣ ಛತ್ರಗಳನ್ನು ಹಿಡಿಸಿಕೊಂಡು, ಕುದುರೆಗಳಮೇಲೆಯೋ ವೃಷಭಗಳಮೇಲೆಯೋ, ಆನೆಗಳ ಮೇಲೆಯೋ ಯಮನ ಬಳಿಗೆ ಕರೆದೊಯ್ಯಲ್ಪಡುವರು. ಯಾರು ಶ್ರೋತ್ರಿಯರಾದ ಬ್ರಾಹ್ಮಣರಿಗೆ ಶ್ರದ್ಧೆಯಿಂದ ಭಕ್ಷ್ಯ ಭೋಜ್ಯ ಪಾನೀಯಾದಿಗಳನ್ನೂ, ಮೃಷ್ಟಾನ್ನಗಳನ್ನೂ ಕೊಟ್ಟು ತೃಪ್ತಿಗೊಳಿಸುವರೋ, ಅವರು ಸುವರ್ಣದ ಪಲ್ಲಕ್ಕಿಯಮೇಲೆ ಅಪ್ಸರಸ್ಸುಗಳಿಂದ ಉಪಚರಿಸಲ್ಪಡುತ್ತ ಮುಂದೆ ಸಾಗುವರು. ಯಾರು

ಉತ್ತಮ ಬ್ರಾಹ್ಮಣರಿಗೆ ಹಾಲು, ಜೇನು, ಬೆಲ್ಲ, ತುಪ್ಪ, ಮೊಸರು ಮುಂತಾದುವುಗಳನ್ನು ಕೊಟ್ಟು ಸಂತೋಷಗೊಳಿಸುವರೋ, ಅವರು ಚಕ್ರವಾಕ ಪಕ್ಷಿಗಳನ್ನು ಹೂಡಿದ ಸ್ವರ್ಣ ವಿಮಾನಗಳ ಮೇಲೆ ಕುಳ್ಳಿರಿಸಲ್ಪಟ್ಟು, ಗಂಧರ್ವರ ಗಾನವಾದ್ಯಗಳೊಡನೆ ಆ ದಾರಿಯಲ್ಲಿ ಸಾಗಿಸಲ್ಪಡುವರು. ಯಾರು ಫಲಪುಷ್ಪಗಳನ್ನೂ. ಘೃತ ಮಿಶ್ರಿತವಾದ ಅನ್ನವನ್ನೂ, ಪಾನೀಯವನ್ನೂ, ಸತ್ಪಾತ್ರಗಳಿಗೆ ಕೊಟ್ಟು ತೃಪ್ತಿಪಡಿಸುವರೋ, ಅವರೆಲ್ಲರೂ ಹಂಸಗಳ ಮೇಲೆ ಹೂಡಿದ ವಿಮಾನಗಳ ಮೇಲೆ ಸುಖವಾಗಿ ಆ ದಾರಿಯಲ್ಲಿ ಕರೆದೊಯ್ಯಲ್ಪಡುವರು. ಯಾರು ಎಳ್ಳನ್ನಾಗಲಿ, ಹಸುವಿನ ಆಕಾರಕ್ಕೆ ಕಟ್ಟಿದ ಎಳ್ಳಿನ ಚೀಲವನ್ನಾಗಲಿ, ಸಮೃದ್ಧಿಯಾಗಿ ತುಪ್ಪವನ್ನು ಕೊಡತಕ್ಕ ಹಸುವನ್ನಾಗಲಿ, ಪ್ರೀತಿ ಪುರಸ್ಸರವಾಗಿ ಶ್ರೋತ್ರಿಯರಿಗೆ ದಾನಮಾಡುವರೋ ಅವರು ಸೂರ್ಯಮಂಡಲಕ್ಕೆ ಸಮಾನವಾದ ವಿಮಾನಗಳಲ್ಲಿ ಗಂಧರ್ವರಿಂದ ಸ್ತುತಿಸಲ್ಪಡುತ್ತ ಕರದೊಯ್ಯಲ್ಪಡುವರು. ಯಾರು ಕೊಳ, ಕೆರೆ, ಬಾವಿ, ನಡೆಬಾವಿ, ಮುಂತಾದುವುಗಳನ್ನು ಧರ್ಮಾರ್ಥವಾಗಿ ಮಾಡಿಸಿಡುವರೋ ಅವರು ಚಂದ್ರಸಮಾನಗಳಾಗಿ ಸುವರ್ಣಘಂಟೆಗಳಿಂದ ಶೋಭಿತಗಳಾದ ವಿಮಾನಗಳಲ್ಲಿ ಕುಳಿತು ದೇವಸ್ತ್ರೀಯರಿಂದ ಚಾಮರ ವ್ಯಜನಾದಿಗಳಿಂದ ಉಪಚರಿಸಲ್ಪಡುತ್ತ ಸಂತೋಷದಿಂದ ಹೋಗುವರು. ಯಾರು ದೇವಾಲಯಗಳನ್ನೂ, ವಿಶ್ರಾಂತಿಭವನಗಳನ್ನೂ, ಧರ್ಮಾರ್ಥವಾಗಿ ಕಟ್ಟಿಸುವರೋ, ಅವರು ಬಿಳಿಯ ಮೇಘಗಳಿಗೆ ಸಮಾನವಾದ ವಿಮಾನಗಳನ್ನೇರಿ ಯಮಪುರಿಗೆ ಹೋಗುವರು. ಯಮಧರ್ಮರಾಜನು ಅವರಿಗೆ ಪ್ರಸನ್ನಮುಖದಿಂದ ಕಾಣಿಸುತ್ತ ಅವರನ್ನು ಪೂಜಿಸುವನು. ಅಲ್ಲಿಂದಾಚೆಗೆ ಅವರು ದೇವತೆಗಳೊಡನೆ ಸಾಲೋಕ್ಯದಿಂದಿರುವರು. ಯಾರು ಈ ಲೋಕದಲ್ಲಿ ದೇವರ ತೃಪ್ತಿಗಾಗಿ ಅರವಟಿಗೆಗಳನ್ನಿಡಿಸಿ, ದಾಹಗೊಂಡವರಿಗೆ ತಂಪಾದ ಪಾನೀಯವನ್ನು ಕೊಡಿಸುವರೋ, ಅವರು ಆ ದಾರಿಯಲ್ಲಿ ಸುಖವಾಗಿ ಸಾಗುವರು. ಯಾರು ಕಾಷ್ಠಪಾದುಕೆಗಳನ್ನು ದಾನಮಾಡುವರೋ, ಅವರು ಆ ದಾರಿಯಲ್ಲಿ ಹೋಗುವಾಗ, ರತ್ನಖಚಿತವಾದ ಸುವರ್ಣಪೀಠದ ಮೇಲೆ ಕಾಲಿಟ್ಟುಕೊಂಡು ನಿರಾಯಾಸವಾಗಿ ರಥದಲ್ಲಿ ಕರೆದುಯ್ಯಲ್ಪಡುವರು. ಯಾರು ಧರ್ಮಾರ್ಥವಾಗಿ ಪುಷ್ಪಫಲಭರಿತಗಳಾದ ಮರಗಳನ್ನು

ನೆಡಿಸಿ ಬೆಳೆಸುವರೋ ಅವರು ದಾರಿಯುದ್ದಕ್ಕೂ ತಂಪಾದ ಮರದ ನೆರಳಿನಲ್ಲಿ ಯೇ ದಿವ್ಯವಾಹನಗಳಮೇಲೆ ಸಾಗಿಸಲ್ಪಡುತ್ತ, ದಾರಿಯುದ್ದಕ್ಕೂ ಉತ್ತಮ ಸ್ತ್ರೀಯರಿಂದ ಉಪಚರಿಸಲ್ಪಡುವರು. ಯಾರು ಈ ಲೋಕದಲ್ಲಿ ಶ್ರೋತ್ರಿಯ ರೂ,ಸ್ವಧರ್ಮನಿರತರೂಆದ ಬ್ರಾಹ್ಮಣರಿಗೆ,ಕುದುರೆ,ಎತ್ತು,ಆನೆ ಮುಂತಾದ ವಾಹನಗಳನ್ನಾಗಲಿ, ಚಿನ್ನ, ಬೆಳ್ಳಿ, ಮುತ್ತು, ಹವಳಗಳನ್ನಾಗಲಿ ದಾನ ಮಾಡುವರೋ, ಅವರು ಸುವರ್ಣವಿಮಾನಗಳಮೇಲೆ ಸ್ತ್ರೀಯರಿಂದ ಉಪ ಚರಿಸಲ್ಪಡುತ್ತ ಮುಂದೆ ಸಾಗುವರು. ಹಾಗೆಯೇ ಭೂದಾನ ಕನ್ಯಾದಾನ ಗಳನ್ನು ಮಾಡಿದವರೂ, ಪುಷ್ಪಗಂಧಗಳನ್ನು ಕೊಟ್ಟು ಸಂತೋಷಗೊಳಿಸಿ ದವರೂ, ತಾವು ತಾವು ಮಾಡಿದ ದಾನಫಲಕ್ಕೆ ತಕ್ಕಂತೆ ಗಂಧಮಾಲ್ಯಾದಿ ಗಳಿಂದ ಅಲಂಕೃತರಾಗಿ, ದಿವ್ಯಕನ್ಯೆಯರಿಂದ ಉಪಚರಿಸಲ್ಪಡುತ್ತ, ತಮಗೆ ಬೇಕುಬೇಕಾದ ಕೋರಿಕೆಗಳನ್ನೆಲ್ಲ ಪಡೆಯುತ್ತ ಆ ದಾರಿಯಲ್ಲಿ ಕರೆದೊ ಯ್ಯಲ್ಪಡುವರು. ಹಾಗೆಯೇ ದೀಪಗಳನ್ನು ದಾನಮಾಡಿದವರು ಅಗ್ನಿ ಸಮಾನವಾಗಿ ಜ್ವಲಿಸುವ ವಿಮಾನಗಳಲ್ಲಿಯೂ, ಗೃಹದಾನಮಾಡಿ ದವರು ಸುವರ್ಣಗೃಹಕ್ಕೆ ಸಮಾನವಾಗಿರುವ ವಿಮಾನಗಳಲ್ಲಿಯೂ ಹೋಗುವರು. ಜಲಪಾತ್ರೆಗಳನ್ನು ದಾನಮಾಡಿದವರೂ, ಪಾದಾಭ್ಯಂ ಗನ, ಶಿರೋಭ್ಯಂಗನ, ಪಾನೀಯ, ಪಾದೋದಕ, ಮುಂತಾದುವುಗಳನ್ನು ಕೊಟ್ಟು ಉಪಚರಿಸತಕ್ಕವರೂ ಅಶ್ವಾರೂಢರಾಗಿ ಸುಖದಿಂದ ಆ ದಾರಿಯಲ್ಲಿ ಸಾಗುವರು. ಮಾರ್ಗಪ್ರಯಾಣದಿಂದ ಬಳಲಿ ಬಂದ ಬ್ರಾಹ್ಮಣನಿಗೆ ಆಸರೆ ಯನ್ನು ಕೊಟ್ಟು, ಸ್ವಾಗತವನ್ನು ಕೇಳಿ, ಸುಖಾಸನವನ್ನಿತ್ತು ಆದರಿಸು ವರು, ಚಕ್ರವಾಕಗಳ ಮೇಲೆ ಹೂಡಿದ ವಿಮಾನಗಳಮೇಲೆ ಸುಖ ವಾಗಿ ಆ ದಾರಿಯಲ್ಲಿ ಹೋಗುವರು. ಯಾವನು ವ್ರತನಿಷ್ಠನಾದಂತೆ ನಿಯಮವನ್ನು ಹಿಡಿದು ನನ್ನನ್ನು ನೋಡಿ, "ಬ್ರಾಹ್ಮಣ ಪ್ರಿಯನಾದ ಓ ದೇವಾ! ನಿನಗೆ ನಮಸ್ಕಾರವು" ಎಂದು ವಂದಿಸುವನೋ ಅವನು ಸುಖ ವಾಗಿ ಆ ದಾರಿಯಲ್ಲಿ ಹೋಗುವನು. ಯಾವನು ಪ್ರತಿದಿನವೂ ಗೋವುಗ ಳನ್ನು ನೋಡಿ "ಸರ್ವಂಸಹೆಗಳಾದ ನಿಮಗೆ ನಮಸ್ಕಾರ"ವೆಂದು ಕೈಮುಗಿ ಯುವನೋ, ಅವನೂ ಆ ದಾರಿಯಲ್ಲಿ ಸುಖವಾಗಿ ಹೋಗುವನು. ಯಾವ ನು ಬೆಳಗ್ಗೆ ಎದ್ದೊಡನೆ "ನಮೋಸ್ತು ಪ್ರಿಯದತ್ತಾಯ" ಎಂದು ಹೇಳಿ

ನೆಲದಲ್ಲಿ ಅಡಿಯಿಡುವನೋ, ಅವನು ತಾನು ಕೋರಿದ ಕೋರಿಕೆಗಳನ್ನೆಲ್ಲ ಪಡೆದು ತೃಪ್ತನಾಗಿ ಸರ್ವಾಲಂಕಾರಭೂಷಿತನಾಗಿ ದಿವ್ಯಮಾರ್ಗದಿಂದ ಸುಖವಾಗಿ ವೈವಸ್ವತಪುರವನ್ನು ಸೇರುವನು. ಯಾರು ಡಂಭವನ್ನೂ ಸುಳ್ಳನ್ನೂ ಬಿಟ್ಟು, ಹಗಲು ರಾತ್ರಿ ಹೊರತು ನಡುವೆ ಭೋಜನಗಳನ್ನು ಮಾಡದೆ ನಿಯಮದಿಂದಿರುವರೋ ಅವರು ಸಾರಸಪಕ್ಷಿಗಳ ಮೇಲೆ ಹೂಡಿದ ವಿಮಾನಗಳಿಂದ ಸುಖವಾಗಿ ಆ ದಾರಿಯಲ್ಲಿ ಪ್ರಯಾಣಮಾಡುವರು. ಒಂದೇಹೊತ್ತು ಭೋಜನಮಾಡುತ್ತ ಮೇಲೆ ಹೇಳಿದ ನಿಯಮಗಳನ್ನು ಹಿಡಿದವರೂ, ಹಾಗೆಯೇ ಹಂಸಗಳಿಂದ ಕೂಡಿದ ವಿಮಾನದಲ್ಲಿ ಹೋಗುವರು. ಜಿತೇಂದ್ರಿಯರಾಗಿ ನಾಲ್ಕನೆಯ ಜಾಮದಲ್ಲ ಮಾತ್ರ ಒಂದಾವರ್ತಿ ಊಟ ಮಾಡುವವರು ನವಿಲುಗಳಮೇಲೆ ಹೂಡಿದ ವಿಮಾನಗಳಿಂದ ಆ ಮಾರ್ಗದಲ್ಲಿ ಹೋಗುವರು. ಯಾರು ಜಿತೇಂದ್ರಿಯರಾಗಿ ಮೂರು ಹೊತ್ತಿಗೊಂದಾವರ್ತಿ ಭುಜಿಸುವರೋ, ಅವರು ಸುವರ್ಣಾಲಂಕೃತವಾಗಿ ಆನೆಗಳಮೇಲೆ ಹೂಡಿದ ರಥಗಳಿಂದ ಅಲ್ಲಿ ಪ್ರಯಾಣಮಾಡುವರು. ಯಾವನು ಯಾವಾಗಲೂ ಕಾಮಕ್ರೋಧಗಳನ್ನು ಬಿಟ್ಟು ಇಂದ್ರಿಯಗಳನ್ನು ಜಯಿಸಿ, ಶುದ್ಧನಾಗಿ ಆರುಹೊತ್ತಿಗೊಮ್ಮೆ ಮಾತ್ರ ಭುಜಿಸುತ್ತ ಒಂದು ವರ್ಷಕಾಲದವರೆಗೆ ನಿಯಮದಿಂದಿರುವನೋ, ಅಂಥವನು ತನ್ನ ಸುತ್ತಲೂ ಜಯಘೋಷವನ್ನು ಮಾಡುತ್ತ ಬರುವ ರಥಾರೂಢರಾದ ಅನೇಕ ದೇವತೆಗಳಿಂದ ಪರಿವೃತನಾಗಿ ವಿಮಾನದಲ್ಲಿ ಆ ಮಾರ್ಗವಾಗಿ ಹೋಗುವನು. ಪಕ್ಷೋಪವಾಸಿಗಳು ಹುಲಿಗಳಮೇಲೆ ಹೂಡಲ್ಪಟ್ಟ ವಾಹನಗಳಿಂದ ಆ ಮಾರ್ಗವಾಗಿ ಹೋಗುವರು. ಮಾಸೋಪವಾಸಿಗಳು ಸೂರ್ಯನಂತೆ ಜ್ವಲಿಸುವ ದಿವ್ಯ ವಿಮಾನಗಳಿಂದ ಆ ದಾರಿಯಾಗಿ ಹೋಗುವರು. ಯಾವನು ನಿನ್ನನ್ನು ಧ್ಯಾನಿಸುತ್ತ (ತಪಸ್ಸೆಂಬ) ಅಗ್ನಿಯಲ್ಲಿ ತನ್ನ ದೇಹವನ್ನು ಆಹುತಿ ಮಾಡುವನೋ, ಅವನು ಅಗ್ನಿಸಮಾನವಾಗಿ ಜ್ವಲಿಸುವ ವಿಮಾನಗಳಿಂದ ವೈವಸ್ವತಪುರಿಯ ಮಾರ್ಗದಲ್ಲಿ ಸಾಗುವನು. ಗೋವುಗಳ, ಸ್ತ್ರೀಯರ ಅಥವಾ ಬ್ರಾಹ್ಮಣರ ನಿಮಿತ್ತವಾಗಿ ಪ್ರಾಣವನ್ನೊಪ್ಪಿಸಿದವರು ದೇವಕನ್ಯೆಯರಿಂದ ಸೇವಿಸಲ್ಪಡುತ್ತ ತೇಜಸ್ವಿಗಳಾಗಿ ವಿಮಾನಗಳಿಂದ ಆ ಮಾರ್ಗವಾಗಿ ಸಾಗಿಸಲ್ಪಡುವರು. ಯಾವನು ನನ್ನಲ್ಲಿ ಭಕ್ತಿಯಿಂದ ತೀರ್ಥ

ಯಾತ್ರೆಗಳನ್ನು ಮಾಡುವರೋ, ಅವರೂ ದಿವ್ಯವಿಮಾನಗಳಿಂದ ಸುಖವಾಗಿ ಅಲ್ಲಿಗೆ ಹೋಗುವರು. ಯಾವ ಬ್ರಾಹ್ಮಣರು ಭೂರಿದಕ್ಷಿಣೆಗಳುಳ್ಳ ಯಾಗಗಳಿಂದ ನನ್ನನ್ನು ಪೂಜಿಸುವರೋ, ಅವರು ಹಂಸಯುಕ್ತವಾದ ವಿಮಾನಗಳಿಂದ ಆ ದಾರಿಯಲ್ಲಿ ಹೋಗುವರು. ಪರಹಿಂಸೆಯನ್ನು ಮಾಡದೆ, ತನ್ನ ಭೃತ್ಯರನ್ನು ಚೆನ್ನಾಗಿ ಪೋಷಿಸತಕ್ಕವರೂ, ಸಮಸ್ತ ಭೂತಗಳನ್ನೂ ಸಮದೃಷ್ಟಿಯಿಂದ ನೋಡತಕ್ಕವರೂ, ಇತರ ಪ್ರಾಣಿಗಳಿಗೆ ಅಭಯದಾನ ಮಾಡತಕ್ಕವರೂ, ಕ್ರೋಧ ಲೋಭಗಳನ್ನು ಬಿಟ್ಟು ಜಿತೇಂದ್ರಿಯರಾದವರೂ, ಪೂರ್ಣಚಂದ್ರನಿಗೆ ಸಮಾನವಾದ ವಿಮಾನಗಳನ್ನೇರಿ, ಮಹಾತೇಜಸ್ವಿಗಳಾಗಿ ದೇವಗಂಧರ್ವರಿಂದ ಉಪಚರಿಸಲ್ಪಡುತ್ತ, ಆ ಯಮಪುರಿಯ ಮಾರ್ಗದಲ್ಲಿ ಸುಖವಾಗಿ ಸಾಗುವರು.

ಓ ಧರ್ಮಪುತ್ರಾ! ಯಾರು ನನ್ನನ್ನಾಗಲಿ, ತ್ರಿನೇತ್ರನಾದ ರುದ್ರನನ್ನಾಗಲಿ ಪ್ರತಿದಿನವೂ ಏಕಾಂತಭಕ್ತಿಯಿಂದ ಪೂಜಿಸುವರೋ, ವಂದಿಸುವರೋ, ಅಥವಾ ಸ್ತುತಿಸುವರೋ ಅವರು ಸೂರ್ಯಕಾಂತಿಯುಳ್ಳ ವಿಮಾನಗಳಿಂದ ಧರ್ಮರಾಜನ ಪುರವನ್ನು ಸೇರಿ ಅಲ್ಲಿ ಯಮನಿಂದಲೂ ಸತ್ಕೃತರಾಗಿ, ಆಮೇಲೆ ಧರ್ಮಲೋಕವನ್ನೋ ರುದ್ರಲೋಕವನ್ನೋ ಸೇರುವರು.

ಇದು ನೂರನೆಯ ಅಧ್ಯಾಯವು

ಕೃಷ್ಣನು ಯುಧಿಷ್ಠಿರನಿಗೆ ಅನ್ನದಾನ, ಜಲದಾನಮಹಿಮೆಯನ್ನೂ, ಸತ್ಪಾತ್ರ ಲಕ್ಷಣವನ್ನೂ, ಅತಿಥಿಪೂಜಾಫಲವನ್ನೂ ತಿಳಿಸಿದುದು.

ಓ ಜನಮೇಜಯರಾಜಾ! ಧರ್ಮರಾಜನು ಕೃಷ್ಣನಿಂದ ಪ್ರಾಣಿಗಳು ದೇಹಾವಸಾನದಲ್ಲಿ ಹೊಂದುವ ಯಮಲೋಕದ ಮಾರ್ಗವನ್ನು ಕುರಿತು ಕೇಳಿದಮೇಲೆ ತಿರುಗಿ ಪ್ರಶ್ನೆಮಾಡುವನು. “ಓ ದೇವದೇವಾ! ನೀನು ಸಮಸ್ತ ಧರ್ಮಜ್ಞನು. ಸಮಸ್ತಕ್ಕೂ ಉತ್ಪತ್ತಿಕಾರಣನು. ಸಹಸ್ರಸೂರ್ಯತೇಜಸ್ಸುಳ್ಳವನು! ಸಂಸಾರೋತ್ತಾರಕನು! ಧರ್ಮಪ್ರವರ್ತಕನು!

ಆದುದರಿಂದ ನನಗೆ ಎಲ್ಲಾ ದಾನಗಳ ಫಲವನ್ನೂ ತಿಳಿಸಬೇಕು. ಎಂತಹ ಬ್ರಾಹ್ಮಣರಿಗೆ ಯಾವ ರೀತಿಯಲ್ಲಿ ದಾನವನ್ನು ಕೊಡಬೇಕು? ಯಾವ ವ್ರತನಿಯಮವನ್ನು ಹಿಡಿದು ಅದನ್ನು ನಡೆಸಬೇಕು? ಆ ದಾನಫಲವನ್ನ ನುಭವಿಸುವ ಲೋಕವಾವುದು?" ಎಂದು ಕೇಳಲು, ಕೃಷ್ಣನು 'ಓ ಧರ್ಮ ಪುತ್ರಾ! ಪಾಪಹಾರಕವಾದ ಎಲ್ಲಾ ದಾನಫಲಗಳನ್ನೂ ತಿಳಿಸುವೆನು ಸಾವ ಧಾನವಾಗಿ ಕೇಳು. ಪಾಪಕರ್ಮಿಗಳಿಗೆ ಇದು ಕೇಳತಕ್ಕುದಲ್ಲ. ಈ ಧರ್ಮಗಳನ್ನು ಕೇಳಿದ ಮಾತ್ರದಿಂದಲೇ ಪುರುಷನಾಗಲಿ, ಸ್ತ್ರೀಯಾಗಲಿ, ಅನೇಕ ಪಾಪಗಳನ್ನು ಮಾಡಿದ್ದರೂ ಅದರಿಂದ ಪುನೀತರಾಗುವರು. ಓ ಕುಂತೀಕುಮಾರಾ! ಭೂಮಿಯಲ್ಲಿ ಒಂದು ಜಲಾಧಾರವನ್ನು ಕಲ್ಪಿಸಿ, ಒಂದು ದಿನವಾದರೂ ಒಂದು ಹಸುವು ಆ ನೀರನ್ನು ಕುಡಿದು ಅದ ರಿಂದ ಅದಕ್ಕೆ ದಾಹಶಾಂತಿಯುಂಟಾಗುವಂತಾದರೆ, ಆ ಪುಣ್ಯಫಲ ದಿಂದ ಅವನ ಹಿಂದಿನ ಏಳು ತಲೆಮೊರೆಯವರೂ ಉದ್ಧರಿಸಲ್ಪಡು ವರು. ಲೋಕದಲ್ಲಿ ಪ್ರಾಣಿಗಳಿಗೆ ಪಾನೀಯವೇ ಉತ್ತಮಜೀವನವು. ಪಾನೀಯದಾನದಿಂದಲೇ ಪ್ರಾಣಿಗಳಿಗೆ ವಿಶೇಷತೃಪ್ತಿಯುಂಟಾಗುವುದು. ಜಲದಾನದ ಗುಣಗಳು ಪರಲೋಕದಲ್ಲಿ ಅತಿಶಯವಾದ ಗುಣಗಳನ್ನು ತರುವುವು. ಓ ರಾಜಾ! ಯಮಲೋಕದಲ್ಲಿ ಪರಮಪಾವನವಾದ ಪುಷ್ಪೋದಕಿಯೆಂಬ ನದಿಯೊಂದು ಪ್ರವಹಿಸುತ್ತಿರುವುದು. ಇಲ್ಲಿ ಜಲ ದಾನಮಾಡತಕ್ಕವರಿಗೆ, ಅದು ಅಲ್ಲಿ ಎಲ್ಲಾ ಅಭೀಷ್ಟಗಳನ್ನೂ ಕೊಡುವುದು. ಆ ನದಿಯ ನೀರು ತಂಪಾಗಿ, ಅಕ್ಷಯವಾಗಿ, ಅಮೃತಕ್ಕೆ ಸಮಾನವಾಗಿರು ವುದು. ಇಲ್ಲಿ ಜಲದಾನಮಾಡತಕ್ಕವರಿಗೆ ಅದು ಯಾವಾಗಲೂ ಸುಖ ವನ್ನುಂಟುಮಾಡುವುದು. ಈ ಲೋಕದಲ್ಲಿ ಜಲದಾನಮಾಡದೆ ನಿರಾ ಕರಿಸಿದವರಿಗೆ, ಅಲ್ಲಿ ದಾಹಗೊಂಡಾಗ ಆ ನೀರೂ ಲಭಿಸದೆ ದುರ್ಗಂಧದ ಕೀವುಮಾತ್ರ ದೊರೆಯುವುದು. ನೀರಿನಿಂದ ದಾಹವೂ, ಹಸಿವೂ ಅಡಗು ವುವು. ಅನ್ನದಿಂದಲೋ ಹಸಿವುಮಾತ್ರವಲ್ಲದೆ ಬಾಯಾರಿಕೆಯು ನೀಗದು. ಆದುದರಿಂದ ಅನ್ನದಾನಕ್ಕಿಂತಲೂ ಜಲದಾನವೇ ಮೇಲೆನಿಸುವುದು. ಆದುದರಿಂದ ದಾಹಪಟ್ಟವರಿಗೆ ಯಾವಾಗಲೂ ಪಾನೀಯವನ್ನು ಕೊಡು ವುದು ಅತ್ಯುತ್ತಮಧರ್ಮವು. ಜಲವೆಂಬುದು ಅಗ್ನಿಯ ಮೂರ್ತಿಯೆನಿಸು

ವುದು. ಭೂಮಿಗೆ ಅದೇ ಬೀಜವೆನಿಸುವುದು. ಅಮೃತಕ್ಕೆ ಉತ್ಪತ್ತಿ ಕಾರಣವಾದುದು. ಆದುದರಿಂದ ಎಲ್ಲಾ ಭೂತಗಳಿಗೂ ನೀರೇ ಆಧಾರವೆಂದು ವಿದ್ವಾಂಸರು ಹೇಳುವರು. ಎಲ್ಲಾ ಪ್ರಾಣಿಗಳೂ ಜಲದಿಂದಲೇ ಉಂಟಾಗಿ, ಜಲದಿಂದಲೇ ಜೀವಿಸುವುವು. ಆದುದರಿಂದ ಎಲ್ಲಾ ದಾನಗಳಿಗಿಂತಲೂ ಜಲದಾನವು ಉತ್ತಮವು. ಯಜ್ಞ, ದಾನ, ತಪಸ್ಸುಗಳಿಂದ ಹೊಂದಬಹುದಾದ ಉತ್ತಮಫಲಗಳೆಲ್ಲ ಜಲದಾನದಿಂದ ಲಭಿಸುವುವು. ಇದರಲ್ಲಿ ಸಂದೇಹವೇ ಇಲ್ಲ. ಇನ್ನು ಅನ್ನದಾನದ ಫಲವನ್ನು ಹೇಳುವೆನು ಕೇಳು. ಯಾರು ಉತ್ತಮಬ್ರಾಹ್ಮಣರಿಗೆ ಚೆನ್ನಾಗಿ ಸಂಸ್ಕರಿಸಲ್ಪಟ್ಟ ಅನ್ನವನ್ನು ದಾನಮಾಡುವರೋ, ಅವರು ಪ್ರಾಣದಾನವನ್ನು ಮಾಡಿದ ಫಲವನ್ನೇ ಹೊಂದುವರು. ಶುಕ್ಲಶೋಣಿತಗಳೆರಡೂ ಅನ್ನದಿಂದಲೇ ಉಂಟಾಗುವುವು. ಜೀವವೂ ಅನ್ನದಲ್ಲಿಯೇ ನೆಲೆಗೊಂಡಿರುವುದು. ಇಂದ್ರಿಯಗಳೂ, ಬುದ್ಧಿಯೂ ಅನ್ನದಿಂದಲೇ ಪೋಷಿಸಲ್ಪಡುವುವು. ಅನ್ನವಿಲ್ಲದೆ ಯಾವ ಪ್ರಾಣಿಯೂ ಬದುಕದು. ತೇಜಸ್ಸು, ದೇಹಬಲ, ಮನೋಬಲ, ರೂಪ, ವಿದ್ಯೆ, ಧೈರ್ಯ, ಜ್ಞಾನ, ಕಾಂತಿ, ಆಯುಸ್ಸು ಇವಕ್ಕೆಲ್ಲಾ ಅನ್ನವೇ ಆಧಾರವು. ದೇವ ಮಾನವ ತಿರ್ಯಕ್ಕುಗಳೆಂಬ ಎಲ್ಲಾ ಜೀವಲೋಕಗಳೂ ಅನ್ನದಲ್ಲಿಯೇ ಯಾವಾಗಲೂ ನೆಲೆಗೊಂಡಿವೆ. ಅನ್ನವೇ ಸೃಷ್ಟಿಕರ್ತನ ಸ್ವರೂಪವು. ಅದೇ ಸೃಷ್ಟಿಕಾರಣವು. ಪ್ರಾಣಿಗಳ ಸ್ವರೂಪವೂ ಅದೇ! ಜೀವವು ಅನ್ನಮಯವು. ಪಂಚಪ್ರಾಣಗಳೂ ಅನ್ನದ ಆಧಾರದಿಂದಲೇ ಜೀವನನ್ನು ಧರಿಸಿರುವುವು. ಮಲಗುವುದು, ಏಳುವುದು, ನಡೆಯುವುದು, ಹಿಡಿಯುವುದು, ಎಳೆಯುವುದು, ಮುಂತಾದ ದೇಹಕಾರ್ಯಗಳಿಗೆಲ್ಲಾ ಅನ್ನವೇ ಆಧಾರವು. ಚತುರ್ವಿಧಗಳಾದ ಚರಾಚರ ಭೂತಗಳೆಲ್ಲ ಅನ್ನದಿಂದಲೇ ಜನಿಸುವುವು. ಇದು ಬ್ರಹ್ಮದೇವನ ಸೃಷ್ಟಿ. ಎಲ್ಲಾ ಜ್ಞಾನಸಾಧನೆಗಳೂ, ಪವಿತ್ರಯಜ್ಞಗಳೂ, ಅನ್ನದಿಂದಲೇ ನಡೆಯುವುವು. ಆದುದರಿಂದ ಅನ್ನವು ಮೇಲೆನಿಸಿಕೊಂಡಿದೆ. ರುದ್ರಾದಿದೇವತೆಗಳೂ, ಪಿತೃಗಳೂ, ಅಗ್ನಿಗಳೂ ಅನ್ನದಿಂದಲೇ ತೃಪ್ತಿಹೊಂದುವರು. ಪ್ರತಿಕಲ್ಪದಲ್ಲಿಯೂ ಈಶ್ವರನು ಪ್ರಜೆಗಳನ್ನು ಅನ್ನದಿಂದಲೇ ಸೃಷ್ಟಿಸುವನು. ಆದುದರಿಂದ ಅನ್ನದಾನಕ್ಕಿಂತಲೂ ಮೇಲಾದ ದಾನವು ಈಗಲೂ ಇಲ್ಲ.

ಮುಂದೆ ಉಂಟಾಗುವುದೂ ಇಲ್ಲ. ಧರ್ಮಾರ್ಥಕಾಮಗಳಿಗೂ ಅನ್ನವೇ ಆಧಾರವು. ಇಹಪರಗಳೆರಡರಲ್ಲಿಯೂ ಅನ್ನದಾನಕ್ಕಿಂತ ಮೇಲಾದುದಿಲ್ಲ. ಯಕ್ಷರಾಕ್ಷಸರೂ, ಗ್ರಹಗಳೂ, ನಾಗರೂ, ದಾನವರೂ, ಇನ್ನೂ ಎಲ್ಲಾ ಭೂತಗಳೂ ಅನ್ನದಿಂದ ತೃಪ್ತಿಹೊಂದುವುವು. ಆದುದರಿಂದ ಅನ್ನದಾನವು ಮೇಲೆನಿಸಿದೆ. ಒಬ್ಬನು ಪರಾನ್ನವನ್ನು ಭುಜಿಸುತ್ತ ಯಾವ ಧರ್ಮಕಾರ್ಯವನ್ನು ಮಾಡಿದರೂ, ಆ ಧರ್ಮದ ಫಲದಲ್ಲಿ ಕಾಲುಭಾಗವು ಮಾತ್ರ ಅವನಿಗೆ ಸೇರುವುದು, ಉಳಿದ ಮೂರು ಭಾಗವೂ ಅನ್ನದಾತನಿಗೆ ಹೋಗುವುದು. ಶ್ರೋತ್ರಿಯನೂ, ಬಡವನೂ ಆದ ಬ್ರಾಹ್ಮಣನಿಗೆ ಯಾವನು ಒಂದು ಸಂವತ್ಸರಗಳವರೆಗೆ ಪಾಕಭೇದಗಳನ್ನು ಮಾಡದೆ, ಮತ್ತು ಸುಳ್ಳು ಡಂಭ ಮುಂತಾದುವುಗಳನ್ನು ಬಿಟ್ಟು, ಶ್ರದ್ಧೆಯಿಂದ ಅನ್ನವನ್ನಿಕ್ಕುವನೋ ಅವನಿಗೆ ಅದರಿಂದ ಬರುವ ಫಲವು ಅಪಾರವಾದುದು. ಅವನು ಸ್ವರ್ಗಲೋಕದಲ್ಲಿ ಇಷ್ಟಬಂದ ರೂಪಗಳಿಂದ, ಇಷ್ಟಬಂದಕಡೆಗೆ ಹೋಗಬಲ್ಲವನಾಗಿ, ಅಪ್ಸರಸ್ತ್ರೀಯರಿಂದ ಉಪಚರಿಸಲ್ಪಡುತ್ತ, ಲಕ್ಷ ವರ್ಷಗಳವರೆಗೆ ಸ್ವರ್ಗಸುಖವನ್ನನುಭವಿಸುವನು. ಯಾವನು ಒಂದು ವರ್ಷವಾಗಲಿ, ಆರು ತಿಂಗಳಾಗಲಿ, ದರಿದ್ರನಾದ ಬ್ರಾಹ್ಮಣನಿಗೆ ಶ್ರದ್ಧೆಯಿಂದ ಅಗ್ರಭಿಕ್ಷೆಯನ್ನು ಕೊಡುವನೋ, ಅವನಿಗೆ ಸಹಸ್ರಗೋದಾನಗಳ ಫಲವುಂಟು. ಯಾವನು ಯಾಚಿಸದೆ ಇರತಕ್ಕವನಿಗೆ,ತಾನಾಗಿ ಒಂದುವರ್ಷಕಾಲದವರೆಗೆ ಅನ್ನಭಿಕ್ಷೆಯನ್ನು ಕೊಡುವನೋ, ಅವನಿಗೆ ಸಹಸ್ರಕಪಿಲೆಗಳ ದಾನದಿಂದಾದ ಫಲವು ಲಭಿಸುವುದು. ಅವನು ಮಹಾತೇಜಸ್ವಿಯಾಗಿ, ಇಂದ್ರಲೋಕದಲ್ಲಿ, ಇಂದ್ರಭವನದಲ್ಲಿಯೇ ಅನೇಕಕೋಟಿವರ್ಷಗಳವರೆಗೆ ಅಪ್ಸರಸ್ಸುಗಳೊಡನೆ ವಿಹರಿಸುವನು. ಯಾವನು ವ್ರತನಿಷ್ಠನಾಗಿ, ಒಬ್ಬ ಉತ್ತಮ ಬ್ರಾಹ್ಮಣನಿಗೆ ಹತ್ತುವರ್ಷದವರೆಗೆ ಅನ್ನದಾನವನ್ನು ಮಾಡುವನೋ ಅವನು ಲಕ್ಷಕಪಿಲೆಗಳ ದಾನದ ಫಲವನ್ನು ಹೊಂದಿ, ಇಂದ್ರಲೋಕದಲ್ಲಿ ಮೇಲೆ ಹೇಳಿದಂತೆಯೇ ಸುಖವಾಗಿ ವಿಹರಿಸುವನು. ಆ ಫಲವನ್ನನುಭವಿಸಿದ ಮೇಲೆಯೂ ಅವನು ಭೂಲೋಕದಲ್ಲಿ ಮಹಾತೇಜಸ್ವಿಯೂ, ಚತುರ್ವೇದಪಾರಂಗತನೂ, ರಾಜಪೂಜಿತನೂ ಆದ ಬ್ರಾಹ್ಮಣನಾಗಿ ಹುಟ್ಟುವನು. ಓ ಧರ್ಮಪುತ್ರಾ! ಮಾರ್ಗಶ್ರಮದಿಂದ ಬಳಲಿದವನಿಗೂ, ಹಸಿ

ದವನಿಗೂ, ತಕ್ಕ ದೇಶಕಾಲಗಳಲ್ಲಿ ಅರ್ಥಿಯಾಗಿ ಬಂದವನಿಗೂ ತಪ್ಪದೆ ಅನ್ನದಾನವನ್ನು ಮಾಡಬೇಕು. ಯಾವನು ತನಗೆ ಉಪಪತ್ತಿಯಿದ್ದಾಗಲೂ ತನ್ನಲ್ಲಿಗೆ ಬಂದು ಯಾಚಿಸಿದವನಿಗೆ ಅನ್ನದಾನಮಾಡುವುದಿಲ್ಲವೋ ಅಂತಹ ಲುಬ್ಧನು ಕ್ರಿಮಿಗಳಿಂದ ತುಂಬಿದ ಕಾಲಸೂತ್ರವೆಂಬ ನರಕದಲ್ಲಿ ಬಿದ್ದು, ಹತ್ತು ಸಹಸ್ರವರ್ಷಗಳವರೆಗೆ ಸಂಕಟದಿಂದ ನರಳುವನು. ಆ ನರಕದಿಂದ ಬಹುಕಾಲಕ್ಕೆ ಬಿಡುಗಡೆ ಹೊಂದಿ, ತಿರುಗಿ ಜನ್ಮವನ್ನೆತ್ತಿ ದಾಗಲೂ, ಕೇವಲದರಿದ್ರನಾಗಿ ಚಂಡಾಲಯೋನಿಯಲ್ಲಿ ಹುಟ್ಟುವನು. ಒಬ್ಬನು ಬಹುದೂರ ನಡೆದು, ಕಾಲೆಲ್ಲ ಧೂಳುತುಂಬಿ, ಹಸಿವು ಬಾಯಾರಿಕೆಗಳಿಂದ ಬಳಲಿ, ನಡೆಯಲಾರದೆ ತಡವರಿಸುತ್ತ ಮನೆಯ ಬಾಗಿಲಿಗೆ ಬಂದು ‘ಯಾರಾದರೂ ಅನ್ನವನ್ನು ಕೊಡುವವರುಂಟೆ?’ ಎಂದು ಯಾಚಿಸಿದಾಗ, ಅವನನ್ನೇ ಉತ್ತಮನಾದ ಅತಿಥಿಯೆಂದು ಭಾವಿಸಿ, ತನ್ನಿಂದಾದಷ್ಟು ಸತ್ಕರಿಸಬೇಕು. ಸ್ವರ್ಗಕ್ಕೆ ಇದೇ ಮಾರ್ಗವು. ಅವನನ್ನು ಸಂತೋಷಗೊಳಿಸುವುದರಿಂದ ಸಮಸ್ತ ದೇವತೆಗಳೂ ತೃಪ್ತರಾಗುವರು. ಅತಿಥಿಪೂಜೆಯಿಂದ ಅಗ್ನಿಗಳು ತೃಪ್ತರಾಗುವಂತೆ ಹವಿಸ್ಸಿನಿಂದಾಗಲಿ, ಗಂಧಪುಷ್ಪಾದ್ಯರ್ಚನೆಗಳಿಂದಲಾಗಲಿ ತೃಪ್ತರಾಗುವುದಿಲ್ಲ. ಜ್ಯೇಷ್ಠಮಾಸದಲ್ಲಿ, ಪುಷ್ಕರಕ್ಷೇತ್ರದಲ್ಲ ಕಪಿಲೆಯನ್ನು ದಾನಮಾಡಿದವನಿಗೆಕೂಡ ಈ ಬ್ರಾಹ್ಮಣಭೋಜನದಿಂದ ಉಂಟಾಗುವಷ್ಟು ಫಲವು ಲಭಿಸಲಾರದು. ಬ್ರಾಹ್ಮಣರ ಪಾದೋದಕದಿಂದ ಯಾವನ ಮನೆಯ ಅಂಗಳವು ಎಲ್ಲಿಯವರೆಗೆ ನೆನೆಯುತ್ತಿರುವುದೋ, ಅಲ್ಲಿಯವರೆಗೆ ಅವನ ಪಿತೃಗಳು ತಾವರೆಯೆಲೆಯ ಪತ್ರದಿಂದ ತಂಪಾದ ನೀರನ್ನು ಕುಡಿಯುತ್ತಿರುವರು. ದೇವತೆಗಳಿಗೆ ಧರಿಸಿದ ಹಳೇಮಾಲ್ಯವನ್ನು ಕಳೆಯುವುದು, ಬ್ರಾಹ್ಮಣರು ತಿಂದ ಎಂಜಲನ್ನು ಶುದ್ಧಿಮಾಡುವುದು, ಶ್ರಮಪಟ್ಟು ಬಂದ ಬ್ರಾಹ್ಮಣನ ಕಾಲನ್ನೊತ್ತುವುದು, ಅವನಿಗೆ ಪಾದ್ಯವನ್ನು ಕೊಡುವುದು, ಅವನಿಗೆ ಸ್ಥಲವನ್ನೂ, ಶಯನಾಸನಗಳನ್ನೂ ಕೊಡುವುದು, ಇದೊಂದೊಂದೂ ಗೋದಾನಕ್ಕಿಂತಲೂ ಮೇಲಾದುದು. ಮನೆಗೆ ಬಂದ ಬ್ರಾಹ್ಮಣನಿಗೆ ಕಾಲಿಗೆ ನೀರು, ಕಾಲಿಗೆ ಸವರುವುದಕ್ಕಾಗಿ ತುಪ್ಪ, ದೀಪ, ಅನ್ನ, ವಾಸಸ್ಥಳ, ಇವುಗಳನ್ನೆಲ್ಲ ಕೊಡುವವನಿಗೆ ಯಮದರ್ಶನವಿಲ್ಲ. ಭಕ್ತಿಯಿಂದ ಬ್ರಾಹ್ಮಣಾತಿಥ್ಯವನ್ನು ಮಾಡಿದಾಗ,

ಆದರಿಂದ ಮೂವತ್ತುಮೂರುಕೋಟಿ ದೇವತೆಗಳೂ ತೃಪ್ತರಾಗುವರು. ಪೂರ್ವಪರಿಚಿತನಾದವನು ಮನೆಗೆ ಬಂದಾಗ ಅವನು ಅಭ್ಯಾಗತನೆನಿಸುವನು. ಅಪರಿಚಿತನಾದವನು ಅತಿಥಿಯೆನಿಸುವನು. ಅವರಿಬ್ಬರೂ ಪೂಜಾರ್ಹರೇ, ಎಂದು ಪುರಾತನಶ್ರುತಿವಾಕ್ಯವಿದೆ. ಪಾದ್ಯ, ಅಭ್ಯಂಗನ, ಅನ್ನಪಾನಾದಿಗಳಿಂದ ಮಾಡಿದ ಅತಿಥಿಪೂಜೆಯಿಂದ ನನ್ನನ್ನು ಪೂಜಿಸಿದಂತೆಯೇ ಆಗುವುದು. ಅಂತಹ ಅತಿಥಿಪೂಜಕನು ನನ್ನ ಅನುಗ್ರಹಕ್ಕೆ ಪಾತ್ರನಾಗಿ, ಪಾಪಗಳಿಂದ ಬಿಡುಗಡೆ ಹೊಂದಿ, ಚಂದ್ರನಿಗೆಣೆಯಾದ ವಿಮಾನದಿಂದ ನನ್ನಲೋಕವನ್ನು ಹೊಂದುವನು. ಬಳಲಿಬಂದ ಅಭ್ಯಾಗತನನ್ನು ಎಲ್ಲಾ ದೇವತೆಗಳೂ, ಪಿತೃಗಳೂ, ಅಗ್ನಿದೇವತೆಗಳೂ ಹಿಂಬಾಲಿಸಿ ಬರುವರು. ಆ ಅತಿಥಿಯನ್ನು ಪೂಜಿಸಿದರೆ ಅವರೆಲ್ಲರೂ ಪೂಜಿತರಾಗುವರು. ಅವನು ನಿರಾಶನಾಗಿ ಹೋದಾಗ ಆ ದೇವತೆಗಳೂ ನಿರಾಶರಾಗಿ ಹಿಂತಿರುಗುವರು. ಅತಿಥಿಯು ಯಾವನ ಮನೆಯಿಂದ ನಿರಾಶನಾಗಿ ಹಿಂತಿರುಗುವನೋ, ಅವನ ಪಿತೃಗಳು ಹದಿನೈದುವರ್ಷಗಳವರೆಗೆ ಅನ್ನವಿಲ್ಲದೆ ಉಪವಾಸವಿರುವರು. ಅಂತಹ ಲೋಭಿಯು ಪಿತೃಗಳಿಂದಲೂ, ದೇವತೆಗಳಿಂದಲೂ, ಅಗ್ನಿದೇವತೆಗಳಿಂದಲೂ ನಿರಾಕರಿಸಲ್ಪಟ್ಟು, ಹದಿನೈದು ವರ್ಷಗಳವರೆಗೆ ರೌರವ ನರಕದಲ್ಲಿ ನರಳುವನು. ಆಮೇಲೆ ತಿರುಗಿ ಜನ್ಮವೆತ್ತಿದಾಗಲೂ, ಎಂಜಲನ್ನು ತಿನ್ನುವ ಹೀನಜನ್ಮವುಳ್ಳವನಾಗುವನು. ತನ್ನ ವೈಶ್ವದೇವವನ್ನು ಮುಗಿಸುವ ಕಾಲಕ್ಕೆ ಸರಿಯಾಗಿ ಬಂದ ಅತಿಥಿಯನ್ನು ಪೂಜಿಸದವನು ಚಂಡಾಲಜನ್ಮವನ್ನೇ ಪಡೆಯುವನು. ಸಕಾಲಕ್ಕೆ ಬಂದ ಬ್ರಾಹ್ಮಣನನ್ನು ನಿರಾಕರಿಸಿ ಮನೆಯಿಂದ ಹೊರಡಿಸುವವನು ಪತಿತನೆನಿಸಿ, ಅನೇಕವರ್ಷಗಳವರೆಗೆ ರೌರವ ನರಕದಲ್ಲಿ ಬಿದ್ದು, ಅಲ್ಲಿಂದ ತಿರುಗಿ ಹನ್ನೆರಡುಸಾರಿ ಶುನಕಜನ್ಮಗಳನ್ನೆತ್ತುತ್ತ, ಹಸಿವು ಬಾಯಾರಿಕೆಗಳಿಂದ ನರಳುವನು. ಭೋಜನಕಾಲಕ್ಕೆ ಅತಿಥಿಯಾಗಿ ಬಂದವನು ಚಂಡಾಲನಾಗಿದ್ದರೂ ಗೃಹಸ್ಥನು ಅವನನ್ನು ಆದರಿಸಬೇಕು. ಹಾಗಿಲ್ಲದೆ ಅವನನ್ನು ನಿರಾಕರಿಸಿ ತಾನೇ ಊಟಮಾಡಿದವನು ಮುಂದಿನ ಹತ್ತು ಜನ್ಮಗಳಲ್ಲಿ ಚಂಡಾಲತ್ವವನ್ನೇ ಹೊಂದುವನು. ಅತಿಥಿಯಾಗಿ ಬಂದವನಿಗೆ ಆಶಾಭಂಗವನ್ನು ಮಾಡಿ, ತನಗೆ ತಾನೇ ಸಂತೋಷದಿಂದ ಭುಜಿಸು

ವವನು, ಅಮೇಧ್ಯದ ಕೂಪದಲ್ಲಿ ಬಿದ್ದು ನರಳಬೇಕಾಗುವುದು. ಯಾವನು ಅತಿಥಿಯನ್ನು ಆದರಿಸುವುದಿಲ್ಲವೋ, ಅವನು ವಸ್ತ್ರವನ್ನುಡುವುದೂ ವ್ಯರ್ಥವು! ಅವನ ಪಾಕವೂ ವ್ಯರ್ಥವು! ಅವನು ಭುಜಿಸತಕ್ಕ ಅನ್ನವೂ ವ್ಯರ್ಥವು. ಸಾಂಗೋಪಾಂಗವಾಗಿ ವೇದವನ್ನೋದಿದವನಾದರೂ ಅತಿಥಿಪೂಜೆಮಾಡದ ಬ್ರಾಹ್ಮಣನ ಜನ್ಮವೇ ವ್ಯರ್ಥವು. ಅತಿಥಿಯನ್ನು ಆದರಿಸದೆ, ಪಾಕಯಜ್ಞ, ಮಹಾಯಜ್ಞ, ಸೋಮಸಂಸ್ಥೆ ಮೊದಲಾದ ಯಾಗಗಳನ್ನು ಮಾಡಿದರೂ, ಕೇವಲ ಕೀರ್ತಿಗಾಗಿ ಮಾಡತಕ್ಕ ಆ ಯಜ್ಞದಾನಾದಿಗಳೆಲ್ಲವೂ ವ್ಯರ್ಥವೇ ಆಗುವುವು. ಯಶಃಕಾಂಕ್ಷೆಯಿಂದ ಅವೆಲ್ಲವೂ ಕೆಡುವುವು. ದೇಶ ಕಾಲ ಪಾತ್ರಗಳನ್ನೂ, ತನ್ನ ಶಕ್ತಿಯನ್ನೂ ನೋಡಿ, ಸ್ವಲ್ಪವಾಗಿಯೋ, ವಿಶೇಷವಾಗಿಯೋ, ಸಾಧಾರಣವಾಗಿಯೋ ಅತಿಥಿಪೂಜೆಯನ್ನು ಮಾಡಬೇಕು. ಮನೆಗೆ ಬಂದ ಅತಿಥಿಯನ್ನು ನಗುಮುಖದಿಂದಲೂ, ನಿಷ್ಕಲ್ಮಷವಾದ ಹೃದಯದಿಂದಲೂ ಕರೆದು ಸುಖಾಗಮನವನ್ನು ಕೇಳಿ, ಆಸನವನ್ನು ಕೊಟ್ಟು, ಅನ್ನಪಾನಾದಿಗಳಿಂದ ಸತ್ಕರಿಸಬೇಕು. ವೈಶ್ವದೇವವನ್ನು ಮುಗಿಸುವ ಕಾಲಕ್ಕೆ ಮನೆಗೆ ಅತಿಥಿಯಾಗಿ ಬಂದವನು ಇಷ್ಟನಾಗಲಿ, ದ್ವೇಷಿಯಾಗಿರಲಿ, ಮೂರ್ಖನಾಗಲಿ, ಪಂಡಿತನಾಗಲಿ, ಅವನನ್ನು ಸತ್ಪಾತ್ರವೆಂದೇ ತಿಳಿದು ಆದರಿಸಬೇಕು. ಅವನೇ ಸ್ವರ್ಗಕ್ಕೆ ಮಾರ್ಗದರ್ಶಕನು. ಯಜ್ಞಫಲವನ್ನಪೇಕ್ಷಿಸತಕ್ಕವನು, ಹಸಿದು ಬಾಯಾರಿ ತನ್ನಲ್ಲಿಗೆ ಬಂದ ಅತಿಥಿಯನ್ನು ದೇಶಕಾಲಕ್ಕೆ ತಕ್ಕಂತೆ ಸತ್ಕರಿಸಿ ಕಳುಹಿಸಬೇಕು. ಹವ್ಯಕವ್ಯಗಳಲ್ಲಿ ತನಗಿಂತಲೂ ಮೇಲಾದವರನ್ನೇ ನಿಯಮಿಸಿ ಭೋಜನಮಾಡಿಸಬೇಕು. ಮನುಷ್ಯರಿಗೆ ಅನ್ನವೇ ಪ್ರಾಣವು. ಅನ್ನದಾತನು ಪ್ರಾಣದಾತನೇ ಆಗುವನು. ಆದುದರಿಂದ ಸಂಪತ್ತನ್ನು ಬಯಸುವವನು ಅನ್ನದಾನವನ್ನು ಮಾಡಬೇಕು. ಅನ್ನದಾನಮಾಡಿದವನು ಈ ಲೋಕದಲ್ಲಿ ತನ್ನ ಕೋರಿಕೆಗಳನ್ನೆಲ್ಲ ಪಡೆದು ತೃಪ್ತನಾಗಿ, ಸರ್ವಾಲಂಕಾರಭೂಷಿತನಾಗಿದ್ದು, ಕೊನೆಗೆ ಪೂರ್ಣಚಂದ್ರನಿಗೆ ಸಮಾನವಾದ ವಿಮಾನದಲ್ಲಿ ಕುಳಿತು, ದೇವಸ್ತ್ರೀಯರಿಂದ ಉಪಚರಿಸಲ್ಪಡುತ್ತ ನನ್ನಲೋಕವನ್ನು ಸೇರುವನು. ಅಲ್ಲಿ ಅನೇಕವರ್ಷಗಳವರೆಗೆ ದೇವತೆಗಳಂತೆ ವಿಹರಿಸಿ, ತಿರುಗಿ ಜನ್ಮವನ್ನೆತ್ತಬೇಕಾದರೂ, ಈ ಲೋಕದಲ್ಲಿ

ವೇದಶಾಸ್ತ್ರ ಪಾರಂಗತನೂ, ತತ್ವಜ್ಞನೂ ಆದ ಬ್ರಾಹ್ಮಣನಾಗಿ ಹುಟ್ಟಿ ಒಳ್ಳೇ ಶ್ರೀಮಂತನಾಗಿ, ಸಮಸ್ತ ಭೋಗಗಳನ್ನೂ ಅನುಭವಿಸುವನು. ಯಾವನು ಒಂದುವರ್ಷದವರೆಗೆ ತನ್ನ ಧರ್ಮಾರ್ಜಿತವಾದ ಧನದಿಂದ, ಶುದ್ಧ ಮನಸ್ಕನಾಗಿ, ಮನೆಗೆ ಬಂದವರೆಲ್ಲರಿಗೂ ಅತಿಥಿಪೂಜೆಯನ್ನು ಮಾಡುತ್ತ, ಪಙ್ತಿಭೇದವಿಲ್ಲದಂತೆ ಬ್ರಾಹ್ಮಣರನ್ನು ದೇವತೆಗಳಂತೆ ಭಾವಿಸಿ ಪೂಜಿಸುವನೋ, ಅವರ ಮೂಲಕವಾಗಿ ಪಿತೃಗಳನ್ನೂ ಆರಾಧಿಸಿ ಅವರಿಗೆ ಭೋಜನವನ್ನಿಕ್ಕಿದಮೇಲೆ ತಾನು ಭುಜಿಸುವನೋ, ಅಂಥವನ ಪುಣ್ಯಕ್ಕೆ ಎಣೆಯೇ ಇಲ್ಲ. ಆ ಒಂದು ವರ್ಷದಲ್ಲಿ ಅವನ ಮನೆಯಲ್ಲಿ ಬ್ರಾಹ್ಮಣರು ಎಷ್ಟು ಕಬಳಗಳನ್ನು ಭುಜಿಸುವರೋ, ಅಷ್ಟುವರ್ಷಗಳವರೆಗೆ ಅವನು ನನ್ನ ಲೋಕದಲ್ಲಿ ಪೂಜಿಸಲ್ಪಡುವನು. ಆಮೇಲೆ ತಿರುಗಿ ಭೂಲೋಕದಲ್ಲಿ ವೇದಪಾರಂಗತನೂ, ಶ್ರೀಮಂತನೂ, ಕೀರ್ತಿವಂತನೂ ಆದ ಬ್ರಾಹ್ಮಣನಾಗಿ ಜನಿಸಿ, ಭೋಗ ಭಾಗ್ಯಗಳನ್ನು ಅನುಭವಿಸುವನು. ಯಾವನು ಸತ್ಯಸಂಧನೂ, ಜಿತೇಂದ್ರಿಯನೂ, ಸ್ವಧರ್ಮನಿರತನೂ, ಶುದ್ಧನೂ ಆಗಿದ್ದು, ಕೋಪತಾಪಗಳನ್ನು ನಿಗ್ರಹಿಸಿ, ಅತಿಥಿಗಳಾಗಿ ಬಂದವರಿಗೆಲ್ಲ ಶ್ರದ್ಧೆಯಿಂದ ಪಾಕಭೇದವಿಲ್ಲದೆ ಅನ್ನವನ್ನಿಕ್ಕಿ ಸತ್ಕರಿಸುವನೋ, ಅವನು ದಿವ್ಯವಿಮಾನದಲ್ಲಿ ಅಪ್ಸರಸ್ಸುಗಳ ಗಾನಸಂಭ್ರಮದೊಡನೆ ಇಂದ್ರಲೋಕಕ್ಕೆ ಹೋಗುವನು. ಅಲ್ಲಿ ಒಂದು ಮನ್ವಂತರಕಾಲದವರೆಗೆ ಸುಖವಾಗಿ ವಿನೋದಿಸುತ್ತಿದ್ದು, ತಿರುಗಿ ಮನುಷ್ಯಜನ್ಮವೆತ್ತಿದಾಗ ಬ್ರಾಹ್ಮಣನಾಗಿ ಹುಟ್ಟಿ ಸುಖಗಳನ್ನನುಭವಿಸುವನು. ಅಂತವನು ಹತ್ತು ಜನ್ಮಗಳವರೆಗೆ ರಾಜಕುಲಪೂಜ್ಯನಾದ ಬ್ರಾಹ್ಮಣನಾಗಿ ಹುಟ್ಟುವನು. ಪೂರ್ವಜನ್ಮಸ್ಮರಣೆಯುಳ್ಳವನಾಗುವನು.

ಇದು ನೂರೊಂದನೆಯ ಅಧ್ಯಾಯವು.

---

{ ಕೃಷ್ಣನು ಯುಧಿಷ್ಠಿರನಿಗೆ ಭೂದಾನ, ಗೋದಾನ, ತಿಲದಾನ, ಕನ್ಯಾದಾನ ಫಲಗಳನ್ನು ತಿಳಿಸಿದುದು. }

ಓ ಧರ್ಮಪುತ್ರಾ! ಇನ್ನು ಭೂದಾನದ ಫಲವನ್ನು ಹೇಳುವೆನು ಕೇಳು. ಶ್ರೋತ್ರಿಯನಾಗಿ ಅಗ್ನಿಹೋತ್ರಗಳನ್ನು ನಡೆಸುತ್ತಿರುವ ಒಬ್ಬ

ಬಡಬ್ರಾಹ್ಮಣನಿಗೆ ದಕ್ಷಿಣೆಗೊಡನೆ ಒಳ್ಳೆಯ ಭೂಮಿಯನ್ನು ದಾನಮಾಡಿದವನು, ಇಹಲೋಕದಲ್ಲಿ ತನ್ನ ಕೋರಿಕೆಗಳನ್ನೆಲ್ಲಾ ಪಡೆದು, ಸಮಸ್ತಪಾಪವಿಮುಕ್ತನಾಗಿ, ಕೊನೆಗೆ ಸೂರ್ಯಸಮಾನವಾದ ದಿವ್ಯವಿಮಾನದಿಂದ ಸರ್ವಾಲಂಕಾರಭೂಷಿತನಾಗಿ ನನ್ನ ಲೋಕವನ್ನು ಸೇರುವನು. ಅವನು ಅಲ್ಲಿ ಅನೇಕದೇವಸ್ತ್ರೀಯರಿಂದ ಸೇವಿಸಲ್ಪಡುತ್ತಾ, ಕಾಮರೂಪವುಳ್ಳವನೂ, ಕಾಮಗಮನವುಳ್ಳವನೂ ಆಗಿ, ಸುಖದಿಂದ ವಿಹರಿಸುವನು. ಭೂದಾನಮಾಡಿದವನು ಆ ಭೂಮಿಯಿರುವವರೆಗೂ ನನ್ನ ಲೋಕದಲ್ಲಿ ವಿಹರಿಸುವನು. ಭೂದಾನಕ್ಕಿಂತಲೂ ಮೇಲಾದ ದಾನವಿಲ್ಲ. ಇತರರ ಭೂಮಿಯನ್ನು ಕಸಿದುಕೊಳ್ಳುವುದಕ್ಕಿಂತಲೂ ಮೇಲಾದ ಪಾಪವಿಲ್ಲ. ಇತರದಾನಫಲಗಳೆಲ್ಲ ಕಾಲಕ್ರಮದಿಂದ ಕ್ಷೀಣಿಸುವುವು. ಭೂಮಿದಾನದಿಂದಾದ ಪುಣ್ಯವು ಅಕ್ಷಯವಾದುದು. ದರಿದ್ರನಾದ ಉತ್ತಮಬ್ರಾಹ್ಮಣನಿಗೆ ಕೊಟ್ಟ ಭೂಮಿಯನ್ನು ಯಾವನು ಕೆಡಿಸುವುದಿಲ್ಲವೋ ಅವನೂ ಪುಣ್ಯಭಾಗಿಯೇ! ಆ ಕಾರ್ಯಕ್ಕೆ ಸಹಕರಿಸಿದವನುಕೂಡ ಪರ್ವತಾರಣ್ಯಗಳಿಂದಲೂ, ರತ್ನಸಮೂಹದಿಂದಲೂ ತುಂಬಿದ ಸಮುದ್ರಾಂತವಾದ ಸಮಸ್ತಭೂಮಿಯನ್ನೂ ಕೊಟ್ಟ ಫಲವನ್ನು ಹೊಂದುವನು. ಶ್ರೋತ್ರಿಯಬ್ರಾಹ್ಮಣನಿಗೆ ಭೂದಾನವನ್ನು ಮಾಡುವಾಗ ನೋಡಿದ ಭೂತಗಳೆಲ್ಲ ತನ್ನನ್ನೇ ದಾನಮಾಡಿದಂತೆ ಸಂತೋಷವನ್ನು ಹೊಂದುವುವು. ಭೂದಾನವನ್ನು ಮಾಡುವುದು, ಧನಕನಕಾದಿದಾನಗಳನ್ನು ಮಾಡಿದುದಕ್ಕೆ ಸಮಾನವು. ಮತ್ತು ಭೂದಾನ ಮಾಡುವುದರಿಂದ ಸಮುದ್ರಗಳನ್ನೂ, ನದಿಗಳನ್ನೂ, ಪರ್ವತಗಳನ್ನೂ, ಸಮ ವಿಷಮ ಪ್ರದೇಶಗಳನ್ನೂ, ಸಮಸ್ತಗಂಧಗಳನ್ನೂ, ಸಮಸ್ತರಸಗಳನ್ನೂ ದಾನಮಾಡಿದಂತಾಗುವುದು ಭೂದಾನಮಾಡುವವನು ಫಲಪುಷ್ಪ ಸಮೃದ್ಧವಾದ ಔಷಧಿಗಳನ್ನೂ, ತಾವರೆ ನೈದಿಲೆ ಕೊಳಗಳನ್ನೂ, ಧರ್ಮಕಾಮಾರ್ಥಗಳನ್ನೂ, ವೇದಗಳನ್ನೂ, ಯಜ್ಞಗಳನ್ನೂ, ಸ್ವರ್ಗಗತಿಯನ್ನೂ ದಾನಮಾಡಿದವನಾಗುವನು. ಅಗ್ನಿಷ್ಟೋಮಾದಿಯಾಗಗಳಲ್ಲಿಯೂ ಭೂದಾನಕ್ಕೆ ಸಮಾನವಾದ ಫಲವಿಲ್ಲ. ಶ್ರೋತ್ರಿಯನಿಗೆ ಭೂದಾನವನ್ನು ಮಾಡಿದವನು, ಅದರ ಫಲದಿಂದ ಸಮಸ್ತಲೋಕಗಳೂ ಇರುವವರೆಗೆ ಸ್ವರ್ಗಭೋಗಗಳನ್ನು ಅನುಭವಿಸುವನು. ಅವನ

ಪಿತೃಗಳೂ ಪ್ರಳಯಾಂತದವರೆಗೆ ತೃಪ್ತರಾಗಿರುವರು. ಭೂದಾನವೆಂಬುದು ನನಗೂ, ರುದ್ರನಿಗೂ, ಸೂರ್ಯನಿಗೂ, ಮತ್ತು ಎಲ್ಲಾ ದೇವತೆಗಳಿಗೂ ಪ್ರೀತಿ ಕರವೆಂದು ತಿಳಿ. ಆ ಭೂದಾನದ ಪುಣ್ಯದಿಂದ ಪವಿತ್ರನಾದವನು ನನ್ನ ಸಾಲೋಕ್ಯವನ್ನು ಹೊಂದುವನು. ತನ್ನ ಜೀವನೋದ್ಯೋಗದ ದೆಸೆಯಿಂದ ಏನಾದರೂ ಪಾಪಕ್ಕೊಳಗಾಗದವನೂಕೂಡ ಒಂದು ಗೋಕರ್ಣಪ್ರಮಾಣ ದಷ್ಟು ಭೂಮಿಯನ್ನು ದಾನವಾಡಿದರೂ ಪಾಪದಿಂದ ಮುಕ್ತನಾಗುವನು. ಮಾಸೋಪವಾಸ, ಚಾಂದ್ರಾಯಣಾದಿವ್ರತಗಳಿಂದ ಯಾವ ಪುಣ್ಯವುಂಟಾ ಗುವುದೋ, ಅದು, ಗೋಕರ್ಣದಷ್ಟು ಭೂಮಿಯನ್ನು ದಾನಮಾಡುವುದ ರಿಂದಲೇ ಲಭಿಸುವುದು. ಅದರಿಂದ ಸಮಸ್ತ ಪುಣ್ಯತೀರ್ಥಸ್ನಾನಗಳ ಪುಣ್ಯವೂ ಲಭಿಸುವುದು'' ಎಂದನು.

ಆಗ ಯುಧಿಷ್ಠಿರನು ' ಓ ದೇವಾ ! ನಿನಗೆ ವಂದನವು. ಗೋಕರ್ಣ ವೆಂಬುದರ ಪ್ರಮಾಣವೇನೆಂಬುದನ್ನು ನನಗೆ ತಿಳಿಸಬೇಕು ' ಎನಲು ಕೃಷ್ಣನು ' ಓ ಧರ್ಮಪುತ್ರಾ ! ಮೂವತ್ತು ದಂಡಗಳ ಅಳತೆಗೆ ಪೂರ್ವಪಶ್ಚಿ ಮಕ್ಕೂ, ದಕ್ಷಿಣೋತ್ತರಕ್ಕೂ ಸಮವಾದ ಚತುರಶ್ರದ ಪ್ರಮಾಣವು, ಗೋ ಕರ್ಣವೆನಿಸುವುದು. ಮತ್ತು ನೂರು ಗೋವುಗಳು ತಮ್ಮ ಕರುಗಳೊಡನೆ ಎಷ್ಟು ಸ್ಥಳದಲ್ಲಿ ಧಾರಾಳವಾಗಿ ಸಂಚರಿಸುತ್ತಿರಬಹುದೋ, ಅದಕ್ಕೂ ಗೋಕರ್ಣಸ್ಥಳವೆಂದು ಹೆಸರು. ಓ ಧರ್ಮರಾಜಾ ! ಭೂದಾನಮಾಡಿ ದವನ ಸಮೀಪಕ್ಕೆ ಯಮಕಿಂಕರರಾಗಲಿ, ಯಮದಂಡಗಳಾಗಲಿ, ವರುಣ ಪಾಶಗಳಾಗಲಿ ಹೊದ್ದಲಾರವು. ಕುಂಭೀಪಾಕ, ರೌರವಾದಿನರಕಗಳೂ, ಭಯಂಕರವಾದ ವೈತರಣೀನದಿಯೂ, ಅವನಿಗೆ ಗೋಚರಿಸಲಾರವು. ಅವ ನನ್ನು ನರಕಯಾತನೆಗಳೂ ಪೀಡಿಸವು. ಚಿತ್ರಗುಪ್ತನು, ಕಲಿಪುರುಷನು, ಕಾಲನು, ಕೃತಾಂತನು, ಮೃತ್ಯುದೇವತೆ, ಯಮನು, ಇವರೆಲ್ಲರೂ ಭೂದಾನ ಮಾಡಿದವನನ್ನು ಪೂಜಿಸುವರು. ಬ್ರಹ್ಮೇಂದ್ರರೂ, ನಾನೂ, ಋಷಿ ಗಳೂ ಅಂಥವನಲ್ಲಿ ಪ್ರೀತರಾಗುವೆವು. ಭೂದಾನವನ್ನು ಮಾಡುವವನು, ಪರಿವಾರಗಳು, ಗೋವುಗಳು, ಕುದುರೆಗಳು, ಭೃತ್ಯರು, ಇವೆಲ್ಲಾ ಬಳಲಿ ಕೆಲಸಕ್ಕೆ ಬಾರದೆ ಹೋದವನಿಗೂ, ದರಿದ್ರನಾದ ಅತಿಥಿಗೂ ಅದನ್ನು ದಾನ

ಮಾಡಬೇಕು. ಈ ದಾನವು ಪರಲೋಕಸಾಧಕವಾದ ಒಂದು ನಿಧಿಯೆನಿಸುವುದು. ಶ್ರೋತ್ರಿಯನೂ, ವ್ರತನಿಷ್ಠನೂ, ದರಿದ್ರನೂ, ಕುಟುಂಬಿಯೂ ಆದ ಬ್ರಾಹ್ಮಣನಿಗೆ ದಾನಮಾಡಬೇಕು. ತಾಯಿಯು ಸ್ತನ್ಯದಿಂದ ಮಗನನ್ನು ಪೋಷಿಸುವಹಾಗೆ ದಾನಮಾಡಿದ ಭೂಮಿಯು ದಾನಮಾಡಿದವನನ್ನು ಪೋಷಿಸುವುದು. ಹಸುವು ತನ್ನ ಕರುವನ್ನು ತನ್ನ ಹಾಲಿನಿಂದ ಪೋಷಿಸುವಹಾಗೆ ದಾನಮಾಡಿದ ಭೂಮಿಯು ದಾತೃವನ್ನು ಪೋಷಿಸುವುದು. ನೀರಿನಲ್ಲಿ ನೆನೆದ ಬೀಜಗಳು ಮೊಳೆ ಬಿಡುವಂತೆ, ಭೂದಾನಮಾಡಿದವನಿಗೆ ಕೋರಿಕೆಗಳು ಕೈಗೂಡುವುವು. ಸೂರ್ಯನು ತಮಸ್ಸನ್ನು ಓಡಿಸುವಹಾಗೆ ಭೂದಾನವು ಪಾಪವನ್ನು ನೀಗಿಸುವುದು. ಭೂದಾನಮಾಡಿದವನು ತನ್ನ ಹಿಂದುಮುಂದಿನ ಹತ್ತು ತಲೆಮೊರೆಯುವರನ್ನೂ ಉದ್ಧರಿಸುವನು. ಇತರರ ಭೂಮಿಯನ್ನು ಅಪಹರಿಸಿದವನು ತನ್ನ ಹಿಂದುಮುಂದಿನ ಹತ್ತುತಲೆಮೊರೆಯುವರನ್ನೂ ಅಧೋಗತಿಗೆತಳ್ಳುವನು. ಭೂಮಿಯನ್ನು ಕೊಡುವುದಾಗಿ ಮೊದಲು ಹೇಳಿ, ತಿರುಗಿ ಅದನ್ನು ತಾನೇ ಅನುಭವಿಸುವವನು, ವರುಣಪಾಶಗಳಿಂದ ಬಿಗಿಯಲ್ಪಟ್ಟು, ಕೀವು ರಕ್ತಗಳ ನರಕದಲ್ಲಿ ತಳ್ಳಲ್ಪಡುವನು. ತಾನಾಗಲಿ, ಇತರರಾಗಲಿ, ಒಬ್ಬನಿಗೆ ಕೊಟ್ಟ ಭೂಮಿಯನ್ನು ಅಪಹರಿಸಿದವನಿಗೆ ನರಕದಿಂದ ಎಂದಿಗೂ ಬಿಡುಗಡೆಯಿಲ್ಲ. ಬ್ರಾಹ್ಮಣನಿಗ ಕೊಟ್ಟ ಭೂಮಿಯನ್ನು ಅಪಹರಿಸಿದವನು, ತನ್ನ ಹಿಂದಿನ ಹನ್ನೆರಡು ತಲೆಮೊರೆಯುವರನ್ನೂ ಅಧೋಗತಿಗೆ ತಳ್ಳಿ ತಾನೂ ಕ್ರಿಮಿಜನ್ಮವನ್ನು ಹೊಂದುವನು. ಕೊಟ್ಟ ಭೂಮಿಯನ್ನು ಕಿತ್ತುಕೊಳ್ಳುವವನು ಸಹಸ್ರ ಗೋವಧೆಮಾಡಿದ ಪಾಪಕ್ಕೆ ಗುರಿಯಾಗುವನು. ಅಂತಹ ಪಾಪಿಯು ತಲೆಕೆಳಕಾಗಿ ಕುಂಭೀಪಾಕದ ನರಕದಲ್ಲಿ ಬೆಂದು, ಆಮೇಲೆ ಹಲವು ಜನ್ಮಗಳವರೆಗೆ ನಾಯಿಯಾಗಿ ಹುಟ್ಟುವನು. ಭೂಮಿಯನ್ನು ದತ್ತಾಪಹಾರ ಮಾಡಿದವನು, ಇಪ್ಪತ್ತೊಂದು ನರಕಗಳಲ್ಲಿಯೂ ಯಾತನೆಗಳನ್ನು ಅನುಭವಿಸಿ, ತಿರುಗಿ ಶುನಕಜನ್ಮವನ್ನು ಹೊಂದುವನು. ಉತ್ತು, ಬೀಜಗಳನ್ನು ನಾಟಿ, ಪೈರುಮಾಡಿದ ಒಳ್ಳೆಯ ಭೂಮಿಯನ್ನು, ದರಿದ್ರನಾದ, ಶ್ರೋತ್ರಿಯನಾದ ಬ್ರಾಹ್ಮಣನಿಗೆ ದಾನಮಾಡಬೇಕು. ಜಲಸಮೃದ್ಧಿಯುಳ್ಳ ಭೂಮಿಯನ್ನಾದರೂ ಕೊಡಬೇಕು. ಇಂತಹ ಭೂದಾನದಿಂದ

ಕೊಟ್ಟವನ ಕೋರಿಕೆಗಳೆಲ್ಲವೂ ಈಡೇರುವುವು. ಓ ರಾಜೇಂದ್ರಾ! ಎಷ್ಟೋ ಮಂದಿ ರಾಜರು ಹಿಂದೆ ಭೂದಾನಮಾಡಿರುವರು. ಮಾಡುತ್ತಲೂ ಇರುವರು. ಆ ಭೂಮಿಯು ಯಾವಾಗ ಯಾವಯಾವ ರಾಜನ ಅಧೀನದಲ್ಲಿರುವುದೋ, ಆ ರಾಜರೆಲ್ಲ ಆ ಭೂದಾನದ ಫಲಕ್ಕೆ ಭಾಗಿಗಳಾಗುವರು.

ಇನ್ನು ಕನ್ಯಾದಾನಫಲವನ್ನು ಕೇಳು. ಯಾವನು ರೂಪವತಿಯಾದ ಕನ್ಯೆಯನ್ನು ಶ್ರೋತ್ರಿಯಬ್ರಾಹ್ಮಣನಿಗೆ ಕೊಡುವನೋ, ಅವನು ಬ್ರಹ್ಮದೇಯನು, ಎಂದರೆ ವೇದವನ್ನೇ ದಾನಮಾಡಿದವನೆನಿಸುವನು. ಒಳ್ಳೆಯ ಭಾರವನ್ನು ಹೊರುವ ಒಂದು ಸಾವಿರ ವೃಷಭಗಳನ್ನೂ, ನೂರುಸಾವಿರ ಗೋವುಗಳನ್ನೂ ದಾನಮಾಡಿದ ಫಲವು ಕನ್ಯಾದಾನದಿಂದ ಲಭಿಸುವುದು. ಆ ಕನ್ಯೆಯ ದೇಹದಲ್ಲಿರುವ ರೋಮಗಳ ಸಂಖ್ಯೆಯೆಷ್ಟೋ ಅಷ್ಟು ಸಹಸ್ರ ವರ್ಷಗಳವರೆಗೆ ಅವನು ನನ್ನ ಲೋಕದಲ್ಲಿ ಪೂಜಿಸಲ್ಪಡುವನು. ಅವನು ತಿರುಗಿ ಜನ್ಮವೆತ್ತಿದರೂ ವೇದವೇದಾಂಗಗಳನ್ನು ತಿಳಿದ ಬ್ರಾಹ್ಮಣನಾಗಿ ಹುಟ್ಟುವನು. ಯಾವನು ಶ್ರೋತ್ರಿಯನೂ, ದರಿದ್ರನೂ, ಹಲವು ಮಕ್ಕಳುಳ್ಳವನೂ ಆದ ಬ್ರಾಹ್ಮಣನಿಗೆ ಸುವರ್ಣದಾನಮಾಡುವನೋ, ಅವನು ಸರ್ವಪಾಪವಿಮುಕ್ತನಾಗಿ, ಸೂರ್ಯಸಮಾನವಾದ ದಿವ್ಯವಿಮಾನದಲ್ಲಿ ಕುಳಿತು ನನ್ನ ಲೋಕಕ್ಕೆ ಬಂದು, ಹಲವುಕೋಟಿ ವರ್ಷಗಳವರೆಗೆ ಅಲ್ಲಿದ್ದು, ತಿರುಗಿ ಜನ್ಮವನ್ನೆತ್ತುವಾಗ ವೇದವೇದಾಂಗಗಳನ್ನೋದಿದ ಶ್ರೀಮಂತನಾದ ಬ್ರಾಹ್ಮಣನಾಗಿ ಹುಟ್ಟುವನು. ಹಾಗೆಯೇ ಶ್ರೋತ್ರಿಯನಾದ ಬಡಬ್ರಾಹ್ಮಣನಿಗೆ ಬೆಳ್ಳಿಯನ್ನು ದಾನಮಾಡಿದವನು, ಚಂದ್ರನಿಗೆಣೆಯಾದ ವಿಮಾನದಲ್ಲಿ ಕುಳಿತು ಸ್ವರ್ಗವಾಸವನ್ನನುಭವಿಸಿ, ಆಮೇಲೆ ಈ ಭೂಲೋಕದಲ್ಲಿ ಮಹಾಪರಾಕ್ರಮಿಯೂ, ಶ್ರೀಮಂತನೂ ಆದ ರಾಜನಾಗಿ ಹುಟ್ಟುವನು. ಯಾವನು ದರಿದ್ರನಾದ ಉತ್ತಮಬ್ರಾಹ್ಮಣನಿಗೆ ಎಳ್ಳಿನ ರಾಶಿಯನ್ನು ದಾನಮಾಡುವನೋ, ಅವನು ಹತ್ತುಸಾವಿರ ವೃಷಭಗಳನ್ನು ನಿರ್ಬಂಧದಿಂದ ಬಿಡಿಸಿದ ಪುಣ್ಯಕ್ಕೆ ಭಾಗಿಯಾಗಿ, ಸಮಸ್ತ ಪಾಪಗಳಿಂದ ಬಿಡಲ್ಪಡುವನು. ಹಾವು ಪರೆಯನ್ನು ಸುಲಿದು ಶುದ್ಧವಾಗುವಂತೆ, ತಿಲದಾನಮಾಡಿದವನು ಪಾಪವಿಮುಕ್ತನಾಗುವನು. ಸುವ

ರ್ಣಸಹಿತವಾದ ಎಳ್ಳಿನ ಪಾತ್ರೆಯನ್ನು ದಾನಮಾಡಿದವನು ದಿವ್ಯವಿಮಾನದಿಂದ ಪಿತೃಲೋಕಕ್ಕೆ ಹೋಗಿ, ಅರುವತ್ತುಸಾವಿರ ವರ್ಷಗಳವರೆಗೆ ಅಲ್ಲಿ ಸುಖಿಸುವನು. ಯಾವನು ದರಿದ್ರನಾದ ಶ್ರೋತ್ರಿಯನಿಗೆ ತಿಲಧೇನುವನ್ನು ದಾನಮಾಡುವನೋ ಅವನು ಸಹಸ್ರ ಗೋದಾನಗಳ ಫಲವನ್ನು ಹೊಂದುವನು. ಎಷ್ಟು ಪಡಿ ಎಳ್ಳಿನಿಂದ (ತಿಲ) ಧೇನುವನ್ನು ಕಲ್ಪಿಸಿ ದಾನಮಾಡುವನೋ ಅಷ್ಟುಕೋಟಿ ವರ್ಷಗಳವರೆಗೆ ಸ್ವರ್ಗದಲ್ಲಿ ಸುಖಿಸುವನು. ಎಂಟು ಕೊಳಗದಷ್ಟು ಎಳ್ಳಿನಿಂದ ಹಸುವಿನ ಆಕಾರವನ್ನು ಚಿತ್ರಿಸಿ, ವಿಷುವವೆಂಬ ಪುಣ್ಯಕಾಲದಲ್ಲಿ, ಮೂವತ್ತೆರಡು ವರಹಗಳ ದಕ್ಷಿಣೆಯೊಡನೆ, ನನಗೆ ಅರ್ಪಿತವೆಂಬ ಭಾವದಿಂದ ಉತ್ತಮಬ್ರಾಹ್ಮಣನಿಗೆ ದಾನಮಾಡಿದವನು, ಸಹಸ್ರ ಕನ್ಯಾದಾನಗಳ ಫಲಕ್ಕೆ ಭಾಗಿಯಾಗಿ, ನನ್ನ ಲೋಕದಲ್ಲಿ ಸುಖಿಸುತ್ತಿದ್ದು, ತಿರುಗಿ ಜನ್ಮವೆತ್ತುವಾಗ ಚತುರ್ವೇದ ಪಾರಂಗತನಾದ ಬ್ರಾಹ್ಮಣನಾಗಿ ಜನಿಸುವನು. ಒಳ್ಳೇ ಸಾಧುವಾಗಿ ಹಾಲು ಕರೆಯುತಕ್ಕ ಹಸುವನ್ನು ಯಾವನು ಅದರ ಕರುವಿನೊಡನೆಯೂ, ಕರೆಯುವ ಪಾತ್ರದೊಡನೆಯೂ ದರಿದ್ರನಾದ ಶ್ರೋತ್ರಿಯನಿಗೆ ದಾನಮಾಡುವನೋ, ಅವನ ಪಾಪಗಳೆಲ್ಲವೂ ಆ ಕ್ಷಣವೇ ಬಿಟ್ಟುಹೋಗುವುವು. ಅವನು ವೃಷಭಗಳನ್ನು ಕಟ್ಟಿದ ದಿವ್ಯವಿಮಾನದಲ್ಲಿ ಗೋಲೋಕವನ್ನು ಸೇರುವನು. ಆ ಹಸುವಿನ ಮೈಯಲ್ಲಿ ಎಷ್ಟು ರೋಮಗಳುಂಟೋ ಅಷ್ಟು ವರ್ಷಗಳವರೆಗೆ ಅಲ್ಲಿ ಸುಖದಿಂದಿದ್ದು, ಆಮೇಲೆ ಭೂಲೋಕದಲ್ಲಿ ಅನೇಕ ರಾಜರಿಂದ ಪೂಜಿತನೂ, ಉದಾರಿಯೂ, ಸತ್ರಯಾಗವನ್ನು ಮಾಡತಕ್ಕವನೂ ಆದ ಬ್ರಾಹ್ಮಣನಾಗಿ ಜನಿಸುವನು. ಓ ರಾಜಾ! ತಿಲದಾನ, ಗೋದಾನ, ಸುವರ್ಣದಾನ, ಕನ್ಯಾದಾನ, ಅನ್ನದಾನಗಳೆಂಬಿವಾರೂ ಮನುಷ್ಯನನ್ನು ಉದ್ಧರಿಸತಕ್ಕವು. ಇಂತಹ ದಾನಾದಿಗಳಿಂದ ಒಳ್ಳೇ ಸುಶೀಲನೂ ಆಹಿತಾಗ್ನಿಯೂ, ಆಶಾರಹಿತನೂ ಆದ ಬ್ರಾಹ್ಮಣರನ್ನು ತೃಪ್ತಿಗೊಳಿಸುವುದು ಪಾರಲೌಕಿಕವಾದ ಒಂದು ದೊಡ್ಡ ನಿಧಿಯನ್ನು ಸಂಗ್ರಹಿಸಿಟ್ಟಂತೆಯೇ ಆಗುವುದು. ಶೂದ್ರಾನ್ನವರ್ಜಿತನಾಗಿ, ಮೇಲೆ ಹೇಳಿದಂತೆ ಅಗ್ನಿಹೋತ್ರ ಮಾಡತಕ್ಕ ಬ್ರಾಹ್ಮಣನನ್ನು ದಾನಾದಿಗಳಿಂದ ಸತ್ಕರಿಸಬೇಕು. ಆಹಿತಾಗ್ನಿಯಾಗಿ, ಅಗ್ನಿಹೋತ್ರವನ್ನು ಮಾಡುತ್ತ, ವೇದಾಧ್ಯಯನ ನಿರತನಾದ

ಬ್ರಾಹ್ಮಣನು ಸತ್ಪಾತ್ರವೆನಿಸುವನು. ಆದರಲ್ಲಿಯೂ ಯಾವನ ಹೊಟ್ಟೆಯಲ್ಲಿ ಶೂದ್ರಾನ್ನಸಂಪರ್ಕವಿಲ್ಲವೋ ಅವನು ಅತ್ಯುತ್ತಮಪಾತ್ರವೆನಿಸುವನು. ವೇದಮಯವಾದ ಪಾತ್ರವೂ, ತಪೋಮಯವಾದ ಪಾತ್ರವೂ, ಅಸಂಕೀರ್ಣವಾದ (ಸಂಕರಜಾತಿಗೆ ಸಂಬಂಧವಿಲ್ಲದ ಪಾತ್ರವೂ) ದಾನಮಾಡಿದವನನ್ನು ಉದ್ಧರಿಸುವುದು. ಯಾರು ವೇದಾಧ್ಯಯನಪರರಾಗಿ, ಇಂದ್ರಿಯಚಾಪಲ್ಯವಿಲ್ಲದೆ, ಪಂಚಯಜ್ಞಗಳನ್ನು ತಪ್ಪದೆ ನಡೆಸುತ್ತ ಬರುವರೋ, ಅಂತಹ ಬ್ರಾಹ್ಮಣರು ದಾನಕ್ಕೆ ಉತ್ತಮಪಾತ್ರರು. ಅಂತವರು ದಾನಮಾಡಿದವನನ್ನು ಉದ್ಧರಿಸುವರು. ತಾಳ್ಮೆ ಮತ್ತು ಇಂದ್ರಿಯನಿಗ್ರಹವುಳ್ಳವರೂ, ಅನೇಕಶಾಸ್ತ್ರಗಳನ್ನು ಕೇಳಿದರೂ, ದಾನತೆಗೆಯುವುದರಲ್ಲಿ ಸಂಕೋಚವುಳ್ಳವರೂ, ಗೃಹಸ್ಥರೂ ಆಗಿರುವ ಬ್ರಾಹ್ಮಣರೇ ದಾನಮಾಡಿದವರನ್ನು ಉದ್ಧರಿಸಬಲ್ಲರು ಪ್ರತಿನಿತ್ಯವೂ ಪಿತೃತರ್ಪಣಗಳನ್ನು ಮಾಡುತ್ತ, ಯಜ್ಞೋಪವೀತವನ್ನು ಸದಾ ಧರಿಸಿಕೊಂಡು, ನಿತ್ಯವೂ ವೇದಾಧ್ಯಯನಮಾಡುವವನೂ, ಶೂದ್ರಾನ್ನವನ್ನು ಬಿಟ್ಟವನೂ, ಋತುಕಾಲದಲ್ಲಿ ಮಾತ್ರ ಪತ್ನೀಸಮಾಗಮವನ್ನು ಮಾಡುವವನೂ, ವಿಧ್ಯುಕ್ತವಾಗಿ ಹೋಮಕಾರ್ಯಗಳನ್ನು ನಡೆಸುವವನೂ ಆದ ಬ್ರಾಹ್ಮಣನೇ ತನಗೆ ದಾನಮಾಡಿದವರನ್ನು ಉದ್ಧರಿಸಲು ಸಮರ್ಥನು. ಯಾವ ಬ್ರಾಹ್ಮಣನು ನನ್ನಲ್ಲಿ ಭಕ್ತಿಯುಳ್ಳವನಾಗಿ, ಸಮಸ್ತ ಕರ್ಮಗಳನ್ನೂ ನನಗೇ ಅರ್ಪಿಸುತ್ತ, ನನ್ನನ್ನೇ ನಂಬಿರುವನೋ, ಅಂತಹ ಬ್ರಾಹ್ಮಣನೇ ತನ್ನನ್ನು ಸತ್ಕರಿಸಿದವರನ್ನು ಉದ್ಧರಿಸಬಲ್ಲನು. ದ್ವಾದಶಾಕ್ಷರದ ತತ್ವವನ್ನೂ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ನಾಲ್ಕು ವ್ಯೂಹಗಳ ವಿಭಾಗಗಳನ್ನೂ ತಿಳಿದು, ಅಭಿಗಮ, ಉಪಾದಾನ, ಇಜ್ಯೆ, ಅಧ್ಯಯನ, ಯೋಗ, ಕಾಲಗಳೆಂಬ ಐದುಕಾಲಗಳನ್ನೂ ತಿಳಿದಿರುವನೋ, ಅಂತಹ ಬ್ರಾಹ್ಮಣನೇ ಇತರರನ್ನು ಉದ್ಧರಿಸಬಲ್ಲನು.

ಇದು ನೂರ ಎರಡನೆಯ ಅಧ್ಯಾಯವು.



ಕೃಷ್ಣನು ಯುಧಿಷ್ಠಿರನಿಗೆ ಗೃಹದಾನ, ಶಯ್ಯಾದಾನಾದಿಗಳ ಫಲವನ್ನೂ, ಗೋಬ್ರಾಹ್ಮಣರಕ್ಷಣಾದಿ, ನಾನಾಧರ್ಮಗಳನ್ನೂ ತಿಳಿಸಿದುದು.

ಧರ್ಮರಾಜನು ದಾನಫಲಗಳನ್ನು ಕೇಳಿ ತೃಪ್ತಿಯಿಲ್ಲದೆ ತಿರುಗಿ ಕೃಷ್ಣನನ್ನು ಕುರಿತು "ದೇವಾ! ವೃಷಭದಾನದಿಂದ ಉತ್ತಮಫಲವುಂಟೆಂದು ಹೇಳುವರು. ಅದರ ಮಹಿಮೆಯೇನು? ನೀನು ಇದುವರೆಗೆ ಹೇಳದೆ ಬಿಟ್ಟಿರುವ ಇತರದಾನಗಳ ಪ್ರಭಾವಗಳನ್ನೆಲ್ಲ ನನಗೆ ತಿಳಿಸಬೇಕು" ಎಂದನು. ಅದಕ್ಕೆ ಕೃಷ್ಣನು 'ಧರ್ಮಪುತ್ರಾ! ನೀನು ಕೇಳಿದ ವಿಚಾರವು ಪವಿತ್ರವೂ, ಪುಣ್ಯಕರವೂ ಆದುದರಿಂದ ಅದನ್ನು ತಿಳಿಸುವೆನು ಕೇಳು. ಒಂದು ವೃಷಭದಾನವು ದಶಗೋದಾನಕ್ಕೆ ಸಮಾನವಾದುದು. ರೋಗಾದಿಗಳಿಲ್ಲದೆ ಒಳ್ಳೇ ಪುಷ್ಟದೇಹವುಳ್ಳುದಾಗಿ, ಸಾಧುವಾಗಿ, ಒಳ್ಳೇ ಭಾರವನ್ನು ಹೊರಬಲ್ಲ ಎತ್ತನ್ನು ಬ್ರಾಹ್ಮಣನಿಗೆ ದಾನಮಾಡಿದರೆ, ಅದರ ಫಲದಿಂದ ದಾನಿಯು, ಅನೇಕ ವರ್ಷಗಳವರೆಗೆ ಗೋಲೋಕದಲ್ಲಿ ಮಹಾತೇಜಸ್ವಿಯಾಗಿ, ತನ್ನ ಕೋರಿಕೆಗಳನ್ನೆಲ್ಲ ಪಡೆದು ಸುಖಿಸುವನು. ಅದೇವಿಧವಾದ ಎರಡು ಉತ್ತಮವೃಷಭಗಳನ್ನು ದಾನಮಾಡಿದವನು ಸಾವಿರ ಗೋದಾನದಿಂದಾದ ಫಲಕ್ಕೆ ಭಾಗಿಯಾಗಿ, ನನ್ನ ಲೋಕಗಳಲ್ಲಿ ಪೂಜಿಸಲ್ಪಡುವನು. ಆ ಎರಡು ವೃಷಭಗಳ ಮೈಯಲ್ಲಿರುವ ರೋಮಗಳ ಸಂಖ್ಯೆಯೆಷ್ಟೋ ಅಷ್ಟುಸಾವಿರ ವರ್ಷಗಳು ಅವನು ನನ್ನ ಲೋಕದಲ್ಲಿರುವನು. ಈ ವೃಷಭದಾನವನ್ನು ಬಡಬ್ರಾಹ್ಮಣನಿಗಲ್ಲದೆ ಹಣವಂತನಿಗೆ ಕೊಟ್ಟು ಫಲವಿಲ್ಲ. ನೀರಿಲ್ಲದ ಕೆರೆಗೆ ಮಳೆಯ ನೀರು ಬೇಕೇ ಹೊರತು, ಸಮುದ್ರಕ್ಕೆ ಮಳೆಯ ನೀರು ಬೇಕಾದುದಿಲ್ಲವಲ್ಲವೆ? ಇಂತಹ ವೃಷಭದಾನದಿಂದ ಪುಣ್ಯವನ್ನು ಪಡೆದವನು, ದಿವ್ಯರೂಪದಿಂದ ದಿವ್ಯವಿಮಾನವನ್ನೇರಿ, ನನ್ನ ಲೋಕಕ್ಕೆ ಬಂದು, ಮಹಾಪ್ರಳಯದವರೆಗೂ ಅಲ್ಲಿ ಸುಖಿಸುವನು.

ಇನ್ನು ಗೃಹದಾನದ ಫಲವನ್ನು ಹೇಳುವೆನು ಕೇಳು. ಶಯ್ಯಾಸನಗಳಿಂದಲೂ, ಪಾತ್ರ ಪದಾರ್ಥ ಧನ ಧಾನ್ಯಗಳಿಂದಲೂ ತುಂಬಿ, ಹಸು, ದಾಸಿ

ಯರು, ಹೊಲಗದ್ದೆಗಳು, ಇವುಗಳ ಸಹಿತವಾಗಿ ದೀಪವನ್ನು ಬೆಳಗಿಸಿಟ್ಟ ಒಂದು ಗೃಹವನ್ನು ಶ್ರೋತ್ರಿಯನಾದ ದರಿದ್ರಬ್ರಾಹ್ಮಣನಿಗೆ ದಕ್ಷಿಣಾದ್ರವ್ಯ ದೊಡನೆ ಯಾವನು ದಾನಮಾಡುವನೋ, ಅವನ ವಿಷಯದಲ್ಲಿ ದೇವತೆಗಳು, ಪಿತೃಗಳು, ಅಗ್ನಿಗಳು, ಋಷಿಗಳು, ಎಲ್ಲರೂ ಪ್ರಸನ್ನರಾಗಿ, ಸೂರ್ಯತೇಜಸ್ಸುಳ್ಳ ದಿವ್ಯವಿಮಾನದಿಂದ ಅವನನ್ನು ಬ್ರಹ್ಮಲೋಕಕ್ಕೆ ಕರೆಸಿಕೊಳ್ಳು ವರು. ಅಲ್ಲಿ ಅವನು ಅನೇಕಸ್ತ್ರೀಯರಿಂದ ತುಂಬಿದ ಸೌವರ್ಣಭವನ ದಲ್ಲಿ ಪ್ರಳಯಾಂತದವರೆಗೆ ಸುಖಿಸುವನು. ಮೇಲುದುಪ್ಪಟಿಯೊಡನೆ ಹಾಸಿಗೆಯನ್ನು ದಾನಮಾಡಿ, ಗಂಧಪುಷ್ಪವಸ್ತ್ರಾದಿಗಳಿಂದಲಂಕರಿಸಿ, ಬ್ರಾಹ್ಮಣನಿಗೆ ಮೃಷ್ಟಾನ್ನಭೋಜನವನ್ನು ಮಾಡಿಸಿ ಸತ್ಕರಿಸಿದವನು, ಗೋದಾನದ ಫಲವನ್ನು ಪಡೆದು ಪಿತೃಲೋಕದಲ್ಲಿ ಗೌರವಿಸಲ್ಪಡುವನು. ಯಾವನು ಒಬ್ಬ ಬ್ರಾಹ್ಮಣನಿಗೆ ಶಿಲ್ಪಶಾಸ್ತ್ರ, ವೇದಾಧ್ಯಯನ, ಇತರ ವಿದ್ಯೆಗಳು, ಮಂತ್ರೌಷಧಗಳು, ಇವನ್ನು ಕಲಿಸಿಕೊಡುವನೋ, ಅವನು ಸಾವಿರಮಂದಿ ಆಹಿತಾಗ್ನಿಬ್ರಾಹ್ಮಣರ ಪೂಜಾಫಲವನ್ನು ಹೊಂದುವನು. ಶಯ್ಯಾದಾನ ಮಾಡಿದವನು ವೇದಗಳಿಂದ ನಡೆಸಲ್ಪಡುವ ವಿಮಾನವನ್ನೇರಿ ಸಪ್ತಋಷಿ ಲೋಕಗಳಲ್ಲಿ ಬ್ರಹ್ಮಜ್ಞರಿಂದ ಪೂಜಿಸಲ್ಪಡುವನು. ಅಲ್ಲಿ ಮೂವತ್ತು ಚತುರ್ಯುಗಗಳವರೆಗೆ ಸುಖಿಸುತ್ತಿದ್ದು, ಆಮೇಲೆ ತಿರುಗಿ ವೇದಜ್ಞನಾದ ಬ್ರಾಹ್ಮಣನಾಗಿ ಜನ್ಮವನ್ನೆತ್ತುವನು. ದಾರಿನಡೆದು ಬಳಲಿಬಂದ ಬ್ರಾಹ್ಮಣನಿಗೆ ವಿಶ್ರಾಂತಿಗಾಗಿ ಸ್ಥಳವನ್ನು ಕೊಟ್ಟವರು, ಅದರ ಫಲದಿಂದ ಹಿಂದಿನ ಒಂದು ವರ್ಷದ ಪಾಪಗಳಿಂದ ಮುಕ್ತರಾಗುವರು. ಮಾರ್ಗಾಯಾಸದಿಂದ ಬಂದ ಸಾಧುಬ್ರಾಹ್ಮಣನ ಪಾದಗಳನ್ನು ತೊಳೆಯುವುದು, ತುಪ್ಪ ಅಥವಾ ಎಣ್ಣೆಯಿಂದ ಅವನ ಕಾಲುಗಳನ್ನು ನೀವುವುದು, ಈ ಎರಡು ಸತ್ಕಾರ್ಯಗಳಿಂದಲೂ, ಕ್ರಮವಾಗಿ ಹಿಂದಿನ ಹತ್ತುಹನ್ನೆರಡು ವರ್ಷಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತರಾಗುವರು. ಇಂತಹ ಬ್ರಾಹ್ಮಣಸತ್ಕಾರದಿಂದ ಸುವರ್ಣಧೇನುವನ್ನು ದಾನಮಾಡಿದ ಪುಣ್ಯಕ್ಕೆ ಪಾತ್ರನಾಗುವನು. ಈ ಸತ್ಕಾರಗಳಿಂದ ದೇವತೆಗಳೂ ಮೆಚ್ಚುವರು. ಅತಿಥಿಯಾಗಿ ಮನೆಗೆ ಬಂದ ಬ್ರಾಹ್ಮಣನಿಗೆ ಇದಿರೆದ್ದು ಗೌರವಿಸುವುದರಿಂದ, ಪಿತೃಗಳೂ, ಕುಶಲಪ್ರಶ್ನೆಯಿಂದ ದೇವತೆಗಳೂ, ಆಸನವನ್ನು ಕೊಡುವುದರಿಂದ ಇಂದ್ರನೂ ತೃಪ್ತ

ರಾಗುವರು. ಈ ಮೂವರು ದೇವತೆಗಳ ಅನುಗ್ರಹದಿಂದ ಆ ಸತ್ಕಾರ್ಯವನ್ನು ಮಾಡಿದವನಿಗೆ ವರ್ಷಾಂತದ ಪಾಪಗಳೆಲ್ಲವೂ ನೀಗುವುವು. ಉತ್ತಮಬ್ರಾಹ್ಮಣನಿಗೆ ಅಂದವಾದ ಆಸನವನ್ನು ದಾನಮಾಡಿದವನು, ವಿಮಾನದಿಂದ ಇಂದ್ರಲೋಕವನ್ನು ಸೇರಿ, ಅಲ್ಲಿ ಇಂದ್ರನಿಗೆ ಯೋಗ್ಯವಾದ ಆಸನದಲ್ಲಿ ಕುಳಿತು, ಅರುವತ್ತುಸಾವಿರವರ್ಷಗಳವರೆಗೆ ದಿವ್ಯಾಂಗನೆಯರ ನಡುವೆ ವಿಹರಿಸುವನು. ಹೀಗೆಯೇ ವಾಹನದಾನವನ್ನು ಮಾಡಿದವನು ಸ್ವರ್ಗದಲ್ಲಿ ಸುಖಿಸಿ, ಆಮೇಲೆ ಭೂಮಿಯಲ್ಲಿ ಉತ್ತಮರಾಜನಾಗಿ ಜನಿಸುವನು. ಯಾವನು ಬ್ರಾಹ್ಮಣನಿಗೆ ಭೋಜನವನ್ನು ಮಾಡಿಸಿ,ಪುಷ್ಪಫಲಭರಿತವಾದ ಒಂದು ಮರವನ್ನು ವಸ್ತ್ರಾಭರಣಗಳಿಂದಲೂ, ಗಂಧಮಾಲ್ಯಗಳಿಂದಲೂ ಅಲಂಕರಿಸಿ, ದಕ್ಷಿಣೆಯೊಡನೆ ದಾನಮಾಡುವನೋ, ಅವನು ದಿವ್ಯವಿಮಾನವನ್ನೇರಿ ಜಯಘೋಷದೊಡನೆ ಇಂದ್ರಲೋಕಕ್ಕೆ ಹೋಗುವನು. ಅಲ್ಲಿನ ಕಲ್ಪವೃಕ್ಷವು ಇವನು ಮನಸ್ಸಿನಲ್ಲಿ ಕೋರಿದುದನ್ನೆಲ್ಲ ಕೊಡುವುದು. ಹೀಗೆ ವೃಕ್ಷದಾನಮಾಡಿದವನು, ಆ ವೃಕ್ಷದಲ್ಲಿ ಪತ್ರ ಪುಷ್ಪ ಫಲಗಳ ಸಂಖ್ಯೆಯೆಷ್ಟೋ ಅಷ್ಟುಸಾವಿರ ವರ್ಷಗಳವರೆಗೆ ಇಂದ್ರಲೋಕದಲ್ಲಿದ್ದು, ಆ ಪುಣ್ಯಫಲವು ತೀರಿದಮೇಲೆ ತಿರುಗಿ ಮನುಷ್ಯಜನ್ಮವನ್ನೆತ್ತುವಾಗ,ಉತ್ತಮರಾಜನಾಗಿ ರಾಜ್ಯವನ್ನಾಳುವನು. ಯಾವನು ನನಗಾಗಿ ಆಲಯವನ್ನು ಕಟ್ಟಿಸಿ ಪೂಜೆಗಳನ್ನು ನಡೆಸುವನೋ, ಅವನು ಸಾವಿರ ಅಶ್ವಮೇಧಯಾಗಗಳ ಫಲವನ್ನು ಹೊಂದಿ, ನನ್ನ ಸಾಲೋಕ್ಯವನ್ನು ಪಡೆಯುವನು. ಅವನಿಗೆ ಅಲ್ಲಿಂದ ಹಿಂತಿರುಗುವ ಸಂಭವವೇ ಇರದು. ಯಾವನು ದೇವಾಲಯದಲ್ಲಿಯೂ, ಬ್ರಾಹ್ಮಣಗೃಹದಲ್ಲಿಯೂ, ದನಗಳ ಕೊಟ್ಟಿಗೆಯಲ್ಲಿಯೂ, ಅಂಗಳದಲ್ಲಿಯೂ ಧರ್ಮಾರ್ಥವಾಗಿ ದೀಪವನ್ನಿಡಿಸುವನೋ, ಅವನು ಸ್ವರ್ಣವಿಮಾನವನ್ನೇರಿ, ದೇವತೆಗಳಿಂದ ಸೇವಿಸಲ್ಪಡುತ್ತ ಆದಿತ್ಯಲೋಕವನ್ನು ಸೇರಿ, ಅಲ್ಲಿ ಅನೇಕವರ್ಷಗಳವರೆಗೆ ಸುಖದಿಂದಿದ್ದು, ತಿರುಗಿ ಉತ್ತಮಬ್ರಾಹ್ಮಣಜನ್ಮವನ್ನೆತ್ತುವನು. ದೇವಾಲಯಗಳು, ಬ್ರಾಹ್ಮಣಶ್ರೇಣಿಗಳು, ಅಂಗಳಗಳು, ಬೀದಿಯ ಚೌಕಗಳು, ಇಂತಹ ಸ್ಥಳಗಳಲ್ಲಿ ಹಗಲೋ, ರಾತ್ರಿಯೋ ಧರ್ಮಶ್ರವಣಗಳನ್ನೂ, ಗಾನವಾದ್ಯಗಳನ್ನೂ ಮಾಡಿಸುವವನಾವನೋ, ಅವನಲ್ಲಿ ದೇವತೆಗಳೂ, ಪಿತೃಗಳೂ ಪ್ರಸನ್ನರಾಗಿ, ಕಾಮುಗ

ಮನವುಳ್ಳ ವಿಮಾನದಿಂದ ಅವನನ್ನು ತಮ್ಮಲೋಕಕ್ಕೆ ಕರೆಸಿಕೊಳ್ಳುವರು. ಅಲ್ಲಿ ಅವನು ಅಪ್ಸರಸ್ಸುಗಳಿಂದ ಸೇವಿತನಾಗಿ ವಿಹರಿಸುತ್ತಿದ್ದು, ಆಮೇಲೆ ತಿರುಗಿ ಶ್ರೀಮಂತನಾದ ಬ್ರಾಹ್ಮಣನಾಗಿ ಹುಟ್ಟುವನು. ಯಾವನು ಮಂಟಪಗಳು, ಸಭೆಗಳು, ಸಭೆಯ ಸುತ್ತಿನ ಪಡಸಾಲೆಗಳು, ಇಂತಹ ಸ್ಥಳದಲ್ಲಿ ವಿಸ್ತಾರವಾದ ದೊಡ್ಡ ಅಗ್ನಿಕುಂಡಗಳನ್ನಾಗಲಿ, ವೇದಿಕೆಗಳನ್ನಾಗಲಿ ಮಾಡಿಸಿ, ಪುಷ್ಯ ಮೊದಲಾಗಿ ಛಳಿಗಾಲದ ನಾಲ್ಕು ತಿಂಗಳುಗಳವರೆಗೆ ಬೆಂಕಿಯನ್ನುರಿಸುವಹಾಗೆ ಮಾಡುವನೋ, ಮತ್ತು ಆ ನಾಲ್ಕು ತಿಂಗಳು ಮುಗಿದಮೇಲೆ ನನ್ನ ಪ್ರೀತಿಗಾಗಿ ಪಾಯಸಾನ್ನದಿಂದ ಬ್ರಾಹ್ಮಣಸಂತರ್ಪಣವನ್ನು ಮಾಡಿಸಿ, ತನ್ನ ಶಕ್ತಿಗನುಸಾರವಾಗಿ ದಕ್ಷಿಣೆಯನ್ನು ಕೊಡುವನೋ, ಅವನ ವಿಷಯದಲ್ಲಿ ನಾನೂ, ರುದ್ರನೂ, ಪಿತೃಗಳೂ, ಅಗ್ನಿಗಳೂ ಪ್ರೀತರಾಗುವೆವು. ಇದರಿಂದ ಅವನು ಅರುವತ್ತಾರುಸಾವಿರವರ್ಷಗಳವರೆಗೆ ನನ್ನ ಲೋಕದಲ್ಲಿ ಪೂಜಿತನಾಗಿ, ಆಮೇಲೆ ಭೂಲೋಕದಲ್ಲಿ ಜನಿಸುವಾಗ ಕೂಡ, ವೇದಪಾರಂಗತನೂ, ರಾಜಪೂಜಿತನೂ ಆದ ಬ್ರಾಹ್ಮಣನಾಗಿ ಹುಟ್ಟುವನು. ಒಂದುವರ್ಷಕಾಲದವರೆಗೆ ದರಿದ್ರನಾದ ಶ್ರೋತ್ರಿಯಬ್ರಾಹ್ಮಣನ ಪೋಷಣೆಯಿಂದ ಕೋಟಿ ಗೋದಾನದ ಫಲವನ್ನು ಹೊಂದುವನು. ಅವನು ದಿವ್ಯಸ್ತ್ರೀಯರಿಂದ ಕೂಡಿದ ವಿಮಾನದಲ್ಲಿ ನನ್ನ ಲೋಕಕ್ಕೆ ಬಂದು, ಅಲ್ಲಿ ಅನೇಕಕೋಟಿವರ್ಷಗಳವರೆಗಿದ್ದು ತಿರುಗಿ ವೇದವಿತ್ತಾದ ಬ್ರಾಹ್ಮಣನಾಗಿ ಹುಟ್ಟುವನು. ಯಾವನು ಕರಗ, ಗಿಂಡಿ, ಮುಂತಾದ ತೀರ್ಥಪಾತ್ರೆಗಳನ್ನಾಗಲಿ, ದೊಡ್ಡ ಪಾತ್ರೆಗಳನ್ನಾಗಲಿ, ಶ್ರೋತ್ರಿಯನಾದ ಬಡಬ್ರಾಹ್ಮಣನಿಗೆ ದಾನಮಾಡುವನೋ, ಅವನು ಬ್ರಹ್ಮಕೂರ್ಚಪಾನದ ಫಲವನ್ನು ಹೊಂದುವನು. ಜಲಪಾತ್ರವನ್ನು ದಾನಮಾಡಿದ ಫಲದಿಂದ ಅವನು ಸರ್ವಸೌಭಾಗ್ಯಯುಕ್ತನಾಗಿ, ಸರ್ವೇಂದ್ರಿಯಸೌಖ್ಯಗಳಿಂದ ಸುಖಿಸುತಿದ್ದು, ಆಮೇಲೆ ಹಂಸ ಸಾರಸಪಕ್ಷಿಗಳಮೇಲೆ ಹೂಡಿದ ದಿವ್ಯವಿಮಾನದಿಂದ ಗಂಧರ್ವಸೇವಿತವಾದ ವರುಣಲೋಕಕ್ಕೆ ಹೋಗುವನು. ಬೇಸಗೆಯ ಮೂರುತಿಂಗಳಕಾಲದಲ್ಲಿ ಪ್ರಾಣಿಗಳ ದಾಹಶಾಂತಿಗಾಗಿ ನೀರನ್ನೊದಗಿಸಿದವನು, ಕೋಟಿ ಕಪಿಲೆಗಳನ್ನು ದಾನಮಾಡಿದ ಪುಣ್ಯಕ್ಕೆ ಭಾಗಿಯಾಗಿ, ಚಂದ್ರಸಮಾನವಾದ ಕಾಂತಿಯುಳ್ಳ ವಿಮಾನವನ್ನೇರಿ, ಚಂದ್ರಲೋಕಕ್ಕೆ

ಹೋಗುವನು. ಅಲ್ಲಿ ಮೂವತ್ತುಕೋಟಿ ಯುಗಗಳವರೆಗೆ ಗಂಧರ್ವರಿಂದ ಸೇವಿತನಾಗಿ ಸುಖದಿಂದಿದ್ದು, ಆಮೇಲೆ ವೇದವಿದನಾದ ಬ್ರಾಹ್ಮಣನಾಗಿ ಜನಿಸುವನು. ತಲೆಗೆ ಅಭ್ಯಂಗನಕ್ಕಾಗಿ ಎಣ್ಣೆ ನೀರನ್ನು ಕೊಡುವುದು, ವಸ್ತ್ರ ದಾನ ಮುಂತಾದ ದಾನಗಳು, ಇವುಗಳಿಂದ ಲಭಿಸುವ ಪುಣ್ಯವು ಮನು ಷ್ಯನನ್ನು ಮುಂದಿನ ಜನ್ಮದಲ್ಲಿ ರೂಪೈಶ್ವರ್ಯಸಂಪನ್ನನನ್ನಾಗಿಯೂ, ತೇಜಸ್ವಿಯನ್ನಾಗಿಯೂ, ಸ್ತ್ರೀಯರಿಗೆ ಪ್ರಿಯನನ್ನಾಗಿಯೂ ಮಾಡುವುದು. ಪಾದುಕೆಗಳನ್ನೂ, ಛತ್ರಗಳನ್ನೂ ದಾನಮಾಡಿದವನು ಸುವರ್ಣರಥದಿಂದ ಇಂದ್ರಲೋಕವನ್ನು ಸೇರಿ ಸುಖಿಸುವನು. ಮರದ ಪಾದುಕೆಯನ್ನು ದಾನಮಾಡಿದವನು ವೃಕ್ಷ ನಿರ್ಮಿತ ವಿಮಾನಗಳಿಂದ ಧರ್ಮರಾಜಪುರ ವನ್ನು ಸೇರಿ ದೇವತೆಗಳಿಂದ ಸೇವಿಸಲ್ಪಡುವನು. ಒಂದು ಹಲ್ಲುಕಡ್ಡಿ ಯನ್ನು ದಾನಮಾಡಿದವನುಕೂಡ, ಬುದ್ಧಿ, ಐಶ್ವರ್ಯ, ಸೌಂದರ್ಯಾದಿ ಗಳಿಂದ ಕೂಡಿದವನಾಗಿ ಸುಖಿಸುವನು. ಹಾಲು, ಮೊಸರು, ತುಪ್ಪ, ಬೆಲ್ಲ, ಜೇನು ಇವುಗಳನ್ನು ಉತ್ತಮಬ್ರಾಹ್ಮಣರಿಗೆ ದಾನಮಾಡಿದವನು ಎತ್ತು, ಕುದುರೆ, ಮೊದಲಾದ ವಾಹನಗಳುಳ್ಳ ವಿಮಾನಗಳನ್ನೇರಿ, ಸರ್ವಾ ಲಂಕಾರಭೂಷಿತನಾಗಿ, ಅಪ್ಸರಸ್ಸುಗಳಿಂದ ಸೇವಿಸಲ್ಪಡುತ್ತ ಗಂಧರ್ವಗಾನ ದೊಡನೆ ಇಂದ್ರಲೋಕವನ್ನು ಸೇರುವನು. ಅಲ್ಲಿ ದೇವಸಮಾನನಾಗಿ ಅರುವತ್ತುಸಾವಿರ ವರ್ಷಗಳಿದ್ದು, ಆಮೇಲೆ ತಿರುಗಿ ಈ ಲೋಕದಲ್ಲಿ ಭೋ ಗಭಾಗ್ಯಗಳಿಂದಕೂಡಿದ ಮಾನವನಾಗಿ ಜನಿಸುವನು. ವೈಶಾಖಮಾಸದ ವಿಶಾಖಾನಕ್ಷತ್ರದಲ್ಲಿ ಯಮದೇವನ ಪ್ರೀತಿಗಾಗಿ ಯಾರು ಬ್ರಾಹ್ಮಣರನ್ನು ಕರೆದು ಪೂಜಿಸಿ, ಎಳ್ಳು, ಬೆಲ್ಲ, ಇವೆರಡನ್ನೂ ದಾನಮಾಡುವರೋ, ಅವರು ಗೋದಾನದ ಫಲವನ್ನು ಹೊಂದಿ, ಯಮಲೋಕದಲ್ಲಿ ಪೂಜಿತರಾಗಿ, ಆಮೇಲೆ ಪುನರ್ಜನ್ಮವನ್ನೆತ್ತುವಾಗ ರಾಜರಾಗಿ ಜನಿಸುವರು. ಆ ದಿನ ದಲ್ಲಿ ಬ್ರಾಹ್ಮಣಭೋಜನಮಾಡಿಸಿ, ವಿಶೇಷ ದಕ್ಷಿಣೆಗಳನ್ನು ಕೊಟ್ಟು, ಜಲಪಾತ್ರೆಗಳನ್ನು ದಾನಮಾಡಿದವರು, ಸೂರ್ಯಕಾಂತಿಯುಳ್ಳ ವಿಮಾನ ಗಳಿಂದ ವರುಣಲೋಕವನ್ನು ಸೇರುವರು. ಅಲ್ಲಿ ದಿವ್ಯಸ್ತ್ರೀಯರೊಡಗೂಡಿ ಸಮಸ್ತ ಕಾಮಭೋಗಗಳನ್ನೂ ಅನುಭವಿಸುತಿದ್ದು, ಪುನರ್ಜನ್ಮದಲ್ಲಿ ಭೋಗಭಾಗ್ಯಸಂಪನ್ನರಾದ ಬ್ರಾಹ್ಮಣರಾಗಿ ಜನಿಸುವರು. ಅತಿಥಿಭೋ

ಜನವನ್ನು ಮಾಡಿಸಿದಮೇಲೆ ತಾನು ಭೋಜನಮಾಡುವ ಪದ್ಧತಿಯನ್ನೇ ಮುಖ್ಯವ್ರತವನ್ನಾಗಿ ಆಚರಿಸುತ್ತ, ಸತ್ಯವಾಕ್ಯವುಳ್ಳವನೂ, ಕ್ರೋಧರಹಿತನೂ, ಶುಚಿಯೂ, ನಿತ್ಯಸ್ನಾನರತನೂ ಆದವನು, ದಿವ್ಯ ವಿಮಾನದಿಂದ ಇಂದ್ರಲೋಕಕ್ಕೆ ಹೋಗಿ, ಪುನರ್ಜನ್ಮದಲ್ಲಿ ವೇದವಿತ್ತಾದ ದ್ವಿಜನಾಗಿ ಜನಿಸುವನು. ಒಂದುವರ್ಷಕಾಲದವರೆಗೆ ಏಕಭುಕ್ತವನ್ನು (ಒಂದೇ ಹೊತ್ತು ಭೋಜನವನ್ನು) ಮಾಡುತ್ತ, ಕ್ರೋಧವನ್ನು ಜಯಿಸಿ, ಬ್ರಹ್ಮಚಾರಿಯಾಗಿ, ಸತ್ಯಶೌಚಪರನಾದವನೂ ಮೇಲೆಹೇಳಿದಂತೆಯೇ ಸ್ವರ್ಗಸುಖವನ್ನನುಭವಿಸಿ, ಪುನರ್ಜನ್ಮದಲ್ಲಿ ಉತ್ತಮಬ್ರಾಹ್ಮಣನಾಗಿ ಜನಿಸುವನು. ಪ್ರತಿದಿನವೂ ನಾಲ್ಕನೆಯ ಜಾಮದಲ್ಲಿ ಭುಜಿಸುತ್ತ, ಬ್ರಹ್ಮಚಾರಿಯೂ, ಜಿತೇಂದ್ರಿಯನೂ ಆಗಿ, ಒಂದುವರ್ಷಕಾಲದವರೆಗೆ ನಿಯಮದಿಂದಿದ್ದವನು, ವಿಚಿತ್ರಧ್ವಜದಿಂದಲೂ, ವಿಚಿತ್ರವಾದ ನವಿಲಿನಿಂದಲೂ ಕೂಡಿದ ವಿಮಾನದಿಂದ ಮಹೇಂದ್ರಲೋಕವನ್ನು ಸೇರಿ, ಅಲ್ಲಿ ಹನ್ನೆರಡು ಕೋಟಿವರ್ಷಗಳು ದಿವ್ಯಸ್ತ್ರೀಯರಿಂದ ಸೇವಿಸಲ್ಪಡುತ್ತ ಸಂತೋಷದಿಂದಿದ್ದು, ಪುನರ್ಜನ್ಮಕಾಲದಲ್ಲಿ ಸತ್ಯಸಂಧನೂ, ವಿದ್ವಾಂಸನೂ, ವೇದಪಾರಂಗತನೂ, ಕ್ಷಮಾವಂತನೂ ಆದ ಉತ್ತಮಬ್ರಾಹ್ಮಣನಾಗಿ ಜನಿಸುವನು. ಹಗಲಿನ ಆರನೆಯಕಾಲದಲ್ಲಿ ಭುಜಿಸುತ್ತ, ಶುದ್ಧನೂ, ಬ್ರಹ್ಮಚಾರಿಯೂ ಆಗಿ ಒಂದುವರ್ಷಕಾಲವಿದ್ದವನು, ಸೂರ್ಯಪ್ರಭೆಯುಳ್ಳ ವಿಮಾನಗಳಿಂದ ನನ್ನ ಲೋಕಕ್ಕೆ ಬಂದು, ಅಲ್ಲಿ ದಿವ್ಯಸ್ತ್ರೀಯರಿಂದಲೂ, ಸಾಧ್ಯರಿಂದಲೂ, ಮರುತ್ತುಗಳಿಂದಲೂ ಸೇವಿತನಾಗಿ ಸದಾ ನನ್ನ ದರ್ಶನಾನಂದವನ್ನನುಭವಿಸುತ್ತಿರುವನು. ಯಾವನು ನನ್ನಲ್ಲಿ ಭಕ್ತಿಯಿಂದ ಪಕ್ಷೋಪವಾಸವನ್ನು ಮಾಡಿ, ಆ ಉಪವಾಸಾಂತದಲ್ಲಿ ಶ್ರೋತ್ರಿಯಬ್ರಾಹ್ಮಣರಿಗೆ ಸಂತರ್ಪಣವನ್ನು ಮಾಡಿಸುವನೋ, ಅವನು ದಿವ್ಯವಿಮಾನದಿಂದ ನನ್ನ ಲೋಕಕ್ಕೆ ಬಂದು, ಅಲ್ಲಿ ಮೂವತ್ತುಕೋಟಿವರ್ಷಗಳವರೆಗೆ ಆನಂದದಿಂದಿದ್ದು, ಪುನರ್ಜನ್ಮಕಾಲದಲ್ಲಿ ವೇದಪಾರಂಗತನಾದ ಬ್ರಾಹ್ಮಣನಾಗಿ ಜನಿಸುವನು. ಮಾಸೋಪವಾಸವನ್ನು ಮಾಡುತ್ತ, ಜಿತೇಂದ್ರಿಯನಾಗಿ, ಕ್ರೋಧಾದಿಗಳನ್ನು ಜಯಿಸಿ ಶುದ್ಧನಾಗಿದ್ದು, ಆ ನಿಯಮವು ಮುಗಿದ ಮೇಲೆ ಬ್ರಾಹ್ಮಣಭೋಜನವನ್ನು ಮಾಡಿಸಿ, ದಕ್ಷಿಣೆಗಳನ್ನು ಕೊಟ್ಟು

ತೃಪ್ತಿಗೊಳಿಸಿದವನು, ಸಿಂಹಯುಕ್ತವಾದ ವಿಮಾನದಿಂದ ಬ್ರಹ್ಮಲೋಕವನ್ನು ಸೇರಿ, ಅಲ್ಲಿ ದೇವರ್ಷಿಗಣಗಳಿಂದ ಸೇವಿಸಲ್ಪಡುತ್ತ ನೂರು ಕೋಟಿವರ್ಷಗಳವರೆಗೆ ಸುಖದಿಂದಿದ್ದು, ಆಮೇಲೆ ಚತುರ್ವೇದಗಳಲ್ಲಿಯೂ ಪಾರಂಗತನೆನಿಸಿದ ಬ್ರಾಹ್ಮಣನಾಗಿ ಈ ಲೋಕದಲ್ಲಿ ಜನ್ಮವನ್ನೆತ್ತುವನು. ಅವನು ಮೂವತ್ತುಜನ್ಮಗಳವರೆಗೆ ಆರೋಗದೃಢಕಾಯನಾಗಿರುವನು. ಯಾವನು ಶುಚಿಯಾಗಿ, ಶಾಂತನಾಗಿ, ಸಮಸ್ತ ಕರ್ಮಗಳನ್ನೂ ತ್ಯಜಿಸಿ, ಏಕಾಗ್ರತೆಯಿಂದ ನನ್ನಲ್ಲಿಯೇ ನಟ್ಟಮನಸ್ಸುಳ್ಳವನಾಗಿ, ಮಹಾಪ್ರಸ್ಥಾನವನ್ನುದ್ದೇಶಿಸಿ ಹೊರಡುವನೋ, ಅವನು ಸುವರ್ಣಮಣಿಖಚಿತವಾದ ವಿಮಾನವನ್ನೇರಿ ಸ್ವರ್ಗವನ್ನು ಸೇರಿ, ನೂರುಕೋಟಿವರ್ಷಗಳವರೆಗೆ ದೇವತೆಗಳಿಂದಲೂ, ದಿವ್ಯಸ್ತ್ರೀಯರಿಂದಲೂ ಪೂಜಿಸಲ್ಪಡುತ್ತಿರುವನು. ಅಲ್ಲಿಂದ ಪುನರ್ಜನ್ಮವನ್ನು ಹೊಂದುವಾಗ ರಾಜರಿಗೆಲ್ಲ ಚಕ್ರವರ್ತಿಯಾಗಿ ಪ್ರಭುತ್ವವನ್ನು ಮಾಡುವನು. "ನಮೋ ಬ್ರಹ್ಮಣ್ಯದೇವಾಯ" ಎಂಬ ಮಂತ್ರವನ್ನುಚ್ಚರಿಸಿ, ನನ್ನಲ್ಲಿ ಮನಸ್ಸನ್ನಿಟ್ಟು, ಜಿತೇಂದ್ರಿಯನಾಗಿ, ಶಾಂತಚಿತ್ತನಾಗಿ, ಪ್ರಾಯೋಪವೇಶವನ್ನು ನಡೆಸಿದವನೂ, ಮಹಾತೇಜಸ್ವಿಯೂ, ಕಾಮಗಮನವುಳ್ಳವನೂ, ಕಾಮರೂಪಿಯೂ ಆಗಿ, ದಿವ್ಯವಿಮಾನದಿಂದ ಶಾಶ್ವತವಾದ ಲೋಕಗಳನ್ನು ಹೊಂದುವನು. ಮೇಲೆ ಮೇಲೆ ಸ್ವರ್ಗದಿಂದ ಸ್ವರ್ಗಕ್ಕೆ ಹೋಗುತ್ತ, ಕೊನೆಗೆ ನನ್ನ ಲೋಕವನ್ನು ಸೇರಿ ಅಲ್ಲ ಪ್ರಳಯಾಂತದವರೆಗೆ ಸುಖವಾಗಿರುವನು. ಹೀಗೆಯೇ ಯಾವನು ಅಗ್ನಿಪ್ರವೇಶ ಮಾಡುವಾಗಲೂ ನನ್ನಲ್ಲಿ ನಟ್ಟಮನಸ್ಸುಳ್ಳವನೋ ಅವನು ದಿವ್ಯವಿಮಾನದಿಂದ ನನ್ನ ಲೋಕವನ್ನು ಸೇರಿ, ಹಲವು ಕೋಟಿ ವರ್ಷಗಳವರೆಗೆ ಎಡೆಬಿಡದೆ ನನ್ನ ದರ್ಶನಾನಂದವನ್ನು ಅನುಭವಿಸುತಿದ್ದು, ಅಮೇಲೆ ತಿರುಗಿ ಉತ್ತಮಬ್ರಾಹ್ಮಣಕುಲದಲ್ಲಿ ಜನಿಸುವನು. ಯಾವನು ನನ್ನನ್ನು ಮೆಚ್ಚಿಸುವುದಕ್ಕಾಗಿ ನನ್ನಲ್ಲಿ ಶರಣಾಗತನಾಗಿ, ಶುದ್ಧವ್ರತವನ್ನು ಹಿಡಿದು, 'ನಮೋ ಬ್ರಹ್ಮಣ್ಯದೇವಾಯ' ಎಂಬ ಮಂತ್ರವನ್ನು ಪುನಶ್ಚರಣಮಾಡುವನೋ, ಅವನು ಸೂರ್ಯಸಮಾನವಾದ ವಿಮಾನದಿಂದ ನನ್ನ ಲೋಕಕ್ಕೆ ಬಂದು, ಕೋಟಿವರ್ಷಗಳವರೆಗೆ ಅಲ್ಲಿ ಸಂತೋಷದಿಂದಿದ್ದು ಜನ್ಮಾಂತರದಲ್ಲಿ ರಾಜನಾಗುವನು. ಯಾವನು ನನ್ನ ಮೂರ್ತಿಯಲ್ಲಿಯೂ

ಗಲಿ, ವಿಶೇಷವಾಗಿ ಚತುರ್ದಶಿಯ ದಿನದಲ್ಲಿ ರುದ್ರಮೂರ್ತಿಯ ದಕ್ಷಿಣಪಾರ್ಶ್ವದಲ್ಲಿಯಾಗಲಿ, ತನ್ನ ಚಿತ್ತವನ್ನು ನೆಲೆಗೊಳಿಸುವನೋ, ಅವನು ದೇವರ್ಷಿ ಸಿದ್ಧಾದಿಗಳಿಂದ ಪೂಜಿಸಲ್ಪಡುತ್ತ, ಗಂಧರ್ವರಿಂದ ಸ್ತುತಿಸಲ್ಪಡುತ್ತ, ನನ್ನಲ್ಲಿಯೋ ಅಥವಾ ರುದ್ರನಲ್ಲಿಯೋ ಸೇರುವನು. ಅಂತವನಿಗೆ ಪುನರ್ಜನ್ಮವೇ ಇಲ್ಲ. ಯಾವನು ಗೋವುಗಳ, ಸ್ತ್ರೀಯರ, ಗುರುವಿನ ಅಥವಾ ಬ್ರಾಹ್ಮಣರ ನಿಮಿತ್ತವಾಗಿ ಕಷ್ಟವನ್ನನುಭವಿಸುವನೋ, ಅಥವಾ ವಧಿಸಲ್ಪಡುವನೋ, ಅವನು ಇಂದ್ರಲೋಕವನ್ನು ಸೇರಿ, ಅಲ್ಲಿ ಕಾಮುಗಮನವುಳ್ಳ ಸುವರ್ಣವಿಮಾನದಲ್ಲಿ ದೇವಸ್ತ್ರೀಯರಿಂದ ಸೇವಿಸಲ್ಪಡುತ್ತ ಮನ್ವಂತರ ಕಾಲದವರೆಗೆ ಆನಂದಿಸುತ್ತಿರುವನು. ಬಾಯಿಂದ ಹೇಳಿದುದನ್ನು ಕೊಡದಿರುವುದು, ಕೊಟ್ಟುದನ್ನು ತಿರುಗಿ ಕಿತ್ತುಕೊಳ್ಳುವುದು, ಇಂತಹ ಕಾರ್ಯವನ್ನು ಮಾಡಿದವರಿಗೆ ಬಾಲ್ಯದಿಂದಲೂ ಅವರು ಮಾಡಿದ ದಾನಫಲಗಳೆಲ್ಲ ನಶಿಸುವುವು. ಓ ರಾಜಾ! ಮುಖ್ಯವಾಗಿ ಗೋದಾನವನ್ನು ಮಾಡದವನು ಮುಂದೆ ಹಾಲನ್ನು ಕುಡಿಯಲಾರನು. ಭೂದಾನವನ್ನು ಮಾಡದವನು ಮುಂದೆ ಭೂಮಿಯನ್ನನುಭವಿಸಲಾರನು. ಉತ್ತಮಪಾತ್ರಕ್ಕೆ ಯಾವಯಾವ ಕೋರಿಕೆಗಳನ್ನೀಡೇರಿಸುವನೋ ಆಯಾ ಅಭೀಷ್ಟಗಳನ್ನೆಲ್ಲ ಅವನು ಸ್ವರ್ಗಲೋಕದಲ್ಲಿ ಅನುಭವಿಸುವನು. ಇಷ್ಟವಾಗಿಯೂ, ನ್ಯಾಯಾರ್ಜಿತವಾಗಿಯೂ ಇರುವ ದ್ರವ್ಯವನ್ನು ಗುಣವಂತನಾಗಿರತಕ್ಕವನಿಗೇ ದಾನಮಾಡಬೇಕು. ಅದು ಅವನಿಗೆ ಅಕ್ಷಯುವಾಗಿರುವುದು. ಮೂರು ರಾತ್ರಿಗಳ ಉಪವಾಸಮಾಡದೆ, ತೀರ್ಥಯಾತ್ರೆಗಳನ್ನೂ ನಡೆಸದೆ, ಸುವರ್ಣದಾನ, ಗೋದಾನಗಳನ್ನೂ ಮಾಡದೆ ಇರುವವನು, ಎಂದೆಂದಿಗೂ ದರಿದ್ರನಾಗಿಯೇ ಹುಟ್ಟುತ್ತಿರುವನು. ಶ್ರೋತ್ರಿಯನಿಗೆ ಕೊಡದ ದಾನವಾವುದೂ ಫಲಕಾರಿಯಲ್ಲ. ಶ್ರೋತ್ರಿಯರು ಊಟಮಾಡದ ಮನೆಯಲ್ಲಿ ದೇವತೆಗಳೂ ಭುಜಿಸುವುದಿಲ್ಲ. ಶ್ರೋತ್ರಿಯಬ್ರಾಹ್ಮಣರಿಗಿಂತಲೂ ಮೇಲಾದ ದೈವವಿಲ್ಲ! ಶ್ರೋತ್ರಿಯರಿಗೆ ಅನ್ನವನ್ನಿಕ್ಕುವುದಕ್ಕಿಂತಲೂ ಮೇಲಾದ ನಿಧಿಯಿಲ್ಲ.

ಇದು ನೂರಮೂರನೆಯ ಅಧ್ಯಾಯವು.



{ಕೃಷ್ಣನು ಧರ್ಮರಾಜನಿಗೆ ಪಂಚಮಹಾಯಜ್ಞಗಳು, ಸ್ನಾನ ವಿಧಿಗಳು, ವೈಷ್ಣವಲಕ್ಷಣಗಳು, ವಿಷ್ಣುಪೂಜೆಗೆ ಯೋಗ್ಯವಾದ ಪುಷ್ಪಗಳು, ಮುಂತಾದುವನ್ನೆಲ್ಲ ವಿವರಿಸಿದುದು.}

ಆಗ ಯುಧಿಷ್ಠಿರನು ತಿರುಗಿ ಕೃಷ್ಣನನ್ನು ಕುರಿತು 'ಓ ವಾಸುದೇವಾ! ಇಂದ್ರಿಯಸಹಿತವಾದ ಶರೀರವನ್ನು ಆತ್ಮವು ಬಿಟ್ಟುಹೋಗುವಾಗ, ನಡುವೆ ಇರುವ ಪ್ರಾಣನ ಗತಿಯು ಎಂಥದು?' ಎಂದು ಕೇಳಲು, ಕೃಷ್ಣನು 'ಓ ರಾಜಾ! ಪಂಚತ್ವವೆಂದರೆ ಪಂಚಭೂತಗಳ ಅಗಲಿಕೆಯೇ ಹೊರತು ಬೇರೆಯಲ್ಲ. ಆತ್ಮನೊಡನೆ ಅವುಗಳ ಸಂಯೋಗವೇ ಜನನವು. ಅವುಗಳ ಅಗಲಿಕೆಯೇ ಮರಣವು. ಇದುಹೊರತು ಜೀವನಿಗೆ ಹುಟ್ಟುಸಾವೆಂಬುದೇ ಇಲ್ಲ. ಮನುಷ್ಯನು ತಾನು ನಡೆಸಿದ ಪುಣ್ಯಪಾಪಗಳ ಫಲವನ್ನೆಲ್ಲ ಇಹಲೋಕಯಾತ್ರೆಯಿಂದ ಅನುಭವಿಸುವನು. ಲೋಕದಲ್ಲಿ ಯಾವ ಪ್ರಾಣಿಗಳಿಗೂ ಮರಣವೆಂಬುದೇ ಇಲ್ಲ. ಪಂಚಮಹಾಯಜ್ಞಗಳನ್ನು ಯಾರು ಮಾಡುವರೋ ಅವರಿಗೆ ಪಂಚತ್ವವೇ (ಮರಣವು) ಶ್ರೇಷ್ಠವೆನಿಸುವುದು. ಮರಣವೆಂಬುದು ಯಾವಾಗಲೂ ಪಾಪಿಗಳ ವಿಷಯದಲ್ಲಿಯೇಹೊರತು ಪುಣ್ಯಗತಿಯುಳ್ಳವರಿಗೆ ಅದು ಮರಣವೆನಿಸುವುದಿಲ್ಲ. ತನ್ನ ಕರ್ತವ್ಯಗಳನ್ನು ನಡೆಸಿ ಕೃತಾರ್ಥನೆನಿಸದವನೇ ಮೃತ್ಯುವಿಗಾಗಿ ಭಯಪಡುವನು. ಕೃತಕೃತ್ಯನಾದವನು ಮೃತ್ಯುವನ್ನು ತನಗೆ ಪ್ರಿಯನಾದ ಅತಿಥಿಯಂತೆ ಆದರದಿಂದ ನಿರೀಕ್ಷಿಸುವನು' ಎಂದನು. ಆಮೇಲೆ ತಿರುಗಿ ಯುಧಿಷ್ಠಿರನು ಪ್ರಶ್ನೆಮಾಡುವನು. 'ಕೃಷ್ಣಾ! ದ್ವಿಜರು ನಡೆಸಬೇಕಾದ ಪಂಚಯಜ್ಞಗಳ ಹೆಸರನ್ನೂ, ಅವುಗಳ ಕ್ರಮವನ್ನೂ ನನಗೆ ತಿಳಿಸಬೇಕು' ಎನಲು, ಕೃಷ್ಣನು 'ಗೃಹಸ್ಥನು ಯಾವುದರಿಂದ ಬ್ರಹ್ಮಸಾಲೋಕ್ಯವನ್ನು ಹೊಂದುವನೋ, ಆ ಪಂಚಯಜ್ಞದ ವಿಧಿಯನ್ನು ತಿಳಿಸುವೆನು ಕೇಳು. ಋಭು (ದೇವ) ಯಜ್ಞ, ಬ್ರಹ್ಮಯಜ್ಞ, ಭೂತಯಜ್ಞ, ನೃಯಜ್ಞ, ಪಿತೃಯಜ್ಞಗಳೆಂದು ಆ ಪಂಚಯಜ್ಞಗಳಿಗೆ ಹೆಸರು. ಋಭುಯಜ್ಞವೆಂದರೆ ತರ್ಪಣವು. ಬ್ರಹ್ಮಯಜ್ಞವೆಂಬುದು ವೇದಾಧ್ಯಯನವು. ಭೂತಯಜ್ಞವೆಂದರೆ ಬಲಿ! ನೃಯಜ್ಞವೆಂದರೆ ಅತಿಥಿಪೂಜೆ. ಪಿತೃಗ

ಳನ್ನುದ್ದೇಶಿಸಿ ಮಾಡತಕ್ಕ ಕರ್ಮವು ಪಿತೃಯಜ್ಞವೆನಿಸುವುದು. ಹುತ, ಅಹುತ, ಪ್ರಹುತ, ಪ್ರಾಶಿತ, ಬಲಿದಾನಗಳೆಂದು ಯಜ್ಞಗಳಲ್ಲಿ ಬೇರೆ ಐದು ಬಗೆಯುಂಟು. ವೈಶ್ವದೇವಾದಿ ಹೋಮಕರ್ಮಗಳು ಹುತವೆನಿಸುವುವು. ದಾನಮಾಡಲ್ಪಟ್ಟುದು ಅಹುತವು. ಬ್ರಾಹ್ಮಣರಿಗೆ ಭೋಜನಮಾಡಿಸಿದುದು ಪ್ರಹುತವು. ಪ್ರಾಣಾಗ್ನಿಹೋಮಹೋತ್ರವೆಂಬುದು (ಭೋಜನವು) ಪ್ರಾಶಿತವು. ಬಲಿಕರ್ಮವು ಪಾಕಯಜ್ಞದಲ್ಲಿ ಸೇರುವುದು. ಕೆಲವರು ಈ ಪಾಕಯಜ್ಞಗಳನ್ನೇ ಪಂಚಮಹಾಯಜ್ಞಗಳೆನ್ನುವರು. ಯಜ್ಞವಿದರಾದ ಇತರರು ಬ್ರಹ್ಮಯಜ್ಞಾದಿಗಳನ್ನು ಪಂಚಮಹಾಯಜ್ಞಗಳೆನ್ನುವರು. ಹೇಗೂ ಇವೆಲ್ಲವೂ ಮಹಾಯಜ್ಞಗಳೇ. ಹಸಿದುಬಂದ ಬ್ರಾಹ್ಮಣರಿಗೆ ಅನ್ನವನ್ನಿಕ್ಕದೆ ಕಳುಹಿಸಬಾರದು. ಹಾಗಿಲ್ಲದೆ ತಮಗೆತಾವೇ ಭುಜಿಸತಕ್ಕವರು ಮಲವನ್ನು ಭುಜಿಸಿದವರಾಗುವರು. ಆದುದರಿಂದ ವಿದ್ವಾಂಸನಾದ ದ್ವಿಜನು ಪ್ರತಿದಿನವೂ ಸ್ನಾನಮಾಡಿ, ಶುದ್ಧನಾಗಿ, ಮೇಲೆ ಹೇಳಿದ ಯಜ್ಞಗಳನ್ನು ನಡೆಸಬೇಕು. ಹಾಗಿಲ್ಲದೆ ಭುಜಿಸುವ ದ್ವಿಜನು ಪ್ರಾಯಶ್ಚಿತ್ತಮಾಡಿಕೊಳ್ಳಬೇಕಾಗುವುದು' ಎಂದನು. ಆಗ ತಿರುಗಿ ಯುಧಿಷ್ಠಿರನು 'ಕೃಷ್ಣಾ! ನನಗೆ ಸ್ನಾನವಿಧಿಗಳನ್ನು ತಿಳಿಸಬೇಕು' ಎನಲು, ಶ್ರೀಕೃಷ್ಣನು 'ಓ ರಾಜೇಂದ್ರಾ! ಬ್ರಾಹ್ಮಣರಿಗೆ ಪಾಪವಿಮೋಚನೆಯನ್ನು ಮಾಡುವ ಪವಿತ್ರವಾದ ಸ್ನಾನವಿಧಿಗಳನ್ನು ತಿಳಿಸುವೆನು. 'ಸ್ನಾನಕ್ಕಾಗಿ ಜಲಾಶಯಕ್ಕೆ ಹೋಗುವವನು, ಮಣ್ಣು, ಗೋಮಯ, ಎಳ್ಳು, ದರ್ಭೆ, ಇವುಗಳನ್ನು ವಿಧಿಗನುಸಾರವಾಗಿ ಸಿದ್ಧಪಡಿಸಿಕೊಂಡು ಹೋಗಬೇಕು. ನದಿಯಲ್ಲಿ ಸ್ನಾನಮಾಡಿದಮೇಲೆ ತಿರುಗಿ ಬೇರೆ ನೀರಿನಲ್ಲಿ ಸ್ನಾನಮಾಡಬಾರದು. ಸಮೃದ್ಧವಾದ ನೀರಿರುವ ಕಡೆಗಳಲ್ಲಿ ಸ್ವಲ್ಪ ಜಲದಲ್ಲಿ ಸ್ನಾನಮಾಡಬಾರದು. ಬ್ರಾಹ್ಮಣನು ಪುಣ್ಯತೀರ್ಥಗಳಿಗೆ ಹೋಗಿ ಶುಚಿಯಾಗಿಯೂ, ಮನಸ್ಸಿಗೆ ತೃಪ್ತಿಕರವಾಗಿಯೂ ಇರುವ ಸ್ಥಳವನ್ನು ನೋಡಿ, ತಾನು ತಂದ ಮಣ್ಣು, ಗೋಮಯಾದಿಗಳನ್ನು ಕೆಳಗಿಟ್ಟು, ಮೊದಲು ಆ ಜಲಾಶಯದ ಹೊರಗೇ ಎರಡು ಪಾದಗಳನ್ನೂ ತೊಳೆದುಕೊಳ್ಳಬೇಕು. ಎರಡುಸಾರಿ ಆಚಮನಮಾಡಿ ತೀರ್ಥಕ್ಕೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಬೇಕು. ಪುಣ್ಯನದಿಯ ತೀರ್ಥವನ್ನು ಕೈ,ಕಾಲು

ಅಥವಾ ಬೇರೆ ಯಾವುದರಿಂದಲೂ ತಟ್ಟಬಾರದು. ಏಕೆಂದರೆ, ತೀರ್ಥವೆಂಬುದು ಸರ್ವದೇವಮಯವಾದುದು. ಅದು ನನ್ನ ಸ್ವರೂಪವು. ಆದುದರಿಂದ ಅದನ್ನು ಅಪ್ಪಳಿಸಬಾರದು. ನೀರನ್ನೆತ್ತಿ ಸ್ಥಲವನ್ನು ಶುದ್ಧಿಮಾಡಬೇಕು. ಮೊದಲು ನೀರಿನಲ್ಲಿ ಸುಮ್ಮನೆ ಸ್ನಾನಮಾಡಬೇಕು. ಅವಯವಗಳನ್ನು ತಿಕ್ಕಿ ತೊಳೆಯಬಾರದು. ತಿರುಗಿ ನೀರಿಗಿಳಿದು ಆಚಮನಮಾಡಬೇಕು. ಕೈಯನ್ನು ಹಸುವಿನ ಕಿವಿಯ ಆಕಾರಕ್ಕೆ ಮಾಡಿಕೊಂಡು, ಮೂರಾವರ್ತಿ ನೀರನ್ನು ಕುಡಿಯಬೇಕು. ಎರಡಾವರ್ತಿ ಬಾಯನ್ನು ಒರೆಸಬೇಕು. ತನ್ನ ಪಾದಗಳನ್ನು ಪ್ರೋಕ್ಷಿಸಬೇಕು. ಆಮೇಲೆ ಬಾಯಿ ಮೊದಲಾದ ಶಿರೋಭಾಗದಲ್ಲಿರುವ ದ್ವಾರಗಳನ್ನು ಒಂದುಸಾರಿ ಒರೆಸಬೇಕು. ಆಮೇಲೆ ಎರಡು ಕೈಗಳನ್ನೂ, ಎದೆಯನ್ನೂ, ನಾಭಿಯನ್ನೂ ಒಂದೊಂದಾಗಿ ಸಪರಿ, ತಿರುಗಿ ನೀರನ್ನು ಸ್ಪರ್ಶಿಸಿ, ತಿರುಗಿ ತಲೆಯನ್ನು ಸ್ಪರ್ಶಿಸಬೇಕು. "ಆಪಃ ಪುನಂತು" ಎಂಬ ಮಂತ್ರವನ್ನು ಹೇಳಿ ತಿರುಗಿ ಆಚಮನವನ್ನು ಮಾಡಬೇಕು. ಓಂಕಾರದೊಡಗೂಡಿದ ವ್ಯಾಹೃತಿಮಂತ್ರಗಳನ್ನಾಗಲಿ 'ಸದಸಸ್ಪತಿಂ' ಎಂಬ ಋಕ್ಕನ್ನಾಗಲಿ ಹೇಳಿ, ಆಚಮನಮಾಡಿ ಆಮೇಲೆ ಮಣ್ಣನ್ನು ತೆಗೆದು ಮೂರುಭಾಗಮಾಡಿ ಲೇಪಿಸಿಕೊಳ್ಳಬೇಕು. 'ಇದಂವಿಷ್ಣುಃ' ಎಂಬ ಋಕ್ಕಿನಿಂದ ಮೇಲಿನ, ನಡುವಿನ ಮತ್ತು ಕೆಳಗಿನ ಅಂಗಗಳಲ್ಲಿ ಸವರಿಕೊಂಡು, ವರುಣಸೂಕ್ತವನ್ನು ಹೇಳುತ್ತ ಜಲವನ್ನು ನಮಸ್ಕರಿಸಿ ಆಮೇಲೆ ಸ್ನಾನಮಾಡಬೇಕು. ಹರಿಯುವ ನದಿಯಾಗಿದ್ದರೆ ಪ್ರವಾಹಕ್ಕಿದಿರಾಗಿಯೂ, ನಿಂತ ನೀರಾಗಿದ್ದರೆ ಸೂರ್ಯನಿಗಿದಿರಾಗಿಯೂ, ನಿಂತು 'ಓಂ' ಎಂಬ ಮಂತ್ರವನ್ನು ಹೇಳಿ ಸ್ನಾನಮಾಡಬೇಕು. ನೀರನ್ನು ಕದಡಬಾರದು. ಗೋಮಯವನ್ನು ಮೂರುಪಾಲು ಮಾಡಿ ನೀರಿನಲ್ಲಿದ್ದೇ ಮೊದಲು ಸವರಿಕೊಳ್ಳಬೇಕು. ತಿರುಗಿ ವ್ಯಾಹೃತಿಪ್ರಣವಗಳೊಡನೆ ಗಾಯತ್ರಿಯನ್ನು ಜಪಿಸಬೇಕು. ಆಮೇಲೆ ನನ್ನಲ್ಲಿ ನಟ್ಟಮನಸ್ಸುಳ್ಳವನಾಗಿ ಆಚಮನ ಮಾಡಿ 'ಆಪೋಹಿ ಷ್ಠಾ' ಇತ್ಯಾದಿ ಮೂರು ಋಕ್ಕುಗಳಿಂದ ಮಂತ್ರಿತವಾದ ನೀರಿನಿಂದಲೂ, ಅದೇವಿಧವಾಗಿ 'ತರತ್ಸಮಂದೀ' ಎಂಬ ನಾಲ್ಕು ಮಂತ್ರಗಳಿಂದಳಲೂ, ಕ್ರಮವಾಗಿ ಪ್ರೋಕ್ಷಿಸಿಕೊಳ್ಳಬೇಕು. ಗೋಸೂಕ್ತ, ಅಶ್ವಸೂಕ್ತಗಳಿಂದಲೂ, ಆತ್ಮಶುದ್ಧಿಕರವಾದ

ಮಂತ್ರಗಳಿಂದಲೂ, ವೈಷ್ಣವ, ವಾರುಣ, ಸಾವಿತ್ರ, ಐಂದ್ರ, ವಾಮದೈವ್ಯ ಸೂಕ್ತಗಳಿಂದಲೂ, ಇನ್ನೂ ನನ್ನ ಸ್ವರೂಪವೆನಿಸಿದ ಇತರ ಮಂತ್ರಗಳಿಂದಲೂ, ಇತರ ಸಾಮಗಳಿಂದಲೂ ತನ್ನನ್ನು ಪ್ರೋಕ್ಷಿಸಿಕೊಳ್ಳಬೇಕು. ನೀರಿನಲ್ಲಿ ನಿಂತಹಾಗೆಯೇ ಅಘಮರ್ಷಣಸೂಕ್ತವನ್ನು ಜಪಿಸಬೇಕು. ಆಮೇಲೆ ತನ್ನಿಂದ ಉಸಿರುಹಿಡಿಯುವುದಕ್ಕೆ ಆಗುವಷ್ಟುಕಾಲದವರೆಗೆ, ನನ್ನನ್ನೇ ಧ್ಯಾನಿಸುತ್ತ ಓಂಕಾರವ್ಯಾಹೃತಿಮಂತ್ರಗಳೊಡನೆ ಗಾಯತ್ರಿಯನ್ನೋ, ಅಥವಾ ಪ್ರಣವಮಂತ್ರವನ್ನೋ ಜಪಿಸಬೇಕು. ಆಮೇಲೆ ಸ್ನಾನಮಾಡಿ ನೀರಿನಿಂದ ಮೇಲೆದ್ದು, ಶುದ್ಧವಾದ ಎರಡು ಬಿಳೀ ವಸ್ತ್ರಗಳನ್ನುಟ್ಟುಕೊಳ್ಳಬೇಕು. ಅದನ್ನು ಕಕ್ಷದಲ್ಲಿ ಪಾಶದಂತೆ ಸುತ್ತಿಕೊಳ್ಳಬಾರದು. ಹಾಗೆ ಕಕ್ಷದಲ್ಲಿ ಸುತ್ತಿಕೊಂಡು ವೈದಿಕಕರ್ಮಗಳನ್ನು ಮಾಡಿದರೆ, ಆ ಕರ್ಮಫಲವನ್ನು ದೈತ್ಯರೂ, ದಾನವರೂ, ರಾಕ್ಷಸರೂ ಅಪಹರಿಸಿಕೊಂಡುಹೋಗುವರು. ವಸ್ತ್ರವನ್ನುಟ್ಟಮೇಲೆ ಮಣ್ಣಿನಿಂದ ಕೈಕಾಲುಗಳನ್ನು ಸ್ವಲ್ಪವಾಗಿ ಶುದ್ಧಿಮಾಡಿ, ಒಂದಾವರ್ತಿ ಆಚಮನಮಾಡಬೇಕು. ಆಮೇಲೆ ತಿರುಗಿ ಗಾಯತ್ರೀಜಪಕ್ಕಾಗಿ ಪೂರ್ವಾಚಮನವನ್ನು ಮಾಡಬೇಕು. ಜಲದಲ್ಲಿದ್ದು ಮಾಡಿದ ಆಚಮನವು, ಆ ಜಲಕಾರ್ಯಕ್ಕೆಮಾತ್ರ ಶುದ್ಧಿಯನ್ನುಂಟು ಮಾಡುವುದು. ಜಲದಿಂದ ಮೇಲೆದ್ದುಬಂದಮೇಲೆ ಮಾಡತಕ್ಕ ಆಚಮನವು, ಸ್ಥಲಕಾರ್ಯಗಳಿಗೆ ಶುದ್ಧಿಯನ್ನುಂಟುಮಾಡುವುದು. ಆದುದರಿಂದ ಒಂದು ಕಾಲನ್ನು ನೀರಿನಲ್ಲಿಯೂ, ಒಂದು ಕಾಲನ್ನು ಮೇಲೆಯೂ ಇಟ್ಟುಕೊಂಡು, ಪೂರ್ವಕ್ಕೋ, ಉತ್ತರಕ್ಕೋ ಅಭಿಮುಖವಾಗಿದ್ದು, ಶಾಂತನಾಗಿ ವೇದಗಳನ್ನು ಧ್ಯಾನಿಸಿ, ಆಮೇಲೆ ಆತ್ಮಶುದ್ಧಿಗಾಗಿ ಆಚಮನಮಾಡಬೇಕು. ಆಮೇಲೆ ಪವಿತ್ರವನ್ನು ಧರಿಸಿ ಪೂರ್ವಾಭಿಮುಖವಾಗಿ ದರ್ಭಾಸನದಮೇಲೆ ಕುಳಿತು, ನನ್ನಲ್ಲಿ ನಟ್ಟ ಮನಸ್ಸಿನಿಂದ ಪ್ರಾಣಾಯಾಮವನ್ನು ಮಾಡಬೇಕು. ಸಾವಿರಸಾರಿಯೋ, ಕೊನೆಗೆ ನೂರುಸಾರಿಯೋ ಗಾಯತ್ರಿಯನ್ನು ಜಪಿಸಬೇಕು. ಆಮೇಲೆ ಸಾವಿತ್ರೀಮಂತ್ರದಿಂದ ನೀರನ್ನು ಅಭಿಮಂತ್ರಿಸಿ, ಮಂದೇಹರೆಂಬ ರಾಕ್ಷಸರ ವಿನಾಶಕ್ಕಾಗಿ ಅರ್ಘ್ಯಪ್ರದಾನ ಮಾಡಬೇಕು. 'ಉದ್ವರ್ಗೋಸಿ' ಎಂಬ ಮಂತ್ರದಿಂದ ಅದಕ್ಕೆ ನಡುವೆ ಪ್ರಾಯಶ್ಚಿತ್ತಜಲವನ್ನು ಬಿಡಬೇಕು. ಆಮೇಲೆ ಜಲವನ್ನೂ, ಪುಷ್ಪ

ವನ್ನೂ ಬೊಗಸೆಯಲ್ಲಿಟ್ಟುಕೊಂಡು, ಸೂರ್ಯನಿಗಿದಿರಾಗಿ ಬಿಟ್ಟು, ವ್ಯೋಮ ಮುದ್ರೆಯನ್ನು ಮಾಡಬೇಕು. ಆಮೇಲೆ ಸೂರ್ಯನ ಏಕಾಕ್ಷರಮಂತ್ರ ವನ್ನು ಹನ್ನೆರಡುಸಾರಿ ಜಪಿಸಬೇಕು. ಆಮೇಲೆ ಷಡಕ್ಷರಮಂತ್ರಗಳನ್ನು ಆರುಸಾರಿ ಜಪಿಸಬೇಕು. ತನ್ನ ಮುಖದನಡುವೆ ಮುದ್ರೆಯಿಂದ ಪ್ರದಕ್ಷಿ ಣವಾಗಿ ಸ್ಪರ್ಶಿಸಿ, ತೋಳುಗಳನ್ನು ಮೇಲಕ್ಕೆ ನೀಡಿ ನಿಂತು, ಸೂರ್ಯನನ್ನು ನೋಡಬೇಕು. ಹಾಗೆ ಸೂರ್ಯನನ್ನು ನೋಡುವಾಗ, ಆ ಸೂರ್ಯಮಂ ಡಲಮಧ್ಯವರ್ತಿಯೂ, ತೇಜೋಮೂರ್ತಿಯೂ, ಚತುರ್ಭುಜನೂ ಆದ ನನ್ನ ಸ್ವರೂಪವನ್ನು ಧ್ಯಾನಿಸುತ್ತ 'ಉದುತ್ಯಂ' 'ಚಿತ್ರಂ' 'ತಚ್ಚಕ್ಷುಃ' ಎಂಬೀ ಮಂತ್ರಗಳನ್ನು ಜಪಿಸಬೇಕು. ಮತ್ತು ಸಾವಿತ್ರಿ, ಪುರುಷಸೂಕ್ತ, ನನ್ನ ವಿಷಯವಾದ ಸಾಮಗಳು, ಪುರುಷವ್ರತವೆಂಬ ಸಾಮಶಾಖೆ, ಇವ ನ್ನೆಲ್ಲ ತನಗೆ ಶಕ್ತಿಯಿದ್ದವರೆಗೆ ಪುನಶ್ಚರಣಮಾಡಬೇಕು. ಆಮೇಲೆ 'ಹಂಸಶ್ಶುಚಿಷತ್' ಎಂಬೀ ಮಂತ್ರದೊಡನೆ ಸೂರ್ಯನನ್ನು ನೋಡಿ, ಅವನಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಬೇಕು. ಆಮೇಲೆ ತ್ರಿಮೂ ರ್ತಿಗಳನ್ನೂ, ಪ್ರಜಾಧಿಪತಿಗಳನ್ನೂ, ದೇವರ್ಷಿಗಳನ್ನೂ, ವೇದವೇದಾಂಗ ಗಳನ್ನೂ, ಇತಿಹಾಸಪುರಾಣಗಳನ್ನೂ, ಕ್ರತುಗಳನ್ನೂ, ಅಪ್ಸರಃಕುಲ ಗಳು, ಋತು, ವರ್ಷ, ಕಲಾ, ಕಾಷ್ಠಾದಿ ಕಾಲವಿಭಾಗಗಳು, ಭೂತಗಳು, ನದಿಗಳು, ಸಮುದ್ರಗಳು, ಬೆಟ್ಟಗಳು, ಪರ್ವತವಾಸಿಗಳಾದ ದೇವತೆಗಳು, ಓಷಧಿಗಳು, ವೃಕ್ಷಗಳು, ಇವನ್ನೆಲ್ಲ ಉದ್ದೇಶಿಸಿ 'ತೃಪ್ಯತಾಂ' ಎಂದು ಹೇಳಿ, ಅಂಜಲಿಯಿಂದ ನೀರನ್ನು ಬಿಟ್ಟು ತರ್ಪಿಸಬೇಕು. ಇವನ್ನೆಲ್ಲ ಉಪ ವೀತಿಯಾಗಿಯೇ ಮಾಡಬೇಕು. ಆಮೇಲೆ ನಿವೀತಿಯಾಗಿ ಮಂತ್ರಕರ್ತ ರಾದ ಋಷಿಗಳನ್ನೂ, ಮರೀಚಿ ಮೊದಲಾದವರನ್ನೂ, ನಾರದಾದಿ ಋಷಿಗ ಳನ್ನೂ ಕುರಿತು ತರ್ಪಿಸಬೇಕು. ಆಮೇಲೆ ಪ್ರಾಚೀನಾವೀತಿಯಾಗಿ ಪಿತೃದೇ ವತೆಗಳನ್ನು ತರ್ಪಿಸಬೇಕು. ಆಮೇಲೆ ಕ್ರಮವಾಗಿ ಹವ್ಯವಾಹನ, ಅಗ್ನಿ, ಸೋಮ, ವೈವಸ್ವತ, ಅರ್ಯಮ, ಅಗ್ನಿಷ್ವಾತ್ತ, ಸೋಮಪರೆಂಬ ಪಿತೃ ಗಳನ್ನೆಲ್ಲ ದರ್ಭೆಗಳಲ್ಲಿ ಆವಾಹನಮಾಡಿ 'ತೃಪ್ಯತಾಂ' ಎಂದು ಹೇಳುತ್ತ ಎಳ್ಳುನೀರಿನಿಂದ ತರ್ಪಿಸಬೇಕು. ಮೃತರಾದ ಪಿತೃ ಪಿತಾಮಹ ಪ್ರಪಿತಾ ಮಹರನ್ನೂ, ಮಾತೃ ಪಿತಾಮಹೀ ಪ್ರಪಿತಾಮಹಿಯರನ್ನೂ, ಗುರುವನ್ನೂ,

ಆಚಾರ್ಯನನ್ನೂ, ತಂದೆಯ ಸಹೋದರಿ, ತಾಯಿಯ ಸಹೋದರಿ, ಮಾತಾಮಹಿ, ಉಪಾಧ್ಯಾಯರು, ಸ್ನೇಹಿತರು, ಬಂಧುಗಳು, ಶಿಷ್ಯರು, ಋತ್ವಿಕ್ಕುಗಳು, ಜ್ಞಾತಿಗಳು, ಅವರ ಬಂಧುಗಳು, ಹೀಗೆಯೇ ಮೃತರಾದವರೆಲ್ಲರನ್ನೂ ಉದ್ದೇಶಿಸಿ ತನ್ನ ಕೃತಜ್ಞತೆಗೆ ಸೂಚಕವಾಗಿ ತರ್ಪಿಸಬೇಕು. ಈ ತರ್ಪಣವಾದಮೇಲೆ ಆಚಮನಮಾಡಿ ಸ್ನಾನವಸ್ತ್ರವನ್ನು ಹಿಂಡಬೇಕು. ಶಾಸ್ತ್ರಜ್ಞರು ತನ್ನಿಂದ ಪೋಷಿಸಲ್ಪಡತಕ್ಕ ಪಿತ್ರಾದಿಗಳಿಗೆ ಅವರು ಮಾಡತಕ್ಕ ಸ್ನಾನ ಪಾನ ತರ್ಪಣಾದಿಗಳನ್ನೇ ಜೀವನವನ್ನಾಗಿ ಹೇಳುವರು. ಅವರಿಗೆ ತರ್ಪಿಸುವಮೊದಲು ಒದ್ದೆಯಬಟ್ಟೆಯನ್ನು ಹಿಂಡಬಾರದು. ಅಜ್ಞಾನದಿಂದ ಹಾಗೆ ಮಾಡಿದರೆ, ದೇವತೆಗಳೂ, ಋಷಿಗಳೂ ಪಿತೃಗಳೂ, ನಿರಾಶರಾಗಿ, ಇವರನ್ನು ಶಪಿಸಿ, ಬಂದ ದಾರಿಯನ್ನು ಹಿಡಿದು ಹೊರಟುಹೋಗುವರು. ಇದಾದಮೇಲೆ ಮಣ್ಣಿನಿಂದ ಕಾಲನ್ನು ಶುದ್ಧಿಮಾಡಿಕೊಂಡು, ತಿರುಗಿ ಆಚಮನಮಾಡಿ, ಪವಿತ್ರವನ್ನಿಟ್ಟು, ದರ್ಭಾಸನದಲ್ಲಿ ಕುಳಿತು ವೇದಾಧ್ಯಯನವನ್ನು ಆರಂಭಿಸಬೇಕು. ಮೊದಲು ವೇದವನ್ನಾರಂಭಿಸಿ, ಅದರಮೇಲೆ ಕ್ರಮಕ್ರಮವಾಗಿ ತನ್ನ ಶಕ್ತಿಯನ್ನನುಸರಿಸಿ ಯಾವುದನ್ನು ಅಧ್ಯಯನಮಾಡಿದರೂ ಅದೇ ಅಧ್ಯಯನವೆನಿಸುವುದು. ಋಕ್ಕನ್ನಾಗಲಿ, ಯಜುಸ್ಸನ್ನಾಗಲಿ, ಸಾಮವನ್ನಾಗಲಿ, ಇತಿಹಾಸ ಪುರಾಣಗಳೊಡನೆ ತನ್ನಿಂದಾದಷ್ಟು ಜಪಿಸಬೇಕು. ಅಧ್ಯಯನವಾದಮೇಲೆ ನಿಂತು, ದಿಕ್ಕುಗಳು, ದಿಗ್ದೇವತೆಗಳು, ಬ್ರಹ್ಮನು, ಅಗ್ನಿ, ಭೂಮಿ, ಓಷಧಿಗಳು, ವಾಕ್ಕು, ವಾಕ್ಪತಿಗಳನ್ನೂ, ಇವರೆಲ್ಲರಿಗೂ ಅಂತರಾತ್ಮನಾದ ನನ್ನನ್ನೂ, ಪುಣ್ಯನದಿಗಳನ್ನೂ ಉದ್ದೇಶಿಸಿ ನಮಸ್ಕರಿಸಬೇಕು. ಆಮೇಲೆ ಆಚಮನಮಾಡಿ ಪ್ರಣವ ಮುಂತಾದುವನ್ನು ಜಪಿಸಬೇಕು. ಆಮೇಲೆ 'ನಮೋದ್ಭ್ಯಃ' ಎಂದು ತೀರ್ಥಕ್ಕೆ ವಂದನವನ್ನು ಮಾಡಬೇಕು. ತೇಜಸ್ವಿಯೂ, ಅದಿತಿಪುತ್ರನೂ ಆದ ಸೂರ್ಯನಿಗೆ ತಲೆಬಗ್ಗಿ ನಮಸ್ಕರಿಸಿ, ಪ್ರಣವಮಂತ್ರದೊಡನೆ ಸೂರ್ಯನನ್ನು ನೋಡಬೇಕು. ಆಮೇಲೆ ನನಗೆ ಪ್ರಿಯವಾದ ಪುಷ್ಪಗಳಿಂದ ಪ್ರತಿದಿನವೂ ನನ್ನನ್ನು ಅರ್ಚಿಸಬೇಕು' ಎಂದನು. ಆಗ ಯುಧಿಷ್ಠಿರನು 'ಓ ದೇವಾ! ನಿನಗೆ ಪ್ರಿಯವಾದ ಪುಷ್ಪಗಳೆಂದರೆ ಯಾವುವು? ನಿನಗೆ ಅಧಿಷ್ಠಾನಗಳಾದ ಆ ಪುಷ್ಪಗಳನ್ನೆಲ್ಲ

ನನಗೆ ತಿಳಿಸಬೇಕು' ಎಂದನು. ಅದಕ್ಕಾ ಕೃಷ್ಣನು 'ರಾಜೇಂದ್ರಾ! ಕೇಳು! ನೈದಿಲೆ, ಕಣಿಗಿಲೆ, ಚಣಕ (ಕಡಲೆ), ಸಂಪಗೆ, ಮಲ್ಲಿಗೆ, ಜಾಜಿ, ಗರುಡಾವಾರ, ನಂದಿಕ, ಮುತ್ತುಗ, ಮುತ್ತುಗದೆಲೆ, ಗರಿಕೆ, ಲವಂಗ, ವನಮಾಲಿಕೆ, ಈ ಹೂಗಳೆಲ್ಲ ನನಗೆ ಪ್ರಿಯಗಳೇ. ಈ ಎಲ್ಲಾ ಪುಷ್ಪಗಳಿಗಿಂತಲೂ ಸಾವಿರಮೇಲಾದುದು ಉತ್ಪಲವು (ನೈದಿಲೆ). ಅದಕ್ಕಿಂತಲೂ ಮೇಲಾದುದು ಕಮಲವು. ಆ ಕಮಲಕ್ಕಿಂತಲೂ ಮೇಲಾದುದು ನೂರೆಸಳುಗಳುಳ್ಳ ತಾವರೆ. ಅದಕ್ಕಿಂತಲೂ ಸಾವಿರ ದಳಗಳುಳ್ಳ ತಾವರೆ ಮೇಲು. ಅದಕ್ಕೂ ಮೇಲಾದುದು ಪುಂಡರೀಕವೆಂಬ ಬಿಳೀನೈದಿಲೆ, ಆ ಪುಂಡರೀಕಕ್ಕಿಂತಲೂ ಸಾವಿರಪಾಲು ಮೇಲಾದುದು ತುಳಸಿ. ಅದಕ್ಕಿಂತಲೂ ಬಕಪುಷ್ಪವೂ (ಶಿವಮಲ್ಲಿಗೆ) ಅದಕ್ಕಿಂತಲೂ ಸೌವರ್ಣವೂ ಉತ್ತಮವು. ಸೌವರ್ಣಕ್ಕಿಂತಲೂ ನನಗೆ ಅಧಿಕಪ್ರಿಯವಾದುದು ಬೇರೊಂದಿಲ್ಲ. ಯಾವ ಪುಷ್ಪಗಳಿಲ್ಲದಿದ್ದರೂ ತುಳಸೀದಳಗಳಿಂದ ನನ್ನನ್ನು ಪೂಜಿಸಬಹುದು. ತುಳಸೀದಳವು ದೊರೆಯದಿದ್ದಾಗ, ಅದರ ಕಡ್ಡಿಗಳಿಂದಲೂ, ಕಡ್ಡಿಗಳೂ ದೊರೆಯದಿದ್ದಾಗ ಅದರ ಬೇರುಗಳಿಂದಲೂ, ಬೇರುಸಹ ದೊರೆಯದಿದ್ದಾಗ, ಆ ತುಳಸೀಗಿಡವು ಬೆಳೆದ ಕಡೆಯಲ್ಲಿರುವ ಮಣ್ಣಿನಿಂದಲೂ, ನನ್ನನ್ನು ಪೂಜಿಸಬಹುದು. ರಾಜಾ! ಇನ್ನು ನನ್ನ ಪೂಜೆಗೆ ಯೋಗ್ಯವಲ್ಲದ ಪುಷ್ಪಗಳ ಹೆಸರನ್ನು ಹೇಳುವೆನು ಕೇಳು. ಕಿಂಕಿಣಿ, ಆಗಸೆ, ಉಮ್ಮತ್ತ, ಪಾದರಿ, ಅದಿಮುರ್ಕ್ತಿ, ಹೊನ್ನೆ, ಹೊಂಗೆ, ಕಾಡುಮೊಲ್ಲೆ, ಹಾಲೆ, ನೀಲಿ, ಲಾಂಗಲಿ, ದಾಸವಾಳ, ಕರ್ಣಿಕಾರ, ಅಸುಗೆ, ಬೂರುಗ, ಕಕುಭ, ಕೋವಿದಾರ, ವಿಭೀತಕ, ಗೋರಂಟೆ, ಕಲ್ಪಕ, ಕಾಲಕ, ಅಂಕೋಲೆ, ಗಿರಿಕರ್ಣಿ (ವಿಷ್ಣುಕ್ರಾಂತಿ), ಮತ್ತು ಕಪ್ಪುಬಣ್ಣದ ಎಲ್ಲಾ ಹೂಗಳೂ, ನನ್ನ ಪೂಜೆಗೆ ನಿಷಿದ್ಧಗಳು. ಒಂದೇ ದಳವುಳ್ಳ ಪುಷ್ಪಗಳೂ ಪೂಜಾರ್ಹವಲ್ಲ. ಎಕ್ಕದ ಹೂಗಳೂ, ಎಕ್ಕದ ಎಲೆಯಲ್ಲಿ ತಂದ ಬೇರೆ ಹೂಗಳೂ ನನ್ನ ಪೂಜೆಗೆ ಯೋಗ್ಯಗಳಲ್ಲ. ವ್ಯಾಕೃತ, ಬೇವು, ಈ ಹೂಗಳೂ ತ್ಯಾಜ್ಯಗಳು. ಇವು ಹೊರತು ಉಳಿದ ಪುಷ್ಪಗಳೂ, ಬಿಳುಪಾದ ಬಣ್ಣವೂ, ಸುಗಂಧವೂ ಉಳ್ಳ ಪುಷ್ಪಗಳೂ ನನ್ನ ಪೂಜೆಗೆ ಯೋಗ್ಯವಾದುವು. ನಿಷಿದ್ಧಗಳಲ್ಲದ ಪುಷ್ಪಗಳನ್ನು ತಂದು, ಯಥಾಶಕ್ತಿ ನನ್ನ ಮೂರ್ತಿಗಳನ್ನು

ಪೂಜಿಸಬೇಕು' ಎಂದನು. ಆಗ ಯುಧಿಷ್ಠಿರನು ತಿರುಗಿ 'ವಾಸು ದೇವಾ! ನಿನ್ನನ್ನು ಹೇಗೆ ಪೂಜಿಸಬೇಕು? ನಿನ್ನ ಮೂರ್ತಿಗಳೆಂತವು? ವೈಖಾನಸರೂ, ಪಾಂಚರಾತ್ರರೂ ನಿನ್ನ ಮೂರ್ತಿಯ ಪೂಜೆಯವಿಷಯದಲ್ಲಿ ಹೇಳುವ ಭೇದಗಳೇನು?' ಎನಲು ಕೃಷ್ಣನು ಹೇಳುವನು. 'ರಾಜೇಂದ್ರಾ! ಕೇಳು! ವಿದ್ಯಾವಂತನಾದವನು ಒಂದು ಸ್ಥಂಡಿಲವನ್ನು (ಒಂದು ವೇದಿಕೆ ಯನ್ನು ಮಾಡಿ, ಅಷ್ಟದಳಗಳಿಂದಲೂ, ಕರ್ಣಿಕೆಯಿಂದಲೂ ಕೂಡಿದ ಪದ್ಮಾಕೃತಿಯನ್ನು ಬರೆಯಬೇಕು. ಆಮೇಲೆ ಅಷ್ಟಾಕ್ಷರಮಂತ್ರದಿಂದ ಲಾಗಲಿ, ದ್ವಾದಶಾಕ್ಷರಮಂತ್ರದಿಂದಲಾಗಲಿ, ವೈದಿಕಮಂತ್ರದಿಂದಾಗಲಿ, ಪುರುಷಸೂಕ್ತದಿಂದಲಾಗಲಿ ಅದರಲ್ಲಿ ನನ್ನನ್ನು ಸ್ಥಾಪನಮಾಡಿ ಪೂಜಿಸ ಬೇಕು. ವೈಖಾನಸರು ನನ್ನನ್ನು ಪುರುಷನೆಂದೂ, ಸತ್ಯನೆಂದೂ, ಅಚ್ಯು ತನೆಂದೂ, ಅನಿರುದ್ಧನೆಂದೂ ಹೇಳುವರು. ಪಾಂಚರಾತ್ರರು ನನ್ನನ್ನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ಚತುರ್ಮೂರ್ತಿ ಗಳನ್ನಾಗಿ ಹೇಳುವರು. ಇವಲ್ಲದೆ ಬೇರೆಬೇರೆ ಹೆಸರುಗಳಿಂದ ಇನ್ನೂ ಅನೇಕ ಮೂರ್ತಿಗಳುಂಟು. ಆದರೆ, ಅವುಗಳ ನಾಮ ರೂಪಗಳು, ಭಿನ್ನ ಭಿನ್ನವಾಗಿದ್ದರೂ ಅರ್ಥದಲ್ಲಿ ಎಲ್ಲವೂ ಒಂದೇ ಎಂದು ತಿಳಿ. ಆ ಭಾವದಿಂ ದಲೇ ವಿದ್ವಾಂಸರು ನನ್ನನ್ನು ಪೂಜಿಸಬೇಕು' ಎಂದನು. ಆಗ ಯುಧಿಷ್ಠಿ ರನು 'ಓ ದೇವಾ! ನಿನ್ನ ಭಕ್ತರು ಎಂಥವರು? ಅವರ ವ್ರತಗಳೇನು?' ಎನಲು, ಕೃಷ್ಣನು 'ರಾಜೇಂದ್ರಾ! ಯಾರು ನನ್ನನ್ನು ಹೊರತು ಬೇರೆ ದೇವತೆಗಳನ್ನು ಆಶ್ರಯಿಸದೆ, ನನ್ನನ್ನೇ ಮರೆಹೊಕ್ಕಿರುವರೋ, ಯಾರು ನನ್ನ ಭಕ್ತರಿಗೆ ಪ್ರೇಮಪಾತ್ರರೋ, ಅವರು ನನ್ನ ಭಕ್ತರು. ಸ್ವರ್ಗ ವನ್ನೂ, ಯಶಸ್ಸನ್ನೂ, ಕೊಡತಕ್ಕ, ಮತ್ತು ನನಗೆ ಪ್ರಿಯವಾದ ವ್ರತ ಗಳನ್ನೇ ನನ್ನ ಭಕ್ತನು ಅನುಸರಿಸಬೇಕು. ಆ ವ್ರತಗಳೇನೆಂಬುದನ್ನೂ ತಿಳಿಸುವೆನು ಕೇಳು. ನನ್ನ ಭಕ್ತನಾದವನು ಜಲದಲ್ಲಿಳಿಯುವಾಗ ಬೇರೆ ವಸ್ತ್ರವನ್ನು ಧರಿಸಬಾರದು. ಹಗಲು ನಿದ್ರೆಮಾಡಬಾರದು. ಮದ್ಯಮಾಂಸ ಗಳನ್ನು ತ್ಯಜಿಸಬೇಕು. ಬ್ರಾಹ್ಮಣರನ್ನೂ, ಗೋವುಗಳನ್ನೂ, ಅಶ್ವತ್ಥ ವೃಕ್ಷಗಳನ್ನೂ, ಅಗ್ನಿಯನ್ನೂ ಕಂಡಾಗ, ಅದನ್ನು ಪ್ರದಕ್ಷಿಣವಾಗಿ ಸುತ್ತಿ ಹೋಗಬೇಕು. ಮಳೆ ಸುರಿಯುವಾಗ ಓಡಬಾರದು. ಊಟಕ್ಕೆ ಮೊದಲು

ಅನ್ನಾರ್ಥಿಗಳಿಗಾಗಿ ಇಡುವ ಅಗ್ರಭಿಕ್ಷೆಗಳನ್ನು ತಪ್ಪಿಸಬಾರದು. ಉಪ್ಪನ್ನೂ, ಸೌಭಾಂಜನ ಕರಂಜನಗಳೆಂಬ ಶಾಕಗಳನ್ನೂ ಭುಜಿಸಬಾರದು. ಹಸುವಿಗೆ ಒಂದುಹಿಡಿ ಹುಲ್ಲನ್ನಾದರೂ ಕೊಟ್ಟು ಬಂದು ಭುಜಿಸಬೇಕು. ತಂಗಳನ್ನೂ, ಪರಗೃಹದಿಂದ ಸಿದ್ಧವಾಗಿ ಬಂದ ಪಕ್ವಪದಾರ್ಥಗಳನ್ನೂ, ನನಗೆ ನಿವೇದನಕ್ಕೆ ಯೋಗ್ಯವಲ್ಲದ ವಸ್ತುಗಳನ್ನೂ, ನನಗೆ ನಿವೇದಿತವಲ್ಲದ ಆಹಾರಗಳನ್ನೂ ತ್ಯಜಿಸಬೇಕು. ವಿಭೀತಕ, ಕರಂಜನವೃಕ್ಷಗಳ ನೆರಳನ್ನು ದೂರವಾಗಿ ತ್ಯಜಿಸಬೇಕು. ತನಗೆ ಬಾಧೆಯುಂಟಾದಾಗಲೂ, ದೇವ ಬ್ರಾಹ್ಮಣರನ್ನು ನಿಂದಿಸಬಾರದು. ಸಾತ್ವಿಕ, ರಾಜಸ, ತಾಮಸರೆಂಬ ಮೂರು ಬಗೆಯು ಭಕ್ತರೂ ನನ್ನನ್ನು ಪೂಜಿಸುವರು. ಆ ಮೂವರ ನಡತೆಯೂ ಈ ಮುಂದೆ ಹೇಳುವ ಮೂರು ವಿಧವಾಗಿರುವುದು. ತಾಮಸರು ತಮಸ್ಸನ್ನೂ, ರಾಜಸರು ರಜಸ್ಸನ್ನೂ, ಸಾತ್ವಿಕರು ಸತ್ವವನ್ನೂ ಹೊಂದುವರು. ಸಾಂಖ್ಯಯೋಗಗಳಿಂದಲೂ, ಸತ್ವಬಲಗಳಿಂದಲೂ ಸಿದ್ಧಿಹೊಂದಿದವರು. ಆಕಾಶದಲ್ಲಿ ಸೂರ್ಯಚಂದ್ರರಿಂದ ಕೂಡಿದ ವಿಸ್ತಾರವಾದ ಪದವನ್ನು ದರ್ಶಿಸುವರು. ರಾಜಸರಾದರೋ ಒಂದೇ ಸ್ತಂಭವಾಗಿ ಒಂಭತ್ತು ದ್ವಾರಗಳೂ, ಮೂರು ಆಧಾರಗಳೂ, ಐದು ಸಾಕ್ಷಿಗಳೂ ಉಳ್ಳ ಈ ದೇಹವೆಂಬ ಪಟ್ಟಣದಲ್ಲಿಯೇ ಸದಾ ಇರುತ್ತಿರುವರು. ಸೂರ್ಯೋದಯದಿಂದಾರಂಭಿಸಿ, ಸ್ನಾನಾದಿಕರ್ಮಗಳನ್ನೆಲ್ಲ ನಡೆಸುತ್ತ, ಬುದ್ಧಿಶಾಲಿಯಾಗಿ, ಚತುರ್ವೇದಗಳನ್ನು ಬಲ್ಲವನಾಗಿದ್ದರೂ, ಪುರುಷನ ಶರೀರದಲ್ಲಿ ಆರುಮಂದಿ ವೃಷಲರೂ, ಏಳುಮಂದಿ ಕ್ಷತ್ರಿಯರೂ, ಎಂಟುಮಂದಿ ವೈಶ್ಯರೂ, ಇಪ್ಪತ್ತೊಂದು ಮಂದಿ ಶೂದ್ರರೂ ನೆಲೆಗೊಂಡಿರುವರೆಂದು ಹೇಳುವರು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಹಾಮೋಹವೆಂಬಿವಾರೂ ದೇಹದಲ್ಲಿರುವ ಆರುಮಂದಿ ವೃಷಲರು. ಗರ್ವ, ಸ್ತಂಭ, ಅಹಂಕಾರ, ಈರ್ಷ್ಯೆ, ದ್ರೋಹ, ಕಠಿನವಾಕ್ಯ, ಕ್ರೂರಸ್ವಭಾವ, ಇವೇಳೂ ಏಳುಮಂದಿ ಕ್ಷತ್ರಿಯರು. ನಿಷ್ಕರುಣತೆ, ವಂಚನೆ, ಮಾಯೆ, ಗುಪ್ತವಾಗಿ ಕೇಡುಮಾಡುವುದು, ಡಂಭ, ಅಪ್ರಾಮಾಣಿಕತೆ, ಅಸತ್ಯ, ಚಾಡಿ, ಇವೆಂಟೂ ಎಂಟುಮಂದಿ ವೈಶ್ಯರು. ದಾಹ, ಹಸಿವು, ನಿದ್ರೆ, ಸೋಮಾರಿತನ, ಕನಿಕರವಿಲ್ಲದಿರುವುದು, (ನಿರ್ದಯೆ,) ಮನೋವ್ಯಾಧಿ, ವಿಷಾದ, ಪ್ರಮಾದ, ಸತ್ವ

ವಿಲ್ಲದಿರುವುದು, ಭಯ, ಕಳವಳ, ಮಂಕುತನ, ಪಾಪಬುದ್ಧಿ, ಕೋಪ, ಆಶೆ, ಅಶ್ರದ್ಧೆ, ಅಸ್ಥಿರತೆ, ಅನಾಲೋಚನೆ, ಅಶುಚಿತ್ವ, ಮಾಲಿನ್ಯವೆಂಬೀ ಇಪ್ಪತ್ತೊಂದೂ ಇಪ್ಪತ್ತೊಂದುಮಂದಿ ಶೂದ್ರರೆನಿಸುವರು. ಯಾವನಲ್ಲಿ ಈ ಕ್ಷತ್ರಿಯ, ವೈಶ್ಯ, ಶೂದ್ರ, ವೃಷಲ ಗುಣಗಳಿಲ್ಲವೋ ಅವನೇ ಶುದ್ಧ ನಾದ ಬ್ರಾಹ್ಮಣನು. ಬ್ರಾಹ್ಮಣನು ಯಾವಯಾವ ಕಾಲದಲ್ಲಿ ಮೇಲೆ ಹೇಳಿದ ಯಾವಯಾವ ಭಾವದಿಂದಿರುವನೋ, ಆಯಾಕಾಲದಲ್ಲಿ ಅವನು ದುರ್ಬಲಜ್ಞಾನವುಳ್ಳ ಹೀನಬ್ರಾಹ್ಮಣನೆಂದು ತಿಳಿ. ಯಾವ ಕಾಲ ದಲ್ಲಿ ಅವನು ಪ್ರಾಣೇಂದ್ರಿಯಗಳನ್ನಡಗಿಸಿ, ನನ್ನನ್ನು ಧ್ಯಾನಿಸುತ್ತಿರು ವನೋ ಆಗ ಅವನು ಶುದ್ಧಬ್ರಾಹ್ಮಣನೆನಿಸುತ್ತ ಇತರ ಕಾಲಗಳಲ್ಲಿ ಬೇರೆ ಯಾಗುವನು. ಆದುದರಿಂದ ನನ್ನ ಪ್ರೀತಿಗೆ ಪಾತ್ರನಾಗಲು ಬಯಸು ವವನು, ಸಾತ್ವಿಕನೂ, ಶುದ್ಧನೂ, ಕೋಪರಹಿತನೂ ಆಗಿದ್ದು, ಸದಾ ನನ್ನನ್ನು ಪೂಜಿಸಬೇಕು. ಜಿಹ್ವಾಚಾಪಲ್ಯವನ್ನು ನೀಗಿ, ಧೀರನೂ, ಸ್ಥಿರಮನಸ್ಕನೂ ಆಗಿರಬೇಕು. ಮನೋವಾಕ್ಕುಗಳನ್ನು ನಿಗ್ರಹಿಸಿ, ಕಣ್ಣು ಗಳೆರಡನ್ನೂ ನನ್ನಲ್ಲಿ ನೆಲೆಗೊಳಿಸಿ ಭಯರಹಿತನಾದವನೇ ನನ್ನ ಭಕ್ತನೆ ನಿಸುವನು. ಇಂತಹ ಆತ್ಮತತ್ವವನ್ನರಿತು ಜಿತೇಂದ್ರಿಯರಾದ ಬ್ರಾಹ್ಮಣರು ಶ್ರಾದ್ಧಗಳಲ್ಲಿ ತೃಪ್ತಿಹೊಂದಿದರೆ, ಶ್ರಾದ್ಧಮಾಡಿದವರ ಪಿತೃಗಳೆಲ್ಲ ತೃಪ್ತರಾ ಗುವರು. ಧರ್ಮವು ಜಯಿಸುವುದಲ್ಲದೆ ಅಧರ್ಮವು ಜಯಿಸದು! ಸತ್ಯವು ಜಯಿಸುವುದಲ್ಲದೆ ಅನೃತವು ಜಯಿಸದು! ತಾಳ್ಮೆಯು ಜಯಿಸುವುದಲ್ಲದೆ ಕ್ರೋಧವು ಜಯಿಸಲಾರದು. ಅಂತಹ ತಾಳ್ಮೆಯುಳ್ಳವನಾವನೋ ಅವನೇ ಉತ್ತಮಬ್ರಾಹ್ಮಣನೆನಿಸುವನು.

ಇದು ನೂರ ನಾಲ್ಕನೆಯ ಅಧ್ಯಾಯವು.



{ ಕೃಷ್ಣನು ಯುಧಿಷ್ಠಿರನಿಗೆ ಕಪಿಲಾದಾನದ ಪ್ರಶಂಸೆಯನ್ನು ತಿಳಿಸಿದುದು. }

ಯುಧಿಷ್ಠಿರನು ತಿರುಗಿ ಕೃಷ್ಣನನ್ನು ಕುರಿತು, 'ವಾಸುದೇವಾ! ಮೊಟ್ಟಮೊದಲು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಪವಿತ್ರವಾದ ಕಪಿಲೆಯೆಂಬ

ಹೋಮಧೇನುವು ಬ್ರಾಹ್ಮಣರಿಗಾಗಿ ಯಾವಾಗ ಹೇಗೆ ಕೊಡಲ್ಪಟ್ಟಿತು? ಎಂತಹ ಕಪಿಲೆಯು ಪುಣ್ಯಲಕ್ಷಣವುಳ್ಳದು? ಕಪಿಲೆಯು ಎಂತಹ ಬ್ರಾಹ್ಮಣನಿಗೆ ಹೇಗೆ ದಾನಮಾಡಲ್ಪಡಬೇಕೆಂದು ಬ್ರಹ್ಮನು ವಿಧಿಸಿರುವನೋ ಆ ಅಂಶವನ್ನು ನನಗೆ ತಿಳಿಸಬೇಕು' ಎಂದನು. ಆಗ ಕೃಷ್ಣನು ಆ ಮಹಾಸಭೆಯಲ್ಲಿ ಧರ್ಮಪುತ್ರನ ಪ್ರಶ್ನೆಗೆ ಉತ್ತರವಾಗಿ ಕಪಿಲೆಗಳ ಭೇದವನ್ನೂ, ಅವುಗಳ ಮಹಾತ್ಮ್ಯವನ್ನೂ ಹೇಳತೊಡಗಿದನು. 'ಓ ಪಾಂಡುಕುಮಾರಾ! ಪವಿತ್ರವೂ ಶುಭಕರವೂ ಆದ ಆ ವಿವರವನ್ನು ತಿಳಿಸುವೆನು ಕೇಳು. ಮಹಾಪಾಪಿಯಾದರೂ ಅದನ್ನು ಕೇಳಿ ಪಾಪವಿಮುಕ್ತನಾಗುವನು. ಕಪಿಲೆಯೆಂಬುದು ಅಗ್ನಿಮಧ್ಯಮದಿಂದ ಉಂಟಾದುದು. ದೇವಯೋಗ್ಯವಾದುದು. ಅಗ್ನಿಜ್ವಾಲೆಗೆ ಸಮಾನವಾದ ಕಾಂತಿಯುಳ್ಳದು. ಅಗ್ನಿಜ್ವಾಲೆಯಂತೆ ಪ್ರಕಾಶಿಸುವ ಕೊಂಬುಗಳುಳ್ಳದು. ಅಗ್ನಿಯ ಕೆಂಡದಂತೆ ಕಣ್ಣುಗಳುಳ್ಳದು. ಬಾಲ, ಗೊರಸಲು, ರೋಮಗಳು, ಇವೆಲ್ಲಾ ಅದಕ್ಕೆ ಅಗ್ನಿಪ್ರಭೆಯುಳ್ಳುದು! ಅದು ಅಗ್ನಿಸಂಬಂಧವಾದುದೇ! ಅದರ ನಾಲಗೆ, ಕತ್ತು ಇವೆಲ್ಲವೂ ಅಗ್ನಿರೂಪವಾದುದು. ಅಗ್ನಿಯಂತೆ ಜ್ವಲಿಸುವ ದೇಹಕಾಂತಿಯುಳ್ಳದು. ಇಂತಹ ಪ್ರಭಾವವುಳ್ಳ ಕಪಿಲೆಯನ್ನು ಶೂದ್ರರು ಆಶಾಮೋಹಗಳಿಂದ ತಮ್ಮಲ್ಲಿಟ್ಟುಕೊಂಡು, ಅದರ ಹಾಲು ಮೊಸರು ಬೆಣ್ಣೆಗಳನ್ನು ಅನುಭವಿಸುತಿದ್ದರೆ ಅವರು ಪತಿತರೆನಿಸುವರು. ಚಂಡಾಲರಿಗೆ ಸಮಾನರು. ಅವರ ಮನೆಯಲ್ಲಿ ಯಾವ ಬ್ರಾಹ್ಮಣನೂ ದಾನತೆಗೆಯಬಾರದು. ಅವರನ್ನು ದೂರವಾಗಿರಿಸಬೇಕು. ಅವರು ಮಹಾಪಾತಕಿಗಳೆನಿಸುವರು. ಪಿತೃಗಳೂ, ದೇವತೆಗಳೂ, ಅವರನ್ನು ದೂರೀಕರಿಸಿರುವರು. ಪಾಪಿಗಳಾದ ಅವರೊಡನೆ ಮಾತಾಡಲೂ ಬಾರದು. ಯಾರು ಕಪಿಲೆಯ ಹಾಲುಮೊಸರನ್ನು ಅನುಭವಿಸುವರೋ, ಅವರು ಅವನ್ನು ಭುಜಿಸುತ್ತಿರುವವರೆಗೂ, ಅವರ ಪಿತೃಗಳು ನಾಯಿನರಿಗಳಂತೆ ಅಮೇಧ್ಯವನ್ನೇ ಭುಜಿಸುತ್ತಿರುವರು. ಕಪಿಲೆಯ ಹಾಲುಮೊಸರು, ಮುಂತಾದುವನ್ನು ಕುಡಿಯತಕ್ಕ ಶೂದ್ರರ ದುರ್ಗತಿಯೇನೆಂಬುದನ್ನು ಹೇಳುವೆನು ಕೇಳು. ಕಪಿಲೆಯಿಂದ ಜೀವಿಸತಕ್ಕವನು, ತಾನು ಸತ್ತಮೇಲೆ ರೌರವನರಕವನ್ನು ಹೊಂದುವನು. ಅಲ್ಲಿ ಬಹುಕಾಲದವರೆಗೆ ನರಳಿ ತಿರುಗಿ ಶುನಕಜನ್ಮ

ದಲ್ಲಿ ಹುಟ್ಟುವನು. ಹಾಗೆಯೇ ಇನ್ನೂ ಹೀನಜನ್ಮಗಳನ್ನೆತ್ತಿ ಅಮೇಧ್ಯ ಕೂಪಗಳಲ್ಲಿ ಕ್ರಿಮಿಯಾಗಿ ಜನಿಸುವನು. ತನ್ನನ್ನು ಉದ್ಧರಿಸುವರೊಬ್ಬ ರನ್ನೂ ಕಾಣದೆ ನರಳುವನು. ಅಂತಹ ಶೂದ್ರನ ಮನೆಯಲ್ಲಿ ಪ್ರತಿಗ್ರಹ ಮಾಡತಕ್ಕ ಬ್ರಾಹ್ಮಣನ ಪಿತೃಗಳು ಅಶುದ್ಧಭೋಜಿಗಳಾಗುವರು. ಅಂ ತಹ ಬ್ರಾಹ್ಮಣರೊಡನೆ ಉತ್ತಮ ಬ್ರಾಹ್ಮಣರು ಸಂಭಾಷಿಸಬಾರದು. ಏಕಾಸನದಲ್ಲಿ ಕುಳ್ಳಿರಬಾರದು! ಅವರನ್ನು ದೂರದಲ್ಲಿರಿಸಬೇಕು. ಹಾಗಿ ಲ್ಲದೆ ಅವರೊಡನೆ ಸಂಭಾಷಣ ಸಹಶಯ್ಯೆಗಳನ್ನು ಮಾಡುವವನು ಪ್ರಾಜಾ ಪತ್ಯವನ್ನು ನಡೆಸಿ ಅದರಿಂದ ಶುದ್ಧನಾಗಬೇಕು. ಅಥವಾ ಅವನು ಬ್ರಹ್ಮ ಕೂರ್ಚವನ್ನೂ, ಚಾಂದ್ರಾಯಣವನ್ನೂ ನಡೆಸಿದರೆ ಶುದ್ಧನಾಗುವನು. ಇದೇ ಅವನಿಗೆ ಪಾಪಹಾರಕವಾದ ಪ್ರಾಯಶ್ಚಿತ್ತವು. ಓ ಧರ್ಮಪುತ್ರಾ! ಬ್ರಹ್ಮನು ಅಗ್ನಿಹೋತ್ರಕ್ಕಾಗಿಯೂ, ಬ್ರಾಹ್ಮಣರಿಗಾಗಿಯೂ, ತೇಜಸ್ಸೆಲ್ಲ ವನ್ನೂ ಸಂಗ್ರಹಿಸಿ ಈ ಕಪಿಲೆಯೆಂಬ ಧೇನುವನ್ನು ಸೃಷ್ಟಿಸಿರುವನು. ಆದುದರಿಂದ ಕಪಿಲೆಯೆಂಬುದು ಪವಿತ್ರಗಳಿಗೂ ಪವಿತ್ರವಾದುದು. ಮಂ ಗಳಗಳಿಗೂ ಮಂಗಳಕರವಾದುದು! ಪುಣ್ಯಗಳಲ್ಲಿ ಪರಮ ಪುಣ್ಯವೆನಿಸು ವುದು. ತಪಸ್ಸು, ವ್ರತ, ದಾನ ಇವುಗಳಿಗಿಂತಲೂ ಮೇಲೆನಿಸುವುದು. ಅದೊಂದು ಅಕ್ಷಯವಾದ ನಿಧಿ. ಲೋಕದಲ್ಲಿ ಎಲ್ಲಾ ಪುಣ್ಯತೀರ್ಥ ಕ್ಷೇತ್ರಗಳ ಮಹಿಮೆಯನ್ನೆಲ್ಲಾ ಸಂಗ್ರಹಿಸಿ ಬ್ರಹ್ಮನು ಲೋಕೋದ್ಧರ ಣಕ್ಕಾಗಿಯೇ ಆ ಕಪಿಲೆಗಳನ್ನು ಸೃಷ್ಟಿಸಿರುವನು. ಅದು ಅಮೃತಮಯ ವಾದುದು, ಶುದ್ಧವಾದುದು, ಪರಮಪಾವನವೆನಿಸಿದುದು. ಆ ಕಪಿಲೆಯ ಹಾಲು, ಮೊಸರು, ತುಪ್ಪ ಇವುಗಳನ್ನು ಹಗಲುರಾತ್ರಿಯೂ ಅಗ್ನಿಹೋತ್ರ ಗಳಿಗಾಗಿಯೇ ಉಪಯೋಗಿಸಬೇಕು. ಹೀಗೆ ಯಾವ ಬ್ರಾಹ್ಮಣರು ಅದರ ಗವ್ಯಗಳನ್ನು ಅಗ್ನಿಹೋತ್ರಕ್ಕಾಗಿಯೂ, ಅತಿಥಿಪೂಜೆಗಾಗಿಯೂ ಉಪಯೋಗಿಸುವರೋ ಅಂತಹ ಬ್ರಾಹ್ಮಣರು ಸೂರ್ಯಸಮಾನವಾದ ವಿಮಾನಗಳಿಂದ, ಸೂರ್ಯಮಂಡಲ ಮಧ್ಯದಿಂದ ಬ್ರಹ್ಮಲೋಕವನ್ನು ಸೇರಿ, ಅಲ್ಲಿ ಕಾಮರೂಪಿಗಳಾಗಿ ಬ್ರಹ್ಮನಿಂದ ಪೂಜಿಸಲ್ಪಡುತ್ತ, ಕಲ್ಪಾಂತದವರೆಗೆ ಸುಖಿಸುವರು. ಹೀಗೆ ಕಪಿಲೆಯೆಂಬ ಧೇನುವು ಪವಿತ್ರವಾದುದು. ಮಂತ್ರ ಗಳಿಗೂ, ಅಮೃತಕ್ಕೂ ಉತ್ಪತ್ತಿಸ್ಥಾನವಾದುದು. ಇದು ಸೂರ್ಯತೇಜಸ್ಸಿ

ನಿಂದುತ್ಪನ್ನವಾದುದರಿಂದ ವೈತ್ರೇಯಿಯೆನಿಸುವುದು. ಅದರ ಕೊಂಬಿನ ತುದಿಯಲ್ಲಿ ಸಮಸ್ತತೀರ್ಥಗಳೂ ಯಾವಾಗಲೂ ನೆಲೆಸಿರುವುವು. ಬೆಳಗ್ಗೆ ಎದ್ದೊಡನೆ ಯಾವನು ಕಪಿಲೆಯ ಶೃಂಗಾಗ್ರವನ್ನು ತೊಳೆದ ಜಲಧಾರೆಯನ್ನು ಶಿರಸ್ಸಿನಿಂದ ಧರಿಸುವನೊ ಅವನು ಮೂರು ಜನ್ಮಗಳಿಂದ ಮಾಡಿದ ಪಾಪಗಳನ್ನೆಲ್ಲ ನೀಗುವನು. ಆ ಕಪಿಲೆಯ ಮೂತ್ರವನ್ನು ಯಾವನು ಕಣ್ಣು ಮೊದಲಾದ ಇಂದ್ರಿಯುಗಳಿಗೆ ಸ್ಪರ್ಶಿಸುವನೋ ಅವನು ಹಿಂದಿನ ಮೂವತ್ತು ವರ್ಷಗಳಿಂದ ಮಾಡಿದ ಪಾಪಗಳನ್ನೆಲ್ಲಾ ಕಳೆದು ಶುದ್ಧನಾಗುವನು. ಬೆಳಿಗ್ಗೆ ಎದ್ದೊಡನೆ ಕಪಿಲೆಗೆ ಒಂದು ಹಿಡಿಹುಲ್ಲನ್ನು ಹಾಕಿ ಬಂದವನು, ಮೂವತ್ತು ರಾತ್ರಿಗಳ ಪಾಪವನ್ನು ನೀಗುವನು. ಬೆಳಗ್ಗೆ ಎದ್ದು ಒಂದಾವರ್ತಿ ಧೇನುವನ್ನು ಪ್ರದಕ್ಷಿಣೆಮಾಡಿಬಂದವನಿಗೆ ಭೂಪ್ರದಕ್ಷಿಣೆ ಮಾಡಿದ ಫಲವುಂಟು. ಆ ಒಂದು ಪ್ರದಕ್ಷಿಣದಿಂದ ಅವನಿಗೆ ಹತ್ತು ರಾತ್ರಿಗಳ ಪಾಪವು ನೀಗುವುದು. ಪಂಚಗವ್ಯಸ್ನಾನವು ಗಂಗಾದಿ ತೀರ್ಥಸ್ನಾನಗಳಿಗೆ ಸಮಾನವು. ಆ ಸ್ನಾನದಿಂದಲೂ ಹತ್ತು ರಾತ್ರಿಗಳ ಪಾಪವು ನೀಗುವುದು. ಕಪಿಲೆಯನ್ನು ಭಕ್ತಿಯಿಂದ ದರ್ಶನಮಾಡಿದರೂ, ಅದರ ಹೂಂಕಾರವನ್ನು ಕಿವಿಯಿಂದ ಕೇಳಿದರೂ, ಅಹೋರಾತ್ರಿಗಳಲ್ಲಿ ಮಾಡಿದ ಪಾಪದಿಂದ ಮುಕ್ತನಾಗುವನು. ಕಪಿಲೆಯ ದೇಹದಲ್ಲಿ ಯಾವುದೊಂದು ಭಾಗವನ್ನು ಸ್ಪರ್ಶಿಸಿದರೂ ವರ್ಷಾಂತದ ಪಾಪವು ನೀಗುವುದು. ಒಂದು ಕಪಿಲೆಯ ದಾನವು ಸಹಸ್ರಗೋದಾನಗಳಿಗೆ ಸಮಾನವೆಂದು ಬ್ರಹ್ಮನು ಹೇಳಿರುವನು. ಒಂದು ಕಪಿಲೆಯನ್ನು ಹೊಡೆಯುವುದರಿಂದ ಸಹಸ್ರಗೋವುಗಳನ್ನು ಹೊಡೆದ ಪಾಪಕ್ಕೆ ಗುರಿಯಾಗುವನು. ಕಪಿಲೆಗಳಲ್ಲಿ ವರ್ಣಭೇದದಿಂದ ಸ್ವರ್ಣಕಪಿಲೆ, ಗೌರಪಿಂಗಳೆ, ರಕ್ತಪಿಂಗಾಕ್ಷಿ, ಗಲಪಿಂಗಲೆ, ಬಭ್ರುವರ್ಣೆ, ಶ್ವೇತಪಿಂಗಲೆ, ರಂಗಪಿಂಗಾಕ್ಷಿ, ಸುರಪಿಂಗಲೆ, ಪಾಟಲೆ, ಪುಚ್ಛಪಿಂಗಲೆ ಎಂದು ಹತ್ತು ಬಗೆ. ಎತ್ತುಗಳಲ್ಲಿಯೂ ಇದೇ ಹತ್ತುಬಗೆಯುಂಟು. ಇವನ್ನು ಬ್ರಾಹ್ಮಣರು ಹೊರತು ಇತರವರ್ಣದವರು, ಉಪಯೋಗಿಸಬಾರದು. ಹೊರೆಯನ್ನು ಹೊರಿಸಬಾರದು. ಬ್ರಾಹ್ಮಣನಾದರೂ ಕಪಿಲೆಯನ್ನು ಉಳುವುದಕ್ಕಾಗಲಿ, ಭಾರವನ್ನೆಳೆಯುವುದಕ್ಕಾಗಲಿ ಉಪಯೋಗಿಸಬಾರದು. ಬರೀ ಹುಂಕಾರದಿಂದಲೋ, ಹುಲ್ಲನ್ನು ತೋರಿ

ಸಿಯೋ ಕರೆದುಕೊಂಡು ಹೋಗಬೇಕು. ಹಸಿವು ಬಾಯಾರಿಕೆಗಳಿಂದಾಗಲಿ, ಆಯಾಸದಿಂದಾಗಲಿ ಬಳಲಿದವುಗಳನ್ನಾಗಲಿ, ಅಂಗಹೀನತೆಯಿದ್ದವುಗಳನ್ನಾಗಲಿ ಅಟ್ಟಿಕೊಂಡು ಹೋಗಬಾರದು. ಅವುಗಳಿಗೆ ಹುಲ್ಲು ನೀರನ್ನು ಕೊಡದೆ ತಾನು ತಿನ್ನಬಾರದು. ತಂದೆತಾಯಿಗಳಂತೆ ಭಾವಿಸಿ ಅವುಗಳನ್ನು ಉಪಚರಿಸಬೇಕು. ಭಾರವನ್ನು ಹೊರಿಸುವುದಾದರೆ ಮಧ್ಯಾಹ್ನಕ್ಕೆ ಮೊದಲೇ ಅವುಗಳಿಂದ ಆ ಕೆಲಸವನ್ನು ಮಾಡಿಸಬೇಕು. ಹಗಲಿನ ಮಧ್ಯಭಾಗದಲ್ಲಿಯೂ, ಅಂತ್ಯಭಾಗದಲ್ಲಿಯೂ ಅವುಗಳಿಗೆ ವಿಶ್ರಾಂತಿಯನ್ನು ಕೊಡಬೇಕು. ಅತ್ಯಾತುರದ ಕಾರ್ಯಗಳಲ್ಲಿಯೂ, ತಪ್ಪಿಂದ ದಾರಿಸಾಗುವುದು ಸಂದೇಹಾಸ್ಪದವಾಗಿದ್ದಾಗಲೂ, ಎತ್ತುಗಳನ್ನು ಹೊರೆಹೊರಿಸುವುದಕ್ಕೆ ಉಪಯೋಗಿಸಬಹುದು. ಹಾಗಿಲ್ಲದೆ ಮನಸ್ಸಿಗೆ ತೋರಿದಂತೆ ಅವುಗಳಿಂದ ಕೆಲಸಮಾಡಿಸುವವನು ಪಾಪಕ್ಕೆ ಗುರಿಯಾಗುವನು. ಆ ಕಪಿಲೆಯ ಅಥವಾ ಎತ್ತಿನ ದೇಹಕ್ಕೆ ರಕ್ತಗಾಯಮಾಡುವವನು ನರಕಭಾಗಿಯಾಗಿ ನೂರಾರು ವರ್ಷಗಳವರೆಗೆ ನರಳಿ, ತಿರುಗಿ ಈ ಲೋಕದಲ್ಲಿ ಎತ್ತಾಗಿಯೇ ಜನಿಸಿ ಕಷ್ಟಪಡುವನು. ರಕ್ತಗಾಯಮಾಡಿದ ಪಾಪವನ್ನು ಕಪಿಲಾದಾನದಿಂದಲೇ ನಿವೃತ್ತಿಮಾಡಿಕೊಳ್ಳಬೇಕು. ಯಾವ ವೃಷಲನು ಕಪಿಲೆಯಮೇಲೆ ಭಾರಹೊರಿಸುವನೋ, ಅವನು ಎಲ್ಲಾ ದೇವತೆಗಳಮೇಲೆ ಭಾರವನ್ನು ಹೊರಿಸಿದ ಪಾಪಕ್ಕೆ ಗುರಿಯಾಗಿ, ಅವರಿಂದ ತಾನೂ ಹಿಂಸಿಸಲ್ಪಡುವನು. ಬ್ರಹ್ಮರುದ್ರನೂ, ಅಗ್ನಿಯೂ, ಕಪಿಲೆಯ ಲೋಕದಲ್ಲಿರುವರು. ಅವು ಹಿಂಸಿಸಲ್ಪಟ್ಟು ನಿಟ್ಟುಸಿರುಬಿಟ್ಟಾಗ ಆ ಉಸಿರಿನ ಗಾಳಿಯು ಕುಲವನ್ನೇ ದಹಿಸುವುದು. ಅವುಗಳ ಮೈಯಲ್ಲಿ ಎಷ್ಟು ರೋಮಗಳುಂಟೋ ಅಷ್ಟು ಶತವರ್ಷಗಳವರೆಗೆ ಅವರು ನರಕದಲ್ಲಿ ನರಳುವರು. ಕಪಿಲೆಗಳು ಯಜ್ಞದಲ್ಲಿ ದಕ್ಷಿಣಾರೂಪವಾಗಿ ವಿಧಿಸಲ್ಪಟ್ಟಿವೆ. ಆದುದರಿಂದ ಅದನ್ನು ಯಜ್ಞಕಾಲದಲ್ಲಿಯೇ ದಾನಮಾಡಬೇಕು. ವೇದವಿದನೂ, ತೇಜಸ್ವಿಯೂ, ದರಿದ್ರನೂ ಆದ ಬ್ರಾಹ್ಮಣನ ಅಗ್ನಿಹೋತ್ರಕಾರ್ಯಕ್ಕಾಗಿ ಕಪಿಲೆಯನ್ನು ಕೊಟ್ಟವನು, ಆ ದಾನದಿಂದ ಪಾಪವಿಮುಕ್ತನಾಗಿ ನನ್ನ ಲೋಕವನ್ನು ಹೊಂದುವನು. ಅಂತವನು ಆ ಕಪಿಲೆಯ ಮೈಯಲ್ಲಿರುವ ರೋಮಸಂಖ್ಯೆಯೆಷ್ಟೋ ಅಷ್ಟು ಸಹಸ್ರವರ್ಷಗಳವರೆಗೆ ಸ್ವರ್ಗದಲ್ಲಿ ಪೂಜಿಸಲ್ಪಡುವನು.

ಚಿನ್ನದಿಂದಲಂಕೃತವಾದ ಕೊಂಬು ಮತ್ತು ಗೊರಸಲುಗಳುಳ್ಳ ಕಪಿಲೆಯನ್ನು ಅಯನ, ವಿಷುವ ಪುಣ್ಯಕಾಲಗಳಲ್ಲಿ ದಾನಮಾಡುವವನು ಅಶ್ವಮೇಧಯಾಗದ ಫಲಕ್ಕೆ ಭಾಗಿಯಾಗಿ ನನ್ನ ಲೋಕವನ್ನು ಹೊಂದುವನು. ಕಂಚಿನ ಪಾತ್ರೆಯ ತುಂಬ ಹಾಲನ್ನು ಕರೆಯತಕ್ಕ ಪುಷ್ಟಿಯುಳ್ಳ ಒಂದು ಕಪಿಲೆಯನ್ನು ಕರುಸಹಿತವಾಗಿ, ಗಂಧಪುಷ್ಪವಸ್ತ್ರಾದಿಗಳಿಂದಲಂಕರಿಸಿ, ಅಗ್ನಿಹೋತ್ರಿಯಾದ ಬ್ರಾಹ್ಮಣನಿಗೆ ದಾನಮಾಡಬೇಕು. ಈ ದಾನಫಲವು ಕೊಟ್ಟವನ ಹಿಂದುಮುಂದಿನ ಏಳೇಳು ತಲೆಮೊರೆಯವರನ್ನೂ ಉದ್ಧರಿಸುವುದು. ಇದರಲ್ಲಿ ಸಂದೇಹವಿಲ್ಲ. ಸುವರ್ಣವು ಪವಿತ್ರಕ್ಕಿಂತಲೂ ಪವಿತ್ರವೆನಿಸಿರುವುದರಿಂದ, ಸುವರ್ಣಾಲಂಕೃತವಾದ ಗೋವನ್ನೇ ದಾನಮಾಡಬೇಕು. ಸಾವಿರ ಅಗ್ನಿಷ್ಟೋಮಗಳಿಗೆ ಒಂದು ವಾಜಪೇಯವೂ, ಸಾವಿರ ವಾಜಪೇಯಗಳಿಗೆ ಒಂದು ಅಶ್ವಮೇಧವೂ, ಸಾವಿರ ಅಶ್ವಮೇಧಗಳಿಗೆ ಒಂದು ರಾಜಸೂಯವೂ ಸಮಾನವೆನಿಸುವುದು. ಸಹಸ್ರಕಪಿಲೆಗಳನ್ನು ದಾನಮಾಡಿದವನು ರಾಜಸೂಯಯಾಗದ ಫಲವನ್ನು ಹೊಂದಿ ನನ್ನ ಲೋಕವನ್ನು ಸೇರುವನು. ಅವನಿಗೆ ಪುನರ್ಜನ್ಮವಿಲ್ಲ. ಮೇಲೆ ಹೇಳಿದಂತೆ ಸ್ವರ್ಣಾಲಂಕೃತವಾಗಿ, ಚೆನ್ನಾಗಿ ಹಾಲುಕರೆಯತಕ್ಕ ಕಪಿಲೆಯನ್ನು ಕರುವಿನ ಸಮೇತವಾಗಿ ದಾನಮಾಡುವವನಿಗೆ, ಆ ಕಪಿಲೆಯೇ ಸರ್ವಾಭೀಷ್ಟಗಳನ್ನೂ ಈಡೇರಿಸುವುದು. ಮತ್ತು ಆ ಕಪಿಲೆಯು, ಸ್ವಕರ್ಮಬದ್ಧನಾಗಿ ಅಂಧಕಾರಮಯವಾದ ನರಕದಲ್ಲಿ ಬೀಳುವವನನ್ನೂ, ಅವನ ಪುತ್ರಪೌತ್ರರೊಡನೆ ಏಳು ತಲೆಮೊರೆಗಳವರೆಗೆ ಸಮಸ್ತಕುಲವನ್ನೂ ಉದ್ಧರಿಸುವುದು. ಭೂಮಿಯು ಮನುಷ್ಯರನ್ನು ಧರಿಸಿರುವಷ್ಟು ಕಾಲದವರೆಗೂ, ಗೋದಾನಫಲವನ್ನು ಮನುಷ್ಯನು ಪರಲೋಕದಲ್ಲಿ ಅನುಭವಿಸುತ್ತಿರುವನು. ಉತ್ತಮೌಷಧವು ರೋಗವನ್ನು ಹೇಗೋಹಾಗೆ ಗೋದಾನವು ಸಮಸ್ತಪಾಪಗಳನ್ನೂ ನೀಗಿಸುವುದು. ಕಪಿಲಾದಾನದಿಂದ, ಗರುಡನನ್ನು ಕಂಡ ಸರ್ಪಗಳಂತೆ ಪಾಪಗಳೆಲ್ಲ ಓಡಿಹೋಗುವುವು. ಸರ್ಪಗಳು ಪರೆಯನ್ನು ಸುಲಿದು ಶುದ್ಧರೂಪವನ್ನು ಹೊಂದುವಂತೆ ಕಪಿಲಾದಾನದಿಂದ ನರನು ಪಾಪವಿಮುಕ್ತನಾಗಿ ಶುದ್ಧನಾಗುವನು. ದೀಪದಿಂದ ಅಂಧಕಾರವು ಹೇಗೋ ಹಾಗೆ ಕಪಿಲಾದಾನದಿಂದ ಪಾಪಗಳು ನಶಿಸುವುವು. ದಾನಮಾಡಿದವನು ಬ್ರಹ್ಮ

ಲೋಕದಲ್ಲಿ ಪೂಜಿತನಾಗುವನು. ಅಹಿತಾಗ್ನಿಯೂ, ಜಿತೇಂದ್ರಿಯನೂ, ಶೂದ್ರಾನ್ನಾದಿ ಸಂಪರ್ಕವಿಲ್ಲದೆ ಶುದ್ಧನೂ, ಸತ್ಯವ್ರತನೂ, ವೇದಾಧ್ಯಯನ ಪರನೂ ಆದ ವಿಪ್ರನಿಗೆ ಕೊಟ್ಟ ಗೋದಾನವು ಪರಲೋಕಸಾಧನವು.

ಇದು ನೂರೈದನೆಯ ಅಧ್ಯಾಯವು.



{ ಕೃಷ್ಣನು ಯುಧಿಷ್ಠಿರನಿಗೆ ಕಪಿಲೆಯ ಸೃಷ್ಟಿಕ್ರಮವನ್ನೂ, ಅದರ ಮಹಿಮೆಗೆ ಕಾರಣವಾದ ಪೂರ್ವಕಥೆಗಳನ್ನೂ, ದಾನಕಾಲಗಳನ್ನೂ, ಶ್ರಾದ್ಧಕ್ಕೆ ಅರ್ಹರೂ, ಅನರ್ಹರೂ ಆದ ಬ್ರಾಹ್ಮಣರನ್ನೂ, ಸುಕೃತ ದುಷ್ಕೃತಗಳನ್ನೂ ವಿವರಿಸಿದುದು. }

ತಿರುಗಿ ಯುಧಿಷ್ಠಿರನು ಕೃಷ್ಣನನ್ನು ಕುರಿತು “ವಾಸುದೇವಾ! ಕಪಿಲೆಯನ್ನು ಬ್ರಾಹ್ಮಣನಿಗೆ ದಾನಮಾಡುವ ಕಾಲವಾವುದು? ಕಪಿಲೆಯ ದೇಹದಲ್ಲಿ ಸಮಸ್ತ ದೇವತೆಗಳೂ ಇರುವುದೆಂದರೆ ಹೇಗೆ? ನೀನು ಹೇಳಿದ ಹತ್ತುಬಗೆಯ ಕಪಿಲಾಭೇದಗಳಲ್ಲಿ ಪುಣ್ಯಲಕ್ಷಣಗಳುಳ್ಳ ಕಪಿಲೆಗಳೆಷ್ಟು? ಅವಾವುವು? ದೇವತೆಗಳೂ, ಪಿತೃಗಳೂ ಕಪಿಲೆಗಳನ್ನು ಅನುಗ್ರಹಿಸಿದ ರೀತಿಯೇನು? ಅವುಗಳ ವರ್ಣಗಳಾವುವು? ಇವನ್ನೆಲ್ಲ ನಿನ್ನಿಂದ ಕೇಳಿ ತಿಳಿಯಬೇಕೆಂದು ನನಗೆ ಕುತೂಹಲವುಂಟು” ಎಂದನು. ಆಗ ಕೃಷ್ಣನು ‘ರಾಜೇಂದ್ರಾ! ಆ ಧರ್ಮರಹಸ್ಯವನ್ನು ನೀನು ಅವಶ್ಯವಾಗಿ ಕೇಳಬೇಕು. ನಿನ್ನಂತವರು ಹೊರತು ಕುಹಕವಾದ ಯುಕ್ತಿವಾದಗಳನ್ನು ಮಾಡತಕ್ಕವರು ಇದನ್ನು ಕೇಳಲೇ ಬಾರದು. ಹಸುವು ಕರು ಹಾಕುವ ಕಾಲದಲ್ಲಿ ಅದರ ಎರಡು ಕಾಲುಗಳೂ, ತಲೆಯೂ ಹೊರಗೆ ಕಾಣಿಸುತ್ತಿರುವಾಗ, ಆ ಸಮಯವೇ ಅದನ್ನು ದಾನಮಾಡುವುದಕ್ಕೆ ಅತ್ಯುತ್ತಮಕಾಲವೆಂದು ಋಷಿಗಳು ಹೇಳಿರುವರು. ಹಸುವಿನ ಗರ್ಭದಿಂದ ಕರುವು ಕೆಳಗೆ ಬಿದ್ದು ಭೂಸ್ಪರ್ಶವಾಗುವುದಕ್ಕೆ ಮೊದಲು, ಅಂತರಾಳದಲ್ಲಿರುವವರೆಗೆ ಈಯುತ್ತಿರುವ ಆ ಧೇನುವು ಭೂಮಿಯೆನಿಸುವುದು. ಅಂತಹ ಧೇನುವನ್ನು ದಾನಕೊಟ್ಟರೆ ಭೂದಾನದ ಫಲವುಂಟು. ಹಾಗೆ ದಾನಮಾಡಿದವನು

ಆ ಹಸುವಿನ ಮತ್ತು ಕರುವಿನ ಮೈಯಲ್ಲಿ ಎಷ್ಟು ರೋಮಗಳುಂಟೋ, ಮತ್ತು ಆ ಹಸುವಿನ ಗರ್ಭಜಲದಿಂದ ತೊಯ್ದ ಭೂಮಿಯಲ್ಲಿರುವ ಮರಲಿನ ಕಣಗಳೆಷ್ಟುಂಟೋ, ಅಷ್ಟುಸಹಸ್ರವರ್ಷಗಳವರೆಗೆ ಸ್ವರ್ಗದಲ್ಲಿ ದೇವತೆಗಳಿಂದ ಪೂಜಿಸಲ್ಪಡುವನು. ವತ್ಸಸಹಿತವಾದ ಧೇನುವನ್ನು ಸುವರ್ಣರತ್ನಾಭರಣಗಳಿಂದಲಂಕರಿಸಿ, ಎಳ್ಳಿನಿಂದ ಹೊದಿಸಿ ದಾನಮಾಡಿದರೆ, ಪರ್ವತಾರಣ್ಯಗಳಿಂದಲೂ, ಸಮುದ್ರನದಿಗಳಿಂದಲೂ ಕೂಡಿದ ಸಮಸ್ತ ಭೂಮಿಯನ್ನೂ ದಾನಮಾಡಿದಂತೆಯೇ ಆಗುವುದು. ಈ ದಾನಫಲದಿಂದ ದಾನಿಯು ಸಂಸಾರಸಮುದ್ರವನ್ನು ದಾಟಿ ಬ್ರಹ್ಮಲೋಕವನ್ನು ಸೇರುವನು. ಬ್ರಹ್ಮಹತ್ಯೆ, ಭ್ರೂಣಹತ್ಯೆ, ಗೋಹತ್ಯೆ, ಗುರುದಾರಪರಿಗ್ರಹ, ಮುಂತಾದ ಪಂಚಮಹಾಪಾತಕಗಳೂ ಈ ದಾನದಿಂದ ಬಿಟ್ಟುಹೋಗಿ ದಾನಿಯು ಶುದ್ಧನಾಗುವನು. ಈ ಕಪಿಲಾದಾನದ ಮಹಿಮೆಯನ್ನು ಪ್ರತಿದಿನವೂ ಬೆಳಗ್ಗೆ ಹಾಸಿಗೆಯಿಂದೆದ್ದೊಡನೆ ನನ್ನಲ್ಲಿ ಭಕ್ತಿಯಿಂದ ಪಠನಮಾಡತಕ್ಕವನು ಹಿಂದಿನರಾತ್ರಿ ತ್ರಿಕರಣಗಳಿಂದ ಮಾಡಿದ ಪಾಪಗಳಿಂದ ಮುಕ್ತನಾಗುವನು. ಶ್ರಾದ್ಧಕಾಲದಲ್ಲಿ ದ್ವಿಜನು ಬ್ರಾಹ್ಮಣಸಂತರ್ಪಣವನ್ನು ಮಾಡುವಾಗ ಈ ಅಧ್ಯಾಯವನ್ನು ಪಠನಮಾಡಿದರೂ ಕೂಡ, ಅವನ ಪಿತೃಗಳು ಅಮೃತವನ್ನು ಭುಜಿಸಿದಂತೆ ತೃಪ್ತರಾಗುವರು. ಇದನ್ನು ಕಿವಿಯಿಂದ ಕೇಳಿದವರಿಗೂ ರಾತ್ರಿಯಲ್ಲಿ ಮಾಡಿದ ಪಾಪವು ನಶಿಸುವುದು. ಹಿಂದೆ ಹೇಳಿದ ಹತ್ತುಬಗೆಯಲ್ಲಿ ಸುವರ್ಣಕಪಿಲೆ, ರಕ್ತಾಕ್ಷಿಪಿಂಗಲೆ, ಪಿಂಗಳಾಕ್ಷಿ, ಪಿಂಗಳಪಿಂಗಳೆ, ಇವು ನಾಲ್ಕೂ ಉತ್ತಮಜಾತಿಯ ಕಪಿಲೆಗಳು. ಈ ಗೋವುಗಳ ದರ್ಶನ ನಮಸ್ಕಾರಗಳು ಕೂಡ ಸಮಸ್ತಪಾಪಗಳನ್ನೂ ನೀಗಿಸುವುವು. ಇಂತಹ ಕಪಿಲೆಗಳು ಯಾವನ ಮನೆಯಲ್ಲಿರುವುವೋ ಅವನಿಗೆ ಕೀರ್ತಿಯೂ, ಜಯವೂ, ಸಂಪತ್ತೂ ಸ್ಥಿರವಾಗಿರುವುವು. ಇವುಗಳ ಹಾಲಿನಿಂದ ರುದ್ರನೂ, ಮೊಸರಿನಿಂದ ಎಲ್ಲಾ ದೇವತೆಗಳೂ, ತುಪ್ಪದಿಂದ ಅಗ್ನಿಯೂ ಪ್ರೀತರಾಗುವರು. ಇಂತಹ ಕಪಿಲೆಯ ಹಾಲು, ಮೊಸರು, ತುಪ್ಪಗಳನ್ನಾಗಲಿ, ಈ ಸಂಬಂಧವುಳ್ಳ ಪಾಯಸಗಳನ್ನಾಗಲಿ ಶ್ರಾದ್ಧಕಾಲದಲ್ಲಿ ಒಂದಾವರ್ತಿ ಉಪಯೋಗಿಸಿದರೂ, ಪಿತೃಪ್ರಪಿತಾಮಹರೆಲ್ಲರೂ ಸಂತೋಷಿಸುವರು. ಉಪವಾಸವನ್ನು ಮುಗಿಸಿ, ಕಪಿಲೆಯ ಪಂಚ

ಗವ್ಯವನ್ನು ಪಾನಮಾಡುವವನು ಚಾಂದ್ರಾಯಣಕ್ಕಿಂತಲೂ ಮೇಲಾದ ವ್ರತವನ್ನು ನಡೆಸಿದವನಾಗುವನು. ಮಂತ್ರಪೂರ್ವಕವಾಗಿ ನನ್ನ ಅಥವಾ ರುದ್ರನ ಮೂರ್ತಿಯನ್ನು ನಿರ್ಮಿಸಿ, ಕಪಿಲೆಯ ಪಂಚಗವ್ಯದಿಂದ ವಿಷುವ ಕಾಲದಲ್ಲಿ ಅಭಿಷೇಕಮಾಡಿದವನು ಅಶ್ವಮೇಧಫಲವನ್ನು ಹೊಂದುವನು. ಅವನು ಸಂಸಾರಮುಕ್ತನಾಗಿ ವಿಮಾನವನ್ನೇರಿ ನನ್ನ ಲೋಕವನ್ನೋ, ರುದ್ರಲೋಕವನ್ನೋ ಹೊಂದುವನು. ಮೊದಲು ಬ್ರಹ್ಮನು ಸುವರ್ಣವರ್ಣವುಳ್ಳ ಹೋಮಧೇನುವೆನಿಸಿದ ಕಪಿಲೆಯನ್ನು ಮಂತ್ರೋಚ್ಚಾರಣಪೂರ್ವಕವಾಗಿ ಅಗ್ನಿಕುಂಡದಿಂದ ಸೃಷ್ಟಿಸಿದಾಗ, ಅದನ್ನು ನೋಡಿ ಆಕಾಶದಲ್ಲಿ ರುದ್ರಾದಿದೇವತೆಗಳೂ, ಬ್ರಹ್ಮರ್ಷಿಗಳೂ, ವೇದವೇದಾಂಗಗಳೂ, ನದೀ ನದ ಪರ್ವತ ಸಮುದ್ರಾದಿ ದೇವತೆಗಳೂ ಆಶ್ಚರ್ಯಗೊಂಡು, ಅಗ್ನಿಕುಂಡ ಮಧ್ಯದಲ್ಲಿ ಕಾಂತಿಯಿಂದ ಜ್ವಲಿಸುತ್ತಿದ್ದ ಆ ಕಪಿಲೆಯನ್ನು ವಿವಿಧಮಂತ್ರಗಳಿಂದ ಹಲವುಬಗೆಯಾಗಿ ಸ್ತೋತ್ರಮಾಡಿದರು. ಗಿಡ್ಡನಾದ ಕೊಂಬಿನಿಂದಲೂ, ಮೂರು ಕಣ್ಣಿನಿಂದಲೂ ಕೂಡಿ, ಕರುಸಹಿತವಾಗಿ ಅಮೃತವನ್ನು ತೊರೆಯಿಕ್ಕುತ್ತಿರುವ ಆ ಕಪಿಲೆಯಮುಂದೆ ಎಲ್ಲರೂ ತಲೆಬಗ್ಗಿ ನಮಸ್ಕರಿಸಿ ಕೈಜೋಡಿಸಿ ನಿಂತರು. ಆಮೇಲೆ ಅವರು ಬ್ರಹ್ಮನನ್ನು ಕುರಿತು 'ಓ ಪ್ರಭೂ! ನಮ್ಮಿಂದ ಈಗಾಗಬೇಕಾದುದೇನು?' ಎಂದು ಕೇಳಲು, ಬ್ರಹ್ಮನು ಅವರನ್ನು ನೋಡಿ 'ಎಲೈ ದೇವತೆಗಳಿರಾ! ಇದು ಅಗ್ನಿಹೋತ್ರಾದಿಕಾರ್ಯಗಳಿಗಾಗಿ ಸೃಷ್ಟಿಸಲ್ಪಟ್ಟ ಹೋಮಧೇನು. ಅಗ್ನಿಮುಖವಾಗಿ ಬಂದ ಆ ಹೋಮದಿಂದಲೇ ನೀವೂ ತೃಪ್ತರಾಗಬೇಕು. ಆದುದರಿಂದ ನೀವೆಲ್ಲರೂ ಈ ಗೋವನ್ನು ಅನುಗ್ರಹಿಸಬೇಕು. ನಿಮ್ಮೆಲ್ಲರಿಗೂ ಇದರ ಅಮೃತದಿಂದಲೇ ತೃಪ್ತಿಯುಂಟಾಗಿ, ನಿಮ್ಮ ವೀರ್ಯ ಪರಾಕ್ರಮಗಳೂ ಹೆಚ್ಚಿ, ಅದರಿಂದ ನೀವು ದೈತ್ಯರನ್ನು ಜಯಿಸುವಿರಿ. ಆದರಿಂದ ನೀವು ಸೇನಾಬಲವನ್ನೂ, ಬುದ್ಧಿಬಲವನ್ನೂ, ಶರೀರಬಲವನ್ನೂ ಹೊಂದಿ ಲೋಕವನ್ನು ಪಾಲಿಸುವಿರಿ. ನಿಮ್ಮ ಧರ್ಮರಕ್ಷಣೆಗೆ ಒಳಪಟ್ಟ ಪ್ರಜೆಗಳು ನಿಮ್ಮನ್ನು ಯಾವಾಗಲೂ ಯಜ್ಞಗಳಿಂದ ತೃಪ್ತಿಗೊಳಿಸುತ್ತಿರುವರು' ಎಂದನು. ಇದನ್ನು ಕೇಳಿ ಸಂತುಷ್ಟರಾದ ದೇವತೆಗಳು ಆ ಕಪಿಲೆಗೆ ವರಗಳನ್ನು ಕೊಡುತ್ತ ಹೀಗೆಂದು ಹೇಳುವರು. 'ಎಲೆ ಕಪಿಲೆ!

ಲೋಕಹಿತಕ್ಕಾಗಿ ನೀನು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟವಳು. ಆದುದರಿಂದ ನೀನು ಲೋಕಪಾವನೆಯೆನಿಸು! ನಿನ್ನನ್ನು ನೋಡಿ ನಮಸ್ಕರಿಸಿದವರಿಗೂ, ಕೈಯಿಂದ ಸವರಿದವರಿಗೂ ಸೂರ್ಯೋದಯದಲ್ಲಿ ಅಂಧಕಾರವು ಹೇಗೋ ಹಾಗೆ ಪಾಪವೆಲ್ಲವೂ ಬಿಟ್ಟುಹೋಗಲಿ' ಎಂದು ದೇವತೆಗಳು ವರವನ್ನು ಕೊಟ್ಟು ಹಿಂತಿರುಗಿದರು. ಆಮೇಲೆ ಬ್ರಹ್ಮಾಜ್ಞೆಯಿಂದ ಆ ಕಪಿಲೆಯು ಲೋಕಹಿತಕ್ಕಾಗಿ ಎಲ್ಲಾ ಲೋಕಗಳಲ್ಲಿಯೂ ಸಂಚರಿಸತೊಡಗಿತು. ಮೊದಲು ಸೃಷ್ಟಿಸಲ್ಪಟ್ಟ ಮೂರು ಕಣ್ಣುಳ್ಳ ಕಪಿಲೆಯಿಂದಲೇ ಬೇರೆ ಒಂಭತ್ತು ಜಾತಿಯ ಕಪಿಲೆಗಳೂ ಹುಟ್ಟಿ, ಲೋಕಾನುಗ್ರಹಕ್ಕಾಗಿ ಎಲ್ಲಾ ಕಡೆಯೂ ವ್ಯಾಪಿಸಿರುವುವು. ಅದನ್ನು ದಾನಮಾಡುವಾಗ ಸಮಸ್ತ ದೇವತೆಗಳೂ ಆದರ ಅಂಗಾಂಗಗಳಲ್ಲಿ ಸಾನ್ನಿಧ್ಯಮಾಡುವರು. ಅದರ ಕೊಂಬುಗಳಲ್ಲಿ ಇಂದ್ರ ವಿಷ್ಣುಗಳೂ, ಕೊಂಬಿನ ಬುಡಗಳಲ್ಲಿ ಚಂದ್ರ ವಜ್ರ ಧರರೂ, ಕೊಂಬುಗಳ ನಡುವೆ ಬ್ರಹ್ಮನೂ, ಹಣೆಯಲ್ಲಿ ರುದ್ರನೂ, ಕಿವಿಗಳಲ್ಲಿ ಅಶ್ವಿನೀದೇವತೆಗಳೂ, ಕಣ್ಣುಗಳಲ್ಲಿ ಚಂದ್ರಸೂರ್ಯರೂ, ಹಲ್ಲುಗಳಲ್ಲಿ ಮರುತ್ತುಗಳೂ, ನಾಲಗೆಯಲ್ಲಿ ಸರಸ್ವತಿಯೂ, ರೋಮಕೂಪಗಳಲ್ಲಿ ಋಷಿಗಳೂ, ಚರ್ಮದಲ್ಲಿ ಪ್ರಜಾಧಿಪತಿಯೂ ನೆಲೆಗೊಂಡಿರುವರು. ಅದರ ನಿಶ್ವಾಸದಲ್ಲಿ ಷಡಂಗಗಳೊಡನೆಯೂ, ಪದ ಕ್ರಮಗಳೊಡನೆಯೂ ಕೂಡಿದ ವೇದಗಳಿರುವುವು. ಅದರ ಮೂಗಿನಲ್ಲಿ ಸುಗಂಧಗಳೂ, ಸುಗಂಧಪುಷ್ಪಗಳೂ ಇರುವುವು. ಅದರ ಕೆಳತುಟಿಯಲ್ಲಿ ವಾಸವನೂ, ಮುಖದಲ್ಲಿ ಅಗ್ನಿಯೂ, ಕಕ್ಷಸ್ಥಾನದಲ್ಲಿ ಸಾಧ್ಯರೂ, ಕತ್ತಿನಲ್ಲಿ ಪಾರ್ವತಿಯೂ, ಪೃಷ್ಠದಲ್ಲಿ ನಕ್ಷತ್ರಗಣಗಳೂ, ಹಿರಳಿನಲ್ಲಿ ಆಕಾಶವೂ, ಅಪಾನದಲ್ಲಿ ಸರ್ವತೀರ್ಥಗಳೂ, ಗೋಮೂತ್ರದಲ್ಲಿ ಗಂಗೆಯೂ, ಗೋಮಯದಲ್ಲಿ ಲಕ್ಷ್ಮಿಯೂ, ಮೂಗಿನ ರಂಧ್ರದಲ್ಲಿ ಜ್ಯೇಷ್ಠಾದೇವಿಯೂ, ಶ್ರೋಣಿಗಳಲ್ಲಿ ಪಿತೃಗಳೂ, ವಾಲಾಗ್ರದಲ್ಲಿ ರಮೆಯೂ, ಎರಡು ಪಕ್ಕೆಗಳಲ್ಲಿ ವಿಶ್ವೇದೇವತೆಗಳೂ, ಎದೆಯಲ್ಲಿ ಶಕ್ತಿಧರನಾದ ಷಣ್ಮುಖನೂ, ಮೊಳಕಾಲು, ಮಂಡಿ, ತೊಡೆ, ಇವುಗಳಲ್ಲಿ ಪಂಚಪ್ರಾಣವಾಯುಗಳೂ, ಗೊರಸಲಿನ ನಡುವೆ ಗಂಧರ್ವರೂ, ಗೊರಸಲಿನ ತುದಿಯಲ್ಲಿ ಪನ್ನಗರೂ ನೆಲೆಸಿರುವರು. ನಾಲ್ಕು ಸಮುದ್ರಗಳೇ ಅದರ ನಾಲ್ಕು ಸ್ತನಗಳೆಂದು ಹೇಳುವರು. ರತಿ, ಮೇಧೆ, ಕ್ಷಮೆ,

ಸ್ವಾಹಾ, ಸ್ವಧಾ, ಶ್ರದ್ಧೆ, ಶಾಂತಿ, ಧೃತಿ, ಸ್ಮೃತಿ, ಕೀರ್ತಿ, ದೀಪ್ತಿ, ಕ್ರಿಯೆ, ಕಾಂತಿ, ತುಷ್ಟಿ, ಪುಷ್ಟಿ, ಸಂತತಿ, ದಿಕ್ಕುಗಳು, ವಿದಿಕ್ಕುಗಳು, ಇವೆಲ್ಲ ಕಪಿಲೆಯನ್ನಾಶ್ರಯಿಸಿ ಸೇವಿಸುತ್ತಿರುವುವು. ದೇವತೆಗಳು, ಪಿತೃಗಳು, ಗಂಧರ್ವರು, ಅಪ್ಸರಸ್ಸುಗಳು, ದ್ವೀಪಗಳು, ಸಮುದ್ರಗಳು, ಗಂಗಾದಿ ನದಿಗಳು, ಯಜ್ಞಗಳೊಡಗೂಡಿದ ವೇದವೇದಾಂಗಗಳು, ಇವೆಲ್ಲ ಆ ಕಪಿಲೆಯನ್ನು ಕಂಡಾಗ ವೇದೋಕ್ತಮಂತ್ರಗಳಿಂದ ಸ್ತುತಿಸುತ್ತ, ಪುಷ್ಪವೃಷ್ಟಿಯನ್ನೂ ಕರೆಯುವರು. ಸಂತೋಷದಿಂದ ಕುಣಿಯುವರು. ಸಿದ್ಧ ಸಾಧ್ಯಾದಿ ದೇವಗಣಗಳೆಲ್ಲವೂ ಒಂದಾಗಿ ಕೂಡಿ 'ಓ ಕಪಿಲೆ! ನಿನಗೆ ವಂದನವು. ನೀನು ಪವಿತ್ರಳು. ಸಮಸ್ತದೇವತೆಗಳಿಂದ ಸಮಸ್ಕರಿಸಲ್ಪಡತಕ್ಕವಳು. ಮಹಾಸತ್ವಳು! ಸರ್ವತೀರ್ಥಸ್ವರೂಪಿಣಿ! ನೀನು ನಿನ್ನನ್ನು ದಾನಮಾಡಿದವನನ್ನು ಬ್ರಹ್ಮಲೋಕವನ್ನು ಸೇರಿಸು' ಎಂದು ಸ್ತುತಿಸುವರು. ಆ ಕಪಿಲೆಯನ್ನು ಎರಡು ವಸ್ತ್ರಗಳಿಂದ ಅಲಂಕರಿಸಿ, ಪೂಜಿಸುತ್ತಿದ್ದರೆ ಆ ಕಪಿಲೆಯು ಹಾಗೆ ತನ್ನನ್ನು ಸತ್ಕರಿಸಿದವರನ್ನೆಲ್ಲ ಬ್ರಹ್ಮಲೋಕಕ್ಕೆ ತಾನೇ ಸಾಗಿಸುವುದು. ಭೂಮಿ, ಕುದುರೆ, ಹಸು, ಹೊನ್ನು, ಬೆಳ್ಳಿ, ಅನ್ನ, ಎಳ್ಳು, ಜವೆಗೋಧಿ, ಇವುಗಳಲ್ಲಿ ಯಾವುದನ್ನು ಶ್ರೋತ್ರಿಯನಿಗೆ ದಾನಮಾಡಿದರೂ, ತದಭಿಮಾನಿದೇವತೆಗಳು ಯಾವಾಗಲೂ ಸಂತೋಷಗೊಂಡಿರುವರು. ವೇದವನ್ನರಿಯದ ಅಪಾತ್ರಕ್ಕೆ ಅವುಗಳನ್ನು ದಾನಮಾಡಿದರೆ, ತಮ್ಮ ದೌರ್ಭಾಗ್ಯಕ್ಕಾಗಿ ತಮ್ಮನ್ನೇ ಅವರು ನಿಂದಿಸಿಕೊಳ್ಳುವರಲ್ಲದೆ, ರಾಕ್ಷಸ ಪಿಶಾಚರ ಕೈಗೆ ತಮ್ಮನ್ನು ಸಿಕ್ಕಿಸಿ ಕಷ್ಟಪಡಿಸಿ ತಾವೂ ನರಕಭಾಗಿಗಳಾಗುವರೆಂದು ದುಃಖಿಸುವರು. ಆದುದರಿಂದ ಸತ್ಪಾತ್ರದಲ್ಲಿ ದಾನಮಾಡಿದಾಗಲೇ ಅವು ತಮ್ಮನ್ನೂ, ದಾನ ಕೊಟ್ಟವನನ್ನೂ ಉದ್ಧರಿಸುವುವು' ಎಂದನು.

ಆಗ ಧರ್ಮರಾಜನು ತಿರುಗಿ ಕೃಷ್ಣನನ್ನು ಕುರಿತು 'ದೇವಾ! ದೇವತೆಗಳಿಗೂ, ಪಿತೃಗಳಿಗೂ ಕೊಡತಕ್ಕ ಹವ್ಯಕವ್ಯಗಳಿಗೆ ತಕ್ಕ ಕಾಲಗಳಾವುವು? ಬ್ರಾಹ್ಮಣರಲ್ಲಿ ಅವುಗಳಿಗೆ ಅರ್ಹರಾರು? ಅನರ್ಹರಾರು?' ಎಂದು ಕೇಳಲು, ಕೃಷ್ಣನು 'ಓ ರಾಜೇಂದ್ರಾ! ಮಧ್ಯಾಹ್ನಕ್ಕೆಮೊದಲು

ದೇವಕಾರ್ಯಗಳನ್ನು ನಡೆಸಬೇಕು. ಮಧ್ಯಾಹ್ನಕ್ಕೆಮೇಲೆ ಪಿತೃಕಾರ್ಯಗಳನ್ನು ನಡೆಸಬೇಕು. ಅಕಾಲದಲ್ಲಿ ಮಾಡಿದ ದಾನವು ರಾಜಸವೆನಿಸುವುದು. ಗಟ್ಟಿಯಾಗಿ ಕೂಗಿ ಹೇಳಿದ ದಾನವೂ ವಿಫಲವು. ಸುಳ್ಳಾಡಿ ಕೊಟ್ಟದೂ, ನಾಯಿಯಿಂದ ಸ್ಪರ್ಶಮಾಡಲ್ಪಟ್ಟುದೂ ದಾನಯೋಗ್ಯವಲ್ಲ. ಅಂತಹ ದಾನವು ರಾಕ್ಷಸಭಾಗವೆನಿಸುವುದು. ಪತಿತರು, ಜಡರು, ಉನ್ಮತ್ತರು, ಮುಂತಾದ ಬ್ರಾಹ್ಮಣರು ಹವ್ಯಕವ್ಯಗಳಿಗೆ ಯೋಗ್ಯರಲ್ಲ. ಹಾಗೆಯೇ ನಪುಂಸಕರೂ, ಕುರೂಪಿಗಳೂ, ಕುಷ್ಠ, ಕ್ಷಯ, ಅಪಸ್ಮಾರರೋಗಿಗಳೂ, ವೈದ್ಯರೂ, ಪೂಜಾರಿಗಳೂ ಸುಳ್ಳುವ್ರತಗಳನ್ನು ಹಿಡಿದವರೂ, ಸೋಮವಿಕ್ರಯಿಗಳೂ, ಶ್ರಾದ್ಧಕಾರ್ಯಕ್ಕೆ ತಕ್ಕ ಪಾತ್ರರಲ್ಲ. ಏಕೋದ್ದಿಷ್ಟದಲ್ಲಿ ಭೋಜನಮಾಡಿದ ಬ್ರಾಹ್ಮಣನು ಚಾಂದ್ರಾಯಣವನ್ನು ನಡೆಸಿದ ಹೊರತು ತಿರುಗಿ ಶ್ರಾದ್ಧಕ್ಕೆ ಅರ್ಹನಲ್ಲ. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದರೂ ನರ್ತಕರು, ಗಾಯಕರು, ದೋಣಿ ನಡೆಸುವವರು, ದೊಂಬರಾಟವಾಡುವವರು, ವಾದ್ಯಗಳನ್ನು ನುಡಿಸುವವರು, ಕಥೆಹೇಳುವವರು, ಯುದ್ಧಮಾಡುವವರು, ಇಂತವರೂ ಶ್ರಾದ್ಧಕಾರ್ಯಕ್ಕೆ ಸರಿಯಾದ ಪಾತ್ರರಲ್ಲ. ಮತ್ತು ಅಗ್ನಿಹೋತ್ರಮಾಡದವರು, ಹೆಣಹೊರುವವರು, ಕದ್ದವರು, ನಿಷಿದ್ಧಧರ್ಮಗಳನ್ನು ನಡೆಸತಕ್ಕವರು, ಇಂತಹ ಬ್ರಾಹ್ಮಣರೂ ಪೂಜ್ಯರಲ್ಲ. ಹಿಂದೆ ಎಂದೂ ಅಪರಿಚಿತರಾದವರು, ಎಲ್ಲಾ ಕಡೆಯೂ ದಾನತೆಗೆಯತಕ್ಕವರು, ಪುತ್ರಿಕಾಪುತ್ರರು, ಇಂತವರು ಶ್ರಾದ್ಧಕ್ಕೆ ಯೋಗ್ಯರಲ್ಲ. ಕಲಹಶೀಲರು, ವ್ಯಾಪಾರಮಾಡುವವರು, ಪ್ರಾಣಿವಿಕ್ರಯದಿಂದ ಜೀವಿಸುವವರು, ಇವರೂ ಶ್ರಾದ್ಧಾರ್ಹರಲ್ಲ. ವ್ರತನಿಷ್ಠರಾಗಿ, ಗುಣವಂತರಾಗಿ, ಪ್ರತಿದಿನವೂ ವೇದಾಧ್ಯಯನಮಾಡುತ್ತ, ಸಾವಿತ್ರೀಮಂತ್ರವನ್ನು ತಿಳಿದು, ಕರ್ಮನಿಷ್ಠರಾದ ಬ್ರಾಹ್ಮಣರೇ ಶ್ರಾದ್ಧಕ್ಕೆ ಯೋಗ್ಯರು. ಶ್ರಾದ್ಧಕ್ಕೆ ಉತ್ತಮಬ್ರಾಹ್ಮಣನೂ ತುಪ್ಪ, ಮೊಸರು, ಹೂವು, ದರ್ಭೆ, ಉತ್ತಮವಾದ ಕ್ಷೇತ್ರಗಳೂ, ದೊರೆಯುವುದೇ ಉತ್ತಮಕಾಲವು. ಆ ಕಾಲದಲ್ಲಿ ಶ್ರಾದ್ಧವನ್ನು ನಡೆಸಬಹುದು. ಶೀಲವಂತರಾಗಿ, ಜೀವನಕ್ಕಿಲ್ಲದೆ ಕಷ್ಟಪಡುತ್ತ, ಯಾಚನೆಗಾಗಿ ಬಂದ ಬ್ರಾಹ್ಮಣರಿಗೆ ಶ್ರಾದ್ಧಭೋಜನವನ್ನಿಡುವುದರಲ್ಲಿ ಅಧಿಕ ಫಲವುಂಟು. ಹಾಗೆಯೇ ತಪಸ್ವಿಗಳಿಗೂ, ಭಿಕ್ಷುಗಳಿಗೂ, ಇಕ್ಕಿದ ಶ್ರಾದ್ಧ

ಭೋಜನದಿಂದ ವಿಶೇಷಫಲವುಂಟು. ಆದುದರಿಂದ ವೇದಾಧ್ಯಯನ ಮಾಡಿದವನೂ, ದರಿದ್ರನೂ, ತನಗೇನೂ ಉಪಕಾರಮಾಡದವನೂ ಆದ ಬ್ರಾಹ್ಮಣನಿಗೆ ಅನ್ನದಾನಾದಿಗಳನ್ನು ಮಾಡಬೇಕು. ದಾನದ ಅಕ್ಷಯ ಫಲವನ್ನು ನೀನು ಬಯಸುವುದಾದರೆ ಶ್ರೋತ್ರಿಯನಿಗೆ ದಾನಮಾಡ ಬೇಕು. ಇನ್ನು ನರಕಭಾಗಿಗಳಾರೆಂಬುದನ್ನು ತಿಳಿಸುವೆನು ಕೇಳು. ಗುರು ವಿನ ನಿಮಿತ್ತವಾಗಿಯೇ ಆಗಲಿ, ಮಹಾಭೀತಿಯಲ್ಲಿಯಾಗಲಿಹೊರತು, ಬೇರೆ ಕಾಲದಲ್ಲಿ ಸುಳ್ಳಾಡುವವನೂ, ಪರದಾರಾಪಹರಣಮಾಡಿದವನೂ, ಪರಸ್ತ್ರೀ ಯರನ್ನು ಮುಟ್ಟಿದವನೂ, ಅವರನ್ನು ಕಾಮಿಸಿದವನೂ, ನರಕಕ್ಕೆ ಗುರಿ ಯಾಗುವನು. ಹಾಗೆಯೇ ಚಾಡಿಹೇಳುವವನು, ಮಿತ್ರಭೇದವನ್ನು ಮಾ ಡುವವನು, ಪರಸ್ವಾಪಹರಣಮಾಡಿ ಜೀವಿಸುವವನು, ಮಿತ್ರರು ಮಾಡಿದ ಉಪಕಾರವನ್ನು ಮರೆತವನು, ಇವರೆಲ್ಲರೂ ನರಕಭಾಗಿಗಳು. ವರ್ಣಾ ಶ್ರಮಧರ್ಮಗಳನ್ನು ಬಿಟ್ಟವರು, ನಾಸ್ತಿಕರು, ಪಾಷಂಡಿಗಳು, ಪಾಪಿ ಗಳು, ಇವರೊಡನೆ ಸೇರಿದವರು, ಇವರೆಲ್ಲರೂ ನರಕಕ್ಕೆ ಹೋಗುವವರೇ. ಮತ್ತು ವೇದನಿಂದಕರು, ವೇದಗಳನ್ನು ಬರೆದು ಜೀವಿಸುವವರು, ತುಪ್ಪ ಮೊದಲಾದ ಗೋರಸಗಳನ್ನು ವಿಕ್ರಯಿಸುವವರು, ವಿಷವಿಕ್ರಯಿಗಳು, ಹಣದಾಸೆಯಿಂದಲೋ, ಸ್ನೇಹದಿಂದಲೋ ಚಂಡಾಲರಿಗೆ ಹಾಲನ್ನು ಕುಡಿ ಸತಕ್ಕವರು, ಎತ್ತುಗಳನ್ನು ವಶಗೊಳಿಸುವುದಕ್ಕಾಗಿ ಮೂಗುದಾರವನ್ನು ಹಾಕತಕ್ಕವರು, ಅದರ ಬೀಜಗಳನ್ನೊಡೆಯತಕ್ಕವರು, ಇವರೆಲ್ಲರೂ ನರಕ ಭಾಗಿಗಳೇ. ಶಕ್ತಿಯಿದ್ದಾಗಲೂ ದಾನಮಾಡದೆ, ದೀನರನ್ನೂ, ಕುರುಡ ರನ್ನೂ ನಿರಾಕರಿಸುವವರೂ ನರಕಕ್ಕೆ ಗುರಿಯಾಗುವರು. ಶಾಂತರೂ, ಮನಸ್ಸನ್ನು ನಿಗ್ರಹಿಸಿದವರೂ, ಜ್ಞಾನಿಗಳೂ ಆದವರೊಡನೆ ಬಹುಕಾಲ ಸಹವಾಸವನ್ನು ಮಾಡಿ, ಅವರಿಂದ ಸ್ವಕಾರ್ಯಸಾಧನೆಯಾದಮೇಲೆ ಬಿಟ್ಟುಬಿಡುವವರೂ ನರಕಭಾಗಿಗಳು. ಮಕ್ಕಳಿಗೂ, ಮುದುಕರಿಗೂ, ಬಳ ಲಿದವರಿಗೂ, ಕೊಡದೆ ತಾನೇ ಮೃಷ್ಟಾನ್ನವನ್ನು ಭುಜಿಸುವವನೂ ನರಕ ಭಾಗಿಯಾಗುವನು. ಇನ್ನು ಸ್ವರ್ಗಕ್ಕೆ ಭಾಗಿಯಾವನೆಂಬುದನ್ನೂ ತಿಳಿಸು ವೆನು ಕೇಳು. ಸತ್ಯ, ದಾನ, ತಪಸ್ಸು, ಶಮದಮಾದಿಗಳಿಂದ ಕೂಡಿ, ಸ್ವಧ ರ್ಮವನ್ನು ಅನುವರ್ತಿಸತಕ್ಕವರೂ, ಗುರುಶುಶ್ರೂಷೆಯನ್ನು ಮಾಡಿ ಗುರು

ವಿನಿಂದ ಶಾಸ್ತ್ರವನ್ನು ಕಲಿತು ಪ್ರತಿಗ್ರಹದಲ್ಲಿ ಆಸೆಯಿಲ್ಲದವರೂ, ಮಧು ಮಾಂಸಗಳನ್ನು ಪೂರ್ಣವಾಗಿ ತ್ಯಜಿಸಿದವರೂ, ಪರದಾರವಿಮುಖರೂ, ಸ್ವರ್ಗವನ್ನು ಸೇರುವರು. ತಂದೆತಾಯಿಗಳನ್ನು ಶುಶ್ರೂಷೆಮಾಡುತ್ತ ಸಹೋದರರಲ್ಲಿ ಸ್ನೇಹದಿಂದ ವರ್ತಿಸತಕ್ಕವರೂ ಸ್ವರ್ಗಕ್ಕೆ ಸೇರುವರು. ಭೋಜನಕಾಲದಲ್ಲಿ ಮನೆಯಬಾಗಿಲಿಗೆ ಬಂದ ಅತಿಥಿಗಳನ್ನು ನೋಡಿದೊಡನೆ ಬಾಗಿಲನ್ನು ಮುಚ್ಚದೆ ಅವರನ್ನು ಆದರಿಸುವವರೂ, ಬಡವರಿಗೆ ವಿವಾಹಪ್ರಯತ್ನವನ್ನು ಮಾಡಿ ನಡೆಸುವವರೂ, ಗೋರಸಗಳನ್ನೂ, ಬೀಜಗಳನ್ನೂ, ಓಷಧಿಗಳನ್ನೂ ದಾನಮಾಡತಕ್ಕವರೂ, ಮುಂದೆ ದಾರಿಯಲ್ಲಿರುವ ಕ್ಷೇಮಾಕ್ಷೇಮಗಳನ್ನೂ, ಹಳ್ಳತಿಟ್ಟುಗಳನ್ನೂ ಕೇಳತಕ್ಕವರಿಗೆ ತಿಳಿಸುವವರೂ ಸ್ವರ್ಗಕ್ಕೆ ಹೋಗುವರು. ಎರಡು ಪರ್ವಗಳಲ್ಲಿಯೂ, ಚತುರ್ದಶಿ, ಅಷ್ಟಮಿ, ಎರಡು ಸಂಧ್ಯಾಕಾಲಗಳು, ಆರ್ದ್ರಾ, ಶ್ರವಣನಕ್ಷತ್ರಗಳು, ಜನ್ಮನಕ್ಷತ್ರ, ವಿಷುವಕಾಲ, ಈ ಸಮಯಗಳಲ್ಲಿ ಸ್ತ್ರೀಸಂಬಂಧವನ್ನು ಮಾಡದವರು ಸ್ವರ್ಗಭಾಗಿಗಳು. ಓ ಧರ್ಮಪುತ್ರಾ! ಇದುವರೆಗೆ ನಿನಗೆ ಹವ್ಯಕವ್ಯವಿಧಿಗಳು, ಧರ್ಮಾಧರ್ಮಗಳು, ಸ್ವರ್ಗ ನರಕಗಳು, ಇವುಗಳ ಭೇದವನ್ನು ತಿಳಿಸಿದೆನು. ಇನ್ನೇನಾದರೂ ಇದ್ದರೆ ಕೇಳು' ಎಂದನು.

ಇದು ನೂರ ಆರನೆಯ ಅಧ್ಯಾಯವು.

---

{ ಕೃಷ್ಣನು ಯುಧಿಷ್ಠಿರನಿಗೆ ಬ್ರಹ್ಮಹತ್ಯೆಗೆ ಸಮಾನವೆನಿಸಿದ ಇತರ ಪಾತ್ರಗಳನ್ನೂ, ಅಭೋಜ್ಯಾನ್ನಗಳನ್ನೂ, ಪಾಪಿಗಳ ಲಕ್ಷಣಗಳನ್ನೂ ತಿಳಿಸಿದುದು. }

ಆಗ ಯುಧಿಷ್ಠಿರನು ತಿರುಗಿ ಕೃಷ್ಣನನ್ನು ಕುರಿತು 'ದೇವಾ! ಮನುಷ್ಯನು ಬ್ರಾಹ್ಮಣರನ್ನು ವಧಿಸದಿದ್ದರೂ, ಬ್ರಹ್ಮಹತ್ಯೆಗೆ ಗುರಿಯಾಗುವ ಸಂಭವವು ಹೇಗೆ?' ಎನಲು, ಕೃಷ್ಣನು ಹೇಳುವನು. 'ಧರ್ಮಪುತ್ರಾ! ಬ್ರಹ್ಮಹತ್ಯೆಗೆ ಬ್ರಾಹ್ಮಣನನ್ನು ಹಿಂಸಿಸಿ ಹೊಡೆದು ಕೊಲ್ಲಬೇಕಾಗಿಲ್ಲ. ಜೀವನಕ್ಕಾಗಿ ಕಷ್ಟಪಡುತ್ತಿರುವ ಒಬ್ಬ ಬ್ರಾಹ್ಮಣನನ್ನು ತಾನೇ ಭಿಕ್ಷೆಗಾಗಿ ಕರೆತಂದು, ಆಮೇಲೆ ಇಲ್ಲವೆಂದು ಕಳುಹಿಸುವುದೂ ಒಂದು

ಬ್ರಹ್ಮಹತ್ಯೆಯೇ. ಮತ್ತು ತನಗೆ ಶತ್ರುವೂ ಅಲ್ಲದೆ, ಮಿತ್ರನೂ ಅಲ್ಲದೆ ಮಧ್ಯಸ್ಥನೂ, ವೇದವನ್ನೋದಿದವನೂ ಆದ ಒಬ್ಬ ಬ್ರಾಹ್ಮಣನ ಜೀವನಕ್ಕೆ ಭಂಗವನ್ನು ತಂದವನೂ ಬ್ರಹ್ಮಘಾತಿಯೇ! ಯಾವನು ಕೋಪದಿಂದ ಒಂದು ಗುಡಿಸಲಿಗಾಗಲಿ, ಮನೆಗಾಗಲಿ, ಗ್ರಾಮಕ್ಕಾಗಲಿ, ಪಟ್ಟಣಕ್ಕಾಗಲಿ ಬೆಂಕಿಯನ್ನಿಡುವನೋ, ಅವನೂ ಬ್ರಹ್ಮಹತ್ಯೆಯನ್ನು ಮಾಡಿದವನೇ. ಯಾವನು ದಾಹದಿಂದ ನೀರನ್ನು ಕುಡಿಯುವುದಕ್ಕಾಗಿ ಬಂದ ಹಸುಗಳನ್ನು ಹೊಡೆದಟ್ಟಿ ಓಡಿಸುವನೋ ಅವನೂ ಬ್ರಹ್ಮಘಾತಿಯೇ. ವೇದವನ್ನೂ ಋಷಿಪ್ರೋಕ್ತವಾದ ಶಾಸ್ತ್ರಗಳನ್ನೂ ದೂಷಿಸುವವನೂ ಬ್ರಹ್ಮಘಾತಿಯೇ! ಕುರುಡರು, ಕುಂಟರು, ಬುದ್ಧಿಹೀನರು, ಇಂತವರ ಕೈಯಲ್ಲಿರುವ ಪದಾರ್ಥವನ್ನು ಕಿತ್ತುಕೊಳ್ಳುವ ನೀಚನೂ ಬ್ರಹ್ಮಘಾತಿಯೇ. ಗುರುಹಿರಿಯರ ಮಾತನ್ನು ಕೇಳದೆ ನೀನು ತಾನೆಂದು ತಿರಸ್ಕರಿಸಿ, ಅವರ ಮುಂದೆ ಹುಂಕಾರದಿಂದ ಗರ್ಜಿಸಿ, ಹೆದರಿಸುವವನೂ ಬ್ರಹ್ಮಘಾತಿಯೇ. ಕೋಪದಿಂದಲೋ, ದ್ವೇಷದಿಂದಲೋ ಅಥವಾ ಇತರರ ದೂಷಣೆಗಾಗಿಯೋ, ಹೆದರಿಕೆಗಾಗಿಯೋ ಋತುಕಾಲದಲ್ಲಿ ಸ್ತ್ರೀಯರನ್ನು ಸೇರದೆ ನಿರಾಕರಿಸುವವನೂ ಬ್ರಹ್ಮಘಾತಿಯೇ. ಒಬ್ಬನು ಯಾವ ಸ್ವತ್ತಿನಿಂದ ನೆಮ್ಮದಿಯಾಗಿರುತ್ತಿರುವನೋ, ಅದನ್ನು ಕಳೆದುಕೊಂಡಾಗ ಪೂರ್ಣವಾಗಿ ಕೆಟ್ಟುಹೋಗುವನೋ, ಅಂತಹ ಸ್ವತ್ತನ್ನು ಅಪಹರಿಸಿದವನೂ ಬ್ರಹ್ಮಘಾತಿಯೇ. ಈ ಮೇಲೆ ಹೇಳಿದವರನ್ನೆಲ್ಲ ಬ್ರಹ್ಮಹತ್ಯೆಯನ್ನು ಮಾಡಿದವರನ್ನಾಗಿಯೇ ಹಿರಿಯರು ಹೇಳಿರುವರು' ಎಂದನು. ಆಗ ಯುಧಿಷ್ಠಿರನು 'ಕೃಷ್ಣಾ! ಎಲ್ಲಾ ದಾನಗಳಿಗಿಂತಲೂ ಮೇಲಾದ ದಾನವಾವುದು? ಎಂತಹ ಬ್ರಾಹ್ಮಣರ ಅನ್ನವನ್ನು ಭುಜಿಸಬಾರದು? ಅವೆರಡನ್ನೂ ನನಗೆ ತಿಳಿಸಬೇಕು' ಎನಲು ಕೃಷ್ಣನು 'ಯುಧಿಷ್ಠಿರಾ! ಬ್ರಹ್ಮಾದಿದೇವತೆಗಳೂ ಅನ್ನವನ್ನು ಪ್ರಶಂಸಿಸಿರುವರು. ಅನ್ನದಾನಕ್ಕೆ ಸಮಾನವಾದುದು ಹಿಂದೆಯೂ ಇಲ್ಲ. ಮುಂದೆಯೂ ಇಲ್ಲ. ಲೋಕಕ್ಕೆ ಬಲವನ್ನು ಕೊಡತಕ್ಕುದು ಅನ್ನವು. ಪ್ರಾಣಗಳನ್ನು ನೆಲೆಗೊಳಿಸತಕ್ಕುದೂ ಅನ್ನವು. ಇನ್ನು ಎಂತವರ ಅನ್ನವನ್ನು ಭುಜಿಸಬಾರದೋ ಅದನ್ನೂ ತಿಳಿಸುವೆನು ಕೇಳು. ದೀಕ್ಷೆಯಲ್ಲಿರುವವನು, ಕೃಪಣನು, ಕೋಪಸ್ವಭಾವವುಳ್ಳವನು, ಅವಮಾನಿತನು, ಶಾಪ

ಗೊಂಡವನು, ನಪುಂಸಕನು, ಅಡಿಗೆಯಲ್ಲಿ ಭೇದಬುದ್ಧಿಯನ್ನು ಮಾಡುವವನು, ಚಿಕಿತ್ಸಕನು, ದೂತನು, ಎಂಜಲುತಿನ್ನುವವನು, ಕ್ರೂರಸ್ವಭಾವದವನು, ಸೂತಕದಲ್ಲಿರುವವನು, ಇಂತವರು ಕೊಟ್ಟ ಅನ್ನವನ್ನು ಭುಜಿಸಬಾರದು. ಶೂದ್ರಶೇಷವಾದ ಅನ್ನವನ್ನೂ ಭುಜಿಸಬಾರದು. ಶತ್ರು, ಪತಿತನು, ಚಾಡಿಕೋರನು, ಯಜ್ಞವಿಕ್ರಯಿ, ನಟನು, ನೇಗೆಯುವನು, ಕೃತಘ್ನನು, ಕ್ಷೌರಕನು, ಬೇಡನು, ನರ್ತಕನು, ಅಕ್ಕಸಾಲೆ, ವೀಣಾದಿವಾದ್ಯಗಳನ್ನು ನುಡಿಸುವವನು, ಆಯುಧಗಳನ್ನಾಗಲಿ, ಮದ್ಯಗಳನ್ನಾಗಲಿ ವಿಕ್ರಯಿಸುವವನು, ಸೂತನು, ವೈದ್ಯನು, ಅಗಸನು, ಸ್ತ್ರೀಯರಿಗೆ ವಶನಾಗಿ ನಡೆಯತಕ್ಕವನು, ಕೃತಘ್ನನು, ಘಾತುಕನು, ಮಾಹಿಷಿಕನು, (ಹೆಂಗಸಿನ ಮೂಲಕವಾಗಿ ಜೀವನ ಮಾಡುವವನು) ಮೃತಶೌಚದಲ್ಲಿರುವವನು, ವೇಶ್ಯಾಸ್ತ್ರೀಯರು, ವಂದಿಗಳು, ಜೂಜಾಡುವವರು, ಜೂಜನ್ನು ಬಲ್ಲವರು, ಅಣ್ಣನಿಗೆ ವಿವಾಹವಾಗುವುದಕ್ಕೆ ಮೊದಲೇ ಮದುವೆಯಾದ ತಮ್ಮನು, ತಮ್ಮನಿಗೆ ವಿವಾಹವಾದರೂ ವಿವಾಹವಿಲ್ಲದಿರುವ ಜ್ಯೇಷ್ಠನು, ಇಂತವರ ಅನ್ನವನ್ನು ಭುಜಿಸಬಾರದು. ಎರಡನೆಯ ವಿವಾಹಮಾಡಿಕೊಂಡ ಸ್ತ್ರೀಯು ಮೊದಲನೆಯ ಮತ್ತು ಎರಡನೆಯ ಗಂಡಂದಿರಿಬ್ಬರ ಅನ್ನವನ್ನೂ ಭುಜಿಸಬಾರದು. ರಾಜಾನ್ನವನ್ನು ಭುಜಿಸಬಾರದು. ರಾಜಾನ್ನವು ತೇಜಸ್ಸನ್ನೂ, ಶೂದ್ರಾನ್ನವು ಬ್ರಾಹ್ಮಣ್ಯವನ್ನೂ, ಅಕ್ಕಸಾಲೆಯ ಅನ್ನವು ಆಯುಸ್ಸನ್ನೂ, ಚರ್ಮಕಾರನ ಅನ್ನವು ಕೀರ್ತಿಯನ್ನೂ ಕೆಡಿಸುವುದು. ಕೂಟಾನ್ನವೂ, ವೇಶ್ಯೆಯರ ಅನ್ನವೂ ಹೀನವಾದುದು. ವೈದ್ಯಾನ್ನವು ಕೀವಿಗೂ, ಶೂದ್ರಸ್ತ್ರೀಯನ್ನು ಇಟ್ಟುಕೊಂಡಿರುವವನ ಅನ್ನವು ರೇತಸ್ಸಿಗೂ, ಬಡ್ಡಿಯಿಂದಲೇ ಜೀವಿಸುವವನ ಅನ್ನವು ಮಲಕ್ಕೂ ಸಮಾನವೆನಿಸುವುದರಿಂದ ಅವನ್ನೆಲ್ಲ ಬಿಟ್ಟುಬಿಡಬೇಕು. ಇಂತವರ ಅನ್ನವನ್ನು ಭುಜಿಸುವವನು ಅಸ್ಥಿ, ಚರ್ಮ, ರೋಮಾದಿಗಳನ್ನು ಭುಜಿಸಿದವನಾಗುವನು. ಇಂತವರ ಅನ್ನವನ್ನು ತಿಳಿಯದೆ ಭುಜಿಸಿದ ಬ್ರಾಹ್ಮಣನು ಮೂರು ದಿನಗಳ ಉಪವಾಸವಿರಬೇಕು. ತಿಳಿದುತಿಳಿದೂ ಅದನ್ನು ಭುಜಿಸಿದವನು ಪ್ರಾಜಾಪತ್ಯವನ್ನು ನಡೆಸಬೇಕು. ಇನ್ನು ದಾನಗಳ ಫಲವನ್ನು ತಿಳಿಸುವೆನು ಕೇಳು. ಜಲದಾನಮಾಡಿದವನು ತೃಪ್ತಿಯನ್ನೂ, ಅನ್ನದಾನಮಾಡಿದವನು ಅಕ್ಷ

ಯವಾದ ಸುಖವನ್ನೂ ಪಡೆಯುವನು. ಆದರಂತೆಯೇ ತಿಲದಾನದಿಂದ ಇಷ್ಟಸಂತಾನವೂ, ದೀಪದಾನದಿಂದ ಉತ್ತಮವಾದ ನೇತ್ರವೂ, ಭೂದಾನದಿಂದ ಭೂಸ್ವಾಮ್ಯವೂ, ಸುವರ್ಣದಾನದಿಂದ ದೀರ್ಘಾಯುಷ್ಯವೂ, ಗೃಹದಾನದಿಂದ ಉತ್ತಮಗೃಹವೂ, ರಜತದಾನದಿಂದ ಉತ್ತಮರೂಪವೂ, ವಸ್ತ್ರದಾನದಿಂದ ಚಂದ್ರಸಾಲೋಕ್ಯವೂ, ಅಶ್ವದಾನದಿಂದ ಅಶ್ವಿನೀದೇವತೆಗಳ ಸಾಲೋಕ್ಯವೂ, ವೃಷಭದಾನದಿಂದ ತನಗಿಷ್ಟವಾದ ಐಶ್ವರ್ಯವೂ, ಗೋದಾನದಿಂದ ಗೋಲೋಕವೂ, ವಾಹನವನ್ನೂ, ಶಯನವನ್ನೂ ದಾನಮಾಡುವುದರಿಂದ ಉತ್ತಮಕಳತ್ರವೂ ದೊರೆಯುವುವು. ಅಭಯದಾನಮಾಡಿದವನು ಐಶ್ವರ್ಯವನ್ನೂ, ಧಾನ್ಯದಾನಮಾಡಿದವನು ಶಾಶ್ವತಸುಖವನ್ನೂ, ವೇದಗಳನ್ನಾಗಲಿ, ಬ್ರಹ್ಮಜ್ಞಾನಗಳನ್ನಾಗಲಿ ಉಪದೇಶಿಸಿದವನು ಬ್ರಹ್ಮಸಾಮ್ಯವನ್ನೂ ಹೊಂದುವನು. ಎಲ್ಲಾ ದಾನಗಳಿಗಿಂತಲೂ ಈ ಬ್ರಹ್ಮದಾನವು ಮೇಲೆನಿಸುವುದು. ಹೊನ್ನು, ಭೂಮಿ, ಹಸು, ಕುದುರೆ, ಆಡು, ಹಾಸಿಗೆ, ಹೊದಿಕೆ, ಆಸನ, ಮುಂತಾದುವುಗಳನ್ನು ವಿಧ್ಯುಕ್ತವಾಗಿ ಪಡೆದವನೂ, ಕೊಟ್ಟವನೂ ಇಬ್ಬರೂ ಸ್ವರ್ಗವನ್ನು ಹೊಂದುವರು. ಶಾಸ್ತ್ರವಿರುದ್ಧವಾಗಿ ನಡೆದಾಗ ಇವರಿಬ್ಬರೂ ನರಕಕ್ಕೆ ಸೇರುವರು. ವಿದ್ವಾಂಸನು ಸುಳ್ಳಾಡಬಾರದು. ತಾನು ಮಾಡಿದ ತಪಸ್ಸಿಗಾಗಿ ಗರ್ವಪಡಬಾರದು. ಎಷ್ಟೇ ಕಷ್ಟದಲ್ಲಿಯೂ ಸಾಧುಬ್ರಾಹ್ಮಣರನ್ನು ಅವಮಾನಗೊಳಿಸಬಾರದು. ತಾನು ದಾನಮಾಡಿದುದನ್ನು ಬಾಯಿಂದ ಹೇಳಿಕೊಳ್ಳಬಾರದು. ಅಸತ್ಯದಿಂದ ಯಜ್ಞವೂ, ಗರ್ವದಿಂದ ತಪಸ್ಸೂ, ಬ್ರಾಹ್ಮಣಾವಮಾನದಿಂದ ಆಯುಸ್ಸೂ, ಕೊಟ್ಟುದನ್ನು ಬಾಯಿಂದ ಹೇಳುವುದರಿಂದ ದಾನಫಲವೂ ನಶಿಸುವುವು. ಓ ಧರ್ಮಪುತ್ರಾ! ಲೋಕದಲ್ಲಿ ಪ್ರಾಣಿಯು ತನ್ನಷ್ಟಕ್ಕೆ ತಾನು ಒಂದಾಗಿಯೇ ಜನಿಸುವುದು. ತನ್ನಷ್ಟಕ್ಕೆತಾನು ಏಕಾಕಿಯಾಗಿಯೇ ಸಾಯುವುದು. ತನ್ನ ಪುಣ್ಯಾಪಾಪಗಳನ್ನೂ ತಾನೇ ಅನುಭವಿಸುವುದು. ಕಟ್ಟಿಗೆಗೂ, ಮಣ್ಣುಹೆಂಟೆಗೂ ಸಮಾನವಾದ ಮೃತಶರೀರವನ್ನು ಶ್ಮಶಾನದಲ್ಲಿ ಬಿಸಾಡಿ, ನಂಟರಿಷ್ಟರೆಲ್ಲರೂ ಹಿಂತಿರುಗಿಹೋಗುವರು. ಧರ್ಮವೊಂದೇ ಅವನನ್ನು ಹಿಂಬಾಲಿಸುವುದು. ಮನಸ್ಸೆಂಬುದು ತುಚ್ಛವಾದ ಶರೀರಸುಖವನ್ನುದ್ದೇಶಿಸಿ, ಮುಂದಿನ ಲಾಭಗಳಿಗಾಗಿ

ಉತ್ಸಾಹಗೊಂಡಿರುವುದು. ಯಮನಾದರೋ ಅದನ್ನು ನೋಡಿ ಆಶ್ಚರ್ಯ ಪಡುತ್ತಿರುವನು. ಆದುದರಿಂದ ಮನುಷ್ಯನು ಧರ್ಮವೊಂದೇ ಕೊನೆಗೂ ತನಗೆ ಸಹಾಯಕವೆಂಬುದನ್ನು ತಿಳಿದು ಧರ್ಮವನ್ನು ಗಳಿಸಿಡಬೇಕು. ಆ ಧರ್ಮಬಲದಿಂದಲೇ ದುಸ್ಸಹವಾದ ತಮಸ್ಸನ್ನು ದಾಟಬಹುದು. ಸಮೃದ್ಧವಾದ ನೀರುಳ್ಳ ತಟಾಕಗಳನ್ನೂ, ಕೆರೆಗಳನ್ನೂ, ಮಂಟಪಗಳನ್ನೂ, ಬಾವಿಗಳನ್ನೂ, ಅರವಟಿಗೆಗಳನ್ನೂ ಮಾಡಿದವರೂ, ಅನ್ನದಾನಮಾಡಿದವರೂ, ಪ್ರಿಯವಾಕ್ಯಗಳನ್ನಾಡುವವರೂ ಯಮನಿಗೆ ಈಡಾಗಲಾರರು' ಎಂದನು.

ಇದು ನೂರ ಏಳನೆಯ ಅಧ್ಯಾಯವು.

---

{ ಕೃಷ್ಣನು ಯುಧಿಷ್ಠಿರನಿಗೆ ಯತಿಗಳ ಮತ್ತು ಅಗ್ನಿಯ ಮಹಿಮೆಯನ್ನೂ, ಸತ್ಪಾತ್ರಲಕ್ಷಣಗಳನ್ನೂ, ಅನ್ನದಾನ ಪ್ರಭಾವವನ್ನೂ ತಿಳಿಸಿದುದು. }

ತಿರುಗಿ ಧರ್ಮಪುತ್ರನು 'ಕೃಷ್ಣಾ! ವಿದ್ವಾಂಸರು ಧರ್ಮಕ್ಕೆ ಅನೇಕ ದ್ವಾರ (ಮಾರ್ಗ) ಗಳುಂಟೆಂದೂ, ಅದರ ಫಲವೂ ವಿವಿಧಗಳೆಂದೂ ಹೇಳುವರು. ಆ ಧರ್ಮದ ಸಾಮಾನ್ಯಲಕ್ಷಣವಾವುದೆಂದು ನನಗೆ ತಿಳಿಸಬೇಕು' ಎನಲು, ಕೃಷ್ಣನು 'ರಾಜೇಂದ್ರಾ! ಧರ್ಮದ ಮತ್ತು ಶೌಚದ ವಿಧಿಗಳನ್ನೆಲ್ಲ ಸಂಗ್ರಹಿಸಿ ಹೇಳುವೆನು ಕೇಳು. ಅಹಿಂಸೆ, ಶುಚಿತ್ವ, ಕೋಪವಿಲ್ಲದಿರುವುದು, ಕ್ರೌರ್ಯವಿಲ್ಲದಿರುವುದು, ಶಮ ದಮಗಳು, ಋಜುತ್ವ, ಇವಿಷ್ಟೇ ಧರ್ಮದ ಸಾಮಾನ್ಯಲಕ್ಷಣಗಳು. ಬ್ರಹ್ಮಚರ್ಯ, ತಪಸ್ಸು, ಕ್ಷಾಂತಿ, ಮದ್ಯಮಾಂಸಗಳನ್ನು ವರ್ಜಿಸುವುದು, ತನ್ನ ಧರ್ಮದ ಎಲ್ಲೆಯನ್ನು ಮೀರದೆ ನಡೆಯುವುದು, ಇಂದ್ರಿಯನಿಗ್ರಹ, ಇವಿಷ್ಟೂ ಶೌಚದ ಸಾಮಾನ್ಯಲಕ್ಷಣಗಳು. ಬಾಲ್ಯದಲ್ಲಿ ವಿದ್ಯಾಭ್ಯಾಸವೂ, ಯೌವನದಲ್ಲಿ ವಿವಾಹವೂ, ವಾರ್ಧಕದಲ್ಲಿ ಮುನಿವೃತ್ತಿಯೂ, ಸದಾ ಧರ್ಮಪ್ರವರ್ತನೆಯೂ ಮನುಷ್ಯನಿಗೆ ವಿಹಿತವಾಗಿವೆ. ಬ್ರಾಹ್ಮಣರನ್ನು ಅವಮಾನಿಸಬಾರದು. ಗುರುಹಿರಿಯರನ್ನು ನಿಂದಿಸಬಾರದು. ಯತಿಗಳನ್ನು ಯಾವಾಗಲೂ ಆದರಿಸಬೇಕು. ಇದು ಸನಾತನಧರ್ಮವು. ದ್ವಿಜರಿಗೆ ಯತಿಯೇ ಗುರು. ಎಲ್ಲಾ

ವರ್ಣಗಳಿಗೆ ಬ್ರಾಹ್ಮಣನು ಗುರು. ಸ್ತ್ರೀಯರಿಗೆ ಪತಿಯೇ ಗುರು. ಎಲ್ಲರಿಗೂ ರಾಜನೇ ಗುರು (ದೊಡ್ಡವನು). ಗೃಹಸ್ಥನು ತಿಳಿದಾಗಲಿ, ತಿಳಿಯದೆಯಾಗಲಿ ಮಾಡಿದ ಪಾಪಗಳೆಲ್ಲವೂ ಒಬ್ಬ ಯತಿಯು ಒಂದು ರಾತ್ರಿ ಅವನ ಮನೆಯಲ್ಲಿ ತಂಗಿದಮಾತ್ರದಿಂದ ನೀಗುವುವು. ಯತಿಗಳು ಒಳ್ಳೇ ನಡತೆಯಲ್ಲಿರಲಿ, ಕೆಟ್ಟನಡತೆಯಲ್ಲಿರಲಿ, ಜ್ಞಾನಿಗಳಾಗಿರಲಿ, ಅಥವಾ ಜ್ಞಾನಹೀನರಾಗಿರಲಿ, ಶ್ರೇಯಸ್ಕಾಮಿಗಳಾದ ಗೃಹಸ್ಥರಿಗೆ ಅವರು ಪೂಜಾರ್ಹರೇ. ಏಕದಂಡಸನ್ಯಾಸಿಯಾಗಿರಲಿ, ತ್ರಿದಂಡಸನ್ಯಾಸಿಯಾಗಿರಲಿ, ಶಿಖೆಯನ್ನಿಟ್ಟರಲಿ, ಅಥವಾ ಮುಂಡಿತನಾಗಿರಲಿ, ಹೇಗಿದ್ದರೂ, ಕಾಷಾಯದಂಡಮಾತ್ರಗಳಿಂದಲೇ ಯತಿಯು ಪೂಜಾರ್ಹನೆನಿಸುವನು. ಮನೆಗೆ ಬಂದವನು ಯತಿಯಾಗಿರಲಿ, ಅತಿಥಿಯಾಗಿರಲಿ ಗೃಹಸ್ಥನು ಅವನನ್ನು ಪೂಜಿಸದಿದ್ದರೆ ಅಥವಾ ಅವಮಾನಗೊಳಿಸಿದರೆ, ಅವರಿಬ್ಬರೂ ಅವನನ್ನು ನರಕದಲ್ಲಿ ತಳ್ಳುವರು. ಆದುದರಿಂದ ನನ್ನಲ್ಲಿ ಭಕ್ತಿಯಿಟ್ಟು ಸಮಸ್ತಕರ್ಮಗಳನ್ನೂ ನನಗಾಗಿಯೇ ಅರ್ಪಿಸುತ್ತಿರುವ ಸಾಧುಗಳನ್ನು ಪ್ರಯತ್ನದಿಂದ ಪೂಜಿಸಿ ಸತ್ಕರಿಸಬೇಕು. ಬ್ರಾಹ್ಮಣನನ್ನಾಗಲಿ, ಗೋವನ್ನಾಗಲಿ ಹೊಡೆಯಬಾರದು. ಹಾಗೆ ಮಾಡಿದವನು ಭ್ರೂಣಹತ್ಯಾಪಾತಕಕ್ಕೆ ಗುರಿಯಾಗುವನು. ಬೆಂಕಿಯನ್ನು ಬಾಯಿಂದೂದಬಾರದು. ಬೆಂಕಿಯಲ್ಲಿ ಕಾಲನ್ನು ಕಾಯಿಸಬಾರದು. ಬೆಂಕಿಯನ್ನು ಅಧೋಮುಖವಾಗಿ ಹಿಡಿಯಬಾರದು. ಅದನ್ನು ಯಾವುದರ ಕೆಳಗೂ ಇಡಬಾರದು. ಬೆನ್ನನ್ನು ಕಾಯಿಸಬಾರದು. ಬೆಂಕಿಗಳನಡುವೆ ಹೋಗಬಾದು. ಅಶುದ್ಧವಸ್ತುಗಳನ್ನು ಬೆಂಕಿಗೆ ಹಾಕಬಾರದು. ಎಂಜಲುಕೈಯಿಂದ ಅಗ್ನಿಯನ್ನು ಮುಟ್ಟಬಾರದು. ಆಶೌಚದಲ್ಲಿರುವವನು ಅದನ್ನು ಸ್ಪರ್ಶಿಸಲೇಬಾರದು. ನಾಯಿಯ ಅಥವಾ ಚಂಡಾಲರ ಸ್ಪರ್ಶಮಾಡಿದವನು ಬೆಂಕಿಯಲ್ಲಿ ಮೈಯನ್ನು ಕಾಯಿಸಬಾರದು. ಅಗ್ನಿಯು ಸರ್ವದೇವತಾಸ್ವರೂಪಿಯಾಗಿರುವುದರಿಂದ, ಅದನ್ನು ಶುದ್ಧನಾಗಿಯೇ ಮುಟ್ಟಬೇಕು. ಮಲಮೂತ್ರಗಳಿಗೆ ಹೋಗುವ ಆತುರವಿದ್ದವನೂ ಕೂಡ ಅಗ್ನಿಯನ್ನು ಸ್ಪರ್ಶಿಸಬಾರದು. ಅವನು ಆ ಮಲವನ್ನು ದೇಹದಲ್ಲಿ ಅಡಗಿಸಿಟ್ಟುಕೊಂಡಿರುವವರೆಗೂ ಅಶುದ್ಧನೇ! ಇತರರ ಮನೆಯಲ್ಲಿ ಅಡಿಗೆಗಾಗಿ ಉಪಯೋಗಿಸಿದ ಬೆಂಕಿಯನ್ನು ತರಬಾರದು. ಆ ಬೆಂಕಿಯಲ್ಲಿ

ಬೇಯಿಸಿದ ಅನ್ನಾದಿಗಳಿಂದ ನಡೆಸಿದ ಶುಭಕರ್ಮಫಲದಲ್ಲಿ ಅರ್ಧಭಾಗವು ಆ ಅಗ್ನಿಯನ್ನು ಕೊಟ್ಟವರಿಗೆ ಸೇರಿಹೋಗುವುದು. ಆದುದರಿಂದ ಸ್ವಗೃಹದಲ್ಲಿಯೇ ಅಗ್ನಿಯನ್ನು ಆರದಂತೆ ಇಟ್ಟಿರಬೇಕು. ಒಂದುವೇಳೆ ತಿಳಿಯದೆಯೋ, ಪ್ರಮಾದವಶದಿಂದಲೋ, ಬೆಂಕಿಯು ಆರಿಹೋದರೆ, ಅರಣಿಯನ್ನು ಕಡೆದೋ, ಅಥವಾ ಒಬ್ಬ ಶ್ರೋತ್ರಿಯನ ಗೃಹದಿಂದಲೋ ಅಗ್ನಿಯನ್ನು ಸಂಪಾದಿಸಬೇಕು' ಎಂದನು.

ಧರ್ಮಪುತ್ರನು ತಿರುಗಿ ಕೃಷ್ಣನನ್ನು ಕುರಿತು 'ದೇವಾ! ಸಾಧುಗಳಾದ ಬ್ರಾಹ್ಮಣರ ಲಕ್ಷಣಗಳೇನು? ಎಂತವರಿಗೆ ಕೊಟ್ಟ ದಾನವು ಉತ್ತಮಫಲವನ್ನು ಕೊಡುವುದು?' ಎನಲು ಕೃಷ್ಣನು 'ರಾಜೇಂದ್ರಾ! ಕೋಪತಾಪಗಳಿಲ್ಲದೆ, ಸತ್ಯಸಂಧರಾಗಿ, ಧರ್ಮರತರಾಗಿ, ಜಿತೇಂದ್ರಿಯರೆನಿಸಿದವರಾರೋ ಅವರು ಸಾಧುಗಳು. ಅಂತಹ ಬ್ರಾಹ್ಮಣರಿಗೆ ಕೊಟ್ಟ ದಾನವು ಮಹಾಫಲಪ್ರದವು. ಗರ್ವವಿಲ್ಲದೆ, ಎಲ್ಲವನ್ನೂ ಸಹಿಸತಕ್ಕ ಕ್ಷಮಾಗಣವುಳ್ಳವರಾಗಿ, ಅನೇಕ ವಿಷಯಗಳನ್ನು ತಿಳಿದವರಾಗಿ, ಸರ್ವಭೂತಗಳ ಹಿತವನ್ನು ಕೋರುತ್ತ, ಇಂದ್ರಿಯಗಳನ್ನು ನಿಗ್ರಹಿಸಿ, ಎಲ್ಲರಲ್ಲಿಯೂ ಮಿತ್ರಭಾವದಿಂದಿರುವವರು ಸಾಧುಬ್ರಾಹ್ಮಣರು. ಅಂತವರಿಗೆ ಕೊಟ್ಟ ದಾನವು ಮಹಾಫಲವುಳ್ಳುದು. ಲೋಭವಿಲ್ಲದವರೂ, ಶುದ್ಧಾತ್ಮರೂ, ವಿದ್ಯಾವಂತರೂ, ಅಕಾರ್ಯಗಳಿಗೆ ಲಜ್ಜಿಸುವವರೂ, ಸತ್ಯವಾದಿಗಳೂ, ಸ್ವಧರ್ಮನಿರತರೂ ಆದ ಬ್ರಾಹ್ಮಣರಿಗೆ ಕೊಟ್ಟ ದಾನವು ಮಹಾಫಲವುಳ್ಳುದು. ಸಾಂಗವೇದಾಧ್ಯಯನವನ್ನು ದಿನತಪ್ಪದೆ ಮಾಡುತ್ತ, ಶೂದ್ರಾನ್ನಸಂಪರ್ಕವಿಲ್ಲದ ದೇಹವುಳ್ಳ ಬ್ರಾಹ್ಮಣರಿಗೆ ಮಾಡಿದ ದಾನವು ಮಹಾಫಲಪ್ರದವೆನಿಸುವುದು. ಪ್ರಜ್ಞೆ, ಶಾಸ್ತ್ರಜ್ಞಾನ, ಒಳ್ಳೇ ನಡತೆ, ಸುಸ್ವಭಾವ, ಇವುಗಳಿಂದ ಕೂಡಿದ ಸಾಧುವೊಬ್ಬನಿದ್ದರೂ, ಅವನಿಂದ ಅವನ ಕುಲವೆಲ್ಲ ಉದ್ಧೃತವಾಗುವುದು. ಇಂತಹ ಗುಣಾಢ್ಯನಾದ ಬ್ರಾಹ್ಮಣನಾರೆಂಬುದನ್ನು ವಿಚಾರಿಸಿ ತಿಳಿದು, ಅಂತವನಿಗೆ ಗೋವನ್ನಾಗಲಿ, ಅಶ್ವವನ್ನಾಗಲಿ, ಧನವನ್ನಾಗಲಿ, ಅನ್ನವನ್ನಾಗಲಿ ದಾನಮಾಡಬೇಕು. ಅಂತವನನ್ನು ದೂರದಿಂದಾದರೂ ಕರೆತಂದು ಸತ್ಕರಿಸಬೇಕು' ಎಂದನು. ತಿರುಗಿ ಯುಧಿಷ್ಠಿರನು

'ದೇವದೇವಾ! ಹಿಂದೆ ಭೀಷ್ಮನು ತಿಳಿಸಿದ ಧರ್ಮಾಧರ್ಮವಿಧಿಗಳೆಲ್ಲ ನನಗೆ ಬಹಳ ತೊಡಕಾಗಿ ತೋರಿವೆ. ಅವುಗಳ ಸಾರವನ್ನೆಲ್ಲ ನೀನು ಸಂಗ್ರಹಿಸಿ ತಿಳಿಸಬೇಕು' ಎನಲು, ಕೃಷ್ಣನು 'ರಾಜಾ! ಚರಾಚರಾತ್ಮಕವಾದ ಈ ಜಗತ್ತೆಲ್ಲ ಅನ್ನದಿಂದಲೇ ಧರಿಸಲ್ಪಡುವುದು. ಅನ್ನದಿಂದಲೇ ಪ್ರಾಣವು. ಗೃಹಸ್ಥನು ತನ್ನ ಹೆಂಡಿರುಮಕ್ಕಳನ್ನು ಕಷ್ಟಪಡಿಸಿಯಾದರೂ ದೇಶಕಾಲಗಳನ್ನರಿತು ಭಿಕ್ಷುಗಳಿಗೆ ಅನ್ನವನ್ನಿಕ್ಕಬೇಕು. ದಾರಿನಡೆದು ಆಯಾಸದಿಂದ ತನ್ನಲ್ಲಿಗೆ ಬಂದ ಬ್ರಾಹ್ಮಣನು ಬಾಲನಾಗಿದ್ದರೂ, ವೃದ್ಧನಾಗಿದ್ದರೂ, ಅವನನ್ನು ಗುರುವಿನಂತೆ ಭಾವಿಸಿ ಪೂಜಿಸಬೇಕು. ಕೋಪವು ಉಕ್ಕಿಬಂದಾಗಲೂ, ಅದನ್ನು ತಡೆದಿಟ್ಟುಕೊಂಡು, ಸಾಧುತ್ವದಿಂದ ನಿರ್ಮತ್ಸರನಾಗಿ ಅತಿಥಿಯನ್ನು ಸತ್ಕರಿಸಬೇಕು. ಇದು ಶ್ರೇಯಸ್ಸಿಗೆ ಕಾರಣವು. ಅತಿಥಿಯಾಗಿ ಬಂದವನನ್ನು ಭಂಗಿಸಿ ಮಾತನಾಡಬಾರದು. ಅವನೊಡನೆ ಅಸತ್ಯವನ್ನು ನುಡಿಯಬಾರದು. ಅವನ ಕುಲ ಗೋತ್ರ ಶಾಖೆಗಳನ್ನಾಗಲಿ, ಅವನ ವಿದ್ಯೆಯನ್ನಾಗಲಿ ಕುರಿತು ಪ್ರಶ್ನೆಮಾಡಬಾರದು. ಇಷ್ಟುಮಾತ್ರವಲ್ಲ! ಭೋಜನಕಾಲಕ್ಕೆ ಅನ್ನಾರ್ಥಿಯಾಗಿ ಬಂದವನು ಶ್ವಪಚವಾಗಿರಲಿ, ಅಥವಾ ಚಂಡಾಲನಾಗಿರಲಿ, ಪರಲೋಕದ ಹಿತವನ್ನು ಬಯಸುವವನು ಅಂತವನಿಗೆ ಅನ್ನವನ್ನಿಕ್ಕದೆ ಕಳುಹಿಸಬಾರದು. ಅನ್ನಾರ್ಥಿಯಾಗಿ ಬಂದವನನ್ನು ನೋಡಿ ಕದವನ್ನು ಮುಚ್ಚಿಕೊಂಡುಹೋಗಿ ತಾನುಮಾತ್ರ ಸಂತೋಷದಿಂದ ಭುಜಿಸತಕ್ಕವನು, ಸ್ವರ್ಗದ್ವಾರವನ್ನೇ ಮುಚ್ಚಿಕೊಂಡವನಾಗುವನು. ದೇವರ್ಷಿ ಪಿತೃಗಳನ್ನೂ, ಬ್ರಾಹ್ಮಣರನ್ನೂ, ಅತಿಥಿಗಳನ್ನೂ ಅನ್ನದಿಂದ ತೃಪ್ತಿಗೊಳಿಸತಕ್ಕವನು ಮಹಾಪುಣ್ಯಭಾಗಿಯಾಗುವನು. ಎಷ್ಟೇ ಪಾಪಗಳನ್ನು ಮಾಡಿದ್ದರೂ ಅನ್ನದಾನವನ್ನು ಮಾಡುವುದರಿಂದ ಆ ಪಾಪಗಳೆಲ್ಲ ನೀಗುವುವು. ಲೋಕದಲ್ಲಿ ಅನ್ನದಾನವೇ ಪ್ರಾಣದಾನವು. ಪ್ರಾಣದಾನವು ಸರ್ವದಾನಕ್ಕೆ ಸಮಾನವು. ಆದುದರಿಂದ ಶ್ರೇಯಃಕಾಮಿಗಳು ಅನ್ನದಾನವನ್ನು ಮಾಡಬೇಕು. ಅನ್ನವೇ ಅಮೃತವು. ಅನ್ನವೇ ಪ್ರಜಾವೃದ್ಧಿಕಾರಣವು. ಅನ್ನಾಭಾವದಿಂದ ಶರೀರದೊಳಗಣ ಪಂಚಧಾತುಗಳೂ ಕ್ಷೀಣಿಸುವುವು. ಬಲಾಢ್ಯನಿಗೆ ಅನ್ನವಿಲ್ಲದಿದ್ದಾಗ ಬಲವು ಕ್ಷೀಣಿಸುವುದು. ಆದುದರಿಂದ ಅನ್ನವನ್ನು ಶ್ರದ್ಧೆಯಿಂದಲೋ, ಅಶ್ರದ್ಧೆಯಿಂದ

ಲೋ ದಾನಮಾಡಬೇಕು. ಸೂರ್ಯನು ತನ್ನ ಕಿರಣಗಳಿಂದ ನೀರನ್ನೆಳೆಯುವನು. ವಾಯುವು ಅದನ್ನು ಮೇಘದಲ್ಲಿ ಸಂಗ್ರಹಿಸಿಡುವುದು. ಮೇಘಗತವಾದ ಆ ಜಲವನ್ನು ಇಂದ್ರನು ಭೂಮಿಯಮೇಲೆ ವರ್ಷಿಸುವನು. ಆ ವರ್ಷದಿಂದ ಆಪ್ಯಾಯಿತಳಾದ ಭೂದೇವಿಯು ಪ್ರೀತಳಾಗಿ ಪೈರುಗಳನ್ನು ಕೊಡುವಳು. ಅವುಗಳಿಂದ ಸಮಸ್ತಪ್ರಾಣಿಗಳಿಗೂ ಜೀವಧಾರಣೆಯಾಗುವುದು. ಅಸ್ಥಿ, ಮಾಂಸ, ಮೇದಸ್ಸು, ಮಜ್ಜೆ, ಇವೆಲ್ಲ ಬೆಳೆಯುವುದೂ ಅವುಗಳಿಂದಲೇ. ಹೀಗೆ ಸೂರ್ಯನೂ, ವಾಯುವೂ, ಮೇಘವೂ, ಇಂದ್ರನೂ ಒಂದೇರಾಶಿಯಾಗಿದ್ದು, ಆ ಮೂಲಕವಾಗಿ ಸಮಸ್ತ ಪ್ರಾಣಿಗಳೂ ಉತ್ಪನ್ನವಾಗುವುವು.

ಧರ್ಮಪುತ್ರಾ! ಅನ್ನದಾನಮಾಡತಕ್ಕ ಮಹಾತ್ಮರಿಗಾಗಿ ಸ್ವರ್ಗದಲ್ಲಿ ದಿವ್ಯಭವನಗಳೇರ್ಪಟ್ಟಿರುವುವು. ಅವು ನಾನಾಬಗೆಯ ವಿಚಿತ್ರಾಕಾರಗಳಿಂದ ಕೂಡಿ, ನಾನಾವಿಧಸನ್ನಿವೇಶಗಳಲ್ಲಿರುವುವು. ಅವು ಚಂದ್ರಮಂಡಲದಂತೆ ಶುಭ್ರವಾಗಿ ಕಿರುಗೆಜ್ಜೆಗಳಿಂದ ಅಲಂಕೃತಗಳಾಗಿರುವುವು. ಕೆಲವು ಸೂರ್ಯತೇಜಸ್ಸುಳ್ಳವುಗಳು. ಕೆಲವು ಸ್ಥಾವರಗಳು. ಕೆಲವು ಸಂಚರಿಸಬಲ್ಲವುಗಳು. ಅವುಗಳ ಸಂಖ್ಯೆಯು ನೂರಾರುಸಾವಿರ ಲೆಕ್ಕದಲ್ಲಿರುವುವು. ಆ ಭವನಗಳೊಳಗೆ ಜಲಾಶಯಗಳೂ, ಉಪವನಗಳೂ ಪುಷ್ಪಫಲಸಮೃದ್ಧಗಳಾಗಿ ಕೇಳಿದುದನ್ನು ಕೊಡತಕ್ಕ ಕಲ್ಪವೃಕ್ಷಗಳೂ ಇರುವುವು. ಕೊಳಗಳು, ಬಾವಿಗಳು, ನಡೆಬಾವಿಗಳು, ಸಭಾಮಂದಿರಗಳು, ಇವೆಲ್ಲಾ ಅಸಂಖ್ಯಾತವಾಗಿರುವುವು. ಭಕ್ಷ್ಯಭೋಜ್ಯಗಳ ಬೆಟ್ಟಗಳೂ, ವಸ್ತ್ರಾಭರಣಗಳೂ, ಕ್ಷೀರಪ್ರವಾಹವುಳ್ಳ ನದಿಗಳೂ, ಅನ್ನಪರ್ವತಗಳೂ, ಸಾವಿರಾರು ರಥಗಳೂ, ವಿಮಾನಗಳೂ, ಬಿಳೀ ಸೌಧಗಳೂ, ಸುವರ್ಣಶಯ್ಯಾಸನಗಳೂ ಅಲ್ಲಿ ಹೇರಳವಾಗಿರುವುವು. ಅನ್ನದಾನಮಾಡಿದವರು ಅವನ್ನೆಲ್ಲ ಅನುಭವಿಸುತ್ತ ಅಲ್ಲಿ ಸುಖಿಸುವರು. ಆದುದರಿಂದ ನೀನು ಅನ್ನದಾನವನ್ನು ಮುಖ್ಯವಾಗಿ ಮಾಡುತ್ತಿರಬೇಕು' ಎಂದನು.

ಇದು ನೂರ ಎಂಟನೆಯ ಅಧ್ಯಾಯವು.



ಕೃಷ್ಣನು ಯುಧಿಷ್ಠಿರನಿಗೆ ಭೋಜನವಿಧಿಗಳನ್ನೂ, ಹಸುಗಳಿಗೆ ಗ್ರಾಸವನ್ನು ಕೊಡುವುದರ ಪ್ರಭಾವವನ್ನೂ, ಎಳ್ಳು ಮತ್ತು ಕಬ್ಬು ಇವುಗಳನ್ನು ಗಾಣಗಳಿಗೆ ಕೊಟ್ಟು ಆಡಿಸುವುದು ಬ್ರಾಹ್ಮಣವರ್ಣಕ್ಕೆ ನಿಷಿದ್ಧವೆಂದೂ ತಿಳಿಸಿದುದು.

ಯುಧಿಷ್ಠಿರನು ತಿರುಗಿ ಪ್ರಶ್ನೆಮಾಡುವನು. 'ಕೃಷ್ಣಾ! ಅನ್ನದಾನಫಲವನ್ನು ಕೇಳಿ ಸಂತುಷ್ಟನಾದೆನು. ಭೋಜನವಿಧಿಯನ್ನು ನನಗೆ ತಿಳಿಸಬೇಕು' ಎನಲು ಕೃಷ್ಣನು 'ರಾಜಾ! ದ್ವಿಜನು ಸ್ನಾನಮಾಡಿ ಶುದ್ಧನಾಗಿ, ಅಗ್ನಿಕಾರ್ಯವನ್ನು ಮುಗಿಸಿ, ನಿರ್ಜನವಾದ ಮತ್ತು ಶುದ್ಧವಾದ ಪ್ರದೇಶದಲ್ಲಿ, ಬ್ರಾಹ್ಮಣನಾದರೆ ಚತುರಶ್ರ (ಚೌಕ) ವಾಗಿಯೂ, ಕ್ಷತ್ರಿಯನಾದರೆ ವರ್ತುಲವಾಗಿಯೂ, ವೈಶ್ಯನಾದರೆ ಅರ್ಧಚಂದ್ರಾಕಾರವಾಗಿಯೂ ಮಂಡಲವನ್ನು ಮಾಡಿಸಿ, ನೆನೆದ ಕಾಲುಗಳೊಡನೆ ಪೂರ್ವಾಭಿಮುಖವಾಗಿ ಶುದ್ಧವಾದ ಆಸನದಲ್ಲಿ ಕುಳ್ಳಿರಬೇಕು. ಎರಡು ಪಾದಗಳಾಗಲಿ, ಒಂದು ಪಾದವಾಗಲಿ ಭೂಮಿಯನ್ನು ಸ್ಪರ್ಶಿಸುವಂತಿರಬೇಕು. ಏಕವಸ್ತ್ರದಿಂದಾಗಲಿ, ಬಟ್ಟೆಯನ್ನು ಮೈಮೇಲೆ ಹೊದೆದುಕೊಂಡಾಗಲಿ ಭುಜಿಸಬಾರದು. ಒಡೆದ ಪಾತ್ರದಲ್ಲಿಯಾಗಲಿ, ಎಲೆಯ ಹಿಂಭಾಗದಲ್ಲಿಯಾಗಲಿ ಆಹಾರವನ್ನಿಟ್ಟುಕೊಂಡು ಭುಜಿಸಬಾರದು. ಮೊದಲು ಅನ್ನಕ್ಕೆ ನಮಸ್ಕರಿಸಬೇಕು. ಅನ್ನವನ್ನು ಹೊರತು ಆಗ ಬೇರೆ ಯಾವುದನ್ನೂ ನೋಡಬಾರದು. ಅನ್ನದಲ್ಲಿ ಜುಗುಪ್ಸೆಯನ್ನೂ ಎಣಿಸಬಾರದು. ಜುಗುಪ್ಸೆಯಿಂದ ಕಂಡ ಅನ್ನವನ್ನು ರಾಕ್ಷಸರೇ ಭುಜಿಸತಕ್ಕವರು. ಕೈಯಿಂದ ಸ್ವಲ್ಪ ನೀರನ್ನೆತ್ತಿಕೊಂಡು ಅನ್ನಕ್ಕೆ ಪ್ರದಕ್ಷಿಣವಾಗಿ ಸುತ್ತಬೇಕು. ಆ ನೀರನ್ನು ಕುಡಿಯಬಾರದು. ಕುಡಿದರೆ ಚಾಂದ್ರಾಯಣವನ್ನು ಮಾಡಬೇಕು. ಸುತ್ತಿದ ಪರಿಷೇಚನ ಜಲವನ್ನು ಕೆಳಗೆ ಬಿಟ್ಟು ಬೇರೆ ನೀರನ್ನು ತೆಗೆದು ಮಂತ್ರಪೂರ್ವಕವಾಗಿ ಪಾನಮಾಡಬೇಕು. ಆಮೇಲೆ ಮಂತ್ರಪೂರ್ವಕವಾಗಿ ಐದು ಪ್ರಾಣಾಹುತಿಗಳನ್ನು ನಡೆಸಬೇಕು. ಪ್ರಾಣಾಹುತಿಕಾಲದಲ್ಲಿ ನಾಲಗೆಯು ಅನ್ನದ ರುಚಿಯನ್ನು ತಿಳಿಯದಂತೆ ಅಡಗಿಸಿಡಬೇಕು. ಅನ್ನಸ್ವರೂಪವನ್ನೂ, ಭೋಕ್ತೃವಿನ ಸ್ವರೂಪವನ್ನೂ, ಪಂಚಪ್ರಾಣಗಳನ್ನೂ

ತಿಳಿದು, ಐದು ಆಹುತಿಗಳನ್ನು ಮಾಡತಕ್ಕವನು ಐದು ವಾಯುಗಳನ್ನೂ ಪೂಜಿಸಿದವನಾಗುವನು. ಇದಕ್ಕೆ ವಿರುದ್ಧವಾಗಿ ಭೋಜನಮಾಡುವ ಬ್ರಾಹ್ಮಣನು, ತಾನು ತಿಂದ ಅನ್ನದಿಂದ ಅಸುರರನ್ನೂ, ಭೂತ ಪ್ರೇತ ಪಿಶಾಚಗಳನ್ನೂ ತೃಪ್ತಿಗೊಳಿಸಿದವನಾಗುವನು. ಬಾಯಿಗೆ ಹಿಡಿಯುವಷ್ಟು ಪ್ರಮಾಣವುಳ್ಳ ಉಂಡೆಯನ್ನೇ ಮಾಡಿ, ಅದನ್ನು ಒಂದೊಂದಾಗಿ ಭುಜಿಸಬೇಕು. ಬಾಯಲ್ಲಿ ಸುಲಭವಾಗಿ ಅಡಗದೆ ಮಿಕ್ಕ ಕಬಳದ ಭಾಗವು ಎಂಜಲೆನಿಸುವುದು. ಕಚ್ಚಿ ಮಿಕ್ಕುದೂ, ಬಾಯಿಂದ ಹೊರಕ್ಕೆ ಬಿದ್ದುದೂ, ತಿರುಗಿ ತಿನ್ನುವುದಕ್ಕೆ ಯೋಗ್ಯವಲ್ಲ ಅದನ್ನು ತಿಂದವನು ಚಾಂದ್ರಾಯಣವನ್ನು ನಡೆಸಬೇಕು. ತನ್ನ ಎಂಜಲನ್ನು ತಾನು ತಿಂದರೂ, ಇತರರು ತಿಂದು ಬಿಸುಟ ಎಂಜಲನ್ನು ತಿಂದರೂ, ಚಾಂದ್ರಾಯಣವನ್ನೋ, ಅಥವಾ ಪ್ರಾಜಾಪತ್ಯವೆಂಬ ಕೃಚ್ಛ್ರವನ್ನೋ ನಡೆಸಬೇಕು. ಸ್ತ್ರೀಯರು ತಿಂದ ಪಾತ್ರದಲ್ಲಿ ತಿನ್ನುವುದು, ಪತ್ನಿಯ ಎಂಜಲನ್ನು ತಿನ್ನುವುದು, ಪತ್ನಿಯೊಡನೆ ಕುಳಿತು ಊಟಮಾಡುವುದು, ಇವೆಲ್ಲ ಮದ್ಯಪಾನದೋಷಕ್ಕೆಡೆಯೆನ್ನುವರು. ಅಂತವನಿಗೆ ಮಹರ್ಷಿಗಳು ಪ್ರಾಯಶ್ಚಿತ್ತವೇನನ್ನೂ ಹೇಳಲಿಲ್ಲ. ತಿನ್ನುವಾಗ, ಮತ್ತು ಕುಡಿಯುವಾಗ ಬಾಯಿಂದ ಬಿದ್ದುದನ್ನು ಉಪಯೋಗಿಸಬಾರದು. ಅಂತಹ ಅಭೋಜ್ಯವನ್ನು ತಿಂದವನೂ, ಒಬ್ಬನು ಕುಡಿದು ಮಿಗಿಸಿದುದನ್ನು ಕುಡಿದವನೂ ಚಾಂದ್ರಾಯಣವನ್ನು ಮಾಡಬೇಕು. ಯಾವ ಪಾತ್ರದಿಂದ ಪಾನೀಯವನ್ನು ಕುಡಿಯುವನೋ, ಆ ಪಾತ್ರವನ್ನು ನೆಲದಲ್ಲಿಡುವವರೆಗೆ ಅದು ಎಂಜಲೆನಿಸುವುದಿಲ್ಲ. ನೆಲದಲ್ಲಿಟ್ಟಮೇಲೆ ಅದು ಎಂಜಲೆನಿಸುವುದು. ಬ್ರಾಹ್ಮಣನು ಭೋಜನಮಾಡುವಾಗ ಮಾತಾಡದೆ, ಅತ್ತಿತ್ತ ದಿಕ್ಕುಗಳನ್ನು ನೋಡದೆ, ಭೂಮಿಯಲ್ಲಿ ದೃಷ್ಟಿಯಿಟ್ಟು ಭೋಜನಮಾಡಬೇಕು. ಎಂಜಲನ್ನು ಮತ್ತೊಬ್ಬರಿಗೆ ತಿನಿಸಬಾರದು. ಮಿತಿಮೀರಿ ಊಟಮಾಡಬಾರದು. ಬಹಳ ಕಡಿಮೆಯಾಗಿಯೂ ತಿನ್ನಬಾರದು. ದೇಹಕ್ಕೆ ಅಸೌಖ್ಯವಾಗದಷ್ಟುಮಾತ್ರವೇ ಊಟಮಾಡಬೇಕು. ಬ್ರಾಹ್ಮಣನು ಭೋಜನಮಾಡುವಾಗ, ಮುಟ್ಟಾದ ಹೆಂಗಸರು, ಚಂಡಾಲರು, ನಾಯಿ, ಹಂದಿ, ಇವು ಕಣ್ಣಿಗೆ ಬಿದ್ದರೆ ಆ ಅನ್ನವನ್ನು ಬಿಸಾಡಬೇಕು. ಕೂದಲಾಗಲಿ, ಕ್ರಿಮಿಕೀಟಗಳಾಗಲಿ ಭೋಜನ

ಪದಾರ್ಥದಲ್ಲಿ ಸೇರಿದುದನ್ನು ಕಂಡಾಗಲೂ ಅಂತಹ ಆಹಾರವಸ್ತುವನ್ನು ಭುಜಿಸಬಾರದು. ಬಾಯಿಂದ ಊದಿದ ಆಹಾರವನ್ನೂ ಭುಜಿಸಬಾರದು. ಅಂತವುಗಳನ್ನು ಭುಜಿಸಿದವರು ಚಾಂದ್ರಾಯಣವನ್ನು ಮಾಡಬೇಕು. ಭೋಜನಕ್ಕೆ ಕುಳಿತು ಎದ್ದು ನಿಂತಮೇಲೆ ತಿರುಗಿ ಕುಳಿತು ಅದನ್ನು ಭುಜಿಸಬಾರದು. ಕಾಲಿಗೆ ತಗುಲಿದ ಮತ್ತು ಕಾಲಿಂದ ದಾಟಿದ ಆಹಾರವಸ್ತುಗಳನ್ನು ಭುಜಿಸಬಾರದು. ಅವೆಲ್ಲ ರಾಕ್ಷಸಾನ್ನಗಳೆನಿಸುವುವು. ರಾಕ್ಷಸೋಚ್ಛಿಷ್ಟವೆನಿಸಿದ ಅಂತಹ ಆಹಾರಗಳನ್ನು ತಿಂದ ಬ್ರಾಹ್ಮಣನು ತನ್ನ ಹಿಂದು ಮುಂದಿನ ಏಳು ತಲೆಮೊರೆಯ ಪಿತೃಗಳನ್ನೂ ನರಕದಲ್ಲಿ ಬೀಳಿಸುವನು. ಊಟಮಾಡಿದ ಪಾತ್ರದಲ್ಲಿಯೇ ಉತ್ತರಾಪೋಶನವನ್ನು ಮಾಡಿ ಮೇಲಕ್ಕೇಳಬೇಕು. ಹಾಗೆ ಮಾಡದೆ ಆಸನವನ್ನು ಬಿಟ್ಟು ಮೇಲೆದ್ದರೆ ಆಗ ಒಡನೆಯೇ ಸ್ನಾನಮಾಡಬೇಕು. ಇಲ್ಲದಿದ್ದರೆ ಅವನು ಅಶುದ್ಧನೆನಿಸುವನು' ಎಂದನು.

ಆಗ ಯುಧಿಷ್ಠಿರನು ತಿರುಗಿ ಕೃಷ್ಣನನ್ನು ಕುರಿತು 'ವಾಸುದೇವಾ! ಹಿಡಿಹುಲ್ಲಿನ (ತೃಣಮುಷ್ಟಿಯ) ವಿಧಿಗಳನ್ನೂ, ತೃಣದ ಪ್ರಭಾವಗಳನ್ನೂ ಕಬ್ಬಿನಿಂದ ಚಂದ್ರೋತ್ಪತ್ತಿಯಾದ ವೃತ್ತಾಂತವನ್ನೂ ನೀನು ತಿಳಿಸಬೇಕು' ಎನಲು, ಕೃಷ್ಣನು 'ರಾಜಾ! ಲೋಕಕ್ಕೆ ವೃಷಭಗಳನ್ನು ತಂದೆಯೆಂದೂ, ಗೋವುಗಳನ್ನು ತಾಯೆಂದೂ ತಿಳಿಯಬೇಕು. ಅವುಗಳನ್ನು ಪೂಜಿಸುವುದರಿಂದ ಪಿತೃಗಳು ಪೂಜಿತರಾಗುವರು. ಸಭಾಮಂಟಪಗಳು, ಅರವಟಿಗೆಗಳು, ಗೃಹದೇವಾಲಯಗಳು, ಇವೆಲ್ಲವೂ ಯಾವ ಗೋವುಗಳ ಮಲದಿಂದಲೇ ಶುದ್ಧವಾಗುವುವೋ, ಅವುಗಳಿಗಿಂತಲೂ ಪವಿತ್ರಪ್ರಾಣಿಯು ಬೇರೆ ಲೋಕದಲ್ಲಿ ಯಾವುದುಂಟು? ಆಹಾರವನ್ನು ಭುಜಿಸುವಮೊದಲು ಯಾವನು ಒಂದು ವರ್ಷಕಾಲದವರೆಗೆ ಬೇರೆಯವರ ಹಸುಗಳಿಗೆ ಅಥವಾ ವೃಷಭಗಳಿಗೆ ತನ್ನ ತಾಯಿತಂದೆಗಳೆಂಬ ಭಾವದಿಂದ ಬಂದು ಮುಂದೆ ನಿಂತು 'ಓ ಮಾತೆಯರೇ! ಈ ಒಂದು ಹಿಡಿಹುಲ್ಲನ್ನು ಸ್ವೀಕರಿಸಬೇ'ಕೆಂದು ಹೇಳಿಯಾಗಲಿ, ಗಾಯತ್ರೀಮಂತ್ರವನ್ನು ಹೇಳಿಯಾಗಲಿ ತೃಣಮುಷ್ಟಿಯನ್ನು ಕೊಡುವನೋ, ಅವನು ತಿಳಿದಾಗಲಿ, ತಿಳಿಯದೆಯಾಗಲಿ ಮಾಡಿದ ಸಮ

ಸ್ತಪಾಪಗಳೂ, ದುಸ್ವಪ್ನಫಲಗಳೂ ನಶಿಸುವುವು. ಓ ರಾಜೇಂದ್ರಾ! ಧಾನ್ಯಗಳಲ್ಲಿ ಎಳ್ಳು ಪವಿತ್ರವಾದುದು. ಪಾಪಹರವಾದುದು. ಸಾಕ್ಷಾನ್ನಾರಾಯಣನಿಂದ ಉತ್ಪನ್ನವಾದುದು. ಶ್ರಾದ್ಧಕ್ಕೆ ಎಳ್ಳೇ ಪ್ರಧಾನವು. ದಾನಗಳಲ್ಲಿ ತಿಲದಾನವೇ ಮೇಲಾದುದು. ಆದುದರಿಂದ ತಿಲವನ್ನು ಪೂಜಿಸಬೇಕು. ಬೆಳಗ್ಗೆ ಎದ್ದು 'ತಿಲಂ, ತಿಲಂ' ಎಂದು ಎಳ್ಳನ್ನು ಮುಟ್ಟಿದರೆ, ಸಮಸ್ತ ಪಾಪಗಳೂ ಹೋಗುವುವು. ಬೆಲೆಗೆ ತೆಗೆದ ಅಥವಾ ದಾನತೆಗೆದ ಎಳ್ಳನ್ನು ಬ್ರಾಹ್ಮಣನು ವಿಕ್ರಯಿಸಬಾರದು. ಭೋಜನ, ಅಭ್ಯಂಗನ, ದಾನ, ಇವುಗಳಿಗೆಹೊರತು ಬೇರೆ ಕಾರ್ಯಗಳಿಗೆ ಎಳ್ಳನ್ನು ಉಪಯೋಗಿಸುವವನು ಮಲಕ್ರಿಮಿಯಾಗಿ ಹುಟ್ಟುವನಲ್ಲದೆ, ಪಿತೃಗಳಿಗೂ ಅದೇ ಗತಿಯನ್ನು ಹೊಂದಿಸುವನು. ಬ್ರಾಹ್ಮಣನು ಎಳ್ಳನ್ನು ಗಾಣದಲ್ಲಿಡುವುದು ನರಕಕ್ಕೆ ಕಾರಣವು. ಚಂದ್ರನು ಕಬ್ಬಿನ ಜಲ್ಲೆಯಿಂದ ಉಂಟಾದವನು. ಬ್ರಾಹ್ಮಣರು ಚಂದ್ರವಂಶದಲ್ಲಿ ಜನಿಸಿದವರು. ಆದುದರಿಂದ ಬ್ರಾಹ್ಮಣನು ಕಬ್ಬನ್ನು ಗಾಣಕ್ಕೆ ಕೊಡಬಾರದು. ಹಾಗೆ ಮಾಡಿದವನು ಆತ್ಮವಧೆಯನ್ನೇ ಮಾಡಿದಂತಾಗುವುದು. ಕಬ್ಬಿನಾಲೆಯಲ್ಲಿ ಬ್ರಾಹ್ಮಣನು ಕಬ್ಬನ್ನು ಗಾಣಕ್ಕೆ ಕೊಟ್ಟು ಅರೆದರೆ, ಒಂದೊಂದು ಜಲ್ಲೆಗೆ ಒಂದೊಂದು ಬ್ರಹ್ಮಹತ್ಯೆಯನ್ನು ಮಾಡಿದ ಪಾಪಕ್ಕೆ ಗುರಿಯಾಗುವನು' ಎಂದನು.

ಇದು ನೂರಒಂಭತ್ತನೆಯ ಅಧ್ಯಾಯವು.

---

ಕೃಷ್ಣನು ಆಪದ್ಧರ್ಮಗಳನ್ನೂ, ಉತ್ತಮಾಧಮ ಬ್ರಾಹ್ಮಣರ ಲಕ್ಷಣಗಳನ್ನೂ, ಸಾಮಾನ್ಯಧರ್ಮಗಳನ್ನೂ, ಬ್ರಾಹ್ಮಣ್ಯಸಿದ್ಧಿಗೆ ಕಾರಣವಾದ ಪದ್ಧತಿಗಳನ್ನೂ ಗುರು, ಆಚಾರ್ಯ, ಉಪಾಧ್ಯಾಯಾದಿಗಳ ಲಕ್ಷಣಗಳನ್ನೂ ತಿಳಿಸಿದುದು.

ಆಮೇಲೆ ಯುಧಿಷ್ಠಿರನು 'ಓ ದೇವಾ! ನಿನ್ನಿಂದ ನಾನು ಅನೇಕ ಧರ್ಮಗಳನ್ನೂ, ಭೋಜ್ಯಾಭೋಜ್ಯಗಳನ್ನೂ ತಿಳಿದಂತಾಯಿತು. ಇನ್ನು ಆಪದ್ಧರ್ಮಗಳನ್ನು ತಿಳಿಸಬೇಕು' ಎನಲು, ಕೃಷ್ಣನು 'ಓ ರಾಜೇಂದ್ರಾ!

ದುರ್ಭಿಕ್ಷದಲ್ಲಿ ದೇಶಕ್ಕೇನಾದರೂ ಉಪದ್ರವವವು ಒದಗಿದಲ್ಲಿ, ಜನನಮರಣಗಳಿಂದುಂಟಾದ ಆಶೌಚದಲ್ಲಿ ಧರ್ಮಕಾರ್ಯವನ್ನು ಮಾಡುವಲ್ಲಿ, ಮಾರ್ಗಪ್ರಯಾಣದಲ್ಲಿ ಅನುಷ್ಠಾನ ನಿಯಮಗಳನ್ನು ತಗ್ಗಿಸಬಹುದು. ದೂರಪ್ರಯಾಣಮಾಡಿ ಬಳಲಿದವನು, ದ್ವಿಜನಾವನೂ ದೊರೆಯದಿದ್ದ ಸಂದರ್ಭದಲ್ಲಿ, ಶೂದ್ರನಿಂದ ಅನ್ನರೂಪವಾಗಿ ಬೇಯಿಸಲ್ಪಡದ ಯಾವುದಾದರೂ ಆಹಾರವನ್ನು ತನ್ನ ಪ್ರಾಣಧಾರಣೆಗೆ ಬೇಕಾದಷ್ಟನ್ನುಮಾತ್ರ ತೆಗೆದುಕೊಳ್ಳಬಹುದು. ಬ್ರಾಹ್ಮಣನಾಗಿದ್ದರೂ, ರೋಗ, ದುಃಖ, ಕಷ್ಟಾದಿದಶೆಗಳಲ್ಲಿಯೂ, ಅತ್ಯಂತ ಕ್ಷುಧಾತುರದಲ್ಲಿಯೂ ಶಾಸ್ತ್ರವಿಧಿಯನ್ನು ಮೀರಿ ಭುಜಿಸಿದರೂ ಪ್ರಾಯಶ್ಚಿತ್ತವು ಬೇಕಾದುದಿಲ್ಲ. ಬ್ರಾಹ್ಮಣನು ಹವ್ಯಕವ್ಯಗಳಲ್ಲಿ ನಿಮಂತ್ರಿತನಾದಾಗ ಮಾಂಸಾದಿಗಳನ್ನು ಭುಜಿಸಿದಾಗಲೂ ಪ್ರಾಯಶ್ಚಿತ್ತವು ಬೇಕಾದುದಿಲ್ಲ. ನೀರು, ಗಡ್ಡೆ, ತುಪ್ಪ, ಹಾಲು, ಹವಿಸ್ಸು ಬ್ರಾಹ್ಮಣನ ಕೋರಿಕೆ, ಗುರುವಿನ ಆಜ್ಞೆ, ಔಷಧಿಗಳು, ಇವೆಂಟೂ ವ್ರತಗಳನ್ನು ಕೆಡಿಸಲಾರವು. ಪ್ರಾಯಶ್ಚಿತ್ತವನ್ನು ವಿಧ್ಯುಕ್ತವಾಗಿ ಮಾಡಸಲು ಶಕ್ತಿಯಿಲ್ಲದವನು ವಿದ್ವಾಂಸರ ಬಾಯಿಮಾತಿನಿಂದ ಅಥವಾ ದಾನದಿಂದ ಶುದ್ಧನಾಗುವನು. ದೇಶಾಂತರಕ್ಕೆ ಹೋಗಿಬಂದವನು ಋತುಕಾಲದಲ್ಲಿಯಾಗಲಿ, ಋತುಕಾಲವಿಲ್ಲದಿದ್ದಾಗಾಗಲಿ, ರಾತ್ರಿಯಾಗಲಿ, ಹಗಲಾಗಲಿ, ಸ್ವಪತ್ನೀಸಮಾಗಮದಿಂದ ದೋಷಿಯಾಗಲಾರನು. ಅವನಿಗೆ ಪ್ರಾಯಶ್ಚಿತ್ತವೂ ಬೇಕಾದುದಿಲ್ಲ' ಎಂದನು ಆಗ ಯುಧಿಷ್ಠಿರನು 'ವಾಸುದೇವಾ! ಬ್ರಾಹ್ಮಣರಲ್ಲಿ ಉತ್ತಮರಾರು? ನಿಂದ್ಯರಾರು? ಅಷ್ಟಕದ ಕಾಲವಾದುದು?' ಎನಲು ಕೃಷ್ಣನು 'ಮಹಾರಾಜಾ! ಸೂರ್ಯನು ಸತ್ಯಸಂಧನಾದ ಬ್ರಾಹ್ಮಣನನ್ನು ಕಂಡಾಗಲೆಲ್ಲ 'ಇವನು ನನ್ನ ಮಂಡಲವನ್ನು ಭೇದಿಸಿಕೊಂಡು ಸನಾತನಬ್ರಹ್ಮವನ್ನು ಸೇರುವನು' ಎಂದು ತನ್ನಲ್ಲಿತಾನೇ ಕಲಗುವನು. ಕುಲೀನನೂ, ಕರ್ಮನಿಷ್ಠನೂ, ವಿದ್ಯಾವಂತನೂ, ಸುಶೀಲನೂ, ಬ್ರಹ್ಮತೇಜಸ್ಸುಳ್ಳವನೂ, ಕಾಪಟ್ಯವಿಲ್ಲದವನೂ, ಸತ್ಯಸಂಧನೂ ಆದ ಬ್ರಾಹ್ಮಣನು ಯಾರಾಗಿದ್ದರೂ ಸತ್ಪಾತ್ರನೆನಿಸುವನು. ಇಂತಹ ಬ್ರಾಹ್ಮಣರನ್ನು ಮೊದಲು ಕುಳ್ಳಿರಿಸಿ, ಭೋಜನಮಾಡಿಸುವಾಗ, ಆ ಪಙ್ಕ್ತಿಯಲ್ಲಿದ್ದವರೆಲ್ಲರೂ ಅವರ ದೃಷ್ಟಿಯಿಂದಲೇ ಪರಿಶುದ್ಧರಾಗುವರು. ನನ್ನಲ್ಲಿ

ಭಕ್ತಿಯುಳ್ಳವರಾಗಿ, ನನ್ನನ್ನೇ ನಂಬಿದ ಬ್ರಾಹ್ಮಣಶ್ರೇಷ್ಠರನ್ನು ಪಙ್ತಿಪಾವನರೆಂದೂ, ಲೋಕಪೂಜ್ಯರೆಂದೂ ತಿಳಿ. ಓ ರಾಜಾ! ವೇದಪಾರಂಗತರಾಗಿದ್ದರೂ ಹೆಸರಿಗೆ ಬ್ರಾಹ್ಮಣರೆನಿಸಿಕೊಂಡು, ಪಾಪನಿರತರಾಗಿ, ನಿಂದಾರ್ಹರೆನಿಸುವ ಬ್ರಾಹ್ಮಣರ ರೀತಿಯನ್ನು ಹೇಳುವೆನು ಕೇಳು. ಅಗ್ನಿಹೋತ್ರಗಳನ್ನು ಮಾಡದೆ, ವೇದಾಧ್ಯಯನವಿಲ್ಲದೆ, ದಾನತೆಗೆಯುವುದರಲ್ಲಿ ಅತ್ಯಾಸೆಗೊಂಡು, ಸಿಕ್ಕಿದಕಡೆಯಲ್ಲಿ ಭೋಜನಮಾಡತಕ್ಕ ಬ್ರಾಹ್ಮಣನು ಬ್ರಹ್ಮದೂಷಕನೆನಿಸುವನು. ಜನನಮರಣಾಶೌಚವುಳ್ಳವರ ಅನ್ನವನ್ನೂ, ಶೂದ್ರಾನ್ನವನ್ನೂ ಭುಜಿಸುತ್ತ, ಹೊಟ್ಟೆಹೊರೆಯುವ ದ್ವಿಜನ ಗತಿಯೇನೆಂಬುದನ್ನು ನಾನೂ ತಿಳಿಯಲಾರೆನು. ದಿನತಪ್ಪದೆ ಜಪ ಹೋಮಾಧ್ಯಯನಗಳನ್ನು ಮಾಡುತ್ತಿದ್ದರೂ, ಶೂದ್ರಾನ್ನದಿಂದ ಬದುಕುವವನಿಗೆ ಸದ್ಗತಿಯಿಲ್ಲ. ಅಂತವನಿಗೆ ಆತ್ಮವೂ, ವೇದವೂ, ಅಗ್ನಿತ್ರಯವೂ, ಇವೈದೂ ನಶಿಸುವುವು. ಶೂದ್ರಾನ್ನದಿಂದ ಜೀವಿಸುವವನನ್ನು, ನಾಯಿ ನರಿಗಳಿಗೆ ಸಮಾನವಾಗಿ ಭಾವಿಸಿ, ಆತನಿಗೆ ಬರೀನೆಲದಲ್ಲಿ ಭೋಜನವನ್ನಿಕ್ಕಬೇಕು. ಶೂದ್ರನ ಮೃತಶರೀರವನ್ನು ಹಿಂಬಾಲಿಸಿಹೋಗುವ ಬ್ರಾಹ್ಮಣನು ಮೂರು ರಾತ್ರಿಗಳ ಆಶೌಚವಿದ್ದು, ಆಮೇಲೆ ಸಮುದ್ರಸಂಗಮವಾಗತಕ್ಕ ನದಿಯಲ್ಲಿ ಸ್ನಾನಮಾಡಿ, ನೂರು ಪ್ರಾಣಾಯಾಮಗಳನ್ನು ಮಾಡಿ, ತುಪ್ಪವನ್ನು ಭುಜಿಸಿದರೆ ಶುದ್ಧನಾಗುವನು. ಯಾವ ಬ್ರಾಹ್ಮಣನು ಅನಾಥವಾದ ಬ್ರಾಹ್ಮಣಪ್ರೇತವನ್ನು ಸಾಗಿಸುವನೋ ಅವನಿಗೆ ಒಂದೊಂದು ಅಡಿಗೂ ಅಶ್ವಮೇಧದ ಫಲವುಂಟು. ಅವರಿಗೆ ಅದರಿಂದ ದೋಷವೂ, ಹಾನಿಯೂ ಇಲ್ಲ. ಸ್ನಾನಮಾಡಿದೊಡನೆ ಅವರು ಶುದ್ಧರಾಗುವರು. ಬ್ರಾಹ್ಮಣನು ಶೂದ್ರಗೃಹಕ್ಕೆ ಹೋಗಿ, ಅಲ್ಲಿ ಹಾಲು ಮೊಸರುಗಳನ್ನಾದರೂ ಕುಡಿಯಬಾರದು. ಅದು ಶೂದ್ರಾನ್ನಕ್ಕೆ ಸಮಾನವೇ! ಭೋಜನಾರ್ಥಿಗಳಾಗಿ ಬಂದ ಬ್ರಾಹ್ಮಣರಿಗೆ ವಿಘ್ನಮಾಡಿದವನಿಗಿಂತಲೂ ಅಧಿಕ ಪಾತಕಿಯು ಬೇರೊಬ್ಬನಿಲ್ಲ. ಸದಾಚಾರವಿಲ್ಲದ ಬ್ರಾಹ್ಮಣನು ಸಾಂಗವಾದ ವೇದಗಳನ್ನೂ, ಸಾಂಖ್ಯ ಪುರಾಣಗಳನ್ನೂ ಓದಿದವನಾಗಿದ್ದರೂ, ಸತ್ಕುಲಪ್ರಸೂತನಾಗಿದ್ದರೂ, ಇವೊಂದೂ ಅವನನ್ನು ಉದ್ಧರಿಸಲಾರವು. ಗ್ರಹಣಕಾಲ, ವಿಷುವಕಾಲ, ಅಯನಕಾಲ, ಶ್ರಾದ್ಧ, ಮಘಾನಕ್ಷತ್ರ, ತನಗೆ ಪುತ್ರನು ಜನಿಸಿದ ಕಾಲ,

ಗಯೆಯಲ್ಲಿ ಪಿಂಡಪ್ರದಾನಮಾಡುವ ಕಾಲ, ಇಂತಹ ಕಾಲಗಳಲ್ಲಿ ಮಾಡಿದ ದಾನವು ಅತಿ ಸ್ವಲ್ಪವಾದರೂ, ಸಹಸ್ರವರಹಗಳ ದಾನಕ್ಕೆ ಸಮವಾಗುವುದು. ವೈಶಾಖಶುದ್ಧ ತೃತೀಯೆ, ಕಾರ್ತೀಕಶುದ್ಧ ತೃತೀಯೆ, ಕನ್ಯಾಮಾಸದ ಬಹುಳ ತ್ರಯೋದಶಿ, ಮಾಘಮಾಸದ ಪೂರ್ಣಿಮೆ, ಗ್ರಹಣ, ದಕ್ಷಿಣೋತ್ತರಾಯನಗಳು, ಇವಿಷ್ಟೂ ಶ್ರಾದ್ಧಕಾಲಗಳು. ಈ ಕಾಲಗಳಲ್ಲಿ ಮನುಷ್ಯನು ಶುದ್ಧನಾಗಿ, ಎಳ್ಳುನೀರಿನಿಂದ ಪಿತೃಗಳಿಗೆ ತರ್ಪಣವನ್ನು ಬಿಡಬೇಕು. ಇದರಿಂದ ಸಹಸ್ರವರ್ಷಗಳ ಶ್ರಾದ್ಧಫಲವು ಬರುವುದು. ಈ ರಹಸ್ಯವನ್ನು ಪಿತೃಗಳೇ ತಿಳಿಸಿರುವರು. ಯಾವನು ಸ್ನೇಹಪಕ್ಷಪಾತದಿಂದಾಗಲಿ, ಭೀತಿಯಿಂದಾಗಲಿ, ಧನದಾಸೆಯಿಂದಾಗಲಿ, ಭೋಜನದಲ್ಲಿ ಪಙ್ಕ್ತಿಭೇದವನ್ನು ತೋರಿಸುವನೋ, ಅವನನ್ನು ಬ್ರಹ್ಮಘಾತುಕನಿಗೆ ಸಮಾನನೆಂದು ವಿದ್ವಾಂಸರು ಹೇಳುವರು. ತನ್ನಲ್ಲಿ ಹೆಚ್ಚು ಧನವಿದ್ದರೂ ಪಾರಲೌಕಿಕವಾದ ಕಾರ್ಯಗಳನ್ನು ಮಾಡದೆ, ತನ್ನ ಸುಖಭೋಗಗಳಲ್ಲಿ ಮಗ್ನನಾದವನಿಗೆ ಇಹಪರಗಳೆರಡರಲ್ಲಿಯೂ ಶ್ರೇಯಸ್ಸಿಲ್ಲ. ವಿರಕ್ತರೂ, ತಪಸ್ವಿಗಳೂ, ವೇದಾಧ್ಯಯನಶೀಲರೂ, ಜಿತೇಂದ್ರಿಯರೂ, ಸಮಸ್ತಭೂತಗಳ ಹಿತದಲ್ಲಿ ನಿರತರೂ ಆಗಿದ್ದು, ತಮ್ಮ ಶರೀರವನ್ನು ಅದರಲ್ಲಿಯೇ ಜೀರ್ಣಗೊಳಿಸತಕ್ಕವರಿಗೆ ಇಹಪರಗಳೆರಡೂ ಉಂಟು. ಹಾಗಿಲ್ಲದೆ ಯಾರು ವಿದ್ಯೆ, ದಾನ, ತಪಸ್ಸು ಇವೊಂದೂ ಇಲ್ಲದೆ, ಪುತ್ರಸಂತಾನವೂ ಇಲ್ಲದೆ, ಇತರ ಭೂತಗಳ ಹಿತದಲ್ಲಿಯೂ ಪ್ರವರ್ತಿಸದೆ ಇರುವರೋ, ಅವರಿಗೆ ಇಹಪರಗಳೆರಡೂ ಇಲ್ಲ' ಎಂದನು.

ತಿರುಗಿ ಯುಧಿಷ್ಠಿರನು ಉತ್ತಮಧರ್ಮಗಳನ್ನು ತಿಳಿಸಬೇಕೆಂದು ಕೇಳಲು, ಕೃಷ್ಣನು 'ಓ ರಾಜೇಂದ್ರಾ! ಆದಿಯಲ್ಲಿ ಮನುವು ಈ ಧರ್ಮಗಳ ಸಾರವನ್ನು ನಿರ್ಣಯಿಸಿರುವನು. ವೇದಪುರಾಣಗಳಿಗೆ ಸಮ್ಮತವಾದ ಆ ಮನುಧರ್ಮವನ್ನೇ ತಿಳಿಸುವೆನು. ಅಗ್ನಿಚಯನಮಾಡಿದವನು, ಸತ್ರಯಾಗಮಾಡಿದವನು, ರಾಜನು, ಯತಿ, ಮಹೋದಧಿ, ಕಪಿಲೆ ಇವೆಲ್ಲ ದರ್ಶನಮಾತ್ರದಿಂದಲೇ ಶುದ್ಧೀಕರಿಸತಕ್ಕುವು. ಆದುದರಿಂದ ಇವನ್ನು ಯಾವಾಗಲೂ ದರ್ಶನಮಾಡಬೇಕು. ಒಂದು ಹಸುವನ್ನು ಒಬ್ಬನಿಗೇ

ದಾನಮಾಡಬೇಕಲ್ಲದೆ ಅನೇಕರಿಗೆ ಕೊಡಬಾರದು. ಪಶುವನ್ನು ವಿಕ್ರಯಿಸಿದರೆ ಆ ದೋಷವು ಏಳುತಲೆಯವರನ್ನು ದಹಿಸುವುದು. ಹಸು, ವಸ್ತ್ರ, ಹಾಸಿಗೆ, ಸ್ತ್ರೀಯರು, ಇವನ್ನೂ ಅನೇಕರಿಗೆ ದಾನಮಾಡಬಾರದು. ಆ ದಾನವು ಫಲಕಾರಿಯಲ್ಲ. ಬ್ರಾಹ್ಮಣರೂ, ಪಶುಗಳೂ ಮನೆಗೆ ಬಂದಾಗ ಆಹಾರವನ್ನು ಕೊಟ್ಟರೆ, ಅದರಿಂದಾಗುವ ಪುಣ್ಯವು ರಾಜಸೂಯಕ್ಕಿಂತಲೂ ಮೇಲಾದುದು. ಗೋ ಬ್ರಾಹ್ಮಣರ ಆಹಾರಕ್ಕೆ ವಿಘಾತವನ್ನು ಮಾಡುವವನು ತಿರ್ಯಗ್ಜಾತಿಯಲ್ಲಿ ಹುಟ್ಟಿ, ಆಮೇಲೆ ಚಂಡಾಲಜನ್ಮವನ್ನು ಹೊಂದುವನು. ದೇವಬ್ರಾಹ್ಮಣರ, ದರಿದ್ರನ, ಆಚಾರ್ಯನ, ಸ್ವತ್ತನ್ನು ಅಪಹರಿಸುವವನು ಸ್ವರ್ಗದಲ್ಲಿದ್ದರೂ ಅಧೋಗತಿಗೆ ತಳ್ಳಲ್ಪಡುವನು. ಧರ್ಮವನ್ನು ತಿಳಿಯಲು ವೇದಗಳೇ ಮೊದಲನೆಯ ಪ್ರಮಾಣವು. ಶಾಸ್ತ್ರವು ಎರಡನೆಯ ಪ್ರಮಾಣವು. ಮೂರನೆಯದು ಲೋಕಾಚಾರವು. ಪೂರ್ವ ಪಶ್ಚಿಮ ಸಮುದ್ರಗಳ, ಮತ್ತು ವಿಂಧ್ಯ ಹಿಮಾಲಯಗಳ ನಡುವೆ ಇರುವ ದೇಶವೆಲ್ಲ ಆರ್ಯಾವರ್ತವೆನಿಸುವುದು. ಸರಸ್ವತೀ ದೃಷದ್ವತಿಗಳ ನಡುವೆ ಇರುವ ಪ್ರದೇಶವನ್ನು ದೇವನಿರ್ಮಿತವಾದ ಬ್ರಹ್ಮಾವರ್ತವೆಂದು ಹೇಳುವರು. ಯಾವ ದೇಶದಲ್ಲಿ ಯಾವಯಾವ ಆಚಾರವು ಪರಂಪರೆಯಿಂದ ನಡೆದುಬರುತ್ತಿರುವುದೋ, ಅಲ್ಲಿನ ಚತುರ್ವರ್ಣದವರಿಗೂ, ಇತರ ಮಿಶ್ರ ಜಾತಿಯವರಿಗೂ ಅದೇ ಸದಾಚಾರವೆನಿಸುವುದು. ಕುರುಕ್ಷೇತ್ರ, ಮತ್ಸ್ಯ, ಪಾಂಚಾಲ, ಶೂರಸೇನವೆಂಬೀ ದೇಶಗಳೆಲ್ಲ ಬ್ರಹ್ಮಾವರ್ತದ ಮೇರೆಯಲ್ಲಿರುವ ಬ್ರಹ್ಮರ್ಷಿದೇಶಗಳು. ಇಲ್ಲಿ ಹುಟ್ಟಿದ ಬ್ರಾಹ್ಮಣರಿಂದಲೇ ಭೂಮಿಯಲ್ಲಿರುವ ಎಲ್ಲಾ ಮನುಷ್ಯರಿಗೂ ಆಚಾರಗಳು ತಿಳಿಯತಕ್ಕುದಾಗಿರುವುವು. ವಿಂಧ್ಯ ಹಿಮಾಲಯಗಳ ನಡುವೆ, ವಿನಶನವೆಂಬ ಸ್ಥಳಕ್ಕೆ ಪೂರ್ವದಲ್ಲಿ, ಪ್ರಯಾಗಕ್ಕೆ ಪಶ್ಚಿಮದಲ್ಲಿರುವ ದೇಶವು ಮಧ್ಯದೇಶವೆನಿಸುವುದು. ಕೃಷ್ಣಸಾರವೆಂಬ ಜಾತಿಯ ಜಿಂಕೆಗಳು ಎಲ್ಲಿ ಪ್ರಕೃತಿಜನ್ಯವಾಗಿ ಹುಟ್ಟಿ ಸಂಚರಿಸುವುವೋ, ಆ ದೇಶವು ಯಾಗಯೋಗ್ಯವು. ಅವುಗಳನ್ನು ಬಿಟ್ಟು ಇತರದೇಶಗಳು ಮ್ಲೇಚ್ಛದೇಶಗಳೆನಿಸುವುವು. ಈ ಅಂಶವನ್ನು ತಿಳಿದು ದ್ವಿಜರು ಅಂತಹ ಶುದ್ಧಸ್ಥಳವನ್ನೇ ಆಶ್ರಯಿಸಬೇಕು. ಶೂದ್ರನು ಜೀವನಕ್ಕಾಗಿ ಯಾವ ದೇಶದಲ್ಲಿಯಾದರೂ ಇರಬಹುದು. ಒಳ್ಳೇ ನಡತೆ, ಅಹಿಂ

ಸೆ, ಸತ್ಯ, ಶಕ್ತಿಗೆ ತಕ್ಕಷ್ಟು ದಾನ, ಯಮನಿಯಮಗಳು, ಇವೆಲ್ಲ ಮೊದಲನೆಯತರದ ಧರ್ಮಗಳು. ದ್ವಿಜರಿಗೆ ವೇದೋಕ್ತಕರ್ಮಗಳಿಂದಲೇ ನಿಷೇಕಾದಿಸಂಸ್ಕಾರಗಳು ನಡೆಯಬೇಕು. ಇಹಪರಗಳೆರಡರಲ್ಲಿಯೂ ಅದು ಪವಿತ್ರಮಾಡುವುದು. ಗರ್ಭಾದಾನ, ಜಾತಕರ್ಮ, ನಾಮಕರಣ, ಚೌಳ, ಉಪನಯನ, ವೇದಾಧ್ಯಯನ, ಅದಕ್ಕೆ ತಕ್ಕ ವ್ರತಗಳು, ವಿವಾಹ, ಸ್ನಾತಕವ್ರತ, ಪಂಚಮಹಾಯಜ್ಞಗಳು, ಯಾಗಗಳು, ಇವುಗಳಿಂದಲೇ ಶರೀರವು ಬ್ರಾಹ್ಮಣಶರೀರವಾಗಿ ಮಾರ್ಪಡಿಸಲ್ಪಡುವುದು. ಈ ಸಂಸ್ಕಾರಗಳಿಲ್ಲದೆ ಇದ್ದವನಿಗೆ ಊಷರಕ್ಷೇತ್ರದಲ್ಲಿ ಬೀಜಗಳನ್ನು ಹೇಗೆ ಬಿತ್ತಬಾರದೋ, ಹಾಗೆ ವಿದ್ಯೆಯನ್ನುಪದೇಶಿಸಬಾರದು. ಲೌಕಿಕವಿದ್ಯೆಯಾಗಲಿ, ವೈದಿಕವಿದ್ಯೆಯಾಗಲಿ, ಅಧ್ಯಾತ್ಮಜ್ಞಾನವಾಗಲಿ, ಯಾರಿಂದ ನಮಗೆ ಲಭಿಸಿತೋ, ಅವರಿಗೆ ಮೊದಲು ಅಭಿವಾದನಮಾಡಬೇಕು. ತನ್ನ ಎಡಬಲದ ಕೈಗಳಿಂದ ಕ್ರಮವಾಗಿ ಗುರುವಿನ ಎಡಬಲದ ಪಾದಗಳನ್ನು ಹಿಡಿದು ಪಾದವಂದನಮಾಡಬೇಕು. ಒಂದೇ ಕೈಯಿಂದ ಪಾದವನ್ನು ಹಿಡಿದು ನಮಸ್ಕರಿಸಬಾರದು. ಮೊದಲು ನಿಷೇಕಾದಿಕರ್ಮಗಳನ್ನು ಮಾಡಿಸಿ, ಹುಟ್ಟಿದ ಮೇಲೆ ಅಧ್ಯಯನಾದಿಗಳನ್ನು ನಡೆಸುವವನು ಗುರುವೆನಿಸುವನು. ಯಾವನು ಉಪನಯನವನ್ನು ಮಾಡಿ ಪ್ರತಿದಿನವೂ ವೇದಗಳನ್ನೂ, ಕಲ್ಪಗಳನ್ನೂ, ರಹಸ್ಯಗಳನ್ನೂ ಅಧ್ಯಯನಮಾಡಿಸುವನೋ ಅವನು ಉಪಾಧ್ಯಾಯನು. ಸಾಂಗವಾದ ವೇದಾಧ್ಯಯನವನ್ನು ಮಾಡಿಸಿ, ವ್ರತಗಳನ್ನು ನಡೆಸಿ, ಮಂತ್ರಾರ್ಥಗಳನ್ನು ಉಪದೇಶಿಸುವವನು ಆಚಾರ್ಯನೆನಿಸುವನು. ಆಚಾರ್ಯನು ಹತ್ತುಮಂದಿ ಉಪಾಧ್ಯಾಯರಿಗೆ ಸಮಾನನು. ಪಿತನು ನೂರುಮಂದಿ ಆಚಾರ್ಯರಿಗೆ ಸಮಾನನು. ತಾಯಿಯು ತಂದೆಗಿಂತಲೂ ನೂರುಮಡಿ ಗೌರವಾರ್ಹಳು. ಇವರೆಲ್ಲರಿಗಿಂತಲೂ ಜ್ಞಾನೋಪದೇಶಕನಾದ ಗುರುವು ಬಹಳ ಮೇಲೆನಿಸುವನು. ಗುರುವಿಗಿಂತಲೂ ಮೇಲಾದ ವಸ್ತುವು ಹಿಂದೆಯೂ ಇಲ್ಲ. ಮುಂದೆಯೂ ಇರುವುದಿಲ್ಲ. ಆದುದರಿಂದ ಗುರುವಿಗೆ ವಿಧೇಯನಾಗಿ, ಗುರುಶುಶ್ರೂಷೆಯಲ್ಲಿ ನಿರತನಾಗಿರಬೇಕು. ಗುರುವನ್ನು ಅವಮಾನಿಸಿದವನಿಗೆ ನರಕವೇ ಗತಿಯೆಂಬುದರಲ್ಲಿ ಸಂದೇಹವಿಲ್ಲ. ಅಂಗಹೀನರು, ಅಧಿಕಾವಯವವುಳ್ಳವರು, ವಿದ್ಯೆಯಿಲ್ಲದವರು, ವಯಸ್ಸು

ಕಳೆದವರು, ಅಂದವಿಲ್ಲದವರು, ದರಿದ್ರರು, ಹೀನಜಾತಿಯವರು, ಇಂತವರನ್ನು ಹೇಳನಮಾಡಬಾರದು. ನಿಂದಿಸಲೂ ಬಾರದು. ಹಾಗೆ ಮಾಡಿದರೆ ನಿಂದಿಸಿದವನ ಪುಣ್ಯವು ನಿಂದಿಸಲ್ಪಟ್ಟವರಿಗೂ, ಅವರ ಪಾಪವು ನಿಂದಿಸಿದವರಿಗೂ ಬರುವುದು. ನಾಸ್ತಿಕ್ಯ, ವೇದನಿಂದೆ, ದೈವನಿಂದೆ, ದ್ವೇಷಬುದ್ಧಿ, ಡಂಭ, ಗರ್ವ, ಕೋಪ, ಕ್ರೌರ್ಯ, ಈ ದುರ್ಗುಣಗಳಾವುವೂ ಮನುಷ್ಯರಲ್ಲಿರಬಾರದು' ಎಂದನು.

ಇದು ನೂರಹತ್ತನೆಯ ಅಧ್ಯಾಯವು.

---

{ಕೃಷ್ಣನು ಅಗ್ನಿಯ ಉತ್ಪತ್ತಿಯನ್ನೂ, ಆಹವನೀಯ ಮೊದಲಾದ ವಿಭಾಗಗಳನ್ನೂ, ಅಗ್ನಿಯ ನಾಮಾಂತರಗಳನ್ನೂ, ಯಜ್ಞಾಗ್ನಿಯ ಪ್ರಭಾವವನ್ನೂ ಯುಧಿಷ್ಠಿರನಿಗೆ ತಿಳಿಸಿದುದು.}

ಯುಧಿಷ್ಠಿರನು 'ದೇವಾ! ಧರ್ಮಾಧರ್ಮಗಳನ್ನರಿಯದ ನಿನ್ನ ಭಕ್ತನಾದ ನನಗೆ ಪುಣ್ಯತಮವಾದ ಇತರ ಧರ್ಮವಿಚಾರವನ್ನು ತಿಳಿಸು' ಎನಲು, ಕೃಷ್ಣನು ತ್ರಿವರ್ಣದವರಿಗಾಗಿ ಏರ್ಪಟ್ಟ ಅಗ್ನಿಹೋತ್ರವನ್ನು ಮಂತ್ರಪೂರ್ವಕವಾಗಿ ಹೋಮಮಾಡಿ, ವಿಧ್ಯುಕ್ತರೀತಿಯಲ್ಲಿ ಉಪಾಸಿಸಿದರೆ, ಅದು ಆಹಿತಾಗ್ನಿಯನ್ನು ಅವನ ಪತ್ನಿಯೊಡನೆಯೂ, ಅವನ ಬಂಧುಗಳೊಡನೆಯೂ ಉದ್ಧರಿಸುವುದು' ಎಂದನು.

ಆಗ ಯುಧಿಷ್ಠಿರನು 'ಓ ದೇವದೇವೇಶಾ! ಅಗ್ನಿಯನ್ನು ಬ್ರಾಹ್ಮಣರು ಯಾವ ರೀತಿಯಲ್ಲಿ ಉಪಾಸಿಸಬೇಕು? ಕ್ಷತ್ರಿಯರು ಹೇಗೆ ಉಪಾಸಿಸಬೇಕು? ಮತ್ತು ವೈಶ್ಯರು ಹೋಮಮಾಡತಕ್ಕ ಬಗೆ ಹೇಗೆ? ಯಾವ ರೀತಿಯಲ್ಲಿ ಮಾಡಿದರೆ ಉತ್ತಮಹೋಮವೆನಿಸುವುದು? ಯಾವಯಾವನು ಯಾವಯಾವ ಕಾಲದಲ್ಲಿ ಹೇಗೆ ಅಗ್ನಿಯನ್ನು ಆಹ್ವಾನಮಾಡಬೇಕು? ಆ ಆಧಾನಮಾಡಿದ ಅಗ್ನಿಯನ್ನು ಇಡುವುದು ಹೇಗೆ? ಓ ಪ್ರಭೂ! ಅಗ್ನಿಗಳಲ್ಲಿ ಎಷ್ಟು ಬಗೆ? ಅವುಗಳ ಸ್ವರೂಪವೇನು? ಅವು

ಗಳ ಸ್ಥಾನಭೇದಗಳೇನು? ಅಗ್ನಿಹೋತ್ರವಮಾಡುವವನು ಯಾವ ಸ್ಥಾನದಲ್ಲಿ ಹೋಮಮಾಡಿದರೆ, ಯಾವ ಫಲವನ್ನು ಪಡೆಯುವನು? ಮೊದಲು ಅಗ್ನಿಹೋತ್ರಮಾಡುವುದಕ್ಕೆ ಯಾವ ಕಾರಣವುಂಟಾಯಿತು? ಹೋಮಗಳನ್ನು ಮಾಡುವ ರೀತಿಯು ಹೇಗೆ? ದೇವತೆಗಳು ಹೇಗೆ ತೃಪ್ತರಾಗುವರು? ವಿಧ್ಯುಕ್ತರೀತಿಯಲ್ಲಿ ಮಂತ್ರಪೂರ್ವಕವಾಗಿ ಪೂಜಿಸಲ್ಪಟ್ಟ ಅಗ್ನಿಗಳು ಅಗ್ನಿಹೋತ್ರಿಗಳನ್ನು ಯಾವ ಸದ್ಗತಿಗೆ ಸೇರಿಸುವುವು? ಓ ಕೇಶವಾ! ಆ ಮೂರು ಅಗ್ನಿಗಳ ಮಹತ್ವವನ್ನು ತಿಳಿದುಕೊಳ್ಳದೆ ಅಸಂಬದ್ಧವಾಗಿ ಹೋಮಮಾಡಿದರೂ, ಉಪಾಸಿಸಿದರೂ, ಅವು ಆಹಿತಾಗ್ನಿಗೆ ಯಾವ ಹಾನಿಯನ್ನು ಮಾಡುವುವು? ಅಗ್ನಿಯನ್ನು ಕೆಡಿಸಿಕೊಂಡ ಪಾಪಾತ್ಮನು ಯಾವ ಜನ್ಮವನ್ನು ಪಡೆಯುವನು? ಭಕ್ತಿಯಿಂದ ಶರಣಾಗತನಾದ ನನಗೆ ಅವೆಲ್ಲವನ್ನೂ ಸಂಗ್ರಹಿಸಿ ತಿಳಿಸಬೇಕು. ನಿನಗೆ ನಮಸ್ಕಾರವು' ಎಂದನು.

ಆಗ ಕೃಷ್ಣನು 'ಓ ರಾಜಾ! ಪುಣ್ಯಕರವೂ, ಶ್ರೇಷ್ಠವೂ ಆದ ಆ ಧರ್ಮಾಮೃತವನ್ನು ಕೇಳು. ಅದು ಪ್ರಯತ್ನಶೀಲರೂ, ಅಗ್ನಿಹೋತ್ರಿಗಳೂ ಆದ ಬ್ರಾಹ್ಮಣರನ್ನು ಉದ್ಧರಿಸುವುದು. ನಾನೇ ಸೃಷ್ಟ್ಯಾದಿಯಲ್ಲಿ ಬ್ರಹ್ಮನಾಗಿ ಪ್ರಪಂಚವೆಲ್ಲವನ್ನೂ ಸೃಷ್ಟಿಸಿದೆನು. ಪ್ರಪಂಚದ ಹಿತವನ್ನು ಕೋರಿ ಮೊದಲು ನನ್ನ ಮುಖದಿಂದ ಅಗ್ನಿಯನ್ನು ಹೊರಡಿಸಿದೆನು. ಎಲ್ಲಾ ಭೂತಗಳಿಗಿಂತಲೂ ಅದನ್ನು ನಾನು ಮೊದಲು ಪಡೆದುದರಿಂದಲೇ ಪುರಾಣಜ್ಞರು ಅದಕ್ಕೆ ಅಗ್ನಿಯೆಂದು ಹೆಸರಿಟ್ಟರು. ಅಲ್ಲದೆ ಸಕಲಕರ್ಮಗಳಲ್ಲಿಯೂ ಅಗ್ನಿಗೇ ಮೊದಲು ಆಹುತಿಕೊಡಲ್ಪಡುವುದು. ಅದರಿಂದಲೂ, ಆತನು ಅಗ್ನಿಯೆಂದು ಕರೆಯಲ್ಪಡುತ್ತಿರುವನು. ಪೂಜಿಸಲ್ಪಟ್ಟ ಅಗ್ನಿಪುರುಷನು ತನ್ನನ್ನು ಪೂಜಿಸಿದವರಿಗೆ ಉಚ್ಚಗತಿಯನ್ನು ಉಂಟುಮಾಡುವನು. ಅದಕ್ಕಾಗಿಯೇ ಆತನನ್ನು ದೇವತೆಗಳಲ್ಲಿ ಅಗ್ನಿಯೆಂದು ಕರೆಯುವರು. ಆ ಅಗ್ನಿಯು ಕೆಟ್ಟರೀತಿಯಲ್ಲಿ ಹೋಮಮಾಡಲ್ಪಟ್ಟರೆ ಕ್ಷಣಮಾತ್ರದಲ್ಲಿ ಯಜಮಾನನನ್ನು ಭಕ್ಷಿಸಬಲ್ಲನು. ಅದರಿಂದಲೇ ಅಗ್ನಿಗೆ ಕ್ರವ್ಯಾನೆಂದು ಹೆಸರು. ಸಕಲ ಭೂತಾತ್ಮಕನೂ, ದೇವತೆಗಳಿಗೆ ಮುಖವೂ,

ಎಲ್ಲವನ್ನೂ ಪಚನಮಾಡುವವನೂ, ಪ್ರಭುವೂ ಆದ ಈತನು ಮೊದಲು ನನ್ನ ಮುಖದಿಂದ ಸೃಷ್ಟಿಸಲ್ಪಟ್ಟನು. ಆತನು ಸೃಷ್ಟಿಸಲ್ಪಟ್ಟೊಡನೆಯೇ ಲೋಕವೆಲ್ಲವನ್ನೂ ಭಕ್ಷಿಸಲಪೇಕ್ಷಿಸಿದನು. ಆಗ ನಾನು ಅಗ್ನಿಯನ್ನು ಉಪಾಸನಮಾಡಿ ಶಾಂತಿಗೊಳಿಸಿದೆನು. ಹಾಗೆ ಉಪಾಸಿಸಲ್ಪಟ್ಟುದರಿಂದಲೇ ಅಗ್ನಿಯು ಔಪಾಸನನೆಂದು ಪ್ರಸಿದ್ಧನಾಗಿರುವನು. ಆಹುತಿಯೆಂಬುದು ಎಲ್ಲಕ್ಕೂ ವಾಚ್ಯವು. ಅಗ್ನಿಯು ಆ ಆಹುತಿಯಲ್ಲಿ ವಾಸಿಸುವನು. ಆದರಿಂದ ಆತನನ್ನು ಬ್ರಹ್ಮವಾದಿಗಳು ಆವಸಥ್ಯನೆನ್ನುವರು. ವಿಧ್ಯುಕ್ತರೀತಿಯಲ್ಲಿ ಆ ಅಗ್ನಿಯಿಂದ ಪಂಚಮಹಾಯಜ್ಞಗಳನ್ನು ನಡೆಸಿದ ದ್ವಿಜನಿಗೆ ಚಂದ್ರಮಂಡಲದ ಮಧ್ಯಮಾರ್ಗದಿಂದ ಪರಲೋಕಕ್ಕೆ ದಾರಿಯು ಏರ್ಪಡುವುದು. ಹಿಂದೆ ಸಪ್ತರ್ಷಿಗಳೂ, ಸಿದ್ಧರೂ ಇಂದ್ರಿಯಗಳನ್ನೂ, ಬುದ್ಧಿಯನ್ನೂ ಅಡಗಿಸಿ, ಅಗ್ನಿಪೂಜಾನಿರತರಾಗಿದ್ದುದರಿಂದಲೇ ದೇವಸಾಯುಜ್ಯವನ್ನು ಪಡೆದರು. ಕೆಲವರು ಆವಸಥ್ಯವನ್ನೇ ಪಚನಾಗ್ನಿಯೆಂದು ಹೇಳುವರು. ಆ ಅಗ್ನಿಯಲ್ಲಿ ಪಂಚಮಹಾಯಜ್ಞಗಳೂ, ವೈಶ್ವದೇವವೂ ನಡೆಯುವುವು. ಸ್ಥಾಲೀಪಾಕ, ಗೃಹಕಾರ್ಯ ಇವುಗಳೆಲ್ಲ ಆ ಅಗ್ನಿಯಲ್ಲಿಯೇ ನೆಲೆಗೊಂಡಿರುವುವು. ಅಗ್ನಿಯಿಂದಲೇ ಗೃಹಧರ್ಮವು ನಡೆಯಬೇಕಾದುದರಿಂದ ಅವನೇ ಗೃಹಪತಿಯೆನಿಸುವನು. ಕೆಲವುಮಂದಿ ಬ್ರಹ್ಮವಿದರು (ಅಗ್ನಿಯನ್ನು) ಔಪಾಸನವೆಂದೂ, ಆವಸಥ್ಯವೆಂದೂ, ಸಭ್ಯವೆಂದೂ, ಪಚನಾಗ್ನಿಯೆಂದೂ ಕರೆಯುವರು. ನನಗೂ ಅದು ಸಮ್ಮತವೇ. ಗುಣಕ್ಕೆ ತಕ್ಕ ಹೆಸರುಳ್ಳ ಮೂರು ಅಗ್ನಿಗಳನ್ನೂ, ಅಗ್ನಿಹೋತ್ರ ವಿಧಿಯನ್ನೂ ತಿಳಿಸುವೆನು ಕೇಳು. ಗೃಹಕ್ಕೆ ಪತಿಯಾಗಿರುವುದೇ ಗಾರ್ಹಪತ್ಯವೆನಿಸುವುದು. ಅಗ್ನಿಗೆ ಗೃಹಪತಿತ್ವವುಂಟಾದುದರಿಂದ ಅವನಿಗೆ ಗಾರ್ಹಪತ್ಯತೆಯು ಏರ್ಪಡುವುದು. ಯಜಮಾನನನ್ನು ದಕ್ಷಿಣಗತಿಗೆ ಗುರಿಮಾಡುವುದರಿಂದ, ದಕ್ಷಿಣಭಾಗವೇ ಸ್ಥಳವಾಗುಳ್ಳ ಅಗ್ನಿಯನ್ನು ಬ್ರಾಹ್ಮಣರು ದಕ್ಷಿಣಾಗ್ನಿಯೆಂದು ಕರೆಯುವರು. ಆಹುತಿಯೆಂದರೆ ಸಕಲವೂ ಎಂದರ್ಥವು. ಹವ್ಯವೆಂದರೆ ವಹನವು. ಎಲ್ಲಾ ಹವ್ಯಗಳನ್ನೂ ವಹಿಸುವುದರಿಂದ ಅಗ್ನಿಯು ಆಹವನೀಯನೆನಿಸಿದನು. ದ್ವಿಜನು ಮನೆಯಲ್ಲಿರುವ ಯಾವ ಮೂಲಾಗ್ನಿಯಲ್ಲಿ ವಿಧ್ಯುಕ್ತರೀತಿಯಲ್ಲಿ ಹೋಮಮಾಡುವನೋ

ಆ ಅವಸಥ್ಯವೆಂಬ ಅಗ್ನಿಯನ್ನು ಪಚನಾಗ್ನಿಯೆಂದು ಕರೆಯುವನು. ಅವುಗಳಲ್ಲಿ ಸಭೆಯಲ್ಲಿಟ್ಟ ಅಗ್ನಿಯು ಸಭ್ಯವೆಂದು ಪ್ರಸಿದ್ಧವಾಗಿರುವುದು. ಆ ಅವಸಥ್ಯವೆಂಬ ಅಗ್ನಿಯು ಮೊದಲನೆಯ ಪ್ರಜಾಧಿಪತಿಯು. ಗಾರ್ಹಪತ್ಯವೆಂಬ ಅಗ್ನಿಯು ಬ್ರಹ್ಮವು. ಅದು ಆತನಲ್ಲಿಯೇ ಉತ್ಪತ್ತಿಯಾದುದು. ದಕ್ಷಿಣಾಗ್ನಿಯೇ ರುದ್ರರೂಪವು. ಅದು ಕೋಪಸ್ವಭಾವವುಳ್ಳುದೂ, ಕ್ರೂರವೂ ಆಗಿರುವುದು. ನಾನೇ ಆಹವನೀಯವೆಂಬ ಅಗ್ನಿಯು. ಹೋಮವು ಪ್ರಾರಂಭವಾಗಿ ಮುಗಿಯುವವರೆಗೂ ಇದರ ಮೂಲಕವಾಗಿಯೇ ಮಾಡಲ್ಪಡುವುದು. ಓ ರಾಜಾ! ಐದನೆಯ ಸಭ್ಯವೆಂಬ ಅಗ್ನಿಯೇ ಸ್ಕಂದನು. ಪೃಥ್ವಿಯೇ ಗಾರ್ಹಪತ್ಯಾಗ್ನಿಯು. ಅಂತರಿಕ್ಷವು ದಕ್ಷಿಣಾಗ್ನಿ. ಸ್ವರ್ಗವು ಆಹವನೀಯಾಗ್ನಿಯು. ಹೀಗೆ ಮೂರು ಅಗ್ನಿಗಳಿರುವುವು. ಭೂಮಿಯು ಗುಂಡಾಗಿರುವುದರಿಂದ ಗಾರ್ಹಪತ್ಯಾಗ್ನಿಯೂ ಗುಂಡಾಗಿರುವುದು. ದಕ್ಷಿಣಾಗ್ನಿಯು ಅರ್ಧಚಂದ್ರಾಕಾರವುಳ್ಳುದು. ಸ್ವರ್ಗವು ಚತುರಶ್ರವಾಗಿ, ನಿರ್ಮಲವೂ, ನೀರೋಗವೂ ಆಗಿರುವುದರಿಂದ ಆಹವನೀಯಾಗ್ನಿಯೂ ಚತುರಶ್ರವಾಗಿರುವುದು. ಗಾರ್ಹಪತ್ಯದಲ್ಲಿ ಹೋಮಮಾಡುವ ದ್ವಿಜನು ಭೂಮಿಯನ್ನು ಜಯಿಸುವನು. ದಕ್ಷಿಣಾಗ್ನಿಯಲ್ಲಿ ಹೋಮಮಾಡುವವನು ಅಂತರಿಕ್ಷವನ್ನು ಜಯಿಸುವನು. ಆಹವನೀಯದಲ್ಲಿ ಹೋಮಮಾಡುವವನು ಎಲ್ಲಾ ಋಷಿಗಳೊಡಗೂಡಿದ ಭೂಮ್ಯಂತರಿಕ್ಷ ಸ್ವರ್ಗಗಳೆಂಬಿವು ಮೂರನ್ನೂ ಜಯಿಸುವನು. ಅಗ್ನಿಹೋತ್ರಗಳಲ್ಲಿ ಹೋಮವು ಅದಕ್ಕೆ ಅಭಿಮುಖವಾಗಿ ನಡೆಯುವುದರಿಂದಲೂ, ಯಜ್ಞಾದಿ ಕಾಲಗಳಲ್ಲಿ ಹೋಮವನ್ನಾರಂಭಿಸಿದುದು ಮೊದಲು ಕೊನೆಯವರೆಗೆ ಎಲ್ಲಾ ಕಾರ್ಯವೂ ಅದರಲ್ಲಿ ನಡೆಯಬೇಕಾದುದರಿಂದಲೂ, ಅದು ಆಹವನೀಯವೆಂದು ಕರೆಯಲ್ಪಡುವುದು. ಯಾವನು ಮೂಲಾಗ್ನಿಯಾದ ಆವಸಥ್ಯದಲ್ಲಿ ಹೋಮಮಾಡುವನೋ ಆತನು ಪತ್ನಿಯೊಡನೆ ಸಪ್ತರ್ಷಿಲೋಕದಲ್ಲಿ ವಸಿಸುವನು. ಅದರಿಂದ ಎಲ್ಲಾ ಅಗ್ನಿಗಳಲ್ಲಿಯೂ ಯಾಗಮಾಡಿದಂತಾಗುವುದು. ಅದೇ ಅಗ್ನಿಹೋತ್ರವೆನಿಸುವುದು. ಯಜಮಾನನನ್ನು ಕಾಪಾಡುವುದರಿಂದಲೂ, ಅದು ಅಗ್ನಿಹೋತ್ರವೆಂದು ಕರೆಯಲ್ಪಡುವುದು. ಯಾಗಗಳಲ್ಲಿ 'ಹೋ' ಎಂಬುದು ವಿಷಾದಸೂಚಕವು. ವಿಷಾದ (ದುಃಖ) ವೆಂದರೆ ತಾಪ

ತ್ರಯವು. ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬಿವು ತಾಪತ್ರಯ ವೆಂದು ಆತ್ಮಜ್ಞಾನವುಳ್ಳವರು ತಿಳಿಸಿರುವನು. ವಿಧ್ಯುಕ್ತರೀತಿಯಲ್ಲಿ ಅಗ್ನಿಯು ಯಜಮಾನನನ್ನು ಆ ದುಃಖದಿಂದ 'ತ್ರಾಯತೇ' ಎಂದರೆ, ಕಾಪಾಡುವುದರಿಂದ, ಅದು ಹೋತ್ರವೆಂದು ವೇದದಲ್ಲಿ ಹೇಳಲ್ಪಟ್ಟಿರುವುದು. ಆ ಅಗ್ನಿಹೋತ್ರವನ್ನು ಲೋಕಕರ್ತನಾದ ಬ್ರಹ್ಮನು ಮೊದಲು ಏರ್ಪಡಿಸಿ ದನು. ವೇದಗಳು ಅಗ್ನಿಹೋತ್ರದಿಂದ ತಾವಾಗಿ (ಬ್ರಹ್ಮನ ಪ್ರಯತ್ನವಿಲ್ಲ ದೆಯೇ) ಉತ್ಪತ್ತಿಯಾದುವು. ವೇದಗಳಿಗೆ ಅಗ್ನಿಹೋತ್ರವೇ ಫಲವು. ಶಾಸ್ತ್ರಗಳಿಗೆ ಸದಾಚಾರ ಸುಸ್ವಭಾವಗಳೇ ಫಲಗಳು. ಪತ್ನಿಯರನ್ನು ವರಿಸಿದುದಕ್ಕೆ ರತಿಸುಖವೂ, ಪುತ್ರಪ್ರಾಪ್ತಿಯೂ ಫಲವು. ಧನಕ್ಕೆ ದಾನ ಭೋಗಗಳೇ ಫಲಗಳು. ಅಗ್ನಿಹೋತ್ರದಲ್ಲಿ ಋಗ್ಯಜುಸ್ಸಾಮಗಳೆಂಬ ಮೂರು ವೇದಗಳ ಮಂತ್ರಗಳೂ ಸೇರುವುವು. ಇದು ಸೂತ್ರಸಹಿತವಾದ ಆ ವೇದತ್ರಯದಿಂದಲೂ ಸ್ಥಾಪಿಸಲ್ಪಡುವುದು. ಓ ರಾಜಾ! ಬ್ರಾಹ್ಮಣನು ವಸಂತಕಾಲದಲ್ಲಿ ಅಗ್ನಿಯನ್ನು ಆಧಾನಮಾಡಬೇಕು. ವಸಂತವು ಬ್ರಾಹ್ಮ ಣಋತುವೆನಿಸುವುದು. ಅದು ವೇದಕ್ಕೆ ಉತ್ಪತ್ತಿಕಾರಣವು. ಯಾವ ಬ್ರಾಹ್ಮಣನು ವಸಂತಋತುವಿನಲ್ಲಿ ಅಗ್ನ್ಯಾಧಾನಮಾಡುವನೋ ಅಂತವ ನಿಗೆ ತೇಜಸ್ಸು ಹೆಚ್ಚುವುದು. ವೇದ (ಜ್ಞಾನ) ವೂ ವೃದ್ಧಿಯಾಗುವುದು. ಕ್ಷತ್ರಿಯನು ಗ್ರೀಷ್ಮಋತುವಿನಲ್ಲಿ ಅಗ್ನ್ಯಾಧಾನಮಾಡಬೇಕು. ಅಂತಹ ಕ್ಷತ್ರಿಯನಿಗೆ ಸಂಪತ್ತೂ, ಪ್ರಜೆಗಳೂ, ಪಶುಗಳೂ, ಧನವೂ, ತೇಜಸ್ಸೂ, ಬಲವೂ, ಯಶಸ್ಸೂ ವೃದ್ಧಿಯಾಗುವುವು. ವೈಶ್ಯನು ಶರದೃತುವಿನಲ್ಲಿ ಅಗ್ನಿ ಯನ್ನು ಆಧಾನಮಾಡಬೇಕು. ಶರತ್ಕಾಲದ ರಾತ್ರಿಯು ವೈಶ್ಯಸ್ವರೂಪವು. ಅದು ವೈಶ್ಯಯೋನಿಯೆನಿಸಿದೆ. ಈ ಶರದೃತುವಿನಲ್ಲಿ ಅಗ್ನಿಯನ್ನು ಆಧಾ ನಮಾಡುವ ವೈಶ್ಯನಿಗೆ ಕಾಂತಿಯೂ, ಸಂತಾನವೂ, ಆಯುಷ್ಯವೂ, ಪಶು ಗಳೂ, ಧನವೂ ವೃದ್ಧಿಯಾಗುವುವು. ಪಶುಗಳೆನಿಸಿದ ಈ ಭೂತಗಳೆಲ್ಲವೂ ಆ ತ್ರೇತಾಗ್ನಿಗಳ ಸೇವೆಯಿಂದ ಮೇಲೆನಿಸವುವು. ಆ ಅಗ್ನಿಹೋತ್ರಗ ಳಿಂದಲೇ ಭೂಮಿಯು ಧರಿಸಲ್ಪಡುತ್ತಿರುವುದು. ಗ್ರಾಮಪಶುಗಳೂ, ಅರಣ್ಯ ಪಶುಗಳೂ, ಮರಗಳೂ, ಹುಲ್ಲುಗಳೂ, ಗಣೆಗಳೂ, ಔಷಧಿಗಳೂ ಅಗ್ನಿ ಹೋತ್ರಕ್ಕೆ ಹವಿಸ್ಸಾಗಿರುವುವು. ರಸಗಳೂ, (ಎಣ್ಣೆ ಮೊದಲಾದ ಜಿಡ್ಡು

ಪದಾರ್ಥಗಳೂ) ಗಂಧಗಳೂ, ರತ್ನಗಳೂ, ಸುವರ್ಣಗಳೂ, ಇತರ ಲೋಹಗಳೂ ಅಗ್ನಿಹೋತ್ರಕ್ಕಾಗಿಯೇ ಉಂಟಾದುವು. ಆಯುರ್ವೇದ, ಧನುರ್ವೇದ, ಮೀಮಾಂಸೆ, ನ್ಯಾಯಶಾಸ್ತ್ರ, ಧರ್ಮಶಾಸ್ತ್ರ ಗಳೆಂಬಿವೆಲ್ಲವೂ ಅಗ್ನಿಹೋತ್ರಕ್ಕಾಗಿ ಉಂಟಾದುವುಗಳೇ. ಛಂದಸ್ಸು, ಶಿಕ್ಷೆ, ಕಲ್ಪ, ವ್ಯಾಕರಣ, ಜ್ಯೋತಿಶ್ಶಾಸ್ತ್ರ, ನಿರುಕ್ತ, ಇವೆಲ್ಲವೂ ಅಗ್ನಿಹೋತ್ರಕ್ಕಾಗಿ ಏರ್ಪಟ್ಟುವುಗಳೇ. ಪುರಾಣೇತಿಹಾಸಗಳೂ, ಗಾಥೆಗಳೂ, ಉಪನಿಷತ್ತುಗಳೂ, ಅಥರ್ವಣವೇದದಲ್ಲಿ ಹೇಳಿದ ಕರ್ಮಗಳೂ, ಅಗ್ನಿಹೋತ್ರಕ್ಕಾಗಿಯೇ ಉಂಟಾದುವು. ಅಲ್ಲದೆ, ಈ ಭೂಮಿಯಲ್ಲಿರುವ ಸ್ಥಾವರ ಜಂಗಮಗಳೆಲ್ಲವೂ ಬ್ರಹ್ಮದೇವನಿಂದ ಅಗ್ನಿಹೋತ್ರಕ್ಕಾಗಿಯೇ ಸೃಷ್ಟಿಸಲ್ಪಟ್ಟುವು. ಅಗ್ನಿಹೋತ್ರ, ದರ್ಶ, ಪೂರ್ಣಿಮೆ, ಯೂಪ, ಇಷ್ಟಿ, ಪಶುಬಂಧ, ಸೋಮಪಾನಕ್ರಿಯೆ, ಇವುಗಳಿಗಾಗಿ ತಿಥಿ, ವಾರ, ನಕ್ಷತ್ರ, ಯೋಗ, ಮುಹೂರ್ತ, ಕರಣಗಳೆಂಬ ಕಾಲಗಳನ್ನು ನಿರ್ಣಯಿಸುವುದಕ್ಕಾಗಿ ಮೊದಲು ಜ್ಯೋತಿಶ್ಶಾಸ್ತ್ರವು ಏರ್ಪಟ್ಟಿತು. ಒಂದೊಂದು ಸ್ಥಳದಲ್ಲಿಯೂ ವಿಭಾಗಗಳುಳ್ಳ ಶ್ಲೋಕರೂಪವಾದ ಋಗ್ ಯಜುಸ್ಸಾಮಗಳೆಂಬ ವೇದಮಂತ್ರಗಳ ತತ್ವಾರ್ಥವನ್ನರಿಯಲು ಛಂದಶ್ಶಾಸ್ತ್ರವು ಏರ್ಪಟ್ಟಿತು. ಸ್ವರಗಳು, ವ್ಯಂಜನಗಳು, ಪದಗಳು, ಅರ್ಥಗಳು, ಸಂಧಿ, ಲಿಂಗ, ನಾಮ, ಧಾತು, ಇವುಗಳ ಭೇದಗಳನ್ನೆಲ್ಲ ನಿರ್ಣಯಿಸುವುದಕ್ಕಾಗಿ ವ್ಯಾಕರಣವು ಏರ್ಪಟ್ಟಿತು. ಯೂಪ, ಯಾಗ, ವೇದಿ, *ಪ್ರೋಕ್ಷಣ, ‡ಶ್ರಪಣ, ಮೊದಲಾದ ಯಾಗಕಾರ್ಯನಿರ್ಣಯಗಳಿಗಾಗಿಯೂ, ಯಜ್ಞದೇವತೆಗಳನ್ನು ಕರೆಯುವುವಕ್ಕಾಗಿಯೂ ಶಿಕ್ಷಾಶಾಸ್ತ್ರವು ಏರ್ಪಟ್ಟಿತು. ಯಜ್ಞಪಾತ್ರಗಳ ಶುದ್ಧಿಗಾಗಿಯೂ, ದ್ರವ್ಯವನ್ನು ಶೇಖರಿಸುವುದಕ್ಕಾಗಿಯೂ, ಸಕಲ ಯಜ್ಞಗಳ ವಿಕಲ್ಪಕ್ಕಾಗಿಯೂ ಕಲ್ಪವು ಏರ್ಪಟ್ಟಿತು. ಸಕಲ ವೇದಗಳಲ್ಲಿಯೂ ಹೇಳಲ್ಪಟ್ಟ ನಾನಾಧಾತುಗಳ ವಿಕಲ್ಪಾರ್ಥಗಳನ್ನು ಪರಿಶೀಲಿಸಿ ನಿಜಾರ್ಥವನ್ನು ನಿಶ್ಚಯಿಸಲು ಋಷಿಗಳು ನಿರುಕ್ತವನ್ನು ಮಾಡಿದರು. ವೇದಿಕೆಗಾಗಿಯೂ, ಯಜ್ಞಸಂಭಾರಗಳಿಗಾಗಿಯೂ ಭೂಮಿಯು ಸೃಷ್ಟಿಸಲ್ಪಟ್ಟಿತು. ಬ್ರಹ್ಮನು ಸಮಿತ್ತಿಗಾಗಿಯೂ, ಯೂಪಕ್ಕಾಗಿಯೂ ವೃಕ್ಷಗಳನ್ನು ಸೃಷ್ಟಿಸಿದನು. ಗ್ರಾಮಪಶುಗಳೂ, ಅರಣ್ಯ

* ವಧೆ, ‡ ಪುರೋಡಾಶ ಮೊದಲಾದುವನ್ನು ಬೇಯಿಸುವುದು.

ಪಶುಗಳೂ ಯಜ್ಞಕ್ಕಾಗಿ ಸೃಷ್ಟವಾದುವು. ಮಂತ್ರಗಳ ವಿನಿಯೋಗ, ಪ್ರೋಕ್ಷಣ, ಶ್ರಪಣ, * ಅನುಯಾಜ ಪ್ರಯಾಜಗಳು, ಮರುತ್ತುಗಳ ಸ್ತೋತ್ರ, ಸಾಮಕ್ಕೆ ಸಂಬಂಧಪಟ್ಟ ಔದ್ಗಾತ್ರ, ಪ್ರತಿಪ್ರಸ್ಥಾನ, ವಿಷ್ಣು ಕರ್ಮಗಳ ಸಂಚಾರ, ದಕ್ಷಿಣೆ, ಅವಭೃಥ, ‡ತ್ರಿಕಾಪೂಜೆ, ಉಚಿತಸ್ಥಾನ ಗಳಲ್ಲಿ ತಂದಿಡುವುದು, ದೇವತೆಗಳ ಆವಾಹನೆ, ಉತ್ಸರ್ಜನ, ಹವಿಸ್ಸುಗ ಳನ್ನು ಬೇಯಿಸುವುದು, ಇವುಗಳನ್ನು ಯಾವ ಬ್ರಾಹ್ಮಣನು ಅರಿಯುವು ದಿಲ್ಲವೋ, ಮತ್ತು ಯಾರು ಯಾಗಪಶುಗಳ ವಧೆಯನ್ನು ನಿಂದಿಸುವರೋ, ಆ ನರಾಧಮರು ಘೋರವೂ, ಕತ್ತಲೆಯಿಂದ ಕವಿದುದೂ ಆದ ರೌರವ ವೆಂಬ ನರಕಕ್ಕೆ ಗುರಿಯಾಗಿ, ಅಲ್ಲಿ ಲಕ್ಷವರ್ಷಗಳ ಕಾಲವಿದ್ದು, ಹುಳುಗ ಳಿಂದ ತಿನ್ನಲ್ಪಡುತ್ತ, ಕೀವು ರಕ್ತಗಳಲ್ಲಿ ವಾಸಿಸುವರು. ಎಲ್ಲಾ ಮರಗಳೂ, ಯಜ್ಞಕಾಲದಲ್ಲಿ ತಾವು ಯೂಪವಾಗುವುದಕ್ಕೂ, ಓಷಧಿಗಳು ಹವಿಸ್ಸಾಗು ವುದಕ್ಕೂ, ಲತೆಗಳೆಲ್ಲವೂ ಸೋಮವಾಗುವುದಕ್ಕೂ, ಎಲ್ಲಾ ಭೂಭಾಗವೂ ವೇದಿಯಾಗುವುದಕ್ಕೂ ಆಸೆಪಡುವುವು. ಪಶುಗಳೆಲ್ಲವೂ ಸ್ವರ್ಗಾಪೇಕ್ಷಿಗ ಳಾಗಿ ಯಾಗಪಶುಗಳಾಗಲು ಅಪೇಕ್ಷಿಸುವುದರಿಂದ, ಯಾಗಗಳಲ್ಲಿ ಪಶುಗ ಳನ್ನು ಕೊಲ್ಲುವುದು ಹಿಂಸೆಯಲ್ಲ. ಯೂಪಗಳೂ, ದರ್ಭೆಗಳೂ, ಪಶು ಗಳೂ ಯಜ್ಞದಲ್ಲಿ ತಮತಮಗೆ ಒದಗುವ ಮಂತ್ರಸಂಸ್ಕಾರಗಳಿಂದ ಯಜ ಮಾನನೊಡನೆ ಸ್ವರ್ಗಕ್ಕೆ ಹೋಗುವುವು. ಯಾಗದಲ್ಲಿ ಕೊಲ್ಲಲ್ಪಡುವ ಹಸುಗಳೂ ವಿಧ್ಯುಕ್ತರೀತಿಯಲ್ಲಿ ಯಾಗಮಾಡುವವರು ಸ್ವರ್ಗಲೋಕದಲ್ಲಿ ಪೂಜಿಸಲ್ಪಡುವವರೆಗೂ ಸಂತೋಷದಿಂದಲೇ ಇರುವುವು. ವೇದೋಕ್ತವಾದ ಕರ್ಮವು ಹಿಂಸೆಯಾಗಲಾರದು. ಅದು ಬ್ರಾಹ್ಮಣರ ಕರ್ಮವು. ಯಾವ ದ್ವಿಜರು ವೇದೋಕ್ತವಾದ ಕರ್ಮಗಳನ್ನು ಹಿಂಸೆಯೆಂದು ಭಾವಿಸಿ, ಅದ ನ್ನು ಮಾಡುವುದಿಲ್ಲವೋ, ಅಂತವರು ಶೂದ್ರರೂಪವನ್ನು ಪಡೆಯುವರು. ಮೃತರಾದಮೇಲೆ ಚಂಡಾಲರಾಗುವರು. ಗೋವುಗಳು ಯಜ್ಞಕ್ಕಾಗಿಯೂ ದಕ್ಷಿಣೆಗಾಗಿಯೂ ಹುಟ್ಟಿವೆ. ಚಿನ್ನ ಬೆಳ್ಳಿಗಳೆರಡೂ ಯಜ್ಞಪಾತ್ರೆಗಾಗಿ

---

* ಅನುಯಾಜಪ್ರಯಾಜಗಳು—ಯಾಗಕ್ರಿಯೆಗಳು.

§ ಇದೊಂದು ಯಾಗವಿಧಾನವು. ಇದರಲ್ಲಿ ಪೂರ್ಣಮಾತ್ರಿಕೆ, ದರ್ಶತ್ರಿಕೆ ಎಂದು ಎರಡು ಬಗೆ. ಇವುಗಳಲ್ಲಿ ಒಂದೊಂದರಲ್ಲಿಯೂ ಮೂರು ವಿಧಗಳುಂಟು.

ಯೂ, ಕುಂಭಗಳಿಗಾಗಿಯೂ ಏರ್ಪಟ್ಟಿವೆ. ಬ್ರಹ್ಮನು ದರ್ಭೆಯನ್ನು ಸಂಸ್ಕರಣಕ್ಕಾಗಿಯೂ, ರಾಕ್ಷಸರಿಂದ ಕಾಪಾಡುವುದಕ್ಕಾಗಿಯೂ ಯಾಗಕ್ಕಾಗಿಯೂ ಸೃಷ್ಟಿಸಿದನು. ಸ್ವರ್ಗದಲ್ಲಿ ಆದರಿಸುವುದಕ್ಕಾಗಿ ದೇವತೆಗಳನ್ನೂ, ರಕ್ಷಣೆಗಾಗಿ ಕ್ಷತ್ರಿಯರನ್ನೂ, ವ್ಯಾಪಾರಕ್ಕಾಗಿ ವೈಶ್ಯರನ್ನೂ, ತ್ರಿವರ್ಣದವರಿಗೂ ಶುಶ್ರೂಷೆಮಾಡುವುದಕ್ಕಾಗಿ ಶೂದ್ರರನ್ನೂ ಸೃಷ್ಟಿಸಿದನು. ಹೀಗೆ ಈ ಪ್ರಪಂಚವೆಲ್ಲವೂ ಅಗ್ನಿಹೋತ್ರಕ್ಕಾಗಿಯೇ ಸೃಷ್ಟಿಸಲ್ಪಟ್ಟಿದೆ. ಅಜ್ಞಾನದಿಂದ ಇದೊಂದನ್ನೂ ಅರಿಯದವರು, ರೌರವನರಕದಲ್ಲಿ ಬಿದ್ದು, ಆಮೇಲೆ ಕ್ರಿಮಿಜನ್ಮವನ್ನು ಹೊಂದುವರು. ವಿಧ್ಯುಕ್ತರೀತಿಯಲ್ಲಿ ಅಗ್ನಿಹೋತ್ರಗಳನ್ನು ಪಾಸನೆಮಾಡುವ ಬ್ರಾಹ್ಮಣರು, ಯಜ್ಞ, ದಾನ, ಅಧ್ಯಯನ, ಅಧ್ಯಾಪನಾದಿ ಸಮಸ್ತಸತ್ಕರ್ಮಗಳನ್ನೂ ನಡೆಸಿದವರಾಗುವರು. ಹೀಗೆ ಬ್ರಾಹ್ಮಣರು ನಡೆಸಿದ *ಇಷ್ಟಾಪೂರ್ತ ಕರ್ಮಫಲಗಳನ್ನೆಲ್ಲ ನಾನೇ ಸಂಗ್ರಹಿಸಿ ಸೂರ್ಯನಲ್ಲಿಡುವೆನು. ಸೂರ್ಯನು ಅಗ್ನಿಹೋತ್ರಿಗಳ ಸುಕೃತವನ್ನು ಧರಿಸುವುದರಿಂದಲೇ ಅಗ್ನಿಹೋತ್ರವಮಾಡುವವರು ಎಷ್ಟುಕಾಲದವರೆಗೆ ಭೂಮಿಯಲ್ಲಿರುವರೋ ಅದುವರೆಗೂ ಅವರ ಪುಣ್ಯದಿಂದ ಆಕಾಶದಲ್ಲಿ ಪ್ರಕಾಶಿಸುವನು. ಪುಣ್ಯವಮಾಡಿ ಸ್ವರ್ಗಸ್ಥರಾದವರ ಪ್ರಭಾವದಿಂದ ಸ್ವರ್ಗವೂಕೂಡ ಮೇಲ್ಮೆಯನ್ನು ಪಡೆಯುವುದು. ಅಗ್ನಿಹೋತ್ರಿಗಳು ಆದರ ಫಲದಿಂದ ದೇವತೆಗಳ ಸಾರೂಪ್ಯವನ್ನು ಪಡೆದು ಭೂತಪ್ರಳಯದವರೆಗೂ ಅಲ್ಲಿ ಸುಖಿಸುವರು. ಯಾರು ಆಹಿತಾಗ್ನಿಗಳಲ್ಲದಿದ್ದು ಬೇರೆ ಸಾಧಾರಣವಾದ ಅಗ್ನಿಯಿಂದ ಸುಡಲ್ಪಡುವರೋ, ಅವರು ಅಗ್ನಿಹೋತ್ರಿಗಳ ಪ್ರಪಂಚಕ್ಕೆ ಮನಸ್ಸಿನಿಂದಲೂ ಕೂಡ ಹೋಗಲಾರರು. ಅಂತವರು ವೀರಘಾತುಕರೂ, ದುಶ್ಶೀಲರೂ, ದರಿದ್ರರೂ, ನರಾಧಮರೂ, ಅಂಗಹೀನರೂ, ವ್ಯಾಧಿಗ್ರಸ್ತರೂ ಆಗಿ ಹೀನಜನ್ಮಗಳಲ್ಲಿ ಹುಟ್ಟುವರು. ಆದುದರಿಂದ ಉತ್ತಮಗತಿಯನ್ನು ಬಯಸುವ ದ್ವಿಜರು ಪ್ರವಾಸದಲ್ಲಿದ್ದಾಗ ಹೊರತು, ದಿನತಪ್ಪದೆ ವಿಧ್ಯುಕ್ತರೀತಿಯಲ್ಲಿ ಅಗ್ನಿಹೋತ್ರಗಳನ್ನು ಮಾಡುತ್ತ, ಶೂದ್ರಾನ್ನವನ್ನು ಭುಜಿಸದೆ, ಮನಸ್ಸನ್ನೂ, ಬುದ್ಧೀಂದ್ರಿಯಗಳನ್ನೂ

* ಇಷ್ಟವೆಂದರೆ, ಯಜ್ಞಗಳು. ಮತ್ತು ಪೂರ್ತವೆಂದರೆ ಕೊಳ, ಸತ್ರ, ದೇವಾಲಯ ಮೊದಲಾದ ಧರ್ಮಕಾರ್ಯಗಳು.

ಅಡಗಿಸಿ, ನಿತ್ಯವೂ ಪಂಚಯಜ್ಞಗಳನ್ನು ಪ್ರಧಾನವಾಗಿಟ್ಟುಕೊಂಡಿರ ಬೇಕು. ಮತ್ತು ಆಶೆ, ಕೋಪಗಳನ್ನು ಬಿಟ್ಟು ಎರಡು ವೇಳೆಗಳಲ್ಲಿಯೂ ಅತಿಥಿಗಳನ್ನು ಭಕ್ತಿಯಿಂದ ಪೂಜಿಸಬೇಕು. ಅಂತವರು ವಾಯುವೇಗಕ್ಕೂ, ಸೂರ್ಯಕಾಂತಿಗೂ ಸಮಾನವಾದ ವಿಮಾನಗಳಲ್ಲಿ ನನ್ನ ಲೋಕಕ್ಕೆ ಬಂದು, ನನ್ನನ್ನು ನೋಡುತ್ತ ಅಲ್ಲಿ ಒಂದು ಮನ್ವಂತರದವರೆಗೂ ಆನಂದ ದಿಂದಿದ್ದು, ತಿರುಗಿ ಈ ಮನುಷ್ಯಲೋಕದಲ್ಲಿ ದ್ವಿಜಶ್ರೇಷ್ಠರಾಗಿ ಹುಟ್ಟು ವರು. ಯಾರು ಬಾಲ್ಯದಲ್ಲಿಯೇ ಅಗ್ನ್ಯಾಧಾನಮಾಡುತ್ತ, ಶೂದ್ರಾನ್ನ ವನ್ನು ಸೇವಿಸದೆ, ಕೋಪ, ಲೋಭಗಳನ್ನು ತ್ಯಜಿಸಿ, ಪ್ರಾತಃಸ್ನಾನವನ್ನು ಮುಖ್ಯವಾಗಿ ಆಚರಿಸುತ್ತ ವಿಧ್ಯುಕ್ತರೀತಿಯಲ್ಲಿ ಅಗ್ನಿಹೋತ್ರ ಹೋಮಗ ಳನ್ನು ಮಾಡುವರೋ, ಯಾರು ಇಂದ್ರಿಯಗಳನ್ನು ಜಯಿಸಿ, ಅತಿಥಿಪೂಜೆ ಮಾಡುತ್ತ, ಎರಡು ಕಾಲಗಳಲ್ಲಿಯೂ ನನ್ನನ್ನು ಆರಾಧಿಸುವರೋ ಅವರು ವಿಮಾನಗಳಲ್ಲಿ ಸೂರ್ಯಮಂಡಲವನ್ನು ಭೇದಿಸುತ್ತ ಹೋಗಿ, ಪುನರ್ಜ ನ್ಮವೇ ಇಲ್ಲದ ನನ್ನ ಲೋಕವನ್ನು ಸೇರಿ, ಅಲ್ಲಿ ಅನೇಕ ಸೂರ್ಯರಿಗೆ ಸಮಾನರೂ, ಕಾಮಚಾರಿಗಳೂ, ಕಾಮರೂಪಿಗಳೂ ಆಗಿ ಸುಖದಿಂದ ಕ್ರೀಡಿಸುವರು. ಓ ಪಾಂಡುನಂದನಾ! ಇದೇ ಆಹಿತಾಗ್ನಿಯ ಮಹಿಮೆ ಯು. ವೇದವನ್ನು ನಿಂದಿಸುವವರೂ, ವೇದಕ್ಕೆ ಅಪಾರ್ಥವನ್ನು ಕಲ್ಪಿಸಿ ಕೆಡಿಸುವವರೂ, ಆ ಅಪಾರ್ಥವನ್ನೇ ಪ್ರಮಾಣವೆಂದು ಭಾವಿಸಿದವರೂ ದುರ್ಗತಿಗೆ ಗುರಿಯಾಗುವರು. ಯಾವ ದ್ವಿಜರು ಪುರಾಣೇತಿಹಾಸಗಳನ್ನು ಪ್ರಧಾನವಾಗಿ ಭಾವಿಸುವರೋ, ಅಂತಹ ಆಸ್ತಿಕರು ಯಾವಾಗಲೂ ದೈವ ಸಾಯುಜ್ಯವನ್ನು ಪಡೆಯುವರು' ಎಂದನು.

ಇದು ನೂರಹನ್ನೊಂದನೆಯ ಅಧ್ಯಾಯವು.

---

{ಕೃಷ್ಣನು ಧರ್ಮರಾಜನಿಗೆ ಚಾಂದ್ರಾಯಣವಿಧಿಯನ್ನೂ, ಅದನ್ನನುಷ್ಠಿಸುವುದರಿಂದಾಗುವ ಫಲವನ್ನೂ ತಿಳಿಸಿದುದು.}

ತಿರುಗಿ ಯುಧಿಷ್ಠಿರನು ಪುಣ್ಯಕರವಾದ ಚಾಂದ್ರಾಯಣವಿಧಿಯನ್ನು ತನಗೆ ತಿಳಿಸಬೇಕೆಂದು ಕೇಳಲು, ಕೃಷ್ಣನು 'ಓ ಪಾಂಡುನಂದನಾ! ಸ್ವ

ಪಾಪನಿವಾರಕವಾದ ಆ ವ್ರತವಿಧಿಗಳನ್ನೆಲ್ಲ ತಿಳಿಸುವೆನು ಕೇಳು. ಆ ವ್ರತಾಪೇಕ್ಷೆಯುಳ್ಳ ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ ಮೊದಲು ತನ್ನ ಶರೀರವನ್ನು ಪಂಚಗವ್ಯದಿಂದ ಶುದ್ಧಿಮಾಡಿಕೊಳ್ಳಬೇಕು. ಆಮೇಲೆ ಕೃಷ್ಣಪಕ್ಷದಲ್ಲಿ ಕ್ಷೌರವನ್ನು ಮಾಡಿಸಿಕೊಳ್ಳಬೇಕು. ಶುದ್ಧನಾಗಿ ಬಿಳಿಯ ವಸ್ತ್ರವನ್ನುಟ್ಟು, ಮುಂಜಿಯಹುಲ್ಲನ್ನು ಉಡುದಾರವಾಗಿ ಕಟ್ಟಿಕೊಂಡು, ಪಲಾಶದಂಡವನ್ನು ಕೈಯಲ್ಲಿ ಹಿಡಿದು, ಬ್ರಹ್ಮಚರ್ಯವ್ರತದಲ್ಲಿರಬೇಕು. ಶುಕ್ಲಪಕ್ಷದ ಪ್ರಥಮೆಯಲ್ಲಿ ಮೊದಲು ಉಪವಾಸವಿದ್ದು, ನದೀಸಂಗಮ ಸ್ಥಳಗಳಲ್ಲಿಯಾಗಲಿ, ಬೇರೆ ಶುದ್ಧವಾದ ಸ್ಥಳಗಳಲ್ಲಾಗಲಿ, ಮನೆಯಲ್ಲಿ ಗೋಮೂತ್ರದಿಂದ ತೊಳೆದ ಆಸನದಮೇಲೆ ಅಗ್ನಿಯನ್ನಿಟ್ಟು, ಆಘಾರಗಳು, ಆಜ್ಯಭಾಗಗಳು, ಪ್ರಣವ, ವ್ಯಾಹೃತಿ, ವಾರುಣ, ವೆಂಬ ಐದು ಹೋಮಗಳನ್ನೂ ಕ್ರಮವಾಗಿ ಮಾಡಿ, ಸತ್ಯಕ್ಕೆ, ವಿಷ್ಣುವಿಗೆ, ಬ್ರಹ್ಮರ್ಷಿಗಳಿಗೆ, ಬ್ರಹ್ಮನಿಗೆ, ವಿಶ್ವೇದೇವರಿಗೆ, ಪ್ರಜಾಪತಿಗೆ, ಎಂದು ಹೇಳಿ ಆರು ಹೋಮಗಳನ್ನೂ ಪೂರೈಸಿ, ಆಮೇಲೆ ಪ್ರಾಯಶ್ಚಿತ್ತಹೋಮವನ್ನು ಮಾಡಬೇಕು. ಅನಂತರದಲ್ಲಿ ಪುಷ್ಟಿಯನ್ನುದ್ದೇಶವಾಗುಳ್ಳ ಶಾಂತಿಯನ್ನು ಮಾಡಿ, ಅಗ್ನಿಕಾರ್ಯವನ್ನು ಮುಗಿಸಿ, ಅಗ್ನಿಯನ್ನೂ, ಸೋಮನನ್ನೂ ನಮಸ್ಕರಿಸಿ, ವಿಧ್ಯುಕ್ತರೀತಿಯಲ್ಲಿ ಹೋಮಶೇಷವಾದ ಭಸ್ಮವನ್ನು ಲೇಪಿಸಿ, ನದಿಗೆ ಹೋಗಿ ಸೋಮನಿಗೂ, ವರುಣನಿಗೂ, ಆದಿತ್ಯನಿಗೂ ನಮಸ್ಕರಿಸಿ ಸಾವಧಾನವಾಗಿ ಸ್ನಾನಮಾಡಬೇಕು. ಮೇಲೆದ್ದು ಬಂದಮೇಲೆ ಆಚಮನಮಾಡಿ, ಪೂರ್ವಾಭಿಮುಖನಾಗಿ ನಿಂತು, ಪ್ರಾಣಾಯಾಮವನ್ನು ಮಾಡಿ, ಮಂತ್ರಗಳನ್ನು ಹೇಳುತ್ತ, ಕೈಗಳನ್ನು ಮೇಲಕ್ಕೆತ್ತಿ ಸೂರ್ಯನನ್ನು ನೋಡಬೇಕು. ಎರಡು ಕೈಗಳನ್ನೂ ಜೋಡಿಸಿ ನಿಂತು ಪ್ರದಕ್ಷಿಣಮಾಡಬೇಕು. ಆಮೇಲೆ ನಾರಾಯಣಸೂಕ್ತ, ರುದ್ರಸೂಕ್ತ, ಬ್ರಹ್ಮಸೂಕ್ತ, ವಾರುಣಸೂಕ್ತ, ಪ್ರಾಗ್ಜ್ಯೋಜನ, ವೀರಘ್ನ, ಋಷಭ, ಅಘಮರ್ಷಣಗಳೆಂಬ ಸೂಕ್ತಗಳಲ್ಲಿ ಒಂದನ್ನಾಗಲಿ, ಗಾಯತ್ರಿಯನ್ನಾಗಲಿ, ಸಾವಿತ್ರಿಯನ್ನಾಗಲಿ ನೂರಾವರ್ತಿಯೋ, ನೂರೆಂಟಾವರ್ತಿಯೋ, ಒಂದು ಸಾವಿರಸಾರಿಯೋ ಜಪಿಸಬೇಕು. ಮಧ್ಯಾಹ್ನಕಾಲದಲ್ಲಿ ಪಾಯಸವನ್ನಾಗಲಿ, ಯವೆಯ ಗಂಜಿಯನ್ನಾಗಲಿ, ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾ

ಳೆ, ಮೊದಲಾದ ಉತ್ತಮ ಲೋಹಪಾತ್ರೆಗಳಲ್ಲಿ ಪಕ್ವಮಾಡಿ, ಅತ್ತಿಯ ಮರದಿಂದ ಮಾಡಿದ ಪಾತ್ರೆಯಲ್ಲಿಯೋ ಕೊನೆಗೆ ಮಣ್ಣಿನ ಪಾತ್ರೆಯಲ್ಲಿಯೋ ಯಾವುದಾದರೂ ಒಂದರಲ್ಲಿ ಅಥವಾ ಯಜ್ಞಕ್ಕೊದಗುವ ವೃಕ್ಷಗಳಲ್ಲಿ ಹಸಿಯದೂ, ಪವಿತ್ರವೂ ಆದ ಎಲೆಗಳಿಂದ ಮಾಡಿದ ದೊನ್ನೆಗಳಿಂದಾಗಲಿ, ಭಿಕ್ಷೆಯೆತ್ತಬೇಕು. ಭಿಕ್ಷೆಗಾಗಿ ಏಳುಬ್ರಾಹ್ಮಣರ ಮನೆಗೆ ಮಾತ್ರವೇ ಹೋಗಬೇಕು. ಒಂದೊಂದು ಮನೆಯಲ್ಲಿ ಒಂದು ಹಸುವಿನ ಹಾಲನ್ನು ಕರೆಯುವಷ್ಟು ಹೊತ್ತು ಮಾತ್ರ ಮೌನದಿಂದ ಜಿತೇಂದ್ರಿಯನಾಗಿ ನಿಂತಿರಬೇಕು. ಅಲ್ಲಿನ ಸ್ತ್ರೀಯರನ್ನು (ಕಣ್ಣೆತ್ತಿಯೂ) ನೋಡಬಾರದು· ನಗಬಾರದು! ಮಾತನಾಡಿಸಬಾರದು! ಮಲಮೂತ್ರಗಳನ್ನೂ, ಚಂಡಾಲರನ್ನೂ, ರಜಸ್ವಲೆಯರನ್ನೂ, ಪತಿತರನ್ನೂ, ನಾಯಿಯನ್ನೂ ಕಂಡೊಡನೆ ಸೂರ್ಯನನ್ನು ನೋಡಬೇಕು. ಕಾಲ್ಜೋಡನ್ನು ಮೆಟ್ಟಿ ಸಂಚರಿಸುವ ದ್ವಿಜನನ್ನು ಕಂಡರೂ ಸೂರ್ಯನನ್ನು ನೋಡಬೇಕು. ಮನೆಗೆ ಬಂದಮೇಲೆ ಭಿಕ್ಷೆಯನ್ನು ನೆಲದಮೇಲಿಟ್ಟು, ಮೊಳಕಾಲಿನವರೆಗೆ ಕಾಲುಗಳನ್ನೂ, ಮೊಳಕೈವರೆಗೆ ಕೈಗಳನ್ನೂ ತೊಳೆದುಕೊಂಡು, ಶುದ್ಧಜಲದಲ್ಲಿ ಆಚಮನ ಮಾಡಿ, ಅಗ್ನಿಯನ್ನೂ, ಬ್ರಾಹ್ಮಣರನ್ನೂ ಪೂಜಿಸಬೇಕು. ಭಿಕ್ಷಾನ್ನವನ್ನು ಐದು ಅಥವಾ ಏಳು ಭಾಗಗಳಾಗಿ ಮಾಡಿ, ಅದರಲ್ಲಿ ಒಂದು ಭಾಗವನ್ನು ಸೂರ್ಯನಿಗೂ, ಒಂದನ್ನು ಬ್ರಹ್ಮನಿಗೂ, ಒಂದನ್ನು ಅಗ್ನಿಗೂ, (ಒಂದನ್ನು) ಸೋಮನಿಗೂ, (ಒಂದನ್ನು) ವರುಣನಿಗೂ, (ಒಂದನ್ನು) ವಿಶ್ವೇದೇವರಿಗೂ ಕ್ರಮವಾಗಿ ನಿವೇದಿಸಿದಮೇಲೆ, ಉಳಿದ ಒಂದು ಭಾಗವನ್ನು ಮಾತ್ರ ಬಾಯಿಗೆ ಹಿಡಿಸುವಷ್ಟು ಕಬಳಗಳನ್ನಾಗಿ ಮಾಡಿ ಬೆರಳುಗಳ ತುದಿಯಲ್ಲಿಟ್ಟುಕೊಂಡು, ಗಾಯಿತ್ರಿಯಿಂದಭಿಮಂತ್ರಿಸಿ, ಪೂರ್ವಾಭಿಮುಖನಾಗಿದ್ದು, ಮೂರು ಬೆರಳುಗಳಿಂದ ಆ ಒಂದು ಉಂಡೆಯನ್ನು ಮಾತ್ರ ಭುಜಿಸಬೇಕು. ಚಂದ್ರನ ವೃದ್ಧಿ ಕ್ಷಯಗಳು ಹೇಗೋ ಹಾಗೆ ಆ ಉಂಡೆಯ ಪ್ರಮಾಣವನ್ನು ದಿನದಿನಕ್ಕೆ ಶುಕ್ಲಪಕ್ಷದಲ್ಲಿ ಹೆಚ್ಚಿಸುತ್ತಲೂ, ಕೃಷ್ಣಪಕ್ಷದಲ್ಲಿ ತಗ್ಗಿಸುತ್ತಲೂ ಬರಬೇಕು. ಈ ವ್ರತಕಾಲದಲ್ಲಿ ದಿನಕ್ಕೆ ಮೂರು ಹೊತ್ತಾಗಲಿ, ಎರಡು ಹೊತ್ತಾಗಲಿ ಕೊನೆಗೆ ಒಂದು ಹೊತ್ತಾಗಲಿ ತಪ್ಪದೆ ಸ್ನಾನವು ವಿಧಿಸಲ್ಪಟ್ಟಿರುವುದು. ಬ್ರಹ್ಮಚರ್ಯೆಯಲ್ಲಿ

ದ್ದವನು ಯಾವಾಗಲೂ ವಸ್ತ್ರವನ್ನು ಹಿಂಡಕೂಡದು. ಹಗಲಲ್ಲಿ ನಿಂತೇ ಇರಬೇಕು. ರಾತ್ರಿಯಲ್ಲಿ ವೀರಾಸನದಲ್ಲಿರಬೇಕು. ಅಥವಾ ನೆಲದಮೇಲೆ ಮಲಗಬೇಕು. ಇಲ್ಲವೇ ಮರದಡಿಯನ್ನು ಆಶ್ರಯಿಸಿರಬೇಕು. ಆತನು ಮರದ ಪಟ್ಟೆಯನ್ನಾಗಲಿ, ಬಿಳಿಯ ರೇಷ್ಮೆಯನ್ನಾಗಲಿ, ನಾರಿನ ಅಥವಾ ಹತ್ತಿಯ ಬಟ್ಟೆಯನ್ನಾಗಲಿ ಉಟ್ಟುಕೊಳ್ಳಬೇಕು. ಹೀಗೆ ಚಾಂದ್ರಾಯಣವು ಪೂರ್ತಿಯಾದೊಡನೆಯೇ ತಿಂಗಳ ಕಡೆಯಲ್ಲಿ ಭಕ್ತಿಯಿಂದ ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸಿ ದಕ್ಷಿಣೆಯನ್ನು ಕೊಡಬೇಕು. ಚಾಂದ್ರಾಯಣವ್ರತಾನುಷ್ಠಾನದಿಂದ ಅಗ್ನಿಯಿಂದ ಸೌದೆಯು ಹೇಗೋ ಹಾಗೆ ಮಾಡಿದ ಪಾಪವೆಲ್ಲವೂದಗ್ಧವಾಗುವುವು. ಬ್ರಹ್ಮಹತ್ಯೆ, ಗೋಹತ್ಯೆ, ಸ್ವರ್ಣಸ್ತೇಯ, ಸುರಾಪಾನ, ಭ್ರೂಣಹತ್ಯೆ, ಗುರುದಾರಗಮನಾದಿ ಘೋರ ಪಾಪಗಳೆಲ್ಲ ಬಿರುಗಾಳಿಗೆ ಸಿಕ್ಕಿದ ಧೂಳಿನಂತೆ ಹಾರಿಹೋಗುವುವು. ಕರು ಹಾಕಿ ಇನ್ನೂ ಹತ್ತುದಿನಗಳಾಗದ ಹಸುವಿನ ಹಾಲನ್ನೂ, ಒಂಟೆಯ ಹಾಲನ್ನೂ, ಆಡಿನ ಹಾಲನ್ನೂ, ಆಶೌಚಾನ್ನವನ್ನೂ, ಸೂತಕಾನ್ನವನ್ನೂ, ಭುಜಿಸಿದರೆ ಚಾಂದ್ರಾಯಣವ್ರತವನ್ನನುಷ್ಠಿಸಬೇಕು. ಉಪಪಾತಕಿಯ ಅನ್ನವನ್ನೂ, ಪತಿತಾನ್ನವನ್ನೂ, ಶೂದ್ರಶೇಷವನ್ನೂ ಭುಜಿಸಿದವರು ಚಾಂದ್ರಾಯಣವನ್ನು ಮಾಡಬೇಕು. ನಿರಾವರಣದಲ್ಲಿರುವುದನ್ನೂ, ಕೈಯಲ್ಲಿಯೇ ಹಿಡಿದಿದ್ದುದನ್ನೂ, ಕೆಳಗೆ ಬಿದ್ದುದನ್ನೂ, ಇತರರ ಕೈಯಲ್ಲಿರುವುದನ್ನೂ ಭುಜಿಸಿದರೂ, ಚಾಂದ್ರಾಯಣವನ್ನು ಅನುಷ್ಠಿಸಬೇಕು. ದ್ವಿತೀಯ ವಿವಾಹಮಾಡಿಕೊಂಡ ಹೆಂಗಸಿನ ಪ್ರಥಮ ದ್ವಿತೀಯ ಪತಿಗಳಿಬ್ಬರು, 1 ಪರಿವೇತ್ತ, 2 ಪರಿವಿತ್ತಿ, 3 ಕುಂಡ, 4 ಗೋಳಕ, ಪೂಜಾರಿ, ಪುರೋಹಿತ, ಇವರ ಅನ್ನವನ್ನು ಭುಜಿಸಿದರೂ ಚಾಂದ್ರಾಯಣವನ್ನು ನಡೆಸಬೇಕು. ಎಳ್ಳು, ಹೆಂಡ, ವಿಷ, ತುಪ್ಪ, ಅರಗು, ಉಪ್ಪು, ಎಣ್ಣೆ ಮುಂತಾದುವುಗಳನ್ನು ಮಾರುವ ಬ್ರಾಹ್ಮಣನು ಚಾಂದ್ರಾಯಣವ್ರತವನ್ನನುಷ್ಠಿಸಬೇಕು. ಏಕೋದ್ದಿಷ್ಟ (ಏಕಾಹಶ್ರಾದ್ಧ) ವನ್ನು ಭುಜಿಸಿದವನೂ, ಅನೇಕ ಜನರ

1. ಅಣ್ಣನಿಗೆ ವಿವಾಹವಿಲ್ಲದಿದ್ದಾಗ ಮದುವೆಯಾದ ತಮ್ಮನು. 2. ವಿವಾಹವಿಲ್ಲದ ಅಣ್ಣನು. 3. ಗಂಡನಿದ್ದಾಗಲೇ ವ್ಯಭಿಚಾರಕ್ಕೆ ಹುಟ್ಟಿದ ಮಗನು. 4. ವಿಧವೆಗೆ ವ್ಯಭಿಚಾರದಿಂದ ಹುಟ್ಟಿದ ಮಗನು.

ನಡುವೆ ಎಲ್ಲರನ್ನೂ ಬಿಟ್ಟು ತಾನೊಬ್ಬನೇ ಊಟಮಾಡಿದವನೂ, ಒಡೆದ ಪಾತ್ರೆಯಲ್ಲಿ ಭುಜಿಸಿದವನೂ ಆ ದೋಷಪರಿಹಾರಕ್ಕಾಗಿ ಚಾಂದ್ರಾಯಣ ವನ್ನು ಅನುಷ್ಠಿಸಬೇಕು. ಉಪನಯನವಿಲ್ಲದವರು, ಸ್ತ್ರೀಯರು, ಕನ್ಯೆ ಯರು, ಇವರೊಡನೆ ಸಹಭೋಜನಮಾಡಿದ ದ್ವಿಜನು ಚಾಂದ್ರಾಯಣ ವನ್ನು ಮಾಡಬೇಕು. ಊಟಮಾಡಿ ಮಿಕ್ಕ ಉಚ್ಛಿಷ್ಟವನ್ನು ಮುಂದಿನ ಭೋಜನಕ್ಕಾಗಿ ಇಟ್ಟವನೂ, ತಿಳಿಯದೆ ಅದನ್ನು ಇತರರಿಗೆ ಕೊಟ್ಟ ವನೂ ಚಾಂದ್ರಾಯಣವನ್ನು ಮಾಡಬೇಕು. ಸೋರೆ, ಹೀರೆ, ಈರುಳ್ಳಿ, ಬೆಳ್ಳುಳ್ಳಿ, ಗೃಂಜನ, ಛತ್ರಾಕ, ಇವುಗಳನ್ನೂ, ತಂಗಳನ್ನ, ಮತ್ತೊಬ್ಬರ ಮನೆಯಿಂದ ಪಕ್ವಮಾಡಿ ಬಂದ ಅನ್ನ, ಅಪಕ್ವ ಮಾಂಸ, ಇವುಗಳನ್ನೂ, ರಜಸ್ವಲೆ, ನಾಯಿ, ಚಂಡಾಲರು, ಇವರ ದೃಷ್ಟಿಗೆ ಬಿದ್ದ ಅನ್ನವನ್ನೂ ಭುಜಿಸಿದ ದ್ವಿಜನು ಚಾಂದ್ರಾಯಣವನ್ನು ನಡೆಸಬೇಕು. ಈ ಚಾಂದ್ರಾ ಯಣವ್ರತವು ಸಮಸ್ತಪ್ರಾಣಿಗಳನ್ನೂ ಶುದ್ಧಿಮಾಡತಕ್ಕುದು. ಪುಣ್ಯಕರ ವಾದುದು. ಪುರಾತನ ಮಹರ್ಷಿಗಳು ಆತ್ಮಶುದ್ಧಿಗಾಗಿ ಇದನ್ನು ಅನುಷ್ಠಿಸು ವರು. ಇದರಿಂದ ವಸುಗಳೂ, ರುದ್ರರೂ, ಆದಿತ್ಯರೂ, ಶುದ್ಧರಾಗಿ ಸದ್ಗ ತಿಯನ್ನು ಹೊಂದಿದರು. ರಹಸ್ಯವೂ, ಪವಿತ್ರವೂ, ಪಾಪಹರವೂ ಆದ ಈ ವ್ರತವನ್ನು ನಡೆಸಿದ ದ್ವಿಜನು, ಆತ್ಮಶುದ್ಧಿಯನ್ನು ಹೊಂದಿ, ಸೂರ್ಯ ತೇಜಸ್ವಿಯಾಗಿ ಸ್ವರ್ಗವನ್ನು ಸೇರುವನು ' ಎಂದನು.

ಇದು ನೂರಹನ್ನೆರಡನೆಯ ಅಧ್ಯಾಯವು.

---

ಕಾರ್ತಿಕಾದಿ ದ್ವಾದಶಮಾಸಗಳಲ್ಲಿ ಒಂದೇವೇಳೆ ಭುಜಿಸುವ ವ್ರತವಿಧಿಯನ್ನೂ, ಅದರ ಫಲವನ್ನೂ ಕೃಷ್ಣನು ಯು ಧಿಷ್ಠಿರನಿಗೆ ತಿಳಿಸಿದುದು.

ತಿರುಗಿ ಧರ್ಮರಾಜನು ಕೃಷ್ಣನನ್ನು ಕುರಿತು ' ಓ ಲೋಕೇಶಾ ! ಸಕಲಪ್ರಾಣಿಗಳಿಗೂ ಹಿತವಾದ ಧರ್ಮವಾವುದೋ ಅದನ್ನು ನನಗೆ ತಿಳಿಸ ಬೇಕು ' ಎನಲು, ಕೃಷ್ಣನು ' ಯುಧಿಷ್ಠಿರಾ ! ಕೇವಲ ದರಿದ್ರರಿಗೆಕೂಡ ಸ್ವರ್ಗಸಾಧಕವೂ, ಸುಖಕರವೂ, ಸರ್ವಪಾಪನಿವಾರಕವೂ ಆದ ಧರ್ಮ

ವಿಚಾರವನ್ನು ತಿಳಿಸುವೆನು ಕೇಳು. ಕಾರ್ತೀಕವೇ ಮೊದಲಾದ ಹನ್ನೆರಡು ತಿಂಗಳುಗಳಲ್ಲಿಯೂ ಒಂದುವೇಳೆ ಭೋಜನಮಾಡುವ ಒಂದು ವ್ರತವುಂಟು. ಜಿತೇಂದ್ರಿಯನಾಗಿ, ನನ್ನಲ್ಲಿ ಭಕ್ತಿಯಿಟ್ಟು, ಕ್ರೋಧ ಲೋಭಗಳನ್ನು ಬಿಟ್ಟು, ಸಾವಧಾನದಿಂದ ಆ ಹನ್ನೆರಡು ತಿಂಗಳೂ ಆದಿತ್ಯರೂಪಿಯಾದ ನನ್ನನ್ನು ಆರಾಧಿಸಬೇಕು. ಭೋಜನಕಾಲದಲ್ಲಿ ಒಳ್ಳೇ ಉತ್ತಮ ಬ್ರಾಹ್ಮಣನಿಗೆ ಉತ್ತಮಾಸನವನ್ನು ಕೊಟ್ಟು ತಾನು ನೆಲದಲ್ಲಿ ಕುಳಿತು ಭುಜಿಸಬೇಕು. ಕಾರ್ತೀಕಮಾಸದ ಪ್ರಥಮೆಯು ಮೊದಲು ಒಂದು ತಿಂಗಳವರೆಗೂ ಏಕಭುಕ್ತವುಹೊರತು ಮಧ್ಯದಲ್ಲಿ ಜಲವನ್ನುಕೂಡ ಅಪೇಕ್ಷಿಸಬಾರದು. ಆ ವ್ರತವು ಮುಗಿದೊಡನೆಯೇ ಬ್ರಾಹ್ಮಣರಿಗೆ ದಕ್ಷಿಣೆಯೊಡನೆ ಸಂತರ್ಪಣೆ ಮಾಡುವವನು ವಿಧ್ಯುಕ್ತವಾಗಿ ಕಪಿಲೆಯನ್ನು ದಾನಮಾಡಿದ ಪುಣ್ಯಫಲವನ್ನು ಪಡೆದು ಸೂರ್ಯಲೋಕದಲ್ಲಿ ಪೂಜಿಸಲ್ಪಡುವನು. ಆ ಕಾಲಾವಧಿಯು ತೀರಿದೊಡನೆಯೇ ಪುನರ್ಜನ್ಮದಲ್ಲಿ ಉತ್ತಮಪುರುಷರಲ್ಲಿ ಹುಟ್ಟುವನು. ಹಾಗೆಯೇ ಯಾವಾತನು ಮಾರ್ಗಶಿರಮಾಸದಲ್ಲಿ ಸ್ನಾನಮಾಡಿ ಶುಚಿಯಾಗಿ, ಒಂದುವೇಳೆ ಭುಜಿಸುತ್ತ, ಗಾಯತ್ರೀಜಪದೊಡನೆ ಆದಿತ್ಯರೂಪಿಯಾದ ನನ್ನನ್ನು ಪೂಜಿಸುತ್ತ, ಆ ತಿಂಗಳು ಮುಗಿದೊಡನೆಯೇ ಬ್ರಾಹ್ಮಣಭೋಜನಮಾಡಿಸುವನೋ, ಆತನು ಆಹಿತಾಗ್ನಿಗೆ ಲಭಿಸುವ ಪುಣ್ಯದ ಫಲವನ್ನು ಪಡೆದು, ಸಪ್ತರ್ಷಿಗಳ ಲೋಕವನ್ನು ಸೇರಿ, ಆ ಕಾಲಾವಧಿಯು ಮುಗಿದೊಡನೆ ಹರಿವರ್ಷದಲ್ಲಿ ಹುಟ್ಟಿ, ಅಲ್ಲಿಯೂ ಸಂತುಷ್ಟಿಯಿಂದ ವಿಹರಿಸುತ್ತಿದ್ದು, ಆಮೇಲೆ ರಾಜನಾಗಿ ಹುಟ್ಟುವನು. ಹೀಗೆಯೇ ಪುಷ್ಯಮಾಸದಲ್ಲಿ ಏಕಭುಕ್ತದಿಂದ ನನ್ನನ್ನು ಪೂಜಿಸಿದವನು ಸಹಸ್ರ ಬ್ರಾಹ್ಮಣಸಂತರ್ಪಣ ಫಲವನ್ನು ಪಡೆದು, ಇಂದ್ರಲೋಕದಲ್ಲಿ ಪೂಜಿಸಲ್ಪಡುವನು. ಅಲ್ಲಿರಬೇಕಾದ ಕಾಲಾವಧಿಯು ಮುಗಿದೊಡನೆಯೇ ಇಲಾವರ್ಷದಲ್ಲಿ ಹುಟ್ಟಿ ಅಲ್ಲಿ ಬಹಳಕಾಲವಿದ್ದು ಈ ಲೋಕದಲ್ಲಿ ಬ್ರಾಹ್ಮಣನಾಗಿ ಹುಟ್ಟುವನು. ಮಾಘಮಾಸದಲ್ಲಿ ಒಂದುವೇಳೆ ಭುಜಿಸುವುದು ಸಾವಿತ್ರೀಮಂತ್ರವನ್ನು ತ್ರಿಸಂಧ್ಯೆಗಳಲ್ಲಿಯೂ ಜಪಿಸುವುದು, ತ್ರಿಕಾಲಸ್ನಾನ, ಮುಂತಾದ ನಿಯಮಗಳೊಡನೆ ನನ್ನನ್ನು ಪೂಜಿಸುತ್ತಿದ್ದು, ಕಡೆಗೆ ದಕ್ಷಿಣೆಯುಸಹಿತವಾಗಿ ಬ್ರಾಹ್ಮಣಭೋಜನಮಾಡಿಸುವವನು, ನವಿಲುಗ

ಳನ್ನು ಕಟ್ಟಿದ ವಿಮಾನದಲ್ಲಿ ಕುಳಿತು ಅಪ್ಸರಸ್ಸಮೂಹಗಳಿಂದ ಸೇವಿಸಲ್ಪ ಡುತ್ತ ಪಿತೃಲೋಕವನ್ನು ಸೇರುವನು. ಆಮೇಲೆ ಭದ್ರಾಶ್ವವರ್ಷದಲ್ಲಿ ಜನಿಸಿ, ಆಮೇಲೆ ಭೂಲೋಕದಲ್ಲಿ ವೇದಾಧ್ಯಯನಮಾಡಿದ ಬ್ರಾಹ್ಮಣ ನಾಗಿ ಹುಟ್ಟುವನು. ಫಾಲ್ಗುಣಮಾಸದಲ್ಲಿ 'ನಮೋಬ್ರಹ್ಮಣ್ಯದೇವಾಯ' ಎಂಬ ಮಂತ್ರವನ್ನು ಜಪಿಸುತ್ತ ಯಾವಾಗಲೂ ನನ್ನ ಆರಾಧನೆಯಲ್ಲಿ ನಿರ ತನಾಗಿ, ಏಕಭುಕ್ತವ್ರತವನ್ನು ನಡೆಸಿ, ವ್ರತದ ಕೊನೆಯಲ್ಲಿ ಬ್ರಾಹ್ಮಣರಿಗೆ ಪಾಯಸದೊಡನೆ ಮೃಷ್ಟಾನ್ನಸಂತರ್ಪಣೆಮಾಡುವವನು, ಸಾರಸಪಕ್ಷಿಗ ಳನ್ನು ಕಟ್ಟಿದ ಕಾಮಗಮನವುಳ್ಳ ವಿಮಾನವನ್ನೇರಿ, ನಕ್ಷತ್ರಲೋಕದಲ್ಲಿ ನಕ್ಷತ್ರರೂಪದಿಂದಿದ್ದು, ಆಮೇಲೆ ಕೇತುಮಾಲದಲ್ಲಿ ಹುಟ್ಟಿ, ಅಲ್ಲಿ ಸ್ವೇಚ್ಛೆ ಯಾಗಿ ವಿಹರಿಸುತಿದ್ದು, ಆಮೇಲೆ ಮನುಷ್ಯರಲ್ಲಿ ಋಷಿಶ್ರೇಷ್ಠನಾಗುವನು. ಚೈತ್ರಮಾಸದಲ್ಲಿ ಬ್ರಹ್ಮಚರ್ಯವ್ರತದೊಡನೆ ಏಕಭುಕ್ತವನ್ನು ಮಾಡಿದ ವನು ಅಗ್ನಿಹೋತ್ರಾದಿ ವ್ರತಗಳನ್ನು ಮಾಡಿದ ಪುಣ್ಯಫಲವನ್ನು ಪಡೆದು, ಚಂದ್ರಲೋಕದಲ್ಲಿ ಸೇರುವನು. ಆಮೇಲೆ ರಮಣಕವರ್ಷದಲ್ಲಿ ಹುಟ್ಟಿ, ಸಕಲಾಭೀಷ್ಟಗಳನ್ನೂ ಅನುಭವಿಸಿದಮೇಲೆ ಈ ಲೋಕದಲ್ಲಿ ಅರಸನಾಗಿ ಹುಟ್ಟುವನು. ವೈಶಾಖಮಾಸದಲ್ಲಿ 'ನಮೋಬ್ರಹ್ಮಣ್ಯದೇವಾಯ' ಎಂಬ ಮಂತ್ರದೊಡನೆ ಸೂರ್ಯನನ್ನು ಪೂಜಿಸಿ, ಏಕಭುಕ್ತವನ್ನು ಮಾಡುತ್ತ, ವ್ರತದಕಡೆಯಲ್ಲಿ ಬ್ರಾಹ್ಮಣಸಂತರ್ಪಣೆ ಮಾಡಿಸುವಾತನು, ಅಗ್ನಿಷ್ಟೋಮ ಕ್ಕೂ, ಅತಿರಾತ್ರಕ್ಕೂ ಯಾವ ಫಲಗಳು ಹೇಳಲ್ಪಟ್ಟಿರುವುವೋ ಆ ಫಲ ಗಳನ್ನು ಪಡೆದು, ದೇವಲೋಕದಲ್ಲಿ ಪೂಜಿತನಾಗಿದ್ದು, ಆಮೇಲೆ ಹೈಮವತ ವರ್ಷದಲ್ಲಿ ಹುಟ್ಟಿ, ಅಲ್ಲಿ ಸ್ವೇಚ್ಛೆಯಾಗಿ ವಿಹರಿಸಿದಮೇಲೆ, ಬ್ರಾಹ್ಮಣನಾಗಿ ಹುಟ್ಟುವನು. ಜ್ಯೇಷ್ಠಮಾಸದಲ್ಲಿ ವಿಧ್ಯುಕ್ತರೀತಿಯಲ್ಲಿ ಒಂದೇವೇಳೆ ಭುಜಿ ಸುತ್ತ ಸಾವಧಾನಚಿತ್ತದಿಂದ ನನ್ನನ್ನು ಉಪಾಸಿಸುವವನು ಚಾಂದ್ರಾಯಣ ವ್ರತಾನುಷ್ಠಾನದಿಂದ ಲಭಿಸುವ ಪುಣ್ಯವನ್ನು ಪಡೆದು, ದೇವಲೋಕದಲ್ಲಿ ಪೂಜಿಸಲ್ಪಡುವನು. ಆಮೇಲೆ ಅಲ್ಲಿಂದ ಉತ್ತರಕುರುವರ್ಷದಲ್ಲಿ ಹುಟ್ಟು ವನು. ಆ ಕಾಲಾವಧಿಯು ಮುಗಿದೊಡನೆ ಈ ಲೋಕದಲ್ಲಿ ಬ್ರಾಹ್ಮಣ ನಾಗಿ ಹುಟ್ಟುವನು. ಆಷಾಢಮಾಸದಲ್ಲಿ ತ್ರಿಕಾಲಸ್ನಾನಮಾಡಿ ಬ್ರಹ್ಮ ಚರ್ಯವ್ರತದಿಂದ ನನ್ನನ್ನು ಆರಾಧಿಸುತ್ತ, ಬ್ರಾಹ್ಮಣನನ್ನು ಉತ್ತಮಾ

ಸನದಲ್ಲಿ ಕುಳ್ಳಿರಿಸಿ, ತಾನು ನೆಲದಮೇಲೆ ಕುಳಿತು ಏಕಭುಕ್ತವ್ರತವನ್ನು ಮುಗಿಸಿದಮೇಲೆ, ಕೊನೆಯಲ್ಲಿ ಬ್ರಾಹ್ಮಣರಿಗೆ ಪಾಯಸಾನ್ನವನ್ನು ಸಂತರ್ಪಣೆಮಾಡುವವನು, ನೂರು ಕಪಿಲೆಗಳನ್ನು ದಾನಮಾಡಿದ ಪುಣ್ಯಫಲವನ್ನು ಪಡೆದು, ದೇವಲೋಕದಲ್ಲಿ ಪೂಜಿಸಲ್ಪಡುತ್ತಿದ್ದು, ಆಮೇಲೆ ಶಾಕದ್ವೀಪದಲ್ಲಿ ಹುಟ್ಟುವನು. ಅಲ್ಲಿಂದ ಭೂಲೋಕದಲ್ಲಿ ಬ್ರಾಹ್ಮಣನಾಗಿ ಹುಟ್ಟುವನು. ಶ್ರಾವಣಮಾಸದಲ್ಲಿಯೂ ಹಾಗೆಯೇ ಏಕಭುಕ್ತದಲ್ಲಿದ್ದು, ಆ ವ್ರತಾನಂತರದಲ್ಲಿ ಪಾಯಸಾನ್ನದಿಂದ ಬ್ರಾಹ್ಮಣಸಂತರ್ಪಣಮಾಡಿದವನು ಕಪಿಲಾದಾನದ ಪುಣ್ಯಫಲಕ್ಕೆ ಭಾಗಿಯಾಗಿ ಇಂದ್ರಲೋಕದಲ್ಲಿ ಪೂಜಿತನಾಗುವನು. ಅಲ್ಲಿ ಸ್ವಲ್ಪಕಾಲವಿದ್ದಮೇಲೆ ಕುಶದ್ವೀಪದಲ್ಲಿ ಹುಟ್ಟುವನು. ಅಲ್ಲಿಂದ ಮನುಷ್ಯಲೋಕದಲ್ಲಿ ಬ್ರಾಹ್ಮಣನಾಗಿ ಹುಟ್ಟುವನು. ಹಾಗೆಯೇ ಭಾದ್ರಪದಮಾಸದಲ್ಲಿ ಯಾವಾತನು ಹಿಂದೆ ಹೇಳಿದಂತೆಯೇ ಬ್ರಾಹ್ಮಣಭೋಜನಾದಿಗಳನ್ನು ಮಾಡಿಸುತ್ತ, ಜಿತೇಂದ್ರಿಯನಾಗಿ ಏಕಭುಕ್ತದಲ್ಲಿದ್ದು, ಆ ವ್ರತವು ಮುಗಿದಮೇಲೆ, ಎಳ್ಳನ್ನಾಗಲಿ, ತುಪ್ಪವನ್ನಾಗಲಿ ದಕ್ಷಿಣೆಯಾಗಿ ಕೊಡುವನೋ, ಆತನು, ರಾಜಸೂಯಾಶ್ವಮೇಧಯಾಗಗಳ ಫಲವನ್ನು ಪಡೆದು, ಇಂದ್ರಲೋಕದಲ್ಲಿ ಪೂಜಿಸಲ್ಪಡುತ್ತಿದ್ದು, ಆಮೇಲೆ ಕುಬೇರಗೃಹದಲ್ಲಿ ಹುಟ್ಟುವನು. ಆಮೇಲೆ ಮನುಷ್ಯಲೋಕದಲ್ಲಿ ರಾಜನಾಗಿ ಹುಟ್ಟುವನು. ಆಶ್ವಯುಜಮಾಸದಲ್ಲಿಯೂ ಮೇಲೆ ಹೇಳಿದ ನಿಯಮದಿಂದ ಬ್ರಾಹ್ಮಣಭೋಜನದೊಡನೆ ಏಕಭುಕ್ತವ್ರತವನ್ನು ನಡೆಸಿ, ಕೊನೆಯಲ್ಲಿ ಬ್ರಾಹ್ಮರಿಣಗೆ ಸಂತರ್ಪಣೆಮಾಡುವವನೂ, ಅಶ್ವಮೇಧಫಲವನ್ನು ಪಡೆದು ನನ್ನ ಲೋಕದಲ್ಲಿ ಪೂಜಿಸಲ್ಪಡುವನು. ಅಲ್ಲಿಂದ ಶ್ವೇತದ್ವೀಪದಲ್ಲಿ ಹುಟ್ಟಿ ಅಲ್ಲಿಯೂ ಭೋಗಗಳನ್ನನುಭವಿಸಿದಮೇಲೆ ಬ್ರಾಹ್ಮಣಶ್ರೇಷ್ಠನಾಗಿ ಹುಟ್ಟುವನು' ಎಂದನು.

ಇದು ನೂರ ಹದಿಮೂರನೆಯ ಅಧ್ಯಾಯವು.



ಮಾರ್ಗಶೀರ್ಷಾದಿ ದ್ವಾದಶಮಾಸಗಳ ದ್ವಾದಶಿಗಳಲ್ಲಿಯೂ ಕೇಶವಾದಿ ದ್ವಾದಶ ಮೂರ್ತಿಗಳನ್ನು ಪೂಜಿಸಿ ವ್ರತಮಾಡುವುದರ ಫಲಗಳನ್ನೂ, ಏಕಾದಶಿಯಲ್ಲಿ ಉಪವಾಸವಿದ್ದು, ದ್ವಾದಶಿಯಲ್ಲಿ ವಿಷ್ಣುವನ್ನು ಪೂಜಿಸುವುದರ ಫಲವನ್ನೂ ಕೃಷ್ಣನು ಯುಧಿಷ್ಠಿರನಿಗೆ ತಿಳಿಸಿದುದು.

ಯುಧಿಷ್ಠಿರನು 'ಓ ಕೇಶವಾ! ವರ್ಷವೆಲ್ಲಾ ಹೀಗೆ ಒಂದೇವೇಳೆ ಭುಜಿಸುವುದರ ಫಲವೇನು?' ಎನಲು, ಕೃಷ್ಣನು 'ಓ ಧರ್ಮರಾಜಾ! ಪುಣ್ಯಕರವಾದ ಆ ವಿಚಾರವನ್ನು ಹೇಳುವೆನು ಕೇಳು. ಇದನ್ನು ಕೇಳಿದ ಮಾತ್ರದಿಂದಲೇ ಮನುಷ್ಯನು ಪಾಪಗಳಿಂದ ನಿವೃತ್ತನಾಗುವನು. ಯಾವಾತನು ಒಂದುವರ್ಷವೂ ಒಂದೇವೇಳೆ ಭುಜಿಸುತ್ತ, ಬ್ರಹ್ಮಚಾರಿಯಾಗಿ, ಕೋಪವನ್ನು ಜಯಿಸಿ, ನೆಲದಲ್ಲಿ ಮಲಗುತ್ತ, ಜಿತೇಂದ್ರಿಯನೂ, ಸ್ನಾನಾದಿಗಳಿಂದ ಪರಿಶುದ್ಧನೂ, ಸತ್ಯವಾದಿಯೂ, ಅಸೂಯಾರಹಿತನೂ ಆಗಿ, ನನ್ನಲ್ಲಿಯೇ ಮನಸ್ಸಿಟ್ಟು, ನನ್ನನ್ನು ಅರ್ಚಿಸುವವನೋ, ಮತ್ತು ದ್ವಿಸಂಧ್ಯಾಕಾಲಗಳಲ್ಲಿಯೂ ನನ್ನ ಗಾಯತ್ರಿಯನ್ನು ಸಾವಧಾನದಿಂದ ಜಪಿಸುವನೋ, 'ನಮೋ ಬ್ರಹ್ಮಣ್ಯದೇವಾಯ' ಎಂದು ಅಡಿಗಡಿಗೆ ನನ್ನನ್ನು ನಮಸ್ಕರಿಸುವನೋ, ಅತಿಥಿಯಾದ ಬ್ರಾಹ್ಮಣನನ್ನು ಉತ್ತಮಾಸನದಲ್ಲಿ ಕುಳ್ಳಿರಿಸಿ ಭೋಜನಮಾಡಿಸಿದಮೇಲೆ 'ನಮೋಸ್ತು ವಾಸುದೇವಾಯ' ಎಂದು ಹೇಳಿ, ಆ ಬ್ರಾಹ್ಮಣನ ಪಾದಗಳಿಗೆ ವಂದನಮಾಡುವನೋ, ಒಂದೊಂದು ತಿಂಗಳ ಕೊನೆಯಲ್ಲಿಯೂ ಉತ್ತಮ ಬ್ರಾಹ್ಮಣ ಸಂತರ್ಪಣ ಮಾಡುತ್ತ, ವರ್ಷವು ಮುಗಿದೊಡನೆ ಬೆಣ್ಣೆಯಿಂದ ಅಥವಾ ಎಳ್ಳಿನಿಂದ ಮಾಡಿದ ಹಸುವನ್ನು ವ್ರತದಕ್ಷಿಣೆಯಾಗಿ ಕೊಡುವನೋ, ಆಮೇಲೇ ಬ್ರಾಹ್ಮಣರ ಕೈಯಿಂದ ಸುವರ್ಣಸಮೇತವಾದ ಜಲದಿಂದ ಸ್ನಾನಮಾಡುವನೋ, ಆತನ ಪುಣ್ಯದ ಫಲವು ಅಪಾರವಾದುದು. ತಿಳಿದೋ, ತಿಳಿಯದೆಯೋ, ಅವನು ಹಿಂದಿನ ಹತ್ತು ಜನ್ಮಗಳಲ್ಲಿ ಮಾಡಿದ ಪಾಪಗಳೂ ನಶಿಸುವುವು' ಎಂದನು.

ಆಗ ಯುಧಿಷ್ಠಿರನು 'ದೇವಾ! ಉಪವಾಸಗಳೊಳಗೆಲ್ಲ ಮಹಾಫಲಕಾರಿಯಾಗಿ, ಮೋಕ್ಷಸಾಧಕವಾದ ಉಪವಾಸವಾವುದು?' ಎನಲು, ಕೃಷ್ಣನು

'ಓ ಯುಧಿಷ್ಠಿರಾ! ನನಗೆ ಸಂಬಂಧಪಟ್ಟ ಪಂಚತಿಥಿಗಳಲ್ಲಿ ಶುದ್ಧನಾಗಿ ತ್ರಿಕಾಲಗಳಲ್ಲಿಯೂ ಭಕ್ತಿಯಿಂದ ನನ್ನನ್ನು ಪೂಜಿಸುತ್ತ, ಉಪವಾಸ ವ್ರತವನ್ನು ಅನುಷ್ಠಿಸುವವನು ಎಲ್ಲಾ ಯಾಗಗಳ ಫಲವನ್ನೂ ಪಡೆದು ನನ್ನ ಲೋಕದಲ್ಲಿ ಪೂಜಿಸಲ್ಪಡುವವನು. ಪ್ರತಿಮಾಸದಲ್ಲಿ, ಎರಡು ಪರ್ವದಿನಗಳೂ, ಎರಡು ದ್ವಾದಶಿಗಳೂ, ಶ್ರವಣವೂ ನನ್ನ ಪಂಚತಿಥಿಗಳೆಂದು ಪ್ರಸಿದ್ಧವಾದುವು. ಅವು ನನಗೆ ಬಹಳ ಪ್ರಿಯವಾದ ದಿನಗಳು. ಆದುದರಿಂದ ತನ್ನ ಪ್ರಿಯಕ್ಕಾಗಿ ಆಗ ಉಪವಾಸದಿಂದಿರಬೇಕು. ಆದರಿಂದ ನಾನು ಬಹಳ ಪ್ರೀತನಾಗುವೆನು. ಹಾಗೆ ಶಕ್ತಿಯಿಲ್ಲದವರು ದ್ವಾದಶಿ ದಿನಗಳಲ್ಲಾದರೂ ಉಪವಾಸವಿರಬೇಕು. ಮಾರ್ಗಶಿರಮಾಸದ ದ್ವಾದಶಿಯಲ್ಲಿ ರಾತ್ರಿ ಹಗಲು ಉಪವಾಸವಿದ್ದು, ಕೇಶವ ನಾಮವುಳ್ಳ ನನ್ನನ್ನು ಪೂಜಿಸುವವನು ಅಶ್ವಮೇಧಫಲವನ್ನು ಪಡೆಯುವನು. ಹಾಗೆಯೇ ಪುಷ್ಯಮಾಸದ ದ್ವಾದಶಿಯಲ್ಲಿ ಉಪವಾಸವಿದ್ದು ನಾರಾಯಣ ನಾಮವುಳ್ಳ ನನ್ನನ್ನು ಪೂಜಿಸುವಾತನೂ, ಅಶ್ವಮೇಧದ ಫಲವನ್ನು ಪಡೆಯುವನು. ಮಾಘ ದ್ವಾದಶಿಯದಿನ ಉಪವಾಸವಿದ್ದು ಮಾಧವನಾದ ನನ್ನನ್ನು ಪೂಜಿಸುವವನು ರಾಜಸೂಯಯಾಗದ ಫಲವನ್ನು ಪಡೆಯುವನು. ಫಾಲ್ಗುಣ ಮಾಸದ ದ್ವಾದಶಿಯಲ್ಲಿ ಉಪವಾಸವಿದ್ದು ಗೋವಿಂದನಾಮಕನಾದ ನನ್ನನ್ನು ಪೂಜಿಸುವವನು ಅತಿರಾತ್ರವೆಂಬ ಯಾಗದ ಫಲವನ್ನು ಪಡೆಯುವನು. ಚೈತ್ರಮಾಸ ದ್ವಾದಶಿಯಲ್ಲಿ ಉಪವಾಸವಿದ್ದು ವಿಷ್ಣುರೂಪಿಯಾದ ನನ್ನನ್ನು ಪೂಜಿಸುವವನು, ಪೌಂಡರೀಕ ಯಾಗದ ಫಲವನ್ನು ಪಡೆಯುವನು. ವೈಶಾಖಮಾಸದ ದ್ವಾದಶಿಯಲ್ಲಿ ಉಪವಾಸವಿದ್ದು ಮಧುಸೂದನನೆಂಬ ಹೆಸರುಳ್ಳ ನನ್ನನ್ನು ಪೂಜಿಸುವಾತನು ಅಗ್ನಿಷ್ಟೋಮದ ಫಲವನ್ನು ಪಡೆಯುವನು. ಜ್ಯೇಷ್ಠಮಾಸದ ದ್ವಾದಶಿಯದಿನ ಉಪವಾಸವಿದ್ದು, ತ್ರಿವಿಕ್ರಮನಾದ ನನ್ನನ್ನು ಪೂಜಿಸುವವನು ಗೋಮೇಧದ ಫಲವನ್ನು ಪಡೆಯುವನು. ಆಷಾಢಮಾಸದ ದ್ವಾದಶಿಯಲ್ಲಿ ಉಪವಾಸವಿದ್ದು ವಾಮನನೆಂಬ ಹೆಸರುಳ್ಳ ನನ್ನನ್ನು ಪೂಜಿಸುವವನು ನರಮೇಧಯಾಗದ ಫಲವನ್ನು ಪಡೆಯುವನು. ಶ್ರಾವಣ ಮಾಸದ ದ್ವಾದಶಿಯಲ್ಲಿ ಉಪವಾಸವಿದ್ದು ಶ್ರೀಧರನೆಂಬ ಹೆಸರುಳ್ಳ ನನ್ನನ್ನು ಪೂಜಿಸುವವನು ಪಂಚಯಜ್ಞ

ಗಳ ಫಲವನ್ನು ಪಡೆಯುವನು. ಭಾದ್ರಪದ ಮಾಸದ ದ್ವಾದಶಿಯಲ್ಲಿ ಉಪವಾಸವಿದ್ದು ಹೃಷೀಕೇಶ ನಾಮಧೇಯವುಳ್ಳ ನನ್ನನ್ನು ಪೂಜಿಸುವವನು ಸೌತ್ರಾಮಣಿಯ ಫಲವನ್ನು ಪಡೆಯುವನು. ಆಶ್ವಯುಜ ಮಾಸದ ದ್ವಾದಶಿಯಲ್ಲಿ ಉಪವಾಸವಿದ್ದು ಪದ್ಮನಾಭ ನಾಮಧೇಯದ ನನ್ನನ್ನು ಆರಾಧಿಸುವವನು, ಒಂದುಸಾವಿರ ಗೋಮೇಧ ಯಾಗಗಳ ಫಲವನ್ನು ಪಡೆಯುವನು. ಕಾರ್ತೀಕ ಮಾಸದ ದ್ವಾದಶಿಯದಿನ ಉಪವಾಸವಿದ್ದು ದಾಮೋದರ ನಾಮಧೇಯವುಳ್ಳ ನನ್ನನ್ನು ಪೂಜಿಸುವವನು ಎಲ್ಲಾ ಯಾಗಗಳ ಫಲವನ್ನೂ ಪಡೆಯುವನು. ರಾಜಾ! ದ್ವಾದಶಿಯ ದಿನಗಳಲ್ಲಿಮಾತ್ರ ಉಪವಾಸವಿದ್ದರೆ, ಮೇಲೆ ಹೇಳಿದ ಫಲಗಳಲ್ಲಿ ಅರ್ಧಭಾಗವನ್ನುಮಾತ್ರ ಪಡೆಯುವನು. ಶ್ರವಣದಿನಗಳಲ್ಲಿಯೂ ಇದೇರೀತಿಯಲ್ಲಿ ಭಕ್ತಿಯಿಂದ ನನ್ನನ್ನು ಪೂಜಿಸುವ ಮನುಷ್ಯನು ನನ್ನ ಸಾಲೋಕ್ಯವನ್ನು ಪಡೆಯುವನು. ಮೇಲೆ ಹೇಳಿದ ಕ್ರಮದಲ್ಲಿ ಒಂದೊಂದು ಮಾಸದಲ್ಲಿಯೂ ನನ್ನನ್ನು ಪೂಜಿಸುತ್ತ, ಆ ವರ್ಷವು ಮುಗಿದಮೇಲೆ, ಮಾರನೆಯ ವರ್ಷವೂ ಅದೇ ರೀತಿ ಪೂಜಿಸಬೇಕು. ಹೀಗೆ ಹನ್ನೆರಡು ವರ್ಷಗಳವರೆಗೆ ನನ್ನಲ್ಲಿ ಭಕ್ತಿಯುಳ್ಳವನಾಗಿ, ನನ್ನನ್ನೇ ಮುಖ್ಯಗತಿಯಾಗಿ ಭಾವಿಸಿ ಪೂಜಿಸುವವನು, ನನ್ನ ಸಾಯುಜ್ಯವನ್ನು ಪಡೆಯುವನು. ಓ ರಾಜಾ! ದ್ವಾದಶಿಯ ದಿನದಲ್ಲಿ ಗಂಧವನ್ನಾಗಲಿ, ಪುಷ್ಪವನ್ನಾಗಲಿ, ಫಲವನ್ನಾಗಲಿ, ಪತ್ರವನ್ನಾಗಲಿ, ಕೊನೆಗೆ ಬರೀತೀರ್ಥವನ್ನಾಗಲಿ ಯಾವನು ನನಗೆ ಕೊಡುವನೋ, ಆತನಂತೆ ನನಗೆ ಪ್ರೀತಿಪಾತ್ರನು ಬೇರೊಬ್ಬನಿಲ್ಲ. ಇಂದ್ರಾದಿದೇವತೆಗಳೆಲ್ಲರೂ ಈ ನಿಯಮದಿಂದಲೇ ಸ್ವರ್ಗಲೋಕಸುಖವನ್ನನುಭವಿಸುವರು' ಎಂದನು.

ಆಗ ಧರ್ಮರಾಜನು ಕೈಮುಗಿದು ನಿಂತು 'ಓ ದೇವೇಶಾ! ಹೃಷೀಕೇಶಾ! ನಿನಗೆ ನಮಸ್ಕಾರವು. ಓ ಸಹಸ್ರಾಕ್ಷಾ! ಸಹಸ್ರಶೀರ್ಷಾ! ನಿನಗೆ ಸದಾ ವಂದನೆಗಳು. ವೇದಸ್ವರೂಪೀ! ವೇದವಂದ್ಯಾ! ನಿನಗೆ ನಿತ್ಯ ನಮಸ್ಕಾರವು! ಯಜ್ಞಸ್ವರೂಪೀ! ಯಜ್ಞಜಾತಾ! ಯಜ್ಞೇಶಾ! ಚತುರ್ಮೂರ್ತೀ! ಚತುರ್ಬಾಹೂ! ಚತುರ್ವ್ಯೂಹಾ! ನಿನಗೆ ನಮಸ್ಕಾರವು.

ಓ ಲೋಕಸ್ವರೂಪೀ ! ಲೋಕಜನಕಾ ! ಲೋಕನಿವಾಸಾ ! ನರಸಿಹ್ಮಾ ! ಸೃಷ್ಟಿಸಂಹಾರಕರ್ತನಾದ ನಿನಗೆ ವಂದನೆಗಳು! ಓ ಭಕ್ತಪ್ರಿಯಾ! ನಾಥಾ ! ಕೃಷ್ಣಾ ! ನಿನಗೆ ನಮಸ್ಕಾರವು ! ನಮಸ್ಕಾರವು ! ಓ ಭಕ್ತವತ್ಸಲಾ ! ಬ್ರಹ್ಮನಿಗೂ ಆಧಾರಭೂತನೂ, ಬ್ರಹ್ಮನಿಗೂ ನಿಯಾಮಕನೂ, ರುದ್ರಸ್ವರೂಪಿಯೂ ಆದ ನಿನಗೆ ನಮಸ್ಕಾರವು ! ನಮಸ್ಕಾರವು ! ರುದ್ರಕರ್ಮಗಳಲ್ಲಿ ಆಶೆಯುಳ್ಳ ನಿನಗೆ ನಮಸ್ಕಾರವು. ಪಂಚಯಜ್ಞಸ್ವರೂಪೀ ! ಸರ್ವ ಯಜ್ಞಸ್ವರೂಪೀ ! ಕೃಷ್ಣಪ್ರಿಯಾ ! ಕೃಷ್ಣನಾಥಾ ! ನಿನಗೆ ವಂದನೆಗಳು, ವಂದನೆಗಳು. ಓ ಯೋಗಿಪ್ರಿಯಾ ! ಯೋಗೀಶಾ ! ನಿನಗೆ ನಮಸ್ಕಾರವು. ಓ ಹಯಗ್ರೀವಾ! ಚಕ್ರಪಾಣೀ! ಪಂಚಭೂತಸ್ವರೂಪೀ! ನಿನಗೆ ನಮಸ್ಕಾರವು. ಓ ಪಂಚಾಯುಧಪಾಣೀ ! ನಿನಗೆ ವಂದನೆಗಳು! ಎಂದನು. ಯುಧಿಷ್ಠಿರನು ಭಕ್ತಿಯಿಂದ ಗದ್ಗದಸ್ವರದೊಡನೆ ಹೀಗೆ ಸ್ತೋತ್ರಮಾಡುತ್ತಿರಲು, ಕೃಷ್ಣನು ಪ್ರಸನ್ನನಾಗಿ ಅವನ ಕೈಗಳನ್ನು ಹಿಡಿದು ಮೇಲಕ್ಕೆತ್ತಿ “ ಓ ರಾಜಾ ! ಇದೇನು ? ಅನ್ಯನಂತೆ ಭಾವಿಸಿ ನನ್ನನ್ನು ಹೀಗೆ ಸ್ತೋತ್ರಮಾಡುತ್ತಿರುವೆ ! ಇನ್ನೂ ಕೆಲವು ತತ್ವ ವಿಷಯಗಳನ್ನು ಹೇಳುವೆನು ಕೇಳು ' ಎಂದನು.

ಆಗ ಧರ್ಮರಾಜನು 'ಓ ಭಗವಂತಾ ! ನಿನ್ನ ಅನುಗ್ರಹದಿಂದ ಮೇಲೆ ಮೇಲೆ ಧರ್ಮವಿಷಯಗಳನ್ನು ಕೇಳುತ್ತಿದ್ದರೂ ನನಗೆ ತೃಪ್ತಿಯೇ ಇಲ್ಲವಾಗಿದೆ. ನನ್ನ ಚಿತ್ತವು ನರ್ತಿಸುವಂತಿದೆ. ಕೃಷ್ಣಪಕ್ಷದ ದ್ವಾದಶಿಯ ದಿನ ನೀನು ಪೂಜಿಸಲ್ಪಡುವ ಬಗೆ ಹೇಗೆ ? ಈ ಧರ್ಮವಿಚಾರವನ್ನು ನೀನು ನನಗೆ ತಿಳಿಸಬೇಕು' ಎನಲು, ಕೃಷ್ಣನು ' ಕೃಷ್ಣಪಕ್ಷದ ದ್ವಾದಶಿಯಲ್ಲಿ ನನ್ನನ್ನು ಪೂಜಿಸಿದರೆ ಮಹಾ ಪುಣ್ಯವುಂಟು. ಭಕ್ತಿಯಿಂದ ಏಕಾದಶಿಯ ಉಪವಾಸವಿದ್ದು ದ್ವಾದಶಿಯಲ್ಲಿ ನನ್ನನ್ನು ಪೂಜಿಸಬೇಕು. ಸಾಧ್ಯವಾದ ಮಟ್ಟಿಗೂ ಬ್ರಾಹ್ಮಣರನ್ನು ಆರಾಧಿಸಬೇಕು. ಅಂತವನು ಶಿವನನ್ನೋ, ನನ್ನನ್ನೋ, ಅಥವಾ ಗ್ರಹನಕ್ಷತ್ರಗಳಿಂದ ಪೂಜಿತವಾದ ಚಂದ್ರಸಾಲೋಕ್ಯವನ್ನೋ ಪಡೆಯುವನು ' ಎಂದನು.

ಇದು ನೂರ ಹದಿನಾಲ್ಕನೆಯ ಅಧ್ಯಾಯವು.

ಕೃಷ್ಣನು ವಿಷುವಪುಣ್ಯಕಾಲದ ಮಹಿಮೆಯನ್ನೂ, ಅದರಲ್ಲಿ ದಾನಮಾಡುವುದರ ಫಲವನ್ನೂ, ಗಾಯತ್ರೀಜಪ, ಅಶ್ವತ್ಥ ವೃಕ್ಷ, ತಾಳ್ಮೆ, ಇವುಗಳ ಮಹಿಮೆಯನ್ನೂ ಶಿಂಶು ಮಾರಾಕೃತಿ, ಪಂಚಗವ್ಯಕ್ರಮ, ಇತ್ಯಾದಿಗಳನ್ನೂ ಯುಧಿಷ್ಠಿರನಿಗೆ ತಿಳಿಸಿದುದು.

ಆಮೇಲೆ ಧರ್ಮರಾಜನು ದಾನಕಾಲದ ವಿಶೇಷವನ್ನೂ, ದಾನವಿಧಿಯನ್ನೂ ಕುರಿತು ಪ್ರಶ್ನೆಮಾಡುತ್ತ 'ಕೇಶವಾ! ವಿಷುವ ಕಾಲ ಗ್ರಹಣಕಾಲಗಳಲ್ಲಿ ಮಾಡಿದ ದಾನಕ್ಕೆ ಯಾವ ಫಲವು ವಿಧಿಸಲ್ಪಟ್ಟಿದೆ?' ಎನಲು ಕೃಷ್ಣನು 'ರಾಜಾ! ವಿಷುವಕಾಲ, ಗ್ರಹಣಕಾಲ, ವ್ಯತೀಪಾತ, ಅಯನ, ಈ ಕಾಲಗಳಲ್ಲಿ ದಾನಮಾಡಿದರೆ ಅಧಿಕಫಲವುಂಟು. ಎರಡು ಅಯನಗಳ ಮಧ್ಯದಿನವೇ ವಿಷುವವು. ರಾತ್ರಿಯೂ, ಹಗಲೂ, ಸಮಪ್ರಮಾಣದಲ್ಲಿರುವ ಆ ವಿಷುವವೆಂಬ ಸಂಧಿಕಾಲದಲ್ಲಿ, ಬ್ರಹ್ಮನೂ, ನಾನೂ, ಶಿವನೂ ಒಟ್ಟುಗೂಡುವೆವು. ಕ್ರಿಯೆ, ಕರಣ ಕಾರ್ಯಗಳೆಂಬಿವು ಮೂರೂ ಒಟ್ಟುಗೂಡುವುದರಿಂದ, ನಾವೂ ಒಂದಾಗಿ ಸೇರುವೆವು. ಅದು ನಮಗೆ ಉತ್ತಮಸ್ಥಾನವಾದ ನೆಲೆ! ವಿಷುವವೆಂಬ ಹೆಸರುಳ್ಳ ಆ ಮುಹೂರ್ತವು ಬಹಳ ಪುಣ್ಯಕಾಲವು. ಅದೇ ಅಕ್ಷರವೂ, ಅನಾದಿಯೂ ಆದ ಬ್ರಹ್ಮವೆಂದೂ, ಪರಬ್ರಹ್ಮವೆಂದೂ ಹೇಳಲ್ಪಟ್ಟಿರುವುದು. ಆ ಮುಹೂರ್ತದಲ್ಲಿ ಎಲ್ಲರೂ ಪರಬ್ರಹ್ಮನನ್ನು ಧ್ಯಾನಿಸಬೇಕು. ದೇವತೆಗಳೂ, ವಸುಗಳೂ, ರುದ್ರರೂ, ಪಿತೃಗಳೂ, ಅಶ್ವಿನೀದೇವತೆಗಳೂ, ಸಾಧ್ಯರೂ, ವಿಶ್ವದೇವರೂ, ಗಂಧರ್ವರೂ, ಸಿದ್ಧರೂ, ಬ್ರಹ್ಮರ್ಷಿಗಳೂ, ಗ್ರಹಗಳೂ, ನದ ನದೀ ಸಮುದ್ರಗಳೂ, ಮರುತ್ತುಗಳೂ, ನಾಗರೂ, ಯಕ್ಷರಾಕ್ಷಸರೂ, ಗುಹ್ಯಕರೂ, ಎಲ್ಲರೂ ಆ ಕಾಲಗಳಲ್ಲಿ ಇಂದ್ರಿಯಗಳನ್ನಡಗಿಸಿ ಉಪವಾಸನಿಷ್ಠರಾಗಿರುವರು. ಯುಧಿಷ್ಠಿರಾ! ಆದುದರಿಂದ ಅಗ, ಗೋ, ಭೂ, ತಿಲ, ಕನ್ಯಾದಿ ದಾನಗಳನ್ನು ಮಾಡಬೇಕು. ಆ ದಾನವು ನಿಷ್ಫಲವಾಗದು. ಅದು ಕೋಟಿದಾನಗಳಿಗೆ ಸಮಾನವು. ವಿಷುವತ್ಪುಣ್ಯಕಾಲದಲ್ಲಿ, ನನಗಾಗಲಿ, ಶಿವನಿಗಾಗಲಿ ಅಭಿಷೇಕಮಾಡಿ, ವಿಧ್ಯುಕ್ತ ರೀತಿಯಲ್ಲಿ ಪೂಜೆಮಾಡುವವನಿಗೆ, ಹತ್ತು ಜನ್ಮಗಳಲ್ಲಿ ಮಾಡಿದ ಪಾಪವೂ ನಶಿಸುವುದು. ಆತನು ದಶಾಶ್ವಮೇಧಫಲವನ್ನೂ

ಪಡೆಯುವನು. ಅತನು ಕಾಮರೂಪಿಯಾಗಿ ದಿವ್ಯ ವಿಮಾನವನ್ನೇರಿ, ಅಥವಾ ರುದ್ರಲೋಕದಲ್ಲಿರುವ ದೇವಗಂಧರ್ವರಿಂದ ಸೇವಿತನಾಗಿ, ಹಲವು ದೇವವರ್ಷಗಳು ಸಂತೋಷದಿಂದಿದ್ದು, ಆಮೇಲೆ ಈ ಲೋಕದಲ್ಲಿ ಚತುರ್ವೇದ ಪಾರಂಗತನೂ, ಬ್ರಹ್ಮಜ್ಞಾನಿಯೂ ಆದ ಬ್ರಾಹ್ಮಣೋತ್ತಮನಾಗಿ ಹುಟ್ಟುವನು. ಗ್ರಹಣಕಾಲದಲ್ಲಿ ದೇವಾಲಯಗಳಲ್ಲಿ ಭಕ್ತಿಯಿಂದ ಗಾಯತ್ರಿಯನ್ನು ಜಪಿಸಿ, ಶಂಖ, ಭೇರೀ, ಮೃದಂಗಾದಿ ವಾದ್ಯಗಳನ್ನು ಮಾಡಿಸುವವನು ವಿಶೇಷ ಪುಣ್ಯಭಾಗಿಯಾಗುವನು. ಗಾನಗಳಿಂದಲೂ, ಹೋಮಗಳಿಂದಲೂ, ಜಪಗಳಿಂದಲೂ, ನನ್ನ ದಿವ್ಯನಾಮಕೀರ್ತನದಿಂದಲೂ ರಾಹುವು ದುರ್ಬಲವಾಗಿ ಚಂದ್ರನು ಬಲಾಢ್ಯನಾಗುವನು. ಸೂರ್ಯಚಂದ್ರಗ್ರಹಣ ಕಾಲಗಳಲ್ಲಿ ಶ್ರೋತ್ರಿಯರಿಗೆ ಕೊಡಲ್ಪಡುವ ದಾನವು, ಆ ದಾನಮಾಡಿದವನಿಗೆ ಸಾವಿರಪಾಲಿನಷ್ಟು ಫಲವನ್ನು ಕೊಡುವುದು. ಮಹಾಪಾತಕಿಯಾಗಿದ್ದರೂ ಕ್ಷಣಮಾತ್ರದಲ್ಲಿಯೇ ಆತನ ಪಾಪವು ನೀಗುವುದು. ಅವನು ವಿಮಾನದಿಂದ ಚಂದ್ರಲೋಕವನ್ನು ಸೇರಿ, ಆಮೇಲೆ ಈ ಲೋಕದಲ್ಲಿ ವೇದಗಳನ್ನೂ ವೇದಾಂಗಗಳನ್ನೂ ಅರಿತ ಬ್ರಾಹ್ಮಣನಾಗಿ ಹುಟ್ಟುವನು' ಎಂದನು.

ಯುಧಿಷ್ಠಿರನು, 'ಓ ಭಗವಂತಾ! ನಿನ್ನ ಗಾಯತ್ರಿಯನ್ನು ಯಾವಾಗ ಜಪಿಸಬೇಕು? ಅದರ ಫಲವೇನು?' ಎನಲು, ಕೃಷ್ಣನು 'ರಾಜಾ! ದ್ವಾದಶಿ, ವಿಷುವತ್ಪುಣ್ಯಕಾಲ, ಚಂದ್ರ ಸೂರ್ಯಗ್ರಹಣಗಳು, ಆಯನಗಳು, ಶ್ರವಣ, ವ್ಯತೀಪಾತ, ಅಶ್ವತ್ಥ ದರ್ಶನ, ವಿಷ್ಣುಮೂರ್ತಿದರ್ಶನ, ಇಂತಹ ಸಮಯಗಳಲ್ಲಿ ನನ್ನ ಗಾಯತ್ರಿಯನ್ನಾಗಲಿ, ಅಷ್ಟಾಕ್ಷರವನ್ನಾಗಲಿ ಜಪಿಸಬೇಕು. ಇದು ಸರ್ವಪಾಪ ನಿವಾರಕವು' ಎಂದನು.

ಆಗ ಯುಧಿಷ್ಠಿರನು 'ಓ ದೇವಾ! ಅಶ್ವತ್ಥ ವೃಕ್ಷದ ದರ್ಶನವು ನಿನ್ನ ದರ್ಶನಕ್ಕೆ ಸಮಾನವೆನ್ನುವರು. ಅದರ ಮಹಿಮೆಯೇನು?' ಎನಲು, ಕೃಷ್ಣನು 'ಓ ರಾಜಾ! ನಾನೇ ಅಶ್ವತ್ಥರೂಪದಲ್ಲಿದ್ದು ಮೂರು ಲೋಕಗಳನ್ನೂ ಧರಿಸುವೆನು. ಅದಿಲ್ಲದೆಡೆಯಲ್ಲಿ ನಾನೂ ಇರುವುದಿಲ್ಲ. ನಾನಿರುವೆಡೆಗಳಲ್ಲೆಲ್ಲಾ ಅರಳಿಯ ಮರವೂ ಇರುವುದು. ಅದನ್ನು ಭಕ್ತಿಯಿಂದ

ಪೂಜಿಸಿದರೆ ನನ್ನನ್ನೇ ಪೂಜಿಸಿದಂತಾಗುವುದು. ಆ ವೃಕ್ಷವನ್ನು ಗಾಯ ಪಡಿಸುವುದು ನನ್ನನ್ನೇ ನೋಯಿಸಿದುದಕ್ಕೆ ಸಮಾನವು. ಆದುದರಿಂದ ಆ ವೃಕ್ಷವನ್ನು ಪ್ರತಿದಿನವೂ ಪ್ರದಕ್ಷಿಣಮಾಡಬೇಕು. ಅದನ್ನು ಕಡಿಯು ಬಾರದು. ವ್ರತಾನುಷ್ಠಾನ, ಪಾರಣೆ, ಋಜುತ್ವ, ದೇವತೆಗಳ, ಗುರು ಗಳ, ತಂದೆತಾಯಿಗಳ ಸೇವೆ, ಕೈಹಿಡಿದ ಪತ್ನಿಯರನ್ನು ಸಂತೋಷ ಪಡಿಸುವುದು, ಗೃಹಸ್ಥನಾಗಿರುವುದು, ಅತಿಥಿಪೂಜೆ, ಸನಾತನವೇದ, ಬ್ರಹ್ಮಚರ್ಯೆ, ತ್ರೇತಾಗ್ನಿ, ಇವೆಲ್ಲಾ ಮೇಲಾದ ತೀರ್ಥಗಳೆಂದು ಹೇಳಲ್ಪ ಟ್ಟಿರುವುವು. ರಾಜಾ! ನೀನು ಧರ್ಮವನ್ನು ಪ್ರಧಾನವಾಗಿ ತಿಳಿದು ಮನ ಸ್ಸನ್ನು ಅದರಲ್ಲಿ ನಿಲ್ಲಿಸು. ತೀರ್ಥಗಳನ್ನು ಸೇವಿಸು. ಧರ್ಮವು ಧರ್ಮ ದಿಂದಲೇ ಬೆಳೆಯುವುದು. ತೀರ್ಥದಲ್ಲಿ ಸ್ಥಾವರಜಂಗಮಗಳೆಂದು ಎರಡು ವಿಧವು. ಸ್ಥಾವರತೀರ್ಥಕ್ಕಿಂತಲೂ ಜಂಗಮತೀರ್ಥವು ಮೇಲಾದುದು. ಆ ಜಂಗಮ ತೀರ್ಥಕ್ಕಿಂತ ಜ್ಞಾನಾರ್ಜನೆಯು ಮೇಲಾದುದು. ಈ ಲೋಕದಲ್ಲಿ ಕರ್ಮದಿಂದ ಶುದ್ಧವಾದ ಮನುಷ್ಯನ ಹೃದಯದಲ್ಲಿಯೇ ಎಲ್ಲಾ ತೀರ್ಥಗಳೂ ಇರುವುವು. ಆತನೇ ಜಂಗಮ ತೀರ್ಥಸ್ವರೂಪಿಯು. ಶ್ರೇಷ್ಠ ಜ್ಞಾನವೇ ಉತ್ತಮತೀರ್ಥವು. ಅದಕ್ಕಿಂತ ಮೇಲಾದ ತೀರ್ಥವಿಲ್ಲ. ಬ್ರಹ್ಮವೆಂಬ ತೀರ್ಥವು ಸನಾತನವಾದುದು. ತಾಳ್ಮೆಗೆ ಸಮಾನವಾದ ತೀರ್ಥವೇ ಇಲ್ಲ. ಇಹಪರಗಳೆರಡೂ ತಾಳ್ಮೆಯುಳ್ಳವರಿಗೆಮಾತ್ರ ಲಭಿಸು ವುವು. ಗೌರವಿಸಲ್ಪಟ್ಟರೂ, ಗೌರವಿಸಲ್ಪಡದಿದ್ದರೂ, ಪೂಜಿಸಲ್ಪಟ್ಟರೂ, ಪೂಜಿಸಲ್ಪಡದಿದ್ದರೂ, ನಿಂದಿಸಲ್ಪಟ್ಟರೂ, ಹೆದರಿಸಲ್ಪಟ್ಟರೂ ತಾಳ್ಮೆಯುಳ್ಳ ವನು ತೀರ್ಥವೆನಿಸುವನು. ತಾಳ್ಮೆಯೇ ಕೀರ್ತಿ! ತಾಳ್ಮೆಯೇ ದಾನವು! ಅದೇ ಯಜ್ಞವು! ಅದೇ ಮನೋನಿಗ್ರಹವು! ಅದೇ ಅಹಿಂಸೆ! ಅದೇ ಉತ್ತ ಮಧರ್ಮವು! ಇಂದ್ರಿಯನಿಗ್ರಹ, ದಯೆ, ಎಲ್ಲವೂ ತಾಳ್ಮೆಯಿಂದಲೇ! ಭೂ ಮಿಯೂ ಅದರಿಂದಲೇ ಧರಿಸಲ್ಪಟ್ಟಿರುವುದು. ತಾಳ್ಮೆಯುಳ್ಳನು ದೇವಸಮಾ ನನು. ಅವನೇ ಸಾಧುವೆನಿಸುವನು. ಆತ್ಮವೇ ನದಿ! ಆತ್ಮವೇ ಪುಣ್ಯ ತೀರ್ಥವು! ಯಜ್ಞವೂ ಆತ್ಮವೇ! ಸ್ವರ್ಗಮೋಕ್ಷಗಳೆರಡೂ ಆತ್ಮಕ್ಕೆ ಅಧೀನವು. ಸದಾಚಾರದಿಂದಲೂ, ಸತ್ಯದಿಂದಲೂ, ತಾಳ್ಮೆಯಿಂದಲೂ, ಕೂಡಿ, ಜ್ಞಾನವೆಂಬ ತೀರ್ಥದಲ್ಲಿ ಯಾವಾಗಲೂ ಸ್ನಾನಮಾಡುವವನಿಗೆ,

(ಬೇರೆ) ತೀರ್ಥಸ್ನಾನಗಳೇಕೆ? ಅಂತವನು ತಾನೇ ತೀರ್ಥವೆನಿಸುವನು' ಎಂದನು.

ಯುಧಿಷ್ಠಿರನು 'ಕೃಷ್ಣಾ! ಸರ್ವಪಾಪ ನಿವಾರಣೆಗಾಗಿ ಆಚರಿಸತಕ್ಕ ಸುಲಭವಾದ ಪ್ರಾಯಶ್ಚಿತ್ತಗಳಾವಾವುದೋ, ಅವನ್ನು ನೀನು ನನಗೆ ತಿಳಿಸಬೇಕು' ಎನಲು, ಕೃಷ್ಣನು, 'ಪರಿಶುದ್ಧನಾದ ಬ್ರಾಹ್ಮಣನನ್ನು ಕಂಡು ನನ್ನಲ್ಲಿ ಭಕ್ತಿಯಿಟ್ಟು 'ನಮೋ ಬ್ರಹ್ಮಣ್ಯದೇವಾಯ' ಎಂದು ಹೇಳಿ ನಮಸ್ಕರಿಸಿ, ಅಷ್ಟಾಕ್ಷರವನ್ನು ಜಪಿಸಿ ಪ್ರದಕ್ಷಿಣ ಮಾಡುವವನ ಸಮಸ್ತ ಪಾಪಗಳನ್ನೂ ನಾನೇ ಆ ಬ್ರಾಹ್ಮಣನ ಮೂಲಕವಾಗಿ ನೀಗಿಸುವೆನು. ವರಾಹಗಳು ತಮ್ಮ ಮುಖದಿಂದ ತೋಡಿದ ಭೂಮಿಯ ಮಣ್ಣನ್ನು ತಲೆಯಲ್ಲಿಟ್ಟುಕೊಂಡು, ನೂರು ಪ್ರಾಣಾಯಾಮಗಳನ್ನು ಮಾಡುವವನೂ ಪಾಪವಿಮೋಚನೆ ಹೊಂದುವನು. ಸೂರ್ಯಗ್ರಹಣ ಕಾಲದಲ್ಲಿ ಪೂರ್ವಾಭಿಮುಖವಾಗಿ ಪ್ರವಹಿಸುವ ನದಿಗೆ ಹೋಗಿ, ಅಲ್ಲ ವಿಷ್ಣ್ವಾಲಯಕ್ಕೆ ಸಮೀಪವಾದ ಸ್ಥಳದಲ್ಲಿ, ಬಲಮುರಿಶಂಖದಿಂದಾಗಲಿ, ಕಪಿಲೆಯ ಕೊಂಬಿನಿಂದಾಗಲಿ ನೀರನ್ನೆತ್ತಿ ಒಂದುಸಲ ಸ್ನಾನಮಾಡಿದವನ ಸಂಚಿತಪಾಪಗಳೆಲ್ಲ ನಶಿಸುವುವು. ಯಾವಾತನು ಕಪಿಲೆಯ ತಲೆಯಿಂದ ಬೀಳುವ ಜಲದಿಂದಾಗಲಿ, ಗೋಮೂತ್ರದಿಂದಾಗಲಿ, ಬ್ರಾಹ್ಮಣರ ಪಾದಸ್ಪರ್ಶವುಳ್ಳ ತೀರ್ಥದಿಂದಾಗಲಿ, ರೋಹಿಣೀ ನಕ್ಷತ್ರದಲ್ಲಿಯೋ ಅಥವಾ ನನ್ನ ದಿನದಲ್ಲಿಯೋ ಸ್ನಾನಮಾಡುವನೋ, ಆತನ ಪಾಪಗಳೆಲ್ಲ ನಶಿಸುವುವು. ಹದಿನಾಲ್ಕು ಅಂಗಗಳುಳ್ಳ ಶಿಂಶುಮಾರ ಪ್ರಜಾಪತಿಯನ್ನು ನನ್ನಲ್ಲಿ ಭಕ್ತಿಯಿಂದ ನಮಸ್ಕರಿಸುವವನೂ ಪಾಪಮುಕ್ತನಾಗುವನು. ಆ ಹದಿನಾಲ್ಕು ಅಂಗಗಳಾವುವೆಂದರೆ, ಧರ್ಮವೇ ಶಿರಸ್ಸು, ಬ್ರಹ್ಮನು ಹಸು, ವೃಷರೆಂಬ ದೇವತೆಗಳು ಎಡಬಲ ಭಾಗಗಳು, ವಿಷ್ಣುವೇ ಹೃದಯವು, ಅಶ್ವಿನೀದೇವತೆಗಳಿಬ್ಬರೂ ಭುಜಗಳು, ಅತ್ರಿಯೇ ಮಧ್ಯಭಾಗವು. ಸಂವತ್ಸರವು ಗುಹ್ಯವು. ಮಿತ್ರಾವರುಣರು ಎರಡು ಪಾದಗಳು, ಅಗ್ನಿಯೇ ಎರಡು ತೊಡೆಗಳು, ಅವನ ಹಿಂದೆ ಇಂದ್ರನು, ಆತನಹಿಂದೆ ಪ್ರಜಾಧಿಪತಿ, ಆತನಿಗೂ ಹಿಂದೆ ಅಭಯನು, ಆ ಅಭಯನೇ ಧ್ರುವನಾಮಕನು. ಇವೆಲ್ಲವೂ ಆ ಪ್ರಜಾಧಿಪತಿಯ ಅಂಗ

ಗಳು. ಯಾವಾತನು ಪೌರ್ಣಿಮೆಯಲ್ಲಿ ಉಪವಾಸವಿದ್ದು, ಪಂಚಗವ್ಯವನ್ನು ಪರಿಗ್ರಹಿಸುವನೋ, ಅವನ ಪಾಪಗಳೆಲ್ಲವೂ ನಶಿಸುವುವು. ಒಂದೊಂದು ತಿಂಗಳಲ್ಲಿಯೂ ಮಂತ್ರಸಮೇತವಾಗಿ ಈ ಬ್ರಹ್ಮಕೂರ್ಚವನ್ನು ಪಾನಮಾಡುವವನ ಪಾಪವೂ ತೊಲಗುವುದು. ಬ್ರಹ್ಮಕೂರ್ಚವಾವುದು ? ಅದಕ್ಕೆ ಪಾನಪಾತ್ರೆಯಾವುದು ? ಎಂಬುದನ್ನೂ ತಿಳಿಸುವೆನು ಕೇಳು. ಪಲಾಶದೆಲೆ, ತಾವರೆಯ ಎಲೆ, ತಾಮ್ರದ ಪಾತ್ರೆ, ಅಥವಾ ಸುವರ್ಣಪಾತ್ರೆ, ಇವುಗಳೇ ಪಾತ್ರೆಗಳು. ಗಾಯತ್ರಿಯಿಂದ ಗೋಮೂತ್ರವನ್ನೂ 'ಗಂಧದ್ವಾರಾಂ' ಎಂಬ ಮಂತ್ರದಿಂದ ಗೋಮಯವನ್ನೂ 'ಆಪ್ಯಾಯಸ್ವ' ಎಂಬ ಮಂತ್ರದಿಂದ ಹಾಲನ್ನೂ 'ದಧಿಕ್ರಾವಿಣ್ಣೋ' ಎಂಬ ಮಂತ್ರದಿಂದ ಮೊಸರನ್ನೂ 'ತೇಜೋಸಿ' 'ಶುಕ್ರಂ' ಎಂಬ ಮಂತ್ರಗಳಿಂದ ತುಪ್ಪವನ್ನೂ 'ದೇವಸ್ಯತ್ವಾ' ಎಂಬ ಮಂತ್ರದಿಂದ ಕುಶೋದಕವನ್ನೂ ಸಂಗ್ರಹಿಸಿಡಬೇಕು. 'ಆಪೋಹಿಷ್ಠಾ' ಎಂಬ ಋಕ್ಕಿನಿಂದ ವಿಧ್ಯುಕ್ತರೀತಿಯಲ್ಲಿ ಯವಚೂರ್ಣವನ್ನು ಗ್ರಹಿಸಿ, ಜ್ವಲಿಸುವ ಅಗ್ನಿಯಲ್ಲಿ ಬ್ರಹ್ಮನಿಗೆ ಹೋಮಮಾಡಿ, ಪ್ರಣವವನ್ನು ಹೇಳುತ್ತ ಕಲೆಸಿ, ಪ್ರಣವವನ್ನು ಹೇಳುತ್ತಲೇ ಅರೆದು, ಪ್ರಣವದಿಂದಲೇ ಎತ್ತಿ, ಪ್ರಣವವನ್ನುಚ್ಚರಿಸುತ್ತಲೇ ಪಾನಮಾಡಬೇಕು. ಆಗ ಆತನು ಪರೆಯನ್ನು ಸುಲಿದ ಹಾವಿನಂತೆ ಮಹಾಪಾಪದಿಂದ ಬಿಡುಗಡೆ ಹೊಂದುವನು. ಯಾವನು ನೀರಿನಲ್ಲಿ ನಿಂತಾಗಲಿ, ಸೂರ್ಯಾಭಿಮುಖವಾಗಿಯಾಗಲಿ 'ಭದ್ರಂ ನಃ' ಎಂಬ ಋಕ್ಕನ್ನು ಪಠಿಸುವನೋ, ಆತನ ಪಾಪವು ನಶಿಸುವುದು. ಯಾವಾತನು ನನ್ನಲ್ಲಿಯೇ ಮನಸ್ಸಿಟ್ಟವನಾಗಿ ನನ್ನ ಸೂಕ್ತವನ್ನು ಜಪಿಸುವನೋ, ಅವನು ತಾವರೆಯ ಎಲೆಯು ನೀರಿನಿಂದ ಹೇಗೋ ಹಾಗೆ ಪಾಪದಿಂದ ಲಿಪ್ತನಾಗುವುದಿಲ್ಲ' ಎಂದನು.

ಇದು ನೂರ ಹದಿನೈದನೆಯ ಅಧ್ಯಾಯವು.



ಅಗ್ನಿಹೋತ್ರಿಗಳಾಗಿದ್ದರೂ ಭಗವದ್ಭಕ್ತಿಯಿಲ್ಲದ ಬ್ರಾಹ್ಮಣರಿಗೆ ಫಲವಿಲ್ಲವೆಂದೂ, ಶೂದ್ರರು ತಮ್ಮ ಧರ್ಮಗಳಿಂದಲೇ ಭಗವದ್ಭಕ್ತಿಯುಳ್ಳವರಾದರೆ, ಅವರಿಗೆ ಫಲಪ್ರಾಪ್ತಿಯುಂಟೆಂದೂ ಕೃಷ್ಣನು ಯುಧಿಷ್ಠಿರನಿಗೆ ತಿಳಿಸಿದುದು.

ಯುಧಿಷ್ಠಿರನು 'ಓ ದೇವೋತ್ತಮಾ! ಎಂತಹ ಬ್ರಾಹ್ಮಣರು ಪುಣ್ಯಭಾಗಿಗಳಾಗುವರು? ಯಾವ ಕರ್ಮವು ಫಲಕಾರಿಯಾದುದು? ಯಾವುದು ನಿಷ್ಫಲವು?' ಎನಲು, ಕೃಷ್ಣನು 'ಓ ಧರ್ಮರಾಜಾ! ಮನಶ್ಶುದ್ಧಿಯಿಲ್ಲದವನಿಗೆ ತ್ರಿದಂಡಧಾರಣ, ಮೌನ, ಜಟಾವಲ್ಕಲಗಳು, ಮುಂಡನಗಳು, ವ್ರತಚರ್ಯೆಗಳು, ಸ್ನಾನಗಳು, ಅಗ್ನಿಹೋತ್ರಾದಿ ಗೃಹಸ್ಥಾಶ್ರಮವಿಧಿ, ವೇದಪಾರಾಯಣ, ಸಪತ್ನೀಕನಾಗಿ ಮಾಡುವ ನಿಯಮಗಳು, ಇವೆಲ್ಲ ನಿಷ್ಫಲಗಳೇ! ಮನುಷ್ಯನ ಒಳ್ಳೇನಡತೆಯಿಂದಲೇ ಎಲ್ಲಾ ದೇವತೆಗಳೂ ಸಂತೋಷಹೊಂದುವರು. ಈ ವಿಷಯಕ್ಕೆ ವೇದಗಳೇ ಪ್ರಮಾಣಗಳು. ತಾಳ್ಮೆ, ಕೋಪತ್ಯಾಗ, ಇಂದ್ರಿಯಜಯ, ಇವುಗಳುಳ್ಳವನೇ ಉತ್ತಮಬ್ರಾಹ್ಮಣನೆನಿಸುವನು. ಉಳಿದವರೆಲ್ಲರೂ ಶೂದ್ರರೇ! ಅಗ್ನಿಹೋತ್ರ, ವೇದಾಧ್ಯಯನ, ಉಪವಾಸಾದಿಗಳಲ್ಲಿ ನಿರತರಾಗಿ, ಶುದ್ಧರಾಗಿ, ಜಿತೇಂದ್ರಿಯರಾದವರನ್ನೇ ಬ್ರಾಹ್ಮಣರೆಂದು ದೇವತೆಗಳು ಮೆಚ್ಚುವರು. ಗುಣದಿಂದಲ್ಲದೆ ಜಾತಿಮಾತ್ರದಿಂದ ಯಾವನಿಗೂ ಪೂಜ್ಯತೆಯಿಲ್ಲ. ಜಾತಿಯಲ್ಲಿ ಚಂಡಾಲನಾಗಿದ್ದರೂ, ಸದಾಚರಣೆಯುಳ್ಳವನನ್ನು ದೇವತೆಗಳು ಬ್ರಾಹ್ಮಣನೆಂದೇ ಭಾವಿಸುವರು. ಓ ರಾಜಾ! ಮನಶ್ಶುದ್ಧಿ, ಕರ್ಮಶುದ್ಧಿ, ಕುಲಶುದ್ಧಿ, ಶರೀರಶುದ್ಧಿ, ವಾಕ್ಶುದ್ಧಿ, ಎಂದು ಶುದ್ಧಿಯಲ್ಲಿ ಐದು ಬಗೆಯುಂಟು. ಇವೈದರಲ್ಲಿಯೂ ಮನಶ್ಶುದ್ಧಿಯು ಮೇಲಾದುದು. ಮನುಷ್ಯರು ಮನಶ್ಶುದ್ಧಿಯಿಂದಲೇ ಸ್ವರ್ಗವನ್ನು ಪಡೆಯುವರು. ಅಗ್ನಿಹೋತ್ರವನ್ನೂ ಮಾಡದೆ, ವರ್ತಕಮಾಡುತ್ತ, ವರ್ಣಸಾಂಕರ್ಯವನ್ನುಂಟುಮಾಡುವ ಬ್ರಾಹ್ಮಣನು ವೃಷಲನು! ವೇದಾಧ್ಯಯನಮಾಡಿ ಅದನ್ನು ಮರೆತವನೂ, ಕೃಷಿಕನೂ, ನಿಷಿದ್ಧಕರ್ಮಗಳನ್ನು ಮಾಡುವವನೂ ವೃಷಲನೆಂದು ಹೇಳಲ್ಪಡುವನು. ವೃಷವೆಂದರೆ ಧರ್ಮವು. ಅದಕ್ಕೆ ಲಯವನ್ನುಂಟು ಮಾಡುವವನೇ ವೃಷಲನು.

ಶ್ವಪಚನಿಗಿಂತಲೂ ಹೀನನಾದ ಅವನನ್ನು ದೇವತೆಗಳೆಲ್ಲ ದೂರೀಕರಿಸು ವರು. ನನ್ನನ್ನು ಸ್ತುತಿಸದೆ, ವೇದವಾಕ್ಯಗಳಿಂದ ಶೂದ್ರಾದಿಗಳನ್ನು ಸ್ತುತಿಸುವ ಪಾಪಾತ್ಮನು ಚಂಡಾಲಸಮಾನನು. ಧರ್ಮಭ್ರಷ್ಟನಾದ ಅಂತಹ ವೃಷಲನಲ್ಲಿರುವ ವೇದವು, ನಾಯಿಯ ಚರ್ಮದ ಚೀಲದಲ್ಲಿರುವ ಹಾಲಿಗೆ ಸಮಾನವು. ನಾಯಿಯಿಂದ ನೆಕ್ಕಲ್ಪಟ್ಟ ಹವಿಸ್ಸಿನಂತೆ ಅದು ದೋಷಮಯವಾದುದು. ನಾಲ್ಕು ವೇದಗಳು, ಆರು ವೇದಾಂಗಗಳು, ಮೀಮಾಂಸೆ, ನ್ಯಾಯ, ಧರ್ಮಶಾಸ್ತ್ರ, ಪುರಾಣವೆಂಬ ಹದಿನಾಲ್ಕು ವಿದ್ಯೆ ಗಳೂ, ಪ್ರಪಂಚ ಕ್ಷೇಮಕ್ಕಾಗಿ ನನ್ನಿಂದಲೇ ವಿವರಿಸಲ್ಪಟ್ಟವೆ. ಲೋಕ ದಲ್ಲಿ ಅಪವಿತ್ರಗಳು ಮೂರು. ಅಶುದ್ಧಗಳು ಐದು. ನಾಯಿ, ಶೂದ್ರನು, ಶ್ವಪಚನು, ಇವರು ಮೂವರೂ ಅಪವಿತ್ರರು. ಗಾನಮಾಡುವವನು, ಕೋಳಿ, ಯೂಪ, ರಜಸ್ವಲೆ, ವೃಷಲೀಪತಿ, ಈ ಐವರೂ ಅಶುದ್ಧರು. ಬ್ರಾಹ್ಮಣ ರಿಗೆ ಇವೆಂಟೂ ಅಸ್ಪೃಶ್ಯಗಳೇ ! ಇವನ್ನು ಮುಟ್ಟಿದರೆ ಸಚೇಲಸ್ನಾನಮಾಡ ಬೇಕು. ಯಾರು ನನ್ನ ಭಕ್ತರನ್ನು ಶೂದ್ರನೆಂದು ಅವಮತಿಸುವರೋ ಅವರು ನರಾಧಮರು. ಚಂಡಾಲನಾಗಿದ್ದರೂ ನನ್ನಲ್ಲಿ ಭಕ್ತಿಯುಳ್ಳವನನ್ನು ಅವಮಾನಿಸಬಾರದು. ನನ್ನನ್ನು ನೆನೆಸಿದ ಕ್ರಿಮಿ ಕೀಟ ಪಕ್ಷಿಮೃಗಾದಿಗ ಳಿಗೂ ಉತ್ತಮಗತಿಯುಂಟು. ಜ್ಞಾನಿಗಳಿಗೆ ಸದ್ಗತಿ ದೊರೆಯುವುದರಲ್ಲಿ ಸಂದೇಹವೇನು? ಶೂದ್ರನಾಗಿದ್ದರೂ, ನನಗೆ ಪತ್ರವನ್ನಾಗಲಿ, ಪುಷ್ಪವನ್ನಾ ಗಲಿ, ಫಲವನ್ನಾಗಲಿ, ಕೊನೆಗೆ ಜಲವನ್ನಾಗಲಿ ಭಕ್ತಿಯಿಂದ ಕೊಟ್ಟರೆ, ನಾನು ಅವುಗಳನ್ನು ಶಿರಸಾ ಧರಿಸುವೆನು. ಶೂದ್ರಪ್ರಾಯರಾಗಿದ್ದರೂ ನನ್ನಲ್ಲಿ ಭಕ್ತಿಯುಳ್ಳ ಬ್ರಾಹ್ಮಣರನ್ನು ಪೂಜಿಸಬೇಕು. ಅವರಿಗೆ ಮಾಡುವ ಪೂಜೆಯನ್ನು ನಾನೇ ಅಂತರ್ಯಾಮಿಯಾಗಿದ್ದು ಸ್ವೀಕರಿಸುವೆನು. ಇನ್ನು ವೇದೋಕ್ತವಾದ ಮಾರ್ಗಗಳಲ್ಲಿ ನನ್ನನ್ನು ಪೂಜಿಸುವ ಬ್ರಾಹ್ಮಣರಿಗೆ ನನ್ನ ಸಾಯುಜ್ಯವು ಲಭಿಸುವುದೇನು ದೊಡ್ಡದು? ಯುಧಿಷ್ಠಿರಾ! ನನ್ನ ಭಕ್ತರ ಹಿತಕ್ಕಾಗಿಯೇ ನಾನು ಅವತರಿಸಿದವನು. ನನ್ನ ಯಾವುದಾದ ರೊಂದು ಮೂರ್ತಿಯನ್ನು ಯಾವಾತನು ನನ್ನಲ್ಲಿ ಭಕ್ತಿಯಿಟ್ಟು ಅರ್ಚಿ ಸುವನೋ, ಅವನಲ್ಲಿ ನಾನು ಸಂತುಷ್ಟನಾಗುವೆನು. ಮಣ್ಣಿನಿಂದಾ ಗಲಿ, ಮರಗಳಿಂದಾಗಲಿ, ರತ್ನಗಳಿಂದಾಗಲಿ, ತಾಮ್ರದಿಂದಾಗಲಿ, ಬೆಳ್ಳಿ

ಯಿಂದಾಗಲಿ, ಸುವರ್ಣದಿಂದಾಗಲಿ, ಪ್ರತಿಮೆಯನ್ನುಮಾಡಿ ಪೂಜಿಸಬಹುದು. ಇವುಗಳಲ್ಲಿ ಮೊದಮೊದಲು ಹೇಳಿದದುಕ್ಕಿಂತಲೂ ಕೊನೆಕೊನೆಗೆ ಹೇಳಿದುದು ಹತ್ತುಪಾಲು ಹೆಚ್ಚು ಪವಿತ್ರವಾದುದು. ಜಯಾಸಕ್ತನಾಗಿ ಅರಸನೂ, ವಿದ್ಯಾಸಕ್ತನಾಗಿ ಬ್ರಾಹ್ಮಣನೂ, ಧನಾಪೇಕ್ಷಿಯಾಗಿ ವೈಶ್ಯನೂ, ಸುಖಾಪೇಕ್ಷಿಯಾಗಿ ಶೂದ್ರನೂ, ಸಕಲವನ್ನೂ ಅಪೇಕ್ಷಿಸುವ ಸ್ತ್ರೀಯೂ ಆ ಮೂರ್ತಿಯನ್ನು ಪೂಜಿಸುವುದರಿಂದ ಸಕಲಾಭೀಷ್ಟಗಳನ್ನೂ ಪಡೆಯುವರು

ಇದು ನೂರ ಹದಿನಾರನೆಯ ಅಧ್ಯಾಯವು.

ಕೃಷ್ಣನು ಅಶ್ವತ್ಥವೃಕ್ಷದ ಮತ್ತು ಗೋಬ್ರಾಹ್ಮಣರ ಮಹಿಮೆಯನ್ನೂ ಬ್ರಾಹ್ಮಣ್ಯವನ್ನು ಕೆಡಿಸುವ ದುಷ್ಕಾರ್ಯಗಳನ್ನು ಯುಧಿಷ್ಠಿರನಿಗೆ ತಿಳಿಸಿದುದು.

ಯುಧಿಷ್ಠಿರನು 'ದೇವೇಶಾ! ನೀನು ಎಂತವರ ಪೂಜೆಯನ್ನು ಸ್ವೀಕರಿಸುವುದಿಲ್ಲ. ನಿನಗೆ ಅವರಲ್ಲಿ ಜಿಹಾಸೆಗೆ ಕಾರಣವೇನು ?' ಎನಲು, ಕೃಷ್ಣನು 'ರಾಜೇಂದ್ರಾ! ನಾನು ವ್ರತಹೀನನೂ, ಭಕ್ತಿಹೀನನೂ ಆದ ಶೂದ್ರನಿಂದ ಸ್ಪರ್ಶಿಸಲ್ಪಟ್ಟ ಪೂಜೆಯನ್ನು ನಿರಾಕರಿಸುವೆನು. ನಾನೂ, ರುದ್ರನೂ ಲೋಕದಲ್ಲಿ ಗೋಬ್ರಾಹ್ಮಣರ ಮತ್ತು ಅಶ್ವತ್ಥವೃಕ್ಷದ ರೂಪದಿಂದಿರುವೆವು. ಈ ಮೂರು ರೂಪವನ್ನೂ ಯಾವಾಗಲೂ ಅವಮತಿಸಬಾರದು. ಹಾಗೆ ಅವಮಾನಪಡಿಸಿದರೆ ಆ ಪಾಪವು ಕುಲವನ್ನೇ ದಹಿಸುವುದು'ಎಂದನು.

ಯುಧಿಷ್ಠಿರನು 'ಓ ದೇವಾ! ಬ್ರಾಹ್ಮಣಜನ್ಮವೆತ್ತಿಯೂ, ಅವನು ಶೂದ್ರತ್ವವನ್ನು ಪಡೆಯುವುದು ಹೇಗೆ? ಬ್ರಾಹ್ಮಣ್ಯವು ಹೇಗೆ ನಶಿಸುವುದು? ಅದನ್ನು ತಿಳಿಸಬೇಕು' ಎನಲು, ಕೃಷ್ಣನು 'ಹನ್ನೆರಡುವರ್ಷಗಳಕಾಲ ಮನೆಯ ಬಾವಿಯಲ್ಲಿಯೇ ಸ್ನಾನಮಾಡುವ ಬ್ರಾಹ್ಮಣನು ಆ ಶರೀರದಲ್ಲಿಯೇ ಶೂದ್ರನೆನಿಸುವನು. ರಾಜಗೃಹಾಶ್ರಯದಿಂದಲೇ ಹನ್ನೆರಡು ವರ್ಷಗಳಕಾಲ ಜೀವಿಸುತ್ತಿರುವವನು ವೇದಪಾರಂಗತನಾದರೂ, ಶೂದ್ರ

ತ್ವವನ್ನು ಪಡೆಯುವನು. ಪಟ್ಟಣದಲ್ಲಿಯಾಗಲಿ ನಗರದಲ್ಲಿಯಾಗಲಿ ಹನ್ನೆರಡುವರ್ಷಗಳ ಕಾಲ ವಾಸಮಾಡುವವನೂ ಶೂದ್ರನಾಗುವನು. ಶೂದ್ರಸ್ತ್ರೀಸಂಗಮಮಾಡಿದ ಬ್ರಾಹ್ಮಣನಿಗೆ ಆಗಲೇ ಬ್ರಾಹ್ಮಣ್ಯವು ಹೋಗುವುದು. ಸೋಮರಸವನ್ನು ನಿರರ್ಥಕವಾಗಿ ಕುಡಿಯುವ ಮತ್ತು ಕಾಮಾತುರದಿಂದ ಸ್ತ್ರೀಯರೊಡನೆ ಅಸಭ್ಯವಾಗಿ ರಮಿಸುವ ಬ್ರಾಹ್ಮಣನಿಗೂ ಬ್ರಾಹ್ಮಣ್ಯವು ನಿಲ್ಲದು. ದುರ್ಲಭವಾದ ಬ್ರಾಹ್ಮಣಜನ್ಮವನ್ನು ಪಡೆದಾಗಲೂ ಅದನ್ನು ಮೇಲೆಹೇಳಿದ ಮಾರ್ಗಗಳಿಂದ ಕೆಡಿಸುವವರಿಗಾಗಿ ನಾನು ದುಃಖಿಸುವೆನು. ಬ್ರಾಹ್ಮಣನು ಹೀಗೆ ಜಾತಿಭ್ರಂಶಕಾರಣವಾದ ಅಕಾರ್ಯಗಳನ್ನು ಹೇಗೂ ಮಾಡಬಾರದು ' ಎಂದನು.

ಇದು ನೂರಹದಿನೇಳನೆಯ ಅಧ್ಯಾಯವು.

---

ಕೃಷ್ಣನು ದೇಶಾಂತರಗಳಲ್ಲಿ ಮೃತರಾದ ಬ್ರಾಹ್ಮಣರ ಸಂಸ್ಕಾರಗಳನ್ನೂ, ತೀರ್ಥಯಾತ್ರೆಮಾಡಲಾರದವರಿಗೆ ಅವುಗಳಿಗೆ ಪ್ರತಿಯಾದ ತೀರ್ಥಗಳನ್ನೂ, ಭಾಗವತ ಲಕ್ಷಣಗಳನ್ನೂ ಯುಧಿಷ್ಠಿರನಿಗೆ ತಿಳಿಸಿದುದು. ಫಲಶ್ರುತಿ ! ಕೃಷ್ಣನು ಯುಧಿಷ್ಠಿರನ ಅನುಮತಿಯನ್ನು ಪಡೆದು ದ್ವಾರಕೆಗೆ ಹೊರಟುದು.

ಯುಧಿಷ್ಠಿರನು ' ದೇವಾ! ಬ್ರಾಹ್ಮಣನು ದೇಶಾಂತರಕ್ಕೆ ಹೋಗಿ, ಅಲ್ಲಿ ಮೃತನಾಗಿ, ಅವನ ಮೃತಶರೀರವೂ ಸಿಕ್ಕದಿದ್ದಾಗ ಪ್ರೇತಕಾರ್ಯಗಳನ್ನು ಹೇಗೆ ಮಾಡಬಹುದು?' ಎಂದು ಕೇಳಲು, ಕೃಷ್ಣನು ' ಅಂತಹ ಆಹಿತಾಗ್ನಿಗೆ ಪಲಾಶಕಾಷ್ಠಗಳಿಂದ ಪ್ರತಿಮೆಮಾಡಬೇಕೆಂದು ಕಲ್ಪವು ತಿಳಿಸುವುದು. ಮೈಯಲ್ಲಿ ಮುನ್ನೂರರುವತ್ತು ಎಲುಬುಗಳುಂಟೆಂದು ಹೇಳುವರು. ಅವುಗಳನ್ನು ಶಾಸ್ತ್ರವಿಧಿಗನುಸಾರವಾಗಿ ಜೋಡಿಸಬೇಕು. ತಲೆಯಲ್ಲಿ ನಾಲ್ವತ್ತು, ಕತ್ತಿನಲ್ಲಿ ಹತ್ತು, ಕೈಗಳಲ್ಲಿ ನೂರು, ಬೆರಳುಗಳಲ್ಲಿ ಹತ್ತು, ಎದೆಯಲ್ಲಿ ಮೂವತ್ತು, ಹೊಟ್ಟೆಯಲ್ಲಿ ಇಪ್ಪತ್ತು, ವೃಷಣದಲ್ಲಿ ಆರು, ಶಿಶ್ನದಲ್ಲಿ ನಾಲ್ಕು, ತೊಡೆಗಳಲ್ಲಿ ನೂರು, ಮಂಡಿ ಮತ್ತು ಮೊಳಕಾಲುಗಳಲ್ಲಿ

ಮೂವತ್ತು, ಪಾದಗಳಲ್ಲಿ ಹತ್ತು, ಹೀಗೆ ತುಂಡುಗಳನ್ನು ಜೋಡಿಸಿಡಬೇಕು. ಇದೇ ಆ ಪ್ರೇತದ ಪ್ರತಿಕೃತಿ' ಎಂದನು. ಯುಧಿಷ್ಠಿರನು 'ಭಕ್ತಾನುಗ್ರಹಕ್ಕಾಗಿಯೂ, ಅಶಕ್ತರನ್ನುದ್ಧರಿಸುವುದಕ್ಕಾಗಿಯೂ, ಏರ್ಪಟ್ಟಿರುವ ತೀರ್ಥಗಳಾವುವು?' ಎನಲು, ಕೃಷ್ಣನು 'ರಾಜಾ! ಸಾಮಗಾನಪರರಾದ ಮಹರ್ಷಿಗಳು ಎಲ್ಲಾ ತೀರ್ಥಗಳಲ್ಲಿ ಪಾವನವಾದುದು ಸತ್ಯವಾಕ್ಯವೆಂದು ಹೇಳುವರು. ಅಹಿಂಸೆಯೂ ಒಂದು ತೀರ್ಥವೇ. ಹಾಗೆಯೇ ತಪಸ್ಸು, ದಯೆ, ಶೀಲ, ಇದ್ದುದರಲ್ಲಿ ಸಂತುಷ್ಟಿ, ಇವೂ ತೀರ್ಥಗಳೇ. ಪತಿವ್ರತಾಸ್ತ್ರೀಯೂ ತೀರ್ಥವು. ಜ್ಞಾನವೂ ಒಂದು ತೀರ್ಥವೆಂದು ಹೇಳಲ್ಪಡುವುದು. ನನ್ನ ಭಕ್ತನು ಯಾವಾಗಲೂ ತೀರ್ಥವೆನಿಸುವನು. ಶಿವಭಕ್ತನೂ ವಿಶೇಷಕಾಲಗಳಲ್ಲಿ ತೀರ್ಥವು. ಹಾಗೆಯೇ ಸನ್ಯಾಸಿಗಳೂ, ವಿದ್ವಾಂಸರೂ ತೀರ್ಥಗಳೆಂದು ಹೇಳಲ್ಪಡುವರು. ಶರಣಾಗತರನ್ನು ಕಾಪಾಡತಕ್ಕ ಮನುಷ್ಯನೂ ತೀರ್ಥವು. ಅಭಯುವೂ ತೀರ್ಥವೇ! ರಾಜೇಂದ್ರಾ! ನನಗೆ ಈ ಮೂರು ಲೋಕಗಳಿಂದಲೂ ಭಯವಿಲ್ಲ. ನಾನು ಯಾವುದಕ್ಕೂ ಹೆದರುವವನಲ್ಲ. ರಾತ್ರಿಯೂ, ಹಗಲೂ ನನಗೆ ಅಂಜಿಕೆಯಿಲ್ಲ. ಆದರೆ ಶೂದ್ರನು ಸ್ವಧರ್ಮವನ್ನು ಮೀರಿದರೆ ಅದನ್ನು ನೋಡುವುದೊಂದರಿಂದಲೇ ನನಗೆ ಭಯವು. ಅದುಹೊರತು ದೈತ್ಯ, ದಾನವ, ರಾಕ್ಷಸರಿಂದಲೂ ನನಗೆ ಭಯವಿಲ್ಲ. ಶೂದ್ರನ ಮುಖದಿಂದ ಹೊರಡತಕ್ಕ ವೇದಮಂತ್ರವು ಮಾತ್ರ ಯಾವಾಗಲೂ ನನಗೆ ಭಯವನ್ನುಂಟುಮಾಡುವುದು. ಆದುದರಿಂದ ಶೂದ್ರನು ನನ್ನ ಹೆಸರನ್ನು ಪ್ರಣವದೊಡನೆ ಉಚ್ಚರಿಸಬಾರದು. ಬ್ರಹ್ಮಜ್ಞರು ಪ್ರಣವವನ್ನೇ ಬ್ರಹ್ಮವೆಂದು ತಿಳಿಯುವರು. ನನ್ನಲ್ಲಿ ಭಕ್ತಿಯುಳ್ಳ ದ್ವಿಜರಿಗೆ ಸೇವೆಮಾಡುವುದೊಂದೇ ಶೂದ್ರರ ಧರ್ಮವು. ಆದರಿಂದಲೇ ಅವರು ಸದಾ ನನ್ನನ್ನು ಧ್ಯಾನಮಾಡಿದ ಫಲಕ್ಕೆ ಭಾಗಿಗಳಾಗಿ ಸ್ವರ್ಗವನ್ನು ಪಡೆಯುವರು. ಶೂದ್ರನಿಗೆ ದ್ವಿಜರನ್ನು ಸೇವಿಸುವುದರಿಂದಲೇ ಉತ್ತಮವಾದ ಮೋಕ್ಷವುಂಟು. ದ್ವಿಜರ ಸೇವೆಯುಹೊರತು ಶೂದ್ರನಿಗೆ ಬೇರೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಆಶೆ, ದ್ವೇಷ, ಮೋಹ, ದುರ್ವಾಕ್ಯ, ಕ್ರೂರಸ್ವಭಾವ, ರಹಸ್ಯವಾಗಿ ಕೇಡುಮಾಡುವುದು, ದೀರ್ಘವಿರೋಧ, ಅಭಿಮಾನ, ಅಪ್ರಾಮಾಣಿಕತೆ, ಸುಳ್ಳು, ಅಪವಾದ, ಚಾಡಿಹೇಳುವುದು,

ಅತ್ಯಾಶೆ, ಪ್ರಾಣಿಹಿಂಸೆ, ಚೌರ್ಯ, ವಂಚನೆ, ಕ್ರೋಧಾಸಕ್ತಿ, ಅಜ್ಞಾನ, ನಾಸ್ತಿಕತ್ವ, ಭಯ, ಸೋಮಾರಿತನ, ಅಶುಚಿತ್ವ, ವಿವೇಕಜ್ಞಾನವಿಲ್ಲದಿರುವುದು, ಡಂಭ, ಗರ್ವ, ಕಪಟ, ಮೂಢತನ, ಇವೆಲ್ಲವೂ ಸಾಮಾನ್ಯವಾಗಿ ಹೀನಜಾತಿಯವರಿಗೆ ಜನ್ಮಸಿದ್ಧವಾಗಿ ಬರುವ ಗುಣಗಳು. ಬ್ರಹ್ಮನು ತಾಮಸಗುಣಗಳಿಂದಲೇ ಅವರನ್ನು ಸೃಷ್ಟಿಸಿ, ದ್ವಿಜರಿಗೆ ಸೇವೆಮಾಡುವುದೇ ಇವರಿಗೆ ಧರ್ಮವೆಂದು ಏರ್ಪಡಿಸಿದನು. ಈ ಸೇವಾಧರ್ಮದಿಂದ ಅವರ ತಾಮಸಗುಣಗಳು ನಶಿಸುವುವು. ಶೂದ್ರನಾದರೂ ನನಗೆ ಎಲೆಯನ್ನಾಗಲಿ, ಹೂವನ್ನಾಗಲಿ, ಫಲವನ್ನಾಗಲಿ, ಜಲವನ್ನಾಗಲಿ ಭಕ್ತಿಯಿಂದ ಕೊಟ್ಟರೆ, ನಾನು ಅದನ್ನು ಶಿರಸಾವಹಿಸಿ ಕೈಕೊಳ್ಳುವೆನು. ಬ್ರಾಹ್ಮಣನು ಪಾಪಮಾಡಿದ್ದರೂ, ನನ್ನನ್ನು ಧ್ಯಾನಮಾಡಿದರೆ ಆ ಪಾಪಗಳಿಂದ ಬಿಡುಗಡೆ ಹೊಂದುವನು. ವಿದ್ಯಾವಿನಯಗಳಿಂದ ಕೂಡಿ ವೇದಪಾರಂಗತರಾಗಿದ್ದರೂ, ನನ್ನಲ್ಲಿ ಭಕ್ತಿಯಿಲ್ಲದ ಬ್ರಾಹ್ಮಣರು ಚಂಡಾಲಸಮಾನರೇ. ಯಾವ ದ್ವಿಜನಿಗೆ ನನ್ನಲ್ಲಿ ಭಕ್ತಿಯಿಲ್ಲವೋ ಆತನು ಮಾಡಿದ ದಾನ, ತಪಸ್ಸು, ಯಾಗ, ಹೋಮ, ಅತಿಥಿಪೂಜೆ, ಇವೆಲ್ಲವೂ ವ್ಯರ್ಥವೇ. ಅವರು ಮಾಡಿದ ಕರ್ಮ, ಹೋಮ, ಯಾಗ, ದಾನ, ಇವುಗಳೆಲ್ಲವನ್ನೂ ರಾಕ್ಷಸರೇ ಅನುಭವಿಸುವರು. ನನ್ನ ಭಕ್ತನಾದವನು ಸ್ಥಾವರ ಜಂಗಮಗಳಲ್ಲಿಯೂ, ಸಕಲ ಪ್ರಾಣಿಗಳಲ್ಲಿಯೂ, ಶತ್ರುಗಳಲ್ಲಿಯೂ, ಮಿತ್ರರಲ್ಲಿಯೂ ಸಮಭಾವವುಳ್ಳವನಾಗಿರುವನು. ದುರ್ನಡತೆಯಿಲ್ಲದಿರುವುದು, ಅಹಿಂಸೆ, ಸತ್ಯ, ಸದಾಚಾರ, ಪ್ರಾಣಿಗಳಿಗೆ ಕೆಡುಕುಮಾಡದಿರುವುದು, ಇವೆಲ್ಲವೂ ನನ್ನ ಭಕ್ತರ ವ್ರತಗಳು. ಯಾವಾತನು ನನ್ನ ಭಕ್ತನನ್ನು ಕುರಿತು ಶ್ರದ್ಧೆಯಿಂದ 'ನಮಸ್ಕಾರ'ವೆಂದು ಹೇಳುವನೋ ಆತನು ಶ್ವಪಾಕನಾಗಿದ್ದರೂ, ಆತನಿಗೆ ನಿತ್ಯಲೋಕಗಳು ಲಭಿಸುವುವು. ನನ್ನನ್ನು ಸೇರಿದವರು, ನನ್ನಲ್ಲಿ ಭಕ್ತಿಯಿಂದ ಯಾವಾಗಲೂ ನನ್ನನ್ನು ಸ್ಮರಿಸುತ್ತ, ಲಕ್ಷ್ಮೀಸಮೇತನಾದ ನನ್ನನ್ನು ಪೂಜಿಸುವವರು, ಇಂತವರ ವಿಷಯವಾಗಿ ಇನ್ನು ಹೇಳಬೇಕೇ? ಅನೇಕ ಸಹಸ್ರವರ್ಷಗಳವರೆಗೆ ತಪಸ್ಸುಮಾಡುವ ತಪಸ್ವಿಯಾದರೂ, ನನ್ನ ಭಕ್ತರಿಗೆ ಲಭಿಸುವ ಫಲವನ್ನು ಪಡೆಯಲಾರನು. ಓ ರಾಜೇಂದ್ರಾ! ಆದುದರಿಂದ ಸೋಮಾರಿತನವನ್ನು ಬಿಟ್ಟು, ಯಾವಾಗಲೂ ನನ್ನನ್ನೇ ಧ್ಯಾನಮಾ

ಡುವವನು ತಪಸ್ಸಿದ್ಧಿಪಡೆದು, ಪರಮಪದವನ್ನೂ ಕಾಣುವನು. ಭಗವದ್ಭಕ್ತರು ಶೂದ್ರರೆನಿಸುವುದಿಲ್ಲ. ಭಾಗವತರೆಂಬವರು ಬ್ರಾಹ್ಮಣರೇ.

ದ್ವಾದಶಾಕ್ಷರಗಳ ತತ್ವ, ಚತುರ್ವ್ಯೂಹಗಳ ವಿಭಾಗ, ಪಂಚಕಾಲಗಳು, ಇವುಗಳನ್ನೆಲ್ಲ ತಿಳಿದ ವಿಪ್ರನೇ ನಿಜವಾದ ಭಾಗವತನೆಂದು ಹೇಳಲ್ಪಡುವನು. ಋಗ್ವೇದದಿಂದ ನನ್ನನ್ನು ಸ್ತೋತ್ರಮಾಡುವ ಹೋತೃಗಳೂ, ಯಜುರ್ವೇದದಿಂದ ಸ್ತೋತ್ರಮಾಡುವ ಅಧ್ವರ್ಯುಗಳೂ, ಸಾಮವೇದದಿಂದ ಸ್ತೋತ್ರಮಾಡುವ ಉದ್ಗಾತರೂ, ಅಥರ್ವವೇದದಿಂದ ಸ್ತುತಿಸುವ ಆಥರ್ವಣರೂ ಭಾಗವತರು. ಯಾಗಗಳು ವೇದಗಳಿಗೆ ಅಧೀನವು. ಆ ಯಾಗಗಳಿಗೂ, ಬ್ರಾಹ್ಮಣರಿಗೂ ದೇವತೆಗಳು ಅಧೀನರು. ಅದುದರಿಂದ ಬ್ರಾಹ್ಮಣರೇ ದೇವತೆಗಳು. ಸದಾಶ್ರಯವಿಲ್ಲದೆ ಮೇಲ್ಮೆಯುಂಟಾಗದು. ಆದುದರಿಂದ ದೊಡ್ಡವರನ್ನು ಆಶ್ರಯಿಸಬೇಕು. ದೇವತೆಗಳು ರುದ್ರನನ್ನು ಆಶ್ರಯಿಸಿರುವರು. ರುದ್ರನು ಬ್ರಾಹ್ಮಣನನ್ನು ಆಶ್ರಯಿಸಿರುವನು. ಬ್ರಹ್ಮನು ನನ್ನನ್ನು ಆಶ್ರಯಿಸಿರುವನು. ನಾನು ಯಾರನ್ನೂ ಆಶ್ರಯಿಸಿದವನಲ್ಲ. ಎಲ್ಲರಿಗೂ ನಾನೇ ಆಶ್ರಯನು. ನನಗೆ ಯಾವನೂ ಆಶ್ರಯವಿಲ್ಲ. ಈ ಪರಮರಹಸ್ಯಗಳೆಲ್ಲವನ್ನೂ ಧರ್ಮಾಸಕ್ತನಾದ ನಿನಗೆ ತಿಳಿಸಿರುವೆನು. ನೀನು ಅವುಗಳನ್ನು ಆಚರಿಸುತ್ತಿರು. ಪವಿತ್ರವೂ, ಪುಣ್ಯಕರವೂ, ವೇದಸಮಾನವೂ, ನನ್ನ ಧರ್ಮವೂ ಆದ ಈ ಆಖ್ಯಾನವನ್ನು ಯಾವನು ಪ್ರತಿದಿನವೂ ಪಠಿಸುವನೋ ಆತನಿಗೆ ಧರ್ಮವು ವೃದ್ಧಿಯಾಗುವುದು. ಬುದ್ಧಿಯು ತಿಳುವಾಗುವುದು. ಪಾಪವು ನಶಿಸಿ, ಕ್ಷೇಮವು ವೃದ್ಧಿಯಾಗುವುದು. ಪುಣ್ಯವೂ, ಪವಿತ್ರವೂ ಪಾಪನಾಶಕರವೂ, ಉತ್ತಮವೂ ಆದ ಇದನ್ನು ಶ್ರದ್ಧೆಯಿಂದ ಕೇಳಬೇಕು. ಅದರಲ್ಲಿಯೂ ಶ್ರೋತ್ರಿಯರು ಇದನ್ನು ಮುಖ್ಯವಾಗಿ ಕೇಳಬೇಕು. ಇದನ್ನು ಇತರರಿಗೆ ಹೇಳುವವನೂ, ಶುದ್ಧನಾಗಿ ಕೇಳುವವನೂ, ನನ್ನ ಸಾಯುಜ್ಯವನ್ನು ಪಡೆಯುವರು. ಅವರ ಪಿತೃಗಳು ಭೂತಪ್ರಳಯದವರೆಗೂ ತೃಪ್ತಿಹೊಂದುವರು' ಎಂದನು.

ಓ ಜನಮೇಜಯರಾಜಾ! ಅಲ್ಲಿದ್ದ ಋಷಿಗಳೂ, ಪಾಂಡವರೂ ಸಾಕ್ಷಾದ್ವಿಷ್ಣುಮುಖದಿಂದ ಈ ಭಾಗವತಧರ್ಮಗಳನ್ನು ಕೇಳಿ, ಸಂತು

ಷ್ಟರಾಗಿ, ಅದನ್ನೇ ಮನನಮಾಡುತ್ತ, ಆ ಜನಾರ್ದನನಿಗೆ ನಮಸ್ಕರಿಸಿದರು. ಧರ್ಮರಾಜನೂ ಕೃಷ್ಣನನ್ನು ಅಡಿಗಡಿಗೆ ಪೂಜಿಸಿದನು. ದೇವತೆಗಳೂ, ಬ್ರಹ್ಮರ್ಷಿಗಳೂ, ಸಿದ್ಧರೂ, ಗಂಧರ್ವರೂ, ಅಪ್ಸರಸ್ಸುಗಳು ಮುಂತಾದವರೆಲ್ಲರೂ, ಶ್ರೇಷ್ಠವೂ, ಪುಣ್ಯಕರವೂ ಆದ ಈ ವೈಷ್ಣವಧರ್ಮೋಪದೇಶವನ್ನು ಕೇಳಿ ಪಾಪವಿಮುಕ್ತರಾಗಿ, ಕೃಷ್ಣನನ್ನು ವಂದಿಸಿ, 'ಇನ್ನು ನಾವೆಲ್ಲರೂ ಲೋಕಗುರುವಾದ ಈ ಕೃಷ್ಣನನ್ನು ದ್ವಾರಕೆಯಲ್ಲಿ ನೋಡುವೆವು' ಎಂದು ಮಹಾಸಂತೋಷದಿಂದ ದೇವಗಣಗಳೊಡನೆ ಹೊರಟರು. ಹಾಗೆ ಅವರೆಲ್ಲರೂ ಹೊರಟಮೇಲೆ, ಕೃಷ್ಣನು ದಾರುಕನನ್ನು ನೆನೆಯಲು, ಆ ಸಾರಥಿಯು ಸಾತ್ಯಕಿಯೊಡನೆ ಸಮೀಪಕ್ಕೆ ಬಂದು 'ದೇವಾ! ಹೊರಡಬಹುದು' ಎಂದನು. ಆಮೇಲೆ ಪಾಂಡವರು ದುಃಖದಿಂದ ಕಣ್ಣೀರುತುಂಬಿಸಿಕೊಂಡು, ಪುರುಷೋತ್ತಮನಾದ ಕೃಷ್ಣನನ್ನು ವಂದಿಸಿ, ಎಡೆಬಿಡದೆ ನೋಡುತ್ತ, ಮಾತನಾಡಲಾರದೆ ನಿಂತಿದ್ದರು. ಆಗ ಕೃಷ್ಣನು ವ್ಯಾಕುಲದಿಂದ ಕುಂತಿ, ಧೃತರಾಷ್ಟ್ರನು, ಗಾಂಧಾರಿ, ವಿದುರನು, ದ್ರೌಪದಿ, ಕೃಷ್ಣದ್ವೈಪಾಯನ ವ್ಯಾಸನು, ಇನ್ನೂ ಇತರ ಋಷಿಗಳು, ಮಂತ್ರಿಗಳು, ಇವರುಗಳಿಂದ ಅನುಮತಿಪಡೆದು, ಸುಭದ್ರೆಯನ್ನೂ, ಪುತ್ರಸಮೇತಳಾದ ಉತ್ತರೆಯನ್ನೂ ಕೈಯಿಂದ ಸವರಿ (ಆಮೇಲೆ) ಆ ಮನೆಯಿಂದ ಹೊರಗೆ ಬಂದು, ಶೈಬ್ಯ, ಸುಗ್ರೀವ, ಮೇಘಪುಷ್ಪ, ವಲಾಹಕಗಳೆಂಬ ಕುದುರೆಗಳನ್ನು ಹೂಡಿ ಗರುಡಧ್ವಜವುಳ್ಳ ತನ್ನ ರಥವನ್ನೇರಿದನು. ಯುಧಿಷ್ಠಿರನೂ ಆತನೊಡನೆ ಕುಳಿತು, ಸಾರಥಿಯಾದ ದಾರುಕನ ಕೈಯಿಂದ ರಥದ ಕುದುರೆಗಳ ಕಡಿವಾಣಗಳನ್ನು ತಾನೇ ಕೈಗೆ ತೆಗೆದುಕೊಂಡನು. ಅರ್ಜುನನು ರಥವನ್ನೇರಿ ವ್ಯಜನವನ್ನು ಹಿಡಿದನು. ಭೀಮನು ಸುವರ್ಣಖಚಿತವಾದ ಶ್ವೇತಛತ್ರವನ್ನು ಹಿಡಿದನು. ನಕುಲಸಹದೇವರು ಕೃಷ್ಣನ ರಥವನ್ನೇರಿ ಎರಡು ಬಿಳಿಯ ಚಾಮರಗಳನ್ನು ಹಿಡಿದು ಕೃಷ್ಣನಿಗೆ ಬೀಸಿದರು. ಹೀಗೆ ಭೀಮಸೇನನೂ, ಅರ್ಜುನನೂ, ನಕುಲಸಹದೇವರೂ ಸಂತೋಷದಿಂದ ಕೃಷ್ಣನನ್ನು ಹಿಂಬಾಲಿಸಿ ಹೊರಟರು. ಮೂರು ಯೋಜನಗಳ ದೂರ ಹೋದಮೇಲೆ, ಕೃಷ್ಣನು ಪಾಂಡವರನ್ನು ಸಮಾಧಾನಪಡಿಸಿ, ಅವರೆಲ್ಲರಿಗೂ ಅನುಮತಿಕೊಟ್ಟು ಕಳುಹಿಸಿ, ದ್ವಾರಕೆಗೆ ಹೊರಟನು. ಪಾಂಡ

ವರೂ ಕೃಷ್ಣನನ್ನು ನಮಸ್ಕರಿಸಿದಮೇಲೆ ಧರ್ಮವನ್ನೇ ಮುಖ್ಯವ್ರತವಾಗಿ ಅವಲಂಬಿಸಿ, ಕಪಿಲಾದಾನವೇ ಮುಂತಾದ ದಾನಗಳನ್ನು ಮಾಡಿದರು. ಪಾಂಡವರು ಮಧುಸೂದನನ ಉಪದೇಶವಾಕ್ಯಗಳನ್ನು ಅಡಿಗಡಿಗೆ ಸ್ಮರಿಸುತ್ತ, ಮನಸ್ಸಿನಿಂದ ಅವನನ್ನು ಪೂಜಿಸಿದರು. ಯುಧಿಷ್ಠಿರನಾದರೋ ಕೃಷ್ಣನನ್ನು ಹೃದಯದಲ್ಲಿ ಧ್ಯಾನಮಾಡುತ್ತ, ಆತನಲ್ಲಿ ಭಕ್ತಿಪರವಶನಾಗಿದ್ದನು.

ರಾಜಾ! ಪರಮಪಾವನವಾಗಿ, ಶ್ರೀಕೃಷ್ಣನಿಂದುಪದೇಶಿಸಲ್ಪಟ್ಟ ಈ ವೈಷ್ಣವಧರ್ಮಗಳನ್ನು ನಾನು ನಿನಗೆ ತಿಳಿಸಿದೆನು. ಇದರಿಂದಲ್ಲದೆ ಮತ್ತಾವುದರಿಂದಲೂ ವಿಷ್ಣುವಿನ ಸಾಯುಜ್ಯವನ್ನು ಪಡೆಯಲು ಸಾಧ್ಯವಿಲ್ಲ' ಎಂದನು.

ಇದು ನೂರ ಹದಿನೆಂಟನೆಯ ಅಧ್ಯಾಯವು.

## ಇಲ್ಲಿಗೆ ವೈಷ್ಣವಧರ್ಮಪರ್ವವು ಮುಗಿದುದು.

## ಆಶ್ವಮೇಧಿಕಪರ್ವವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ

ಶ್ರೀ. ಶ್ರೀ. ಶ್ರೀ.



[ಜೈಮಿನಿಭಾರತವೆಂಬುದೂ, ಇದೇ ಧರ್ಮರಾಜನ ಅಶ್ವಮೇಧಯಾಗದ ಕಥೆಯನ್ನೊಳಕೊಂಡಿದ್ದರೂ, ಈ ಆಶ್ವಮೇಧಿಕಪರ್ವಕ್ಕೂ, ಜೈಮಿನಿಭಾರತಕ್ಕೂ ಬಹಳ ವ್ಯತ್ಯಾಸವಿದೆ. ಈ ಪರ್ವವು ತತ್ವಾರ್ಥಪ್ರಧಾನವಾಗಿದೆ. ಜೈಮಿನಿಭಾರತದಲ್ಲಿ ಕಥಾಭಾಗಗಳು ಹೆಚ್ಚಾಗಿವೆ. ಆದರೆ ಅದರಲ್ಲಿರುವ ಚಂದ್ರಹಾಸ, ಸುಧನ್ವ, ಮಯೂರಧ್ವಜ, ಮುಂತಾದವರ ಚರಿತ್ರೆಯೆಲ್ಲ, ಇಲ್ಲಿ ಹೇಳಿರುವ ನೀತಿಧರ್ಮಗಳಿಗೇ ನಿದರ್ಶಕವೆಂದು ಹೇಳಬಹುದು.]

People's Printing & Publishing House. Ltd., Triplicane, Madras